ಮೋಹನ ಕಾದಂಬರಿ ೨೦



ಮುಖಚಿತ್ರ :
ಜಿ. ಕೆ. ಮೂರ್ತಿ

ಎರಡು ರೂಪಾಯಿ

ಮುದ್ರಕರು :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್
ಕೃಷ್ಣಮೂರ್ತಿಪುರಂ, ಮೈಸೂರು

# ಬಿನ್ನಹ

ಜಗನ್ಮೋಹಿನಿ, ಶಾಂತಿವಾದಿ, ರಾಜದ್ರೋಹಿ, ಅಮಾತ್ಯರತ್ನ, ಹುಚ್ಚುದೊರೆಗಳಾಗಿ ಹರಿದ ವಿಜಯನಗರ ಸಾಮ್ರಾಜ್ಯ ಕಥಾವಾಹಿನಿ ರಕ್ಕಸ ತಂಗಡಿಯಲ್ಲಿ ಮುಕ್ತಾಯಗೊಂಡಿದೆ. ಕನ್ನಡ ನಾಡಿನ ಮಹಾಜನತೆ ಈ ಕಾದಂಬರಿಗಳನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಂಡಿದ್ದಾರೆ. ಅನೇಕರು ಪತ್ರ ಬರೆದು, ತಮ್ಮ ಮೆಚ್ಚಿಕೆಯನ್ನು ಸೂಚಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದ ಕಥಾವಾಹಿನಿ ಇಲ್ಲಿಗೇ ನಿಲ್ಲಬಾರದೆಂದು ಕೋರಿದ್ದಾರೆ. ಅವರೆಲ್ಲರ ಬೆಂಬಲ, ಪ್ರೋತ್ಸಾಹಗಳಿಂದ ಹುರುಪುಗೊಂಡು ಇದುವರೆಗೆ ಆರು ಕಾದಂಬರಿಗಳಲ್ಲಿ ಸಾಮ್ರಾಜ್ಯ ದುರಂತವನ್ನು ಚಿತ್ರಿಸಿದಂತೆ, ಮತ್ತೆ ಆರು ಕಾದಂಬರಿಗಳಲ್ಲಿ ಸಾಮ್ರಾಜ್ಯೋದಯ, ಸಾಮ್ರಾಜ್ಯವೈಭವಗಳನ್ನು ಚಿತ್ರಿಸಲು ಸಂಕಲ್ಪಿಸಿದ್ದೇನೆ. ಈಗಾಗಲೇ ದೇವಗಿರಿಪತನ, ಕನ್ನಡಿಗರ ಕಾಳರಾತ್ರಿ, ರಾಜ್ಯೋದಯ ಮತ್ತು ರಾಯಪರಾಭವಗಳನ್ನು ಬರೆದು ಮುಗಿಸಿದ್ದೇನೆ. ಅವು ಅಚ್ಚಿಗೆ ಸಿದ್ಧವಾಗಿ ಪ್ರಕಟನೆಯ ಹಂತದಲ್ಲಿವೆ ಎಂದು ತಿಳಿಸಲು ಸಂತೋಷವಾಗುತ್ತದೆ. ಇದುವರಗೆ ನನ್ನ ಇತರ ಐತಿಹಾಸಿಕ ಕಾದಂಬರಿಗಳಿಗೆ ಕನ್ನಡಿಗರು ಕೊಟ್ಟ ಪ್ರೋತ್ಸಾಹಕ್ಕೆ ಅವೂ ಅರ್ಹವಾಗಿವೆ ಎಂದು ನಂಬಿದ್ದೇನೆ.

ರಕ್ಕಸತಂಗಡಿ ಯುದ್ಧವು ಕನ್ನಡಿಗರ ನೆನಪಿನಲ್ಲಿ ಚಿರಕಾಲ ಉಳಿಯುವ ಒಂದು ದುರಂತ ಘಟನೆ. ಪೂಜ್ಯರಾದ ವಿದ್ಯಾರಣ್ಯ ಮುನೀಂದ್ರರ ಆಶೀರ್ವಾದ, ಭಗವತೀ ಭುವನೇಶ್ವರಿಯ ಅನುಗ್ರಹ, ಸ್ವಾಭಿಮಾನಿಗಳಾದ ದೇವಗಿರಿಯ ರಾಮದೇವ, ಓರಂಗಲ್ಲಿನ ಪ್ರತಾಪರುದ್ರ, ದ್ವಾರಸಮುದ್ರದ ವೀರಬಲ್ಲಾಳ, ಕಂಪಿಲದ ಕುಮಾರ ರಾಮನಾಥ ಇವರುಗಳ ಅನುಪಮ ತ್ಯಾಗ, ಬಲಿದಾನಗಳಿಂದ ಸ್ಫೂರ್ತಿಗೊಂಡು, ಹಿಂದೂ ಧರ್ಮ ಸಂಸ್ಕೃತಿ, ಸ್ವಾತಂತ್ರ್ಯಗಳ ರಕ್ಷಣೆಗಾಗಿ ಮೈತಾಳಿದ ವಿಜಯನಗರ ವೈಭವದಿಂದ ಬಾಳಿ, ನಾಗರಿಕತೆಯ ಶಿಖರವನ್ನೇರಿ, ಕಡೆಗೆ, ದೊರೆಗಳ ರಾಜ್ಯಲೋಭ, ದುರಭಿಮಾನ ದ್ವೇಷಾಸೂಯೆಗಳಿಗೆ ಬಲಿಯಾಗಿ ಹೇಗೆ ನಾಶವಾಯಿತೆಂಬುದನ್ನು ಸಾಮಾನ್ಯವಾಗಿ ಓದುಬಲ್ಲ ಕನ್ನಡಿಗರೆಲ್ಲರೂ ತಿಳಿದಿದ್ದಾರೆ. ಸಾಮ್ರಾಜ್ಯ ದುರಂತದ ಇದೊಂದೇ ವಸ್ತು ಇದುವರೆಗೆ ಅನೇಕ ಲೇಖಕರ ಕೈಯಲ್ಲಿ, ಕಾವ್ಯವಾಗಿ, ನಾಟಕವಾಗಿ, ಸಣ್ಣ ಕಥೆಯಾಗಿ, ಪ್ರವಾಸ ಕಥನವಾಗಿ ಬಾನುಲಿರೂಪಕವಾಗಿ* ಹೊರಹೊಮ್ಮಿದೆ. ಸೋದರ

---

* ಭೀಮಭಾರತಿಸುತ : ಕರುಳ ಕೊರಗು ; ಮಾಸ್ತಿ : ತಾಳಿಕೋಟೆ ; ಎಂ. ಆರ್. ಶ್ರೀ : ನಾಗರಿಕ ; ವಿ. ಸೀ : ಪಂಪಾಯಾತ್ರೆ. ಶಿವಸ್ವಾಮಿ : ವಿಜಯನಗರ ಸಾಮ್ರಾಜ್ಯ ; ಗಳಗನಾಥ : ಕನ್ನಡಿಗರ ಕರ್ಮಕಥೆ, ಇತ್ಯಾದಿ.

ಭಾಷೆಗಳಾದ ತೆಲುಗು, ತಮಿಳು ಸಾಹಿತ್ಯಗಳಲ್ಲೂ ವಿಜಯನಗರ ಸಾಮ್ರಾಜ್ಯದ ದುರಂತ ಕಥಾನಕದ ಬಗ್ಗೆ ವಿಪುಲ ಸಾಹಿತ್ಯವಿದೆ. ಈ ಎಲ್ಲ ಸಾಹಿತ್ಯ ಕೃತಿಗಳಿಗೂ ನಾನು ಚಿತ್ರಿಸಿರುವ ಸಾಮ್ರಾಜ್ಯ ದುರಂತದ ಕಥೆಗೂ ಮೂಲತಃ ದೃಷ್ಟಿಭೇದವಿದೆ. ಕಾದಂಬರಿ ಚೌಕಟ್ಟಿನ ವ್ಯಾಪ್ತಿಯಲ್ಲಿ, ಆದಷ್ಟು ಹೆಚ್ಚು ಐತಿಹಾಸಿಕಾಂಶಗಳನ್ನು ಆದಷ್ಟು ಕಡಿಮೆ ಕಾಲ್ಪನಿಕ ಸಂಗತಿಗಳನ್ನು ಒಳಗೊಂಡು, ಸಾಮಾನ್ಯ ಓದುಗರಿಗೆ ಮಹಾ ಸಾಮ್ರಾಜ್ಯವಾಗಿ ಮೆರೆದ ವಿಜಯನಗರದ ಇತಿಹಾಸವನ್ನು ನಿರೂಪಿಸುವುದೇ ನನ್ನ ಗುರಿಯಾಗಿದೆ. ಕಾದಂಬರಿಯಲ್ಲಿ ಮನರಂಜನೆಯ ಜತೆಗೆ, ಆಗಿನ ಕಾಲದ ಜನಜೀವನವನ್ನೂ ಸ್ಥೂಲವಾಗಿ ಒದಗಿಸುವುದೇ ನನ್ನ ಉದ್ದಿಶ್ಯವಾಗಿದೆ. ಈ ಪ್ರಯತ್ನದಲ್ಲಿ ನಾನೆಷ್ಟು ಯಶಸ್ವಿಯಾಗಿರುವೆನೋ ಬಲ್ಲವರು ತಿಳಿಸಬೇಕು.

**ರಕ್ಕಸತಂಗಡಿ** ಕಾದಂಬರಿಯನ್ನು ಬರೆಯಲು ನಾನು ಅನೇಕ ಗ್ರಂಥಗಳ ನೆರವನ್ನು ಪಡೆದಿದ್ದೇನೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಸ್ಮರಿಸಿದ್ದೇನೆ.

ಹೆರಾಸರು: ಅರವೀಡು ವಂಶಾವಳಿ. (ಭಾಗ. ೧)

ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್; ವಿಜಯನಗರ ಇತಿಹಾಸದ ಆಕರಗಳು.

ಹಯವದನರಾವ್: ಮೈಸೂರು ಗೆಜಿಟೀರ್.

ಸಾಲತೊರೆ: ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಹಾಗೂ ರಾಜಕೀಯ ಜೀವನ (ಎರಡು ಸಂಪುಟಗಳು)

ಸಿವೆಲ್: ಮರೆತುಹೋದ ಸಾಮ್ರಾಜ್ಯ.

ಸೂರ್ಯನಾರಾಯಣರಾವ್: ಎಂದಿಗೂ ಮರೆಯಲಾಗದ ಸಾಮ್ರಾಜ್ಯ.

ಅಳಿಯ ರಾಮಭೂಪಾಲುಡು (ತೆಲುಗು): ವಿಜಯನಗರ ಷಷ್ಠ್ಯಬ್ಧಿಕ್ ಸ್ಮಾರಕಗ್ರಂಥ, ಇತ್ಯಾದಿ.

ಇವುಗಳ ಜತೆಗೆ, ಶ್ರೀ ಟಿ. ಟಿ. ಶರ್ಮರವರು ಸಂಶೋಧಿಸಿ ಪ್ರಕಟಿಸಿರುವ ರಾಮರಾಯನ ಬಖೈರು ನನಗೆ ಅಮೂಲ್ಯ ವಸ್ತುವನ್ನು ಒದಗಿಸಿದೆ. ರಕ್ಕಸತಂಗಡಿಯಲ್ಲಿ ಕೊಟ್ಟಿರುವ ಬಖೈರಿನ ಭಾಗ, ಮೂಲದಿಂದ ಉದ್ಧರಿಸಿದ್ದರೂ, ಗ್ರಾಂಥಿಕ ಭಾಷೆಗೆ ಅದನ್ನು ಅಳವಡಿಸಿಕೊಂಡಿದ್ದೇನೆ. ವಿಜಯನಗರ ಸೈನ್ಯ ಸೋತುಹೋಗಲು ಉನಿಲ್‌ಮುಲ್ಕ್ ಹಾಗೂ ಮತ್ತೊಬ್ಬ ಮುಸಲ್ಮಾನ ದಳಪತಿ ಮಾಡಿದ ದ್ರೋಹವೇ ಕಾರಣವೆಂದು ಹೆರಾಸರು ಮಾಡಿರುವ ಊಹೆ ಹೆಚ್ಚು ಸಮಂಜಸವೆಂದು ತೋರುತ್ತದೆ. ವರದಾದೇವಿಯ ಅಂತ್ಯ ಹಾಗೂ ಮೆಹರುನ್ನೀಸಳ

ಪ್ರಕರಣಗಳ ಹೊರತು ಉಳಿದೆಲ್ಲ ಘಟನೆಗಳಿಗೂ, ಐತಿಹಾಸಿಕ ಸಂಗತಿಗಳ ಆಧಾರಗಳಿವೆ. ಕೇವಲ ಮನರಂಜನೆಯ ದೃಷ್ಟಿಗಿಂತಲೂ, ಆಗಿನ ಕಾಲದ ರಾಜಕೀಯ, ಹಾಗೂ ಸಾಮಾಜಿಕ ಜೀವನವನ್ನು ತಿಳಿಯುವ ದೃಷ್ಟಿಯಿಂದ ಈ ಕಾದಂಬರಿಯನ್ನು ಓದಿದರೆ ಈ ಕಾದಂಬರಿ ಹೆಚ್ಚು ರಂಜಿಸುವುದೆಂದು ನನ್ನ ನಂಬಿಕೆ.

ನನ್ನ ಇತರ ಕಾದಂಬರಿಗಳ ವಿಷಯದಲ್ಲಿ ತೋರಿಸಿದ ಆಸ್ಥೆಯಂತೆಯೇ, ಈ ಕೃತಿಯ ಪ್ರಕಟಣೆಗೂ ನೆರವಾದ ಗೆಳೆಯ ರಾ. ವೆಂ. ಶ್ರೀ ಅವರ ಉಪಕಾರವನ್ನು ನಾನು ಸ್ಮರಿಸಿದರೆ, ಕೇವಲ ಔಪಚಾರಿಕವಾಗುತ್ತದೆ. ವ್ಯವಹಾರಕ್ಕೂ ಮೀರಿದ ಆವರ ವಿಶ್ವಾಸವನ್ನು ಬರೆದು ತಿಳಿಸದಿರುವುದೇ ಕ್ಷೇಮ.

ಇಂತು

**ಶ್ರೀನಿವಾಸರಾವ್ ಕೊರಟಿ**

ಕನ್ನಡನಾಡಿನ ಉಜ್ವಲ ಇತಿಹಾಸದಲ್ಲಿ
ಎಂದಿಗೂ ಮರೆಯಲಾಗದ ಸಾಮ್ರಾಜ್ಯವಾಗಿ ಮೆರೆದ

# ವಿಜಯನಗರ ಸಾಮ್ರಾಜ್ಯದ

**ಅದ್ಭುತ ರಮ್ಯ ಕಥೆ ಪ್ರಥಮಬಾರಿಗೆ**

ಶ್ರೀನಿವಾಸರಾವ್ ಕೊರಟಿ ಅವರ ಸ್ವಾರಸ್ಯಮಯ ಶೈಲಿಯಲ್ಲಿ

**ಹನ್ನೆರಡು ಕಾದಂಬರಿಗಳಾಗಿ ಕನ್ನಡಿಗರಿಗೆ ದೊರೆಯಲಿದೆ**

| | |
|---|---|
| ದೇವಗಿರಿಪತನ | ಅಚ್ಚಿನಲ್ಲಿ |
| ಕನ್ನಡಿಗರ ಕಾಳರಾತ್ರಿ | ,, |
| ರಾಜ್ಯೋದಯ | ,, |
| ರಾಯಪರಾಭವ | ,, |
| ಗಜಬೇಂಟೆಕಾರ | ,, |
| ರಾಜ್ಯಕ್ರಾಂತಿ | ,, |
| ಜಗನ್ಮೋಹಿನಿ | ಪ್ರಕಟವಾಗಿದೆ |
| ಶಾಂತಿವಾದಿ | ,, |
| ರಾಜದ್ರೋಹಿ | ,, |
| ಅಮಾತ್ಯರತ್ನ | ,, |
| ಹುಚ್ಚುದೊರೆ | ,, |
| ರಕ್ಕಸತಂಗಡಿ | ,, |

**ಓದುಗರಿಗೆ ಅಪೂರ್ವ ಸುಸಂಧಿ**

೧

ಭುವನವಿಜಯದ ರಾಜಾಂತಃಪುರದಲ್ಲಿ ಅಳಿಯ ರಾಮರಾಯ ಚಿಂತಾಕ್ರಾಂತನಾಗಿ ಕುಳಿತಿದ್ದನು. ಅವನು ಯಾವುದನ್ನೋ ಗಾಢವಾಗಿ ಆಲೋಚಿಸುತ್ತಿದ್ದಂತೆ ತೋರುತ್ತಿತ್ತು. ವಿಜಯನಗರ ಸಾಮ್ರಾಜ್ಯವು ಸಲಕಂ ತಿರುಮಲ ಸಹೋದರರ ಪೈಶಾಚಿಕ ಪ್ರಭುತ್ವದಿಂದ ಪಾರಾಗಿತ್ತು. ರಾಹು ಕೇತುಗಳಂತೆ ಸಾಮ್ರಾಜ್ಯಚಂದ್ರವನ್ನು ಮುತ್ತಿ, ಹನ್ನೆರಡು ವರ್ಷಗಳ ಕಾಲ ಜನತೆಯನ್ನು ಪೀಡಿಸಿದ್ದ ಆ ಧೂರ್ತ ಸಲಕಂ ಸಹೋದರರ ದಬ್ಬಾಳಿಕೆ, ಹಿಂಸೆ, ಕೊಲೆ ಸುಲಿಗೆಗಳಿಗೆ ಕೊನೆ ಬಂದಿತ್ತು. ಸಾಮ್ರಾಜ್ಯ ಲಲಾಸೆಯಿಂದ, ಅಧಿಕಾರ ಮೋಹದಿಂದ ಅವರು ಸಾಮ್ರಾಜ್ಯವನ್ನು ಮಸಣದಂತೆ ಮಾಡಿದ್ದರು. ದೇಶದಲೆಲ್ಲಾ ಅನಾಯಕತೆಯುಂಟಾಗಿತ್ತು. ಎಲ್ಲೆಲ್ಲೂ ಅಶಾಂತಿ, ಕಳವಳಗಳು ತಲೆದೋರಿದ್ದುವು. ಹುಚ್ಚುದೊರೆಯ ನಿರಂಕುಶ ಆಡಳಿತದಿಂದ ಕಂಗೆಟ್ಟಿದ್ದ ಜನತೆಯನ್ನು ಕ್ಷಾಮಡಾಮರಗಳು ಇನ್ನಷ್ಟು ಘಾಸಿಗೊಳಿಸಿದ್ದುವು. ಹಿಂದೊಂದು ಕಾಲದಲ್ಲಿ ಸುಖಸಂತೃಪ್ತಿಗಳಿಗೆ ನೆಲೆವೀಡಾಗಿದ್ದ ಸಂಪದ್ಭರಿತವಾದ ವಿಜಯನಗರವು ಹಾಳುಸುರಿಯುತ್ತಿತ್ತು.

ನಗರದ ಬಹುಪಾಲು ಜನರು ಹುಚ್ಚುದೊರೆಯ ಹಿಂಸೆ ಅತ್ಯಾಚಾರಗಳನ್ನು ಸಹಿಸದೆ ನಗರವನ್ನು ಬಿಟ್ಟು ಓಡಿಹೋಗಿದ್ದರು. ಮಿತಿಮೀರಿದ ತೆರಿಗೆ ಸುಂಕಮುಂತಾದ ಕರಭಾರದಿಂದ ವ್ಯಾಪಾರವು ಕುಸಿದುಬಿದ್ದಿತ್ತು. ದೇಶದ ಜೀವಾಳವಾಗಿದ್ದ ವಿದೇಶಿವ್ಯಾಪಾರ ನಿಂತಿತ್ತು. ವಿದೇಶಿವರ್ತಕರು ರಾಜಧಾನಿಯಲ್ಲಿ ಸರಿಯಾದ ಸಂರಕ್ಷಣೆ ಇಲ್ಲವೆ ತಮ್ಮ ಮಳಿಗೆಗಳನ್ನು ಮುಚ್ಚಿದ್ದರು. ರೈತರ ಶೋಷಣೆಯಿಂದ ಜಮೀನುಗಳು ಪಾಳುಬಿದ್ದಿದ್ದುವು. ಮೇಲಿಂದ ಮೇಲೆ ಬಿಜಾಪುರದ ಸುಲ್ತಾನನಿಗೆ ತೆತ್ತ ಕಪ್ಪಕಾಣಿಕೆಗಳಿಂದ ರಾಜಭಂಡಾರ ಬರಿದಾಗಿತ್ತು. ಇದ್ದಬದ್ದ ಅಮೂಲ್ಯವಾದ ಮುತ್ತುರತ್ನಗಳನ್ನು ಶತ್ರುಗಳ ಕೈಗೆ ಸಿಕ್ಕಬಾರದೆಂದು ಸಲಕಂ ತಿರುಮಲನು ಅವುಗಳನ್ನು ಪುಡಿಪುಡಿ ಮಾಡಿಸಿದ್ದನು. ಆನೆಕುದುರೆಗಳು ಶತ್ರುಗಳ ಪಾಲಾಗಬಾರದೆಂದು ಅವುಗಳ ಕಣ್ಣು ಕಿತ್ತು ಕಿವಿಗಳನ್ನು ಕತ್ತರಿಸಿ ಊನಗೊಳಿಸಿದ್ದನು. ರಾಜಧಾನಿಯು ಶತ್ರುಗಳ ವಶವಾಗಬಾರದೆಂದು ಅದನ್ನು ಸುಟ್ಟು ಭಸ್ಮಗೊಳಿಸಲು ಅರಮನೆಗೆ ಬೆಂಕಿ ಇಡಿಸಿ, ತಾನು ಆತ್ಮಹತ್ಯ ಮಾಡಿಕೊಂಡಿದ್ದನು. ವಿಜಯನಗರವು ಬೆಂಕಿಯಿಂದ ಸಂಪೂರ್ಣ ನಾಶವಾಗುವ ಮುನ್ನ ಅಳಿಯ ರಾಮರಾಯನು ಅದನ್ನು ರಕ್ಷಿಸಿದ್ದನು ಸಲಕಂ

ಸಹೋದರರು ಸೆರೆಯಲ್ಲಿಟ್ಟಿದ್ದ ಸಾಮ್ರಾಜ್ಯ ಲಕ್ಷ್ಮಿಯನ್ನು ಸೆರೆಯಿಂದ ಬಿಡಿಸಿ, ಪವಿತ್ರವಾದ ವಿಜಯನಗರ ಸಿಂಹಾಸನದ ಮೇಲೆ, ನಿಜವಾದ ಹಕ್ಕುದಾರನಾದ, ಸಾಮ್ರಾಟ್ ಕೃಷ್ಣದೇವರಾಯನ ಮಲತಮ್ಮ ರಂಗಕ್ಷಿತಿಪತಿಯ ಮಗನಾದ ಹದಿನಾರು ವರ್ಷದ ಸದಾಶಿವರಾಯನನ್ನು ಕೂಡಿಸಿ, ಪಟ್ಟಕಟ್ಟಿದ್ದನು. ಜನತೆಯ ಅಭೀಷ್ಟದಂತೆ, ಸದಾಶಿವರಾಯನು ಪ್ರಾಪ್ತವಯಸ್ಕನಾಗುವ ತನಕ ರಾಜಪ್ರತಿನಿಧಿಯಾಗಿ ತಾನೇ ಆಡಳಿತ ಸೂತ್ರವನ್ನು ಕೈಗೆ ತೆಗೆದುಕೊಂಡಿದ್ದನು. ರಾಜ್ಯಾಡಳಿತದ ಸೂತ್ರ ಕೈಗೆ ಬಂದ ಮೇಲೆ ರಾಮರಾಯನ ಹೆಗಲಿಗೆ ಸಾಮ್ರಾಜ್ಯದ ಹೊರೆ ಬಿದ್ದಿತ್ತು. ಅವನ ಮುಂದೆ ಅನೇಕ ಸಮಸ್ಯೆಗಳು ಬೃಹದಾಕಾರವಾಗಿ ನಿಂತಿದ್ದುವು.

ದೇಶದಲ್ಲಿ ಉಂಟಾಗಿದ್ದ ಅನಾಯಕತೆ, ಅರಾಜಕತೆಗಳನ್ನು ನಿವಾರಿಸಬೇಕಾಗಿತ್ತು. ಸಾಮ್ರಾಜ್ಯದ ಜನತೆಯ ಎದೆಯಲ್ಲಿ ತುಟಿಯುತ್ತಿದ್ದ ಶಂಕೆ, ಕಳವಳಗಳನ್ನು ನೀಗಿ, ಅವರಿಗೆ ಸುಭದ್ರವಾದ, ನ್ಯಾಯ ನಿಷ್ಠೆಯಿಂದ ಕೂಡಿದ ಸರಕಾರವನ್ನು ಕೊಡಬೇಕಾಗಿತ್ತು; ಒಳ, ಹೊರಗಿನ ಶತ್ರು ಭೀತಿಯನ್ನು ನಿವಾರಿಸಿ, ಅಧಿಕಾರಿಗಳ ಶೋಷಣೆ ತಪ್ಪಿಸಿ ಜನತೆಯ ಹಿತರಕ್ಷಣೆ ಮಾಡಬೇಕಾಗಿತ್ತು. ಕರಭಾರದಿಂದ ಕುಸಿದಿದ್ದ ವ್ಯಾಪಾರವನ್ನು ಮೊದಲಿನ ಸ್ಥಿತಿಗೆ ತರಬೇಕಾಗಿತ್ತು. ಜನಸಾಮಾನ್ಯರಿಗೆ ಶಾಂತಿ ನೆಮ್ಮದಿಗಳನ್ನು ಕೊಡಬೇಕಾಗಿತ್ತು. "ವಿಜಯನಗರ ಸಾಮ್ರಾಜ್ಯವನ್ನು ಮೊದಲಿನಂತೆ ಸಂಪದ್ಯುಕ್ತವಾಗಿ ಮಾಡಿ, ಅದರ ಕೀರ್ತಿಯನ್ನು ಬೆಳಗಿಸಬೇಕು. ಅದರ ವಿಶಾಲ ಛತ್ರದ ಅಡಿಯಲ್ಲಿ ಅಖಂಡ ಹಿಂದೂ ಸಾಮ್ರಾಜ್ಯ ಸ್ಥಾಪಿಸಬೇಕು, ದಕ್ಷಿಣಾಪಥದಲ್ಲೆಲ್ಲಾ ವಿಜಯನಗರವನ್ನು ಅತ್ಯಂತ ಬಲಿಷ್ಠ ರಾಷ್ಟ್ರವಾಗಿ ಮಾಡಬೇಕು" ಎಂದು ಕನಸು ಕಾಣುತ್ತಿದ್ದ ರಾಮರಾಯನಿಗೆ ಬರಿದಾಗಿದ್ದ ರಾಜಭಂಡಾರ, ತೆರವಾಗಿದ್ದ ಶಸ್ತ್ರಾಗಾರ ಹಾಳುಸುರಿಯುತ್ತಿದ್ದ ರಾಜಧಾನಿ, ಅರೆಸುಟ್ಟ ಅರಮನೆಗಳು ಮೂದಲಿಸುತ್ತಿರುವಂತೆ ತೋರುತ್ತಿದ್ದುವು. ಇಂತಹ ಪರಿಸ್ಥಿತಿಯಲ್ಲಿ ತಾನು ಏನುಮಾಡಬೇಕೆಂಬುದನ್ನು ತಿಳಿಯದೆ ರಾಮರಾಯನು ಚಿಂತಾಕ್ರಾಂತನಾಗಿದ್ದನು. ಎಷ್ಟು ಚಿಂತಿಸಿದರೂ ಈ ವಿಷಮಪರಿಸ್ಥಿತಿಯಿಂದ ಸಾಮ್ರಾಜ್ಯವನ್ನು ಪಾರುಮಾಡುವ ದಾರಿ ಕಾಣಿಸದೆ ಹೋಗಿತ್ತು. ಅವನು ತನ್ನ ಈ ಚಿಂತೆಯಲ್ಲಿ ಮೈಮರೆತು ಕುಳಿತಿರುವಾಗ ಸಾಮ್ರಾಟ ಕೃಷ್ಣದೇವರಾಯನ ಪತ್ನಿಯರಾದ ತಿರುಮಲಾದೇವಿ, ಚಿನ್ನಾದೇವಿಯರು ರಾಮರಾಯನನ್ನು ನೋಡಲು ಬಂದಿದ್ದರು.

"ರಾಮಭೂಪಾಲರು ಯಾವುದೋ ಗಹನ ಚಿಂತೆಯಲ್ಲಿ ಮುಳುಗಿರುವಂತೆ ತೋರುತ್ತದೆ" ಎಂದು ಚಿನ್ನಾದೇವಿ ಹೇಳಿದಾಗಲೇ ರಾಮರಾಯನಿಗೆ ಎಚ್ಚರ. ಅವನು ಕೂಡಲೇ ತನ್ನ ಭಾವಸಮಾಧಿಯಿಂದ ಎಚ್ಚತ್ತು, ಬಂದ ರಾಣಿಯ

ರನ್ನು ಉಚಿತ ರೀತಿಯಲ್ಲಿ ಬರಮಾಡಿಕೊಂಡು, ಕುಶಲಪ್ರಶ್ನೆ ಮಾಡಿ, ಸತ್ಕರಿಸಿದನು.

"ರಾಣಿಯರಿಬ್ಬರೂ ಯಾವುದೋ ಮಹತ್ಕಾರ್ಯದ ಸಲುವಾಗಿ ಬಂದಂತಿದೆ. ಅದೇನೆಂದು ತಿಳಿಯಬಹುದೇ?" ಎಂದು ಪ್ರಶ್ನಿಸಿದನು.

"ನಿಮಗೆ ಅನ್ನಪೂರ್ಣಾದೇವಿ – ಹಾಗೂ ವರದಾದೇವಿಯರ ಸಮಾಚಾರವೇನಾದರೂ ತಿಳಿಯಿತೆ?" ಎಂದು ಆತಂಕಗೊಂಡ ಧ್ವನಿಯಲ್ಲಿ ತಿರುಮಲಾದೇವಿ ಕೇಳಿದಳು.

"ಇಲ್ಲ ಅವರ ಬಗ್ಗೆ ಯಾವ ಸುದ್ದಿಯೂ ಇಲ್ಲ."

"ಪೆದ್ದ ತಿರುಮಲನು ವರದಾದೇವಿಯನ್ನು ಅರಮನೆಯಲ್ಲೇ ಸೆರೆ ಇಟ್ಟದ್ದಾಗಿ ಸಮಾಚಾರ ತಿಳಿಯಿತು. ಅನ್ನಪೂರ್ಣಾದೇವಿಯವರೂ ಒಮ್ಮೆ ಅರಮನೆಯಲ್ಲಿ ಕಾಣಿಸಿಕೊಂಡು ಮಾಯವಾದರಂತೆ. ಮುಂದೆ ಇವರಿಬ್ಬರ ಗತಿ ಏನಾಯಿತೆಂದು ಯಾರಿಗೂ ತಿಳಿಯದು. ಇವರ ಬಗ್ಗೆ ನಾವು ನಡಸಿರುವ ಶೋಧನೆ ವ್ಯರ್ಥವಾಗಿದೆ. ಇವರ ಜೀವಕ್ಕೆ ಎಲ್ಲಿ ಅಪಾಯವೊದಗಿತೋ ಎಂದು ನನಗೆ ಗಾಬರಿಯಾಗಿದೆ. ಈ ಬಗ್ಗೆ ನಿಮಗೇನಾದರೂ ಸುದ್ದಿ ತಿಳಿದಿದ್ದರೆ ವಿಚಾರಿಸಿಕೊಂಡು ಹೋಗಲು ಬಂದೆವು."

"ನನಗೂ ಅವರ ಕಣ್ಮರೆ ಸೋಜಿಗವನ್ನುಂಟುಮಾಡಿದೆ. ನಮ್ಮ ವಿಠಲನಿಂದ ಅನ್ನಪೂರ್ಣಾದೇವಿಯ ಸಹಕಾರದಿಂದ ಸೆರೆಮನೆಯ ಬಾಗಿಲು ತೆರೆಯಲ್ಪಟ್ಟಿತೆಂದು ತಿಳಿಯಿತು. ಆಗ ಕಾಣಿಸಿಕೊಂಡ ಅನ್ನಪೂರ್ಣಾದೇವಿ ಮುಂದೆ ಏನಾದರೆಂದು ಯಾರಿಗೂ ಗೊತ್ತಿಲ್ಲ. ಅಂತೆಯೇ ಒಮ್ಮೆಲೇ ಸೆರೆಮನೆಯಿಂದ ಕಣ್ಮರೆಯಾದ ವರದಾದೇವಿಯವರೂ ಏನಾದರೆಂದು ಯಾರಿಗೂ ತಿಳಿದಿಲ್ಲ."

"ನನಗೆ ಯಾಕೋ ಮೇಲಿಂದಮೇಲೆ ಕೆಟ್ಟ ಶಕುನಗಳು ಆಗುತ್ತಿವೆ ಇಬ್ಬರು ರಾಣಿಯರೂ ಅರಮನೆಗೆ ಬೆಂಕಿಬಿದ್ದಾಗ...." ಮಾತು ತಡೆದಳು ತಿರುಮಲಾದೇವಿ.

"ಹಾಗಾದರೆ ಅವರು ಆ ಸಮಯದಲ್ಲಿ ಅರಮನೆಯಲ್ಲಿದ್ದರೆಂದು ನಿಮ್ಮ ಊಹೆಯೆ?" ಚಕಿತನಾಗಿ ಕೇಳಿದ ರಾಮರಾಯ.

"ಹೌದು!" ಅನುಮಾನಿಸುತ್ತಾ ತಿರುಮಲಾದೇವಿ ಹೇಳಿದಳು.

"ಅರಮನೆಯನ್ನು ಸ್ವಾಧೀನ ಪಡಿಸಿಕೊಳ್ಳುವ ಸಲುವಾಗಿ, ಸೈನಿಕರಲ್ಲಿ ಭೀಕರ ಕಾಳಗ ನಡೆಯುತ್ತಿರುವಾಗ, ಆ ಅರಮನೆಯಲ್ಲಿ ಅನ್ನಪೂರ್ಣಾದೇವಿಯರಿಗೆ ಏನು ಕೆಲಸವಿದ್ದೀತು? ಸೈನಿಕರ ಕ್ರೂರ್ಗತ್ತಿಗೆ ಬಲಿಯಾಗಲು ಅವರೇಕೆ ಇಲ್ಲಿಗೆ ಬರುತ್ತಾರೆ?"

" ನನಗೂ ಇದೇ ಸಂಶಯ !" ಎಂದಳು ಚಿನ್ನಾದೇವಿ.

" ನನಗೂ ಇದೊಂದು ಸಮಸ್ಯೆಯಾಗಿದೆ ! ಒಟ್ಟಿನಲ್ಲಿ ಹೋರಾಟ ನಡೆದಾಗ ಅವರು ನಗರವನ್ನು ಬಿಟ್ಟು ಹೋಗಿಲ್ಲವೆಂಬುದು ಸ್ಪಷ್ಟವಾಗಿದೆ."

" ನಗರದಲ್ಲಿ ಇದ್ದಿದ್ದರೆ ನಗರ ವಶವಾಗಿ ಮೂರು ದಿನಗಳನಂತರವೂ, ಅವರ ಸುದ್ದಿ ನಮಗೆ ತಿಳಿಯದೆ ಹೋಗುತ್ತಿತ್ತೆ ? ಬಹುಶಃ ಅರಮನೆಗೆ ಬರುವ ಗಡಿಬಿಡಿಯಲ್ಲಿ ಸೈನಿಕರ ಕೈಗೆ ಸಿಕ್ಕಿ ಇಲ್ಲವೇ ಕುದುರೆ ಆನೆಗಳ ಕಾಲಿಗೆ ಸಿಕ್ಕಿ..." ಅರ್ಧಕ್ಕೇ ನಿಲ್ಲಿಸಿದ.

" ಆದರೆ ಅದನ್ನು ಸಮರ್ಥಿಸಲು ನಮಗೆ ಯಾವ ಆಧಾರವೂ ದೊರೆತಿಲ್ಲ. ಮಡಿದ ಸೈನಿಕರ ಶವಗಳಲ್ಲಿ – ಅವರ ದೇಹ ಪತ್ತೆಯಾಗಿಲ್ಲ... ಅವರು ಈ ಹೋರಾಟದ ಗಲಭೆಯಲ್ಲಿ ಸಿಕ್ಕಿಬಿದ್ದಂತೆ ತೋರುವುದಿಲ್ಲ." ಎಂದಳು ತಿರುಮಲಾದೇವಿ.

" ಮಹಾರಾಣಿ ಅನ್ನಪೂರ್ಣಾದೇವಿಯಂತೆಯೇ, ಮಹಾರಾಣಿ ವರದಾದೇವಿಯರೂ ಒಮ್ಮೆಲೇ ಕಣ್ಮರೆಯಾಗಿದ್ದಾರೆ ! ಅಂದಮೇಲೆ ಇಬ್ಬರು ರಾಣಿಯರೂ – ಅರಮನೆಯಲ್ಲಿ ಹೋರಾಟ ನಡೆದಿರುವಾಗ ಎಲ್ಲಿಗೋ ತಪ್ಪಿಸಿಕೊಂಡು ಹೋಗಿರಬೇಕು" ಎಂದಳು ಚಿನ್ನಾದೇವಿ.

" ಆದರೆ ಇಬ್ಬರು ರಾಣಿಯರೂ ಅರಮನೆಯನ್ನು ಬಿಟ್ಟು ಹೋಗಿರುವಂತೆ ನನಗೆ ಅನಿಸುವುದಿಲ್ಲ...."

" ಅರಮನೆಗೆ ಬೆಂಕಿ ಬಿದ್ದಾಗ ಅವರು ಇಲ್ಲಿಯೇ ಇದ್ದರೆಂದು ನಿಮ್ಮ ಊಹೆಯೆ ?" ರಾಮರಾಯ ಮತ್ತೆ ಚಕಿತನಾಗಿ ಕೇಳಿದ.

" ಹೌದು. ಅರಮನೆಗೆ ಬೆಂಕಿಬಿದ್ದ ಸಮಯದಲ್ಲಿ ರಾಣಿಯರಿಬ್ಬರೂ ಅರಮನೆಯಲ್ಲೇ ಇದ್ದಿರಬೇಕು. ಆ ಸಮಯದಲ್ಲಿ ಅವರಿಗೆ ಅರಮನೆಯಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವಾಗದೆ ಇರಬಹುದು...."

" ಆದರೆ ಬೆಂಕಿಯಲ್ಲಿ ಅವರು...."

" ಇದು ಕೇವಲ ನನ್ನ ಊಹೆ. ಸೆರೆಮನೆಯಿಂದ ಸೆರೆಯಾಳುಗಳನ್ನು ಬಿಡಿಸಿದ ಮೇಲೆ, ಅನ್ನಪೂರ್ಣಾದೇವಿಗೆ ಆಗಷ್ಟೇ ಮೇಲೆದ್ದ ಅರಮನೆಯ ಬೆಂಕಿ ಕಾಣಿಸಿರಬೇಕು. ಅವರಿಗೆ ವರದಾದೇವಿಯ ನೆನಪು ತಕ್ಷಣ ಉಂಟಾಗಿ, ಅರಮನೆಯ ಕಡೆಗೆ ಗಾಬರಿಯಿಂದ, ಹುಚ್ಚಿಯಂತೆ ಮುನ್ನುಗ್ಗಿರಬೇಕು.... ಹೀಗೆ ನುಗ್ಗಿದಾಗ ಅವರು ಬೆಂಕಿಯಲ್ಲಿ ಸಿಕ್ಕಿಬಿದ್ದು ಸುಟ್ಟು ಬೂದಿಯಾಗಿರಬೇಕೆಂದು ನನ್ನ ಊಹೆ. ಅರಮನೆಗೆ ಬಿದ್ದ ಬೆಂಕಿಯನ್ನು ಆರಿಸುವ ಕಾರ್ಯದಲ್ಲಿ ನಿರತರಾದ ಸೈನಿಕರೆಲ್ಲ ಅವರನ್ನು ಗಮನಿಸದೆ ಹೋಗಿರಬಹುದು – ಆದರೂ – ಅರಮ

ನೆಯ ದಾಸಿಯೊಬ್ಬಳಿಗೆ ಬೆಂಕಿಬಿದ್ದಾಗ ಅಂತಃಪುರದ ಕಡೆ ಒಬ್ಬ ಹೆಂಗಸು ನುಗ್ಗಿ ಬರುವುದು ಕಾಣಿಸಿತಂತೆ. ಬಹುಶಃ ಆಕೆಯೇ ಅನ್ನಪೂರ್ಣಾದೇವಿ ಇರ ಬೇಕೆಂದು ನನ್ನ ಅನುಮಾನ....ಅರಮನೆಯ ಸುಟ್ಟುಹೋದ ಭಾಗಗಳನ್ನು ನೋಡಿದರೆ, ಈ ಬಗ್ಗೆ ಏನಾದರೂ ಹೆಚ್ಚಿನ ವಿವರಗಳು ತಿಳಿಯಬಹುದೇನೋ. ಅಂತಲೇ ಇಲ್ಲಿಗೆ ಬಂದೆವು...."

ಈ ಸುದ್ದಿ ಕೇಳಿದ ರಾಮರಾಯನು ತಡಮಾಡದೆ, ರಾಣಿಯರೊಡನೆ, ಸುಟ್ಟುಹೋಗಿದ್ದ ಅಂತಃಪುರದ ಭಾಗವನ್ನು ಪರಿಶೀಲಿಸಲು ಬಂದನು. ಅರ ಮನೆಯ ಅಂತಃಪುರದ ಒಳಭಾಗದಲ್ಲಿ, ದಂತದ ಹಾಗೂ ಕರಿಮರ, ಗಂಧದ ಮರಗಳಿಂದ ರಚಿಸಿದ್ದ ಕಂಭಗಳೂ, ಮೇಲ್ಛಾವಣಿಗಳೂ ಅಗ್ನಿನಾರಾಯಣನ ಪಾಲಾಗಿದ್ದುವು. ಅಲ್ಲಿದ್ದ ಬೆಲೆಬಾಳುವ ವಸ್ತುಗಳೆಲ್ಲವೂ ಸುಟ್ಟು ಭಸ್ಮವಾಗಿ ದ್ದುವು. ಕಂಭಗಳ ಅಲಂಕಾರಕ್ಕೆಂದು ಹೊದೆಸಿದ ಬಂಗಾರ, ಬೆಳ್ಳಿಗಳ ರೇಕು ಗಳು, ಬೆಂಕಿಯ ಶಾಖಕ್ಕೆ ಕರಗಿ ಲೋಹದ ಮುದ್ದೆಯಾಗಿತ್ತು. ಅವುಗಳ ನಡುವೆ ಒಂದು ಭಸ್ಮದ ರಾಶಿ ಬಿದ್ದಿತ್ತು. ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅದರಲ್ಲಿ ಅರೆಬೆಂದ ಮೂಳೆಗಳೂ, ಕೊಳೆತು ನಾರುವ ದೇಹದ ಭಾಗಗಳೂ ಕಾಣಿಸಿದುವು. ಅವು ರಾಣಿಯರ ಅವಶೇಷವೆಂದು ತಿಳಿಯಲು ಅವರಿಗೆ ಕಷ್ಟವಾಗಲಿಲ್ಲ. ತಿರುಮಲಾದೇವಿಯ ಊಹೆ ನಿಜವಾಗಿತ್ತು. ಭಸ್ಮದ ರಾಶಿ ಯಲ್ಲಿದ್ದ ಇಬ್ಬರು ರಾಣಿಯರ ಅರೆಬೆಂದ ದೇಹಗಳು ಆ ರಾಣಿಯರಿಗೆ ಒದಗಿದ್ದ ದುಸ್ಥಿತಿಯ ಸಂಕೇತವಾಗಿ ಉಳಿದಿದ್ದುವು. ವಾಸ್ತವವಾಗಿ ನಡೆದದ್ದೂ ಹಾಗೆಯೇ.

ಸಲಕಂ ಪೆದ್ದತಿರುಮಲನು ತನ್ನ ಕಡೆಯ ದಿನಗಳಲ್ಲಿ ಕುಮಾರ ವೆಂಕ ಟಾದ್ರಿಯನ್ನು ಕೊಂದು, ತನ್ನ ತಂಗಿ ವರದಾದೇವಿಯನ್ನು ಸೆರೆಯಲ್ಲಿಟ್ಟು, ಸಿಂಹಾಸನವನ್ನು ಆಕ್ರಮಿಸಿ, ತಾನೇ ರಾಜನೆಂದು ಘೋಷಿಸಿದ್ದನಷ್ಟೆ. ಕೃಷ್ಣ ದೇವರಾಯನ ಕಾಲದಿಂದಲೂ ನಾಟ್ಯಾಚಾರ್ಯರಾಗಿದ್ದ ಸ್ವಾಮಿನಿಷ್ಠ ಸೇವಕರಾ ಗಿದ್ದ ಭರತಾಚಾರ್ಯರು – ಉಪಾಯಾಂತರದಲ್ಲಿ, ಸೆರೆಯಲ್ಲಿದ್ದ ತಿರುಮಲಾದೇವಿ ಮತ್ತು ಚಿನ್ನಾದೇವಿಯರನ್ನು ಸೆರೆಯಿಂದ ಬಿಡಿಸಿ ರಾಜಧಾನಿಯಿಂದ ತಪ್ಪಿಸಿ ಕೊಂಡು ಹೋಗುವಂತೆ ಮಾಡಿ, ಸಲಕಂ ಸೋದರರನ್ನು ವಂಚಿಸಿದ ಮೇಲೆ— ಇದರಿಂದ ಪಾಠ ಕಲಿತಿದ್ದ ಅವರು, ವರದಾದೇವಿಯು ತಮ್ಮ ಕೈತಪ್ಪಿ ಹೋದಾ ಳೆಂದು ಹೆದರಿ, ಕೋಟೆಯ ಸೆರೆಮನೆಯಲ್ಲಿದ್ದ ಆಕೆಯನ್ನು, ಅರಮನೆಗೆ ಸಾಗಿಸಿ, ಅಂತಃಪುರದ ಒಳಕೋಣೆಯಲ್ಲಿ ಯಾರಿಗೂ ತಿಳಿಯದಂತೆ, ಬಂಧನ ದಲ್ಲಿ ಇರಿಸಿದ್ದರು. ಆದವಾನಿಯ ಯುದ್ಧದಲ್ಲಿ ಸಲಕಂ ಸೋದರರಲ್ಲಿ ಕಿರಿಯ ನಾದ ಚಿನ್ನತಿರುಮಲನು ತೀರಿಕೊಳ್ಳಲು, ಭ್ರಾತೃವಿಯೋಗದಿಂದ ಹುಚ್ಚನಂತಾ

ಗಿದ್ದ ಪೆದ್ದ ತಿರುಮಲನು – ಶತ್ರುಗಳಿಗೆ ನಗರವನ್ನು ಒಪ್ಪಿಸುವ ಮುನ್ನ ತನ್ನೊಂದಿಗೆ ಅರಮನೆಯ ಸಿಂಹಾಸನವನ್ನೂ ನಾಶಮಾಡಲು ನಿಶ್ಚಯಿಸಿ, ಅರಮನೆಗೆ ಬೆಂಕಿ ಇಡಿಸಿದ್ದ. ಆ ಸಮಯದಲ್ಲಿ ಅಂತಃಪುರದ ಒಳಕೋಣೆಯಲ್ಲಿದ್ದ ವರದಾದೇವಿಯ ನೆನಪು ಹುಚ್ಚ ತಿರುಮಲನಿಗೆ ಬಂದಿರಲಿಲ್ಲ. ವರದಾದೇವಿಯನ್ನು ಅರಮನೆಯ ಒಳಕೋಣೆಯಲ್ಲಿ ಬಂಧನದಲ್ಲಿಟ್ಟಿರುವ ಸಂಗತಿಯನ್ನು ರಹಸ್ಯವಾಗಿಟ್ಟಿದ್ದುದರಿಂದ, ಬೆಂಕಿ ಬಿದ್ದಾಗ ಅವಳ ರಕ್ಷಣೆಗೆ ಯಾರೂ ಹೋಗಿರಲಿಲ್ಲ. ಕಾವಲಿದ್ದ ಸೈನಿಕರು ಪ್ರಾಣದ ಮೇಲಿನ ಆಸೆಯಿಂದ, ಬೆಂಕಿಯಿಂದ ಪಾರಾಗುವ ಗಡಿಬಿಡಿಯಲ್ಲಿ, ನಿದ್ರಿಸುತ್ತಿದ್ದ ರಾಣಿಯನ್ನು ಮರೆತಿದ್ದರು. ದುರದೃಷ್ಟವಶಾತ್ ಸಲಕಂ ಸಹೋದರರ ಕಿಂಕರ ಹನುಮನಾಯಕನ ಸೇವಕರು ತಮ್ಮ ಒಡೆಯನ ಆಜ್ಞೆಯಂತೆ, ಆ ಭಾಗದಲ್ಲಿ ಕರ್ಪೂರ, ತೈಲ, ಅರಗು–ಮೊದಲಾದ ಅಗ್ನಿವಾಹಕ ವಸ್ತುಗಳಿಗೆ ಬೆಂಕಿ ಇಟ್ಟು, ಮೇಲ್ಛಾವಣಿ ತೊಲೆ ಕಂಬಗಳನ್ನು ಉರುಳಿಸಲು ಆಸ್ಫೋಟಕ ಸಾಮಗ್ರಿಗಳನ್ನು ಉಪಯೋಗಿಸಿದ್ದರು. ಅದರ ಭಯಂಕರ ಶಬ್ದಕ್ಕೆ ಹೆದರಿ ಯಾರೂ ಅತ್ತ ಸುಳಿದಿರಲಿಲ್ಲ. ಆ ಶಬ್ದ ಕೇಳಿ ವರದಾದೇವಿಗೆ ಎಚ್ಚರವಾಯಿತು. ಒಮ್ಮೆಲೆ ಸಹಸ್ರ ಸಿಡಿಲುಗುಡುಗುಗಳ ಗರ್ಜನೆಯಿಂದ ಗಾಬರಿಯಾಯಿತು. ಅವಳು ಎದ್ದು ಬಾಗಿಲಿಗೆ ಬರುತ್ತಿದ್ದಂತೆ, ಕರ್ಪೂರ, ತೈಲ, ಅರಗುಗಳು ಸುಡುವ ವಾಸನೆ ಬಡಿಯಿತು. ಅದರ ಬೆನ್ನಿಗೆ ಉರಿಯುತ್ತಿರುವ ಕೆನ್ನಾಲಗೆಯ ಶಾಖವೂ ತಟ್ಟಿತು, ಅಂತಃಪುರಕ್ಕೆ ಬೆಂಕಿ ಬಿದ್ದಿದೆ ಎಂದು ಅನಿಸಿತು. ಕೂಡಲೇ ಅಲ್ಲಿಂದ ತಪ್ಪಿಸಿಕೊಳ್ಳಲು ನೋಡಿದಳು. ಆದರೆ ಬಾಗಿಲನ್ನು ಭದ್ರಪಡಿಸಿದ್ದುದರಿಂದ ಅಲ್ಲಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ—ಅವಳಿಗೆ ತನ್ನನ್ನು ತನ್ನ ಸೋದರರು, ಸಜೀವವಾಗಿ ದಹಿಸಲು ಬೆಂಕಿಯಿಟ್ಟಿರುವರೆಂದು ಅನಿಸಿತು. ಈ ವೇಳೆಗೆ ಭಯಂಕರ ಗರ್ಜನೆಯೊಂದಿಗೆ, ಅವಳು ಇದ್ದ ಕೋಣೆಯ ಬಾಗಿಲು ಮುರಿದುಬಿತ್ತು. ನೋಡು ನೋಡುತ್ತಿದ್ದಂತೆ, ಬೆಂಕಿಯ ಉರಿನಾಲಗೆ ನಾಲ್ಕು ಕಡೆಯಿಂದಲೂ ಅವಳನ್ನು ಆವರಿಸಿತ್ತಾ ಬಂದಿತ್ತು. ಪ್ರಾಣದ ಮೇಲಿನ ಆಸೆಯಿಂದ ಅವಳು ಆ ಅಗ್ನಿದ್ವಾರದಿಂದ ತಪ್ಪಿಸಿಕೊಳ್ಳಲು ಹೊರಟಳು. ಈ ಪ್ರಯತ್ನದಲ್ಲಿ ಅವಳು ಉಟ್ಟಿದ್ದ ಪೀತಾಂಬರಕ್ಕೆ ಬೆಂಕಿಬಿದ್ದು —ಅವಳು ಅಗ್ನಿನಾರಾಯಣನಿಗೆ ಆಹುತಿಯಾಗಿ ಅಸುವನ್ನು ನೀಗಿದಳು. ಅನ್ನಪೂರ್ಣಾದೇವಿ ಅಲ್ಲಿಗೆ ಬರುವ ವೇಳೆಗೆ ವರದಾದೇವಿಯ ಕಥೆ ಮುಗಿದು ಹೋಗಿತ್ತು. ಆದರೂ ಅನ್ನಪೂರ್ಣಾದೇವಿ ಧೃತಿಗೆಡದೆ ಅವಳನ್ನು ಉಳಿಸಿಕೊಳ್ಳುವ ಸಾಹಸದಲ್ಲಿ ತೊಡಗಿ ಕೊಂಚ ಹೊತ್ತಿನಲ್ಲೇ, ಅಗ್ನಿಜ್ವಾಲೆಗೆ ಸಿಕ್ಕಿ ಅವಳೂ ದಗ್ಧಳಾದಳು. ಈ ಉರಿ ಅಂತಃಪುರದ ಒಂದೊಂದು ಭಾಗವನ್ನೇ

ನುಂಗಿ, ಭುವನವಿಜಯದ ಕಡೆ ಭರದಿಂದ ಸಾಗಿತ್ತು. ಆ ವೇಳೆಗೆ ರಾಮರಾಯನ ಸೈನಿಕರು – ಮರಳು, ನೀರುಗಳಿಂದ ಅದನ್ನು ಆರಿಸಿದ್ದರು. ಬೆಂಕಿಯನ್ನು ಸಂಪೂರ್ಣ ಹತೋಟಿಗೆ ತರಲು ಹತ್ತಾರು ತಾಸುಗಳೇ ಹಿಡಿದುವು. ಅಂತಃಪುರದ ಒಂದು ಭಾಗ ಸಂಪೂರ್ಣವಾಗಿ ದಗ್ಧವಾದರೂ ಅದು ಇಡೀ ಅರಮನೆಯನ್ನು ವ್ಯಾಪಿಸುವ ಮೊದಲು ಅದನ್ನು ಅಡಗಿಸಲಾಗಿತ್ತು. ಈ ಗಡಿಬಿಡಿಯಲ್ಲಿ ಸಲಕಂ ಸೋದರರ ನೀಚತನಕ್ಕೆ ಬಲಿಯಾಗಿ, ಸುಟ್ಟು ಭಸ್ಮವಾದ ಆ ಹುತಾತ್ಮ ರಾಣಿಯರ ನೆನಪು ಯಾರಿಗೂ ಬರಲಿಲ್ಲ.

ನಡೆದಿದ್ದ ಸಂಗತಿ ತಿಳಿದಮೇಲೆ ಎಲ್ಲರೂ ಆ ಹುತ್ಮಾತ್ಮರ ಮರಣಕ್ಕಾಗಿ ಮರುಗಿ, ಬಾಷ್ಪಾಂಜಲಿಯನ್ನು ಅರ್ಪಿಸಿದರು.

ಈ ರಾಣಿಯರಿಬ್ಬರ ಬಲಿದಾನದೊಂದಿಗೆ ಸಲಕಂ ಸಹೋದರರ ಪೈಶಾಚಿಕ ಪ್ರಭುತ್ವ ಮುಗಿಯಿತೆಂದು ಜನ ಭಾವಿಸಿದರು.

೨

ವಿಶಾಲವಾದ ವಿಜಯನಗರ ಸಾಮ್ರಾಜ್ಯಕ್ಕೆ ಅಧಿಪತಿಯಾಗಿದ್ದರೂ, ವಿಜಯನಗರದ ರತ್ನಸಿಂಹಾಸನ ಅವನದಾಗಿದ್ದರೂ, ಇನ್ನೂರಕ್ಕಿಂತಲೂ ಹೆಚ್ಚಿನ ಸಾಮಂತ, ಮಾಂಡಲೀಕ, ಮೊನ್ನೆಯರಿಂದ ಪರಾಕು ಹೇಳಿಸಿಕೊಂಡರೂ, ರಾಜಾಧಿರಾಜ, ರಾಜಪರಮೇಶ್ವರ ಅರಿರಾಯರಗಂಡನೆಂಬ ಬಿರುದಿಗೆ ಪಾತ್ರನಾಗಿದ್ದರೂ, ರಾಮರಾಯನಿಗೆ ರಾಜಬೊಕ್ಕಸವನ್ನು ನೋಡಿದ ಮೇಲೆ ತಾನೆಂತಹ ನಿರ್ಗತಿಕನೆಂದು ತಿಳಿದಿತ್ತು. ರಾಜಭಂಡಾರ ಬರಿದಾಗಿರುವವರೆಗೆ ಸಾಮ್ರಾಟನೆಂಬ ಬಿರುದು ವಿಡಂಬನೆಯಾಗಿ ತೋರಿತು. ತನ್ನ ಬಿರುದುಗಳೆಲ್ಲವೂ ಅರ್ಥಶೂನ್ಯವಾಗಿ ಕಂಡಿತು. ಹಣದ ಬೆಂಬಲವಿಲ್ಲದೆ ಜನದ ಬೆಂಬಲವಿಲ್ಲ; ಇವೆರಡರ ಬೆಂಬಲವಿಲ್ಲದೆ ಯಾವ ಸಾಮ್ರಾಜ್ಯವೂ ಏಳಿಗೆಯಾಗದೆಂಬ ಸತ್ಯವನ್ನು ತಿಳಿದಿದ್ದ ವಿದ್ಯಾರಣ್ಯ ಮುನೀಂದ್ರರು ಭಗವತೀ ಭುವನೇಶ್ವರಿಯನ್ನು ಸಾಕ್ಷಾತ್ಕರಿಸಿಕೊಂಡು, ಮೂರುವರೆ ಘಳಿಗೆ ಸುವರ್ಣವೃಷ್ಟಿ ಕರೆದಿದ್ದ ಸಂಗತಿ—ದಂತ ಕಥೆಯಾಗಿದ್ದರೂ – ರಾಷ್ಟ್ರದ ಅಭ್ಯುದಯಕ್ಕೆ ಹಣದ ಆವಶ್ಯಕತೆಯನ್ನು ತಿಳಿಸುವ ನಿದರ್ಶನವಾಗಿತ್ತು. ಇದನ್ನು ಅರಿತೇ ವಿದ್ಯಾರಣ್ಯರ ಕಾಲದಿಂದಲೂ ರಾಷ್ಟ್ರಕಲ್ಯಾಣ ಸಾಧಿಸಲು ಪ್ರತಿ ವರ್ಷವೂ ರಾಜಬೊಕ್ಕಸದಲ್ಲಿ ಹೇರಳವಾದ ಸಂಪತ್ತನ್ನು ಸಂಗ್ರಹಿಸುವ ಸಂಪ್ರದಾಯ ಬೆಳೆದು ಬಂದಿತ್ತು. ಇದರ ಒಂದು ಪಾಲು ಆಪತ್ಕಾಲದಲ್ಲಿ ನೆರವಾಗಲು, ವಿಶೇಷ ಸಂದರ್ಭಗಳಲ್ಲಿ ವೆಚ್ಚಮಾಡಲು, ಗುಪ್ತನಿಧಿಯಾಗಿ ಇಡಲ್ಪಟ್ಟಿತ್ತೆಂಬ ಸಂಗತಿಯನ್ನು ರಾಮರಾಯನು ಕೇಳಿದ್ದನು

ಮಾತ್ರವಲ್ಲ – ಇಂತಹದೊಂದು ಗುಪ್ತನಿಧಿ ಹಕ್ಕ, ಬುಕ್ಕರ ಕಾಲದಿಂದ ಕೃಷ್ಣ ದೇವರಾಯನ ಕಾಲದವರೆಗೆ ಬೆಳೆದುಬಂದಿತ್ತೆಂಬ ಸಂಗತಿಯನ್ನೂ ಅವನು ಬಲ್ಲವ ನಾಗಿದ್ದ. ಕೃಷ್ಣದೇವರಾಯನ ಅನಂತರ ಪಟ್ಟಕ್ಕೆ ಬಂದ ಅಚ್ಯುತರಾಯನಿ ಗಾಗಲೀ, ಅವನ ಪ್ರಧಾನರಿಗಾಗಲೀ, ಈ ಗುಪ್ತನಿಧಿಯ ರಹಸ್ಯ ತಿಳಿದಿರಲಿಲ್ಲ. ಇದರ ರಹಸ್ಯ ಕೃಷ್ಣದೇವರಾಯನ ಮೂವರು ಪರಮಾಪ್ತ ಮಿತ್ರರಿಗೆ ತಿಳಿದಿತ್ತೇ ಹೊರತು ಉಳಿದ ಯಾರಿಗೂ ತಿಳಿದಿರಲಿಲ್ಲ.

ಈ ನಿಧಿಯು ತನ್ನ ಕೈವಶವಾದರೆ, ಸಾಮ್ರಾಜ್ಯವನ್ನು ಸುಭದ್ರವಾದ ಅಡಿ ಪಾಯದ ಮೇಲೆ ನೆಲೆಗೊಳಿಸಬಹುದೆಂದು ರಾಮರಾಯನು ಆಶಿಸಿದ. ವಿಜಯ ನಗರದ ವೈಭವ ಸಾಮ್ರಾಟ್ ಕೃಷ್ಣದೇವರಾಯನ ಕಾಲದಲ್ಲಿ ಯಾವ ಪರಾ ಕಾಷ್ಠತೆಗೆ ಏರಿತ್ತೆಂಬ ಸಂಗತಿಯನ್ನು ಅವನು ಕಣ್ಣಾರ ಕಂಡವನಾಗಿದ್ದ. ಕೃಷ್ಣ ದೇವರಾಯನ ಆಸ್ಥಾನದ ವೈಭವ – ರಾಷ್ಟ್ರೀಯ ಉತ್ಸವ ದಸರೆಯಲ್ಲಿ ನಡೆಯು ತ್ತಿದ್ದ ತುಲಾಭಾರ, ಸುವರ್ಣ ಮೇರು, ಆನಂದ ನಿಧಿ ಮುಂತಾದ ಅನೇಕ ದಾನ ಧರ್ಮಗಳನ್ನು ನೋಡಿದ್ದ. ಅಲ್ಲದೆ ಮೇಲಿಂದ ಮೇಲೆ ನಡೆದ ದಿಗ್ವಿಜಯ ಯಾತ್ರೆಗಳಲ್ಲಿ ಶತ್ರುಗಳಿಂದಲೂ, ಸಾಮಂತ ಮಾಂಡಲೀಕರಿಂದಲೂ ಪಡೆದ ಕಪ್ಪಕಾಣಿಕೆ, ದೊರೆತ ಸೂರೆ, ಎಷ್ಟೆಂಬುದನ್ನು ಸ್ವತಃ ನೋಡಿ ಬಲ್ಲವನಾಗಿದ್ದ. ಅಷ್ಟೇಕೆ? ಅವನಿಗಿಂತ ಹಿಂದೆ ಆಳಿದ ಇಮ್ಮಡಿ ಪ್ರೌಢದೇವರಾಯನು ಮಹ ಮದೀಯರ ಮೇಲೆ ನಡಸಿದ ವಿಜಯ ಯಾತ್ರೆಗಳಿಂದಲೂ, ಸಾಮಂತರಿಂದಲೂ ಎಂಭತ್ತೈದು ಕೋಟಿ ವರಹಗಳನ್ನು ತನ್ನ ಆಳ್ವಿಕೆಯಲ್ಲಿ ಸಂಗ್ರಹಿಸಿದ್ದನಂತೆ. ಇವುಗಳ ಜತೆಗೆ ಅಸಂಖ್ಯಾತ ಮುತ್ತುರತ್ನಗಳನ್ನು ವಜ್ರ, ವೈಢೂರ್ಯ, ಗೋಮೇ ಧಿಕ, ಪುಷ್ಯರಾಗ, ಪಚ್ಚೆ, ಹವಳಗಳನ್ನು ಸಂಗ್ರಹಿಸಿದ್ದನು. ಇವನಿಗೆ ಸಿಂಹಳ, ಪುಲಿಕಾಟು, ಪೆಗೂದೇಶದ ಅರಸರು ಕಪ್ಪಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಕೃಷ್ಣದೇವರಾಯನನಂತರ ಆಳಿದ ಅಚ್ಯುತರಾಯನ ಕಾಲದಲ್ಲಿ ರಾಜಬೊಕ್ಕಸ ದಲ್ಲಿ ವಿಪುಲ ಸಂಪತ್ತಿತ್ತು. ಅಚ್ಯುತರಾಯನು ನವಕೋಟಿನಾರಾಯಣನೆಂಬ ಕೀರ್ತಿಗೆ ಪಾತ್ರನಾಗಿದ್ದನು. ಆದರೆ ಅವನ ಅನಂತರ ಬಿಜಾಪುರದ ಸುಲ್ತಾನ ನಿಗೆ ಮೇಲಿಂದ ಮೇಲೆ ಕೊಟ್ಟ ಯುದ್ಧದ ವೆಚ್ಚ, ಕಪ್ಪಕಾಣಿಕೆ ಹಾಗೂ ದುಂದು ವೆಚ್ಚಗಳಿಂದ ಬೊಕ್ಕಸ ಬಹುಬೇಗ ಬರಿದಾಗಿತ್ತು. ಬಿಜಾಪುರದ ಸುಲ್ತಾನನ ನೆರವಿನಿಂದ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳಲು ಸಲಕಂ ಪೆದ್ದತಿರು ಮಲನು ಅವನ ಸೈನ್ಯದ ವೆಚ್ಚಕ್ಕೆಂದು ದಿನಕ್ಕೆ ಮೂರು ಲಕ್ಷ ವರಹಗಳನ್ನು ಒಂದು ತಿಂಗಳ ಕಾಲ ಕೊಟ್ಟಿದ್ದನಲ್ಲದೆ, ರಾಜಧಾನಿಯಿಂದ ಅವರನ್ನು ಕಳುಹಿ ಸುವಾಗ ಇಪ್ಪತ್ತು ಲಕ್ಷ ವರಹಗಳನ್ನು ಕಾಣಿಕೆಯಾಗಿ ಕೊಟ್ಟಿದ್ದ: ಹೀಗಾಗಿ

ಸಲಕಂ ಸೋದರರು ಬೊಕ್ಕಸವನ್ನು ಬರಿದುಮಾಡಿದ್ದರು. ಅವರಿಗೆ ಸಿಕ್ಕದೆ ಹೋಗಿದ್ದ ಪೂರ್ವಿಕರ ಗುಪ್ತನಿಧಿ ತನ್ನ ವಶವಾದರೆ ತಾನೆಷ್ಟು ಭಾಗ್ಯಶಾಲಿ ಎಂದು ಭಾವಿಸಿದ ರಾಮರಾಯ. ಕೃಷ್ಣದೇವರಾಯನ ರಾಣಿಯರೊಂದಿಗೆ ಪ್ರಸ್ತಾಪಿಸಿದರೆ, ಅದರಿಂದ ತನಗೆ ಯಾವುದಾದರೂ ನೆರವು ದೊರೆಯಬಹುದೆಂದು ಆಲೋಚಿಸಿ ಅವರೊಂದಿಗೆ ಆ ಬಗ್ಗೆ ಮಾತು ತೆಗೆದ.

ಸಾಮ್ರಾಜ್ಯದ ಆರ್ಥಿಕ ಅಭದ್ರತೆಯ ಕಥೆಯನ್ನೆಲ್ಲಾ ಅವರಿಗೆ ವಿವರವಾಗಿ ಹೇಳಿ,

" ಈಗ ನಿಮ್ಮಿಂದ ಒಂದು ಸಹಾಯವಾಗಬೇಕಾಗಿದೆ." ಎಂದು ಬಿನ್ನವಿಸಿದ.

" ಯಾವ ಸಹಾಯವಾಗಬೇಕಾಗಿದೆ ತಿಳಿಸಿದರೆ, ಸಾಮ್ರಾಜ್ಯಕ್ಕೆ ನಮ್ಮಿಂದಾಗುವ ಸೇವೆ ಸಲ್ಲಿಸುತ್ತೇವೆ." ಎಂದರು ರಾಣಿಯರು.

" ಸಾಮ್ರಾಟ್ ಕೃಷ್ಣದೇವರಾಯರ ಬಳಿ ರಾಜಬೊಕ್ಕಸವಲ್ಲದೆ – ಆಪದ್ಧನವಾಗಿ ವಿಶೇಷ ಸಂದರ್ಭಗಳಿಗಾಗಿ ಹಿಂದಿನಿಂದ ಬಂದಿದ್ದ ಒಂದು ಗುಪ್ತನಿಧಿ ಇತ್ತೆಂದು ನಾನು ಕೇಳಿದ್ದೆ. ಈ ಬಗ್ಗೆ ನೀವೇನಾದರೂ ತಿಳಿದಿದ್ದರೆ ಅಪ್ಪಣೆ ಕೊಡಿಸಬೇಕು."

ರಾಣಿಯರಿಬ್ಬರೂ ಪರಸ್ಪರ ಮುಖ ನೋಡಿಕೊಂಡರು. ಅನಂತರ ತಿರುಮಲಾದೇವಿ ಹೇಳಿದಳು:

" ನೀವು ನಮ್ಮ ಮಾತನ್ನು ಅನ್ಯಥಾ ಭಾವಿಸಬಾರದು. ಈ ಸಂಗತಿ ತಿಮ್ಮರಸರಂತಹ ಅಂತರಂಗ ಮಿತ್ರರಿಗೆ ಮಾತ್ರ ತಿಳಿದಿತ್ತು. ಉಳಿದವರಿಗೆ ಅವರು ಈ ಬಗ್ಗೆ ಏನನ್ನೂ ಹೇಳಿರಲಿಲ್ಲ."

" ಸಾಮ್ರಾಟರು ತಮ್ಮ ಬಾಳಗೆಳತಿಯರನ್ನೂ ಅಂತರಂಗಕ್ಕೆ ತೆಗೆದುಕೊಂಡು ಹೇಳದಿರುವುದು ವಿಷಾದಕರ!" ಎಂದ ರಾಮರಾಯ.

" ಇದು ನಮ್ಮ ದುರ್ದೈವ! ನಾವಾರೂ ಅವರ ಅಂತರಂಗಕ್ಕೆ ಅರ್ಹರಾಗಿರಲಿಲ್ಲ. ಪ್ರಭುಗಳಿಗೆ ನಮ್ಮಲ್ಲಿ ನಂಬಿಕೆ ಇರಲಿಲ್ಲ!" ಎಂದಳು ಚಿನ್ನಾದೇವಿ.

" ಬಹುಶಃ ಯಾವುದೋ ಮಹತ್ಕಾರಣಗಳಿಂದ ಈ ಸಂಗತಿಯನ್ನು ನಮಗೆ ತಿಳಿಸಲು ಪ್ರತಿಬಂಧಕವಾಗಿರಬೇಕು. ಪ್ರಭುಗಳನ್ನು ಈ ಬಗ್ಗೆ ಆಕ್ಷೇಪಿಸುವಂತಿಲ್ಲ." ಎಂದಳು ತಿರುಮಲಾದೇವಿ.

" ಹೇಗೇ ಇರಲಿ. ಈ ಸಂಗತಿಯನ್ನು ರಹಸ್ಯವಾಗಿಟ್ಟು ಪ್ರಭುಗಳು ಅನ್ಯಾಯ ಮಾಡಿದರು."

" ಅನ್ಯಾಯ ಮಾಡಿದರೆಂದು ಏಕೆ ಹೇಳಬೇಕು – ಅದು ಯಾವುದೋ

ಮಹತ್ಕಾರ್ಯ ಸಾಧನೆಗೆಂದೇ ಹಕ್ಕ, ಬುಕ್ಕರ ಕಾಲದಿಂದಲೂ ಉಳಿದು ಬಂದಿದೆ. ಆ ನಿಧಿಯ ಋಣ ನಮಗಿದ್ದರೆ ಅದು ನಮಗೆ ಲಭ್ಯವಾಗುತ್ತದೆ. ಇಲ್ಲವಾದರೆ ಇಲ್ಲ – ಆದರೂ ನಮ್ಮ ಪ್ರಯತ್ನವನ್ನು ನಾವು ಮಾಡಬೇಕು." ಎಂದಳು ತಿರುಮಲಾದೇವಿ.

"ಈಗ ಏನು ಮಾಡಬೇಕೆಂದು ನಿಮ್ಮ ಸಲಹೆ?"

"ಈ ನಿಧಿಯ ರಹಸ್ಯ ಮೂವರಿಗೆ ತಿಳಿದಿದೆ ಎಂದು ಅರಮನೆಯಲ್ಲಿ ಹೇಳಲಾಗಿತ್ತು. ಅವರೇ ಸೋಮರಸರು, ಭರತಾಚಾರ್ಯರು, ರಾಜವೈದ್ಯರು. ಮೊದಲಿಬ್ಬರೂ ನಮ್ಮ ಭಾಗಕ್ಕೆ ಇಲ್ಲವಾಗಿದ್ದಾರೆ. ಈಗ ನಮಗೆ ರಾಜವೈದ್ಯರೇ ದಿಕ್ಕು. ಅವರನ್ನು ವಿಚಾರಿಸಿದರೆ ಈ ಬಗ್ಗೆ ನಮಗೆ ಏನಾದರೂ ತಿಳಿಯಬಹುದು."

ಕೂಡಲೇ ರಾಜವೈದ್ಯರನ್ನು ಕರೆತರಲು ದೂತರನ್ನು ಕಳುಹಿಸಿಕೊಡಲಾಯಿತು. ರಾಜಾಜ್ಞೆಯನ್ನು ಕೇಳಿ ಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ರಾಜವೈದ್ಯರು ತಡಮಾಡದೆ ಅರಮನೆಗೆ ಬಂದರು.

ಆತುರದಲ್ಲಿ ಬಂದ ಅವರನ್ನು ರಾಮರಾಯನು ಉಚಿತ ರೀತಿಯಲ್ಲಿ ಸತ್ಕರಿಸಿ "ವೈದ್ಯರೇ, ಈಗ ನಿಮ್ಮಿಂದ ಸಾಮ್ರಾಜ್ಯಕ್ಕೆ ಅಮೂಲ್ಯವಾದ ಸೇವೆ ಸಲ್ಲಬೇಕಾಗಿದೆ" ಎಂದನು.

"ಪಾಮರನಿಂದ ಯಾವ ಸೇವೆ ಸಲ್ಲಿಸಬೇಕಾಗಿದೆಯೋ ಅಪ್ಪಣೆ ಕೊಡಿಸಿ ಪ್ರಭು!"

"ನೀವು ಸಾಮ್ರಾಟ್ ಕೃಷ್ಣದೇವರಾಯನ ಆಪ್ತವರ್ಗಕ್ಕೆ ಸೇರಿದವರು. ನಿಮ್ಮೊಡನೆ ಪ್ರಭುಗಳು ಯಾವ ರಹಸ್ಯವನ್ನೂ ಬಚ್ಚಿಡದೆ ಏಕದೇಹ ನ್ಯಾಯದಿಂದ ವರ್ತಿಸಿದರು.... ಹುಚ್ಚುದೊರೆ ಕೈಯಿಂದ ಸಾಮ್ರಾಜ್ಯ ಲಕ್ಷ್ಮಿಯನ್ನು ಪಾರುಮಾಡಿ, ಸಿಂಹಾಸನವನ್ನು ವಂಶೀಯರಿಗೆ ಸಲ್ಲಿಸುವ ಮಹತ್‌ಕಾರ್ಯದಲ್ಲಿ ನಿಮ್ಮಿಂದಾಗಿರುವ ಸಹಾಯ ಅಷ್ಟಿಷ್ಟಲ್ಲ. ಈಗ ಸಾಮ್ರಾಜ್ಯಕ್ಕೆ ನಿಮ್ಮಿಂದ ಇದಕ್ಕೂ ಮಹತ್ವದ ಸಹಾಯ ಆಗಬೇಕಾಗಿದೆ. ಸಾಮ್ರಾಜ್ಯದ ಅಳಿವು ಉಳಿವು ನಿಮ್ಮ ಸಹಾಯದ ಮೇಲೆ ನಿಂತಿದೆ...." ಎಂದ, ರಾಮರಾಯ.

"ಇಷ್ಟೆಲ್ಲಾ ಹೊಗಳಿಕೆಗೆ ನಾನು ಎಳ್ಳಷ್ಟೂ ಅರ್ಹನಲ್ಲ. ನನ್ನ ಕರ್ತವ್ಯವನ್ನು ನಾನು ತ್ರಿಕರಣಪೂರ್ವಕವಾಗಿ ಮಾಡಿದ್ದೇನೆ. ಸಾಮ್ರಾಜ್ಯದ ಹಿತಕ್ಕಾಗಿ ನಾನು ಯಾವ ಸಾಹಸಕ್ಕೂ ಸಿದ್ಧನಾಗಿದ್ದೇನೆ. ನಿಸ್ಸಂಕೋಚದಿಂದ ಅದೇನು ಸಂಗತಿ ಎಂಬುದನ್ನು ಅಪ್ಪಣೆ ಕೊಡಿಸಿ!"

"ವಿಜಯನಗರದ ಹಿಂದಿನ ಅರಸರು ಆಪತ್ಕಾಲದ ಸಲುವಾಗಿ ಸಂಗ್ರಹಿ

ಸಿದ್ಧ ಪುರಾತನವಾದ ಗುಪ್ತನಿಧಿಯೊಂದು ಇತ್ತೆಂದು ನಾವೆಲ್ಲ ಕೇಳಿದ್ದೇವೆ. ಇದರ ರಹಸ್ಯ ಸಾಮ್ರಾಟರ ಪ್ರೀತಿವಿಶ್ವಾಸಗಳಿಗೆ ಪಾತ್ರರಾದ ನಿಮಗೆ ತಿಳಿದಿದೆ ಎಂದು ನಮ್ಮ ಭಾವನೆ – ಸಾಮ್ರಾಜ್ಯದ ಅಭ್ಯುದಯದ ಸಲುವಾಗಿ ಆ ಗುಪ್ತ ನಿಧಿಯ ರಹಸ್ಯವನ್ನು ನಮಗೆ ತಿಳಿಸಿ ಉಪಕಾರ ಮಾಡಬೇಕು...."

"ಇಷ್ಟು ಅಲ್ಪಸಂಗತಿಗಾಗಿ ನನ್ನನ್ನು ನೀವು ಇಷ್ಟು ಪ್ರಾರ್ಥಿಸುವುದೇ. ನನಗೆ ತಿಳಿದ ಸಂಗತಿಯನ್ನು ಸಾಮ್ರಾಜ್ಯದ ಹಿತದ ಸಲುವಾಗಿ ಹೇಳಬೇಕಾದುದು ನನ್ನ ಪ್ರಥಮಕರ್ತವ್ಯವಾಗಿದೆ. ಆದರೆ...." ಎಂದು ಹೇಳಿ ಮೌನವಾದರು.

ಅವರು ಮೌನವಾಗಿ ಕುಳಿತುದನ್ನು ನೋಡಿ ಎಲ್ಲರಿಗೂ ಆತಂಕ ಉಂಟಾಗಿ ಮುಖ ಬಣ್ಣಗೆಟ್ಟಿತು. ಅವರು ತಮಗೆ ಈ ಸಂಗತಿ ತಿಳಿಯದೆಂದು ಹೇಳಬಹುದೇ ಎಂದು ಹೆದರಿದರು.

"ಏಕೆ ಏನನ್ನೋ ಆಲೋಚಿಸುತ್ತಿದ್ದೀರಿ! ಈ ರಹಸ್ಯಕ್ಕೆ ನಾವು ಪಾತ್ರರಹುದೋ ಅಲ್ಲವೋ ಎಂದು ಚಿಂತಿಸುತ್ತಿದ್ದೀರಾ? ಪಂಪಾಪತಿಯಾಣೆಗೂ— ಗುಪ್ತನಿಧಿಯ ಚಿಕ್ಕ ದುಗ್ಗಾಣಿಯನ್ನೂ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ವಿನಿಯೋಗಿಸುತ್ತೇವೆ. ಈ ಬಗ್ಗೆ ನಿಮಗೆ ಸಂಶಯ ಬೇಡ!" ರಾಮರಾಯ ಅಭಯ ಕೊಟ್ಟ.

"ನನ್ನ ಚಿಂತೆ ಅದಲ್ಲ. ನನಗೆ ಆ ಗುಪ್ತ ನಿಧಿಯ ರಹಸ್ಯ ತಿಳಿದಿದೆ— ಆದರೆ ಅದು ಎಲ್ಲಿದೆ ಎಂದು ಕೂಲಂಕಷವಾಗಿ ತಿಳಿದಿಲ್ಲ. ಈ ಬಗ್ಗೆ ಒಂದೆರಡು ಬಾರಿ ಸಾಮ್ರಾಟರ ಬಾಯಿಂದ ಕೇಳಿದ್ದೇನೆ. ಪ್ರಭುಗಳು ನನ್ನ ಮೇಲಿನ ಅನುಗ್ರಹದಿಂದ – ಕಡೆಗಾಲದಲ್ಲಿ – ತಮ್ಮ ಎಲ್ಲ ಅಂತರಂಗದ ವಿಷಯವನ್ನೂ ತಿಳಿಸುತ್ತಿದ್ದಂತೆ ಈ ಗುಪ್ತನಿಧಿಯ ಸಂಗತಿಯನ್ನೂ ತಿಳಿಸಿದ್ದರು. ಅವರು ಹೇಳಿದ್ದ ಮಾತು ಇನ್ನೂ ನನ್ನ ಕಿವಿಯಲ್ಲಿ ಮೊಳಗುತ್ತಿದೆ .. ಆಗ ಸಾಮ್ರಾಟರು ಉದರವ್ಯಾಧಿಯಿಂದ ಹಣ್ಣಾಗಿ ಹಾಸಿಗೆ ಹಿಡಿದು ಮಲಗಿದ್ದರು. ಸ್ವಯಂ ಪ್ರಭುಗಳಿಗೇ ತಾವು ಉಳಿಯುವುದಿಲ್ಲವೆಂದು ತಿಳಿದುಹೋಗಿತ್ತು. ಆದರೂ ನನಗೆ ನಂಬಿಕೆಯಿತ್ತು. ಇದನ್ನು ಪ್ರಭುಗಳಿಗೆ ಅರಿಕೆ ಮಾಡಿಕೊಂಡೆ.

"'ಪ್ರಭು ನೀವು ಹೀಗೆ ಹೇಳಬಾರದು. ನೀವು ಸಾವಿರ ವರ್ಷ ಬದುಕಬೇಕು – ಬದುಕುತ್ತೀರಿ. ಈ ಉದರ ವ್ಯಾಧಿಯ ಗಂಡವೊಂದು ಕಳೆದರೆ – ತುಂಬುಬಾಳ್ವೆ ನಿಮಗೆ ಕಾದಿದೆ. ಆದರೆ ಪಂಪಾಪತಿಯ ದಯದಿಂದ ನೀವು ಈ ಕುತ್ತದಿಂದ ಪಾರಾಗಬೇಕು. ನೀವು ಮಾಡಿದ ದಾನಧರ್ಮಗಳು ನಿಮ್ಮನ್ನು ಕಾಯುತ್ತವೆ. ಸಾಮ್ರಾಜ್ಯದ ಜನತೆಯ ಪುಣ್ಯ ನಿಮ್ಮನ್ನು ರಕ್ಷಿಸುತ್ತದೆ. ಈ ಬಗ್ಗೆ ನೀವು ಚಿಂತಿಸಬಾರದು' ಎಂದು ಹೇಳಿದೆ.

" 'ನನ್ನ ದೇಹದ ಸ್ಥಿತಿ ನಿಮಗೆ ತಿಳಿದಿದೆ ವೈದ್ಯರೇ. ನಲವತ್ತರ ಹರಯದ ನಾನು ಎಪ್ಪತ್ತರ ಮುಪ್ಪಡರಿದ್ದೇನೆ. ನನ್ನ ದೇಹ ಹಾಗೂ ಚೈತನ್ಯಗಳು ಮುಪ್ಪಾಗಿ ಜೀರ್ಣವಾಗಿವೆ. ಈ ಬಾರಿಯ ಉದರ ವ್ಯಾಧಿಯಿಂದ ನಾನು ಚೇತರಿಸಿಕೊಳ್ಳಲಾರೆ – ಇದು ನನ್ನ ಜೀವನದ ಕೊನೆಯ ಅಂಕ–ನಾನು ಬಲ್ಲೆ. ಆದರೆ ನನ್ನ ಚಿಂತೆ ಎಂದರೆ, ಇದನ್ನು ಹಾಸಿಗೆಯ ಮೇಲೆ ಮುಗಿಸಬೇಕಾಗಿ ಬಂದಿತಲ್ಲಾ ಎಂದು. ಇದಕ್ಕಾಗಿ ನನಗೆ ವಿಷಾದವೆನಿಸುತ್ತಿದೆ. ನಾನು ಇಪ್ಪತ್ತು ವರ್ಷಕಾಲ ದಂಡಯಾತ್ರೆ, ದಿಗ್ವಿಜಯಗಳಲ್ಲಿ ಕಳೆದು – ಧೀರ ಜೀವನ ನಡಸಿ– ಈಗ ಹಾಸಿಗೆಯಲ್ಲಿ ಹೇಡಿಯಂತೆ ಸಾಯಬೇಕಾಗಿದೆಯಲ್ಲಾ. ನನ್ನ ಭವ್ಯ ಬಾಳಿಗೆ ಇದು ತಕ್ಕ ಅಂತ್ಯವಲ್ಲ – ಈಗ ಉದರ ವ್ಯಾಧಿಯಿಂದ ನರಳಿ, ದೀನನಾಗಿ, ಸಾವನ್ನು ಅಪ್ಪಬೇಕಾಗಿ ಬಂದಿದೆ – ಸಾವನ್ನು ಗೆಳೆಯನಾಗಿ ಸ್ವಾಗತಿಸಲಾಶಿಸಿದ್ದ ನನಗೆ ಸಾವು ಶತ್ರುವಾಗಿ ಬಂದಿದೆ. ಇಂತಹ ಸಾವನ್ನು ನಾನು ಬಯಸಿರಲಿಲ್ಲ–ವೈದ್ಯರೇ, ಕನಸು ಮನಸ್ಸಿನಲ್ಲಿ ಭಾವಿಸಿರಲಿಲ್ಲ – ಆದರೆ ಪಂಪಾಪತಿಯ ಅನುಗ್ರಹ ನನ್ನ ಮೇಲೆ ತಪ್ಪಿದಂತೆ ಕಾಣುತ್ತದೆ. ಇಲ್ಲವಾದರೆ – ತಿಮ್ಮರಸರು ಇಷ್ಟು ಬೇಗ ಅಗಲುತ್ತಿದ್ದರೇ ? ಅತ್ತ ಬಿಜಾಪುರದ ಸುಲ್ತಾನ ಇತ್ತ ಪ್ರತಾಪರುದ್ರ ಗಜಪತಿ ಇವರುಗಳು ಸಾಮ್ರಾಜ್ಯದ ಮೇಲೆ ದಂಡೆತ್ತಿ ಬಂದಿರುವಾಗ, ಅವರ ಮೇಲೆ ಏರಿಹೋಗಿ, ಅವರಿಗೆ ತಕ್ಕ ಬುದ್ಧಿ ಕಲಿಸಬೇಕೆಂದು ಮಾಡಿದ್ದೆ. ಪ್ರಜೆಗಳಿಗೆ ಶತ್ರುಭಯವಿಲ್ಲದಂತೆ ಮಾಡಬೇಕೆಂದಿದ್ದೆ. ಆದರೆ ನನಗೆ ಜಗದೀಶ್ವರನು ಇಂತಹ ಕಾಹಿಲೆಯನ್ನು ತಂದೊಡ್ಡಿದ್ದಾನೆ. ನನ್ನದಲ್ಲದ ಭಾಗ್ಯಕ್ಕಾಗಿ ನಾನೆಷ್ಟು ಹಲುಬಿದರೂ ವ್ಯರ್ಥ. ನನ್ನ ಚಿಂತೆ ಅದಲ್ಲ....ನಾನು ಈಗ ಇಬ್ಬಗೆಯ ಚಿಂತೆಯಿಂದ ದಹಿಸಲ್ಪಡುತ್ತಿದ್ದೇನೆ. ಒಂದು ಕುಮಾರನ ಚಿಂತೆ....ಆ ನನ್ನ ಕುಮಾರ – ಅನ್ನಪೂರ್ಣಾದೇವಿಯ ಕಂದನು ಹಾಲುಗಲ್ಲದ ಹಸುಳೆ. ನನ್ನನಂತರ ಸಿಂಹಾಸನದ ಹಕ್ಕುದಾರನು ಅವನಾದರೂ – ಅದನ್ನು ಊರ್ಜಿತಗೊಳಿಸುವ ಜವಾಬ್ದಾರಿ ನಿಮ್ಮದು – ನಿಮ್ಮ ಮೂವರದು. ಅವನನ್ನು ಶತ್ರುಗಳಿಂದ, ದ್ರೋಹಿಗಳಿಂದ ಸಂರಕ್ಷಿಸುವ ಭಾರ ನಿಮ್ಮದು....'

" 'ಪಂಪಾಪತಿಯಾಣೆಗೂ ಕುಮಾರನ ರಕ್ಷಣೆಯ ಭಾರ ನಮ್ಮದು ಪ್ರಭು. ಕುಮಾರನ ಕೂದಲೂ ಕೊಂಕದಂತೆ ನೋಡಿಕೊಳ್ಳುವ ಭಾರ ನಮ್ಮದು' ಎಂದು ಆಶ್ವಾಸನವಿತ್ತೆ. ಆದರೆ ವಿಧಿ ಆ ಹಸುಳೆಯನ್ನು, ಆ ನೀಚ ಸಲಕಂ ಸಹೋದರರ ರೂಪಿನಲ್ಲಿ ಬಂದು ಕೊಂಡೊಯ್ದು. ನಾನು ಪ್ರಭುಗಳಿಗೆ ಕೊಟ್ಟಿದ್ದ ವಚನ ಪಾಲಿಸಲಾಗಲಿಲ್ಲ – ಹಾಯ್ ನನ್ನ ಬಾಳೇ!

" ನನ್ನ ಇನ್ನೊಂದು ಚಿಂತೆ ಎಂದರೆ ಸಾಮ್ರಾಜ್ಯದ ಭವಿಷ್ಯದ ಚಿಂತೆ –

'ಸಿಂಹಾಸನಕ್ಕಾಗಿ ಯಾವ ಬಗೆಯ ಯಾದವೀ ಕಲಹವೂ ನಡೆಯದಂತೆ ನೋಡಿ ಕೊಳ್ಳಿ.' ಅಯ್ಯೋ, ಪ್ರಭುಗಳಿಗೆ ಕೊಟ್ಟಿದ್ದ ಈ ವಚನವನ್ನು ಪಾಲಿಸುವುದು ನನ್ನಿಂದ ಸಾಧ್ಯವಾಗಲಿಲ್ಲ. ಪ್ರಭುಗಳು ನನ್ನಂಥಹ ಹೇಡಿಗಳನ್ನು ನಂಬಿ ಕೆಟ್ಟರು.

"ನನ್ನ ಭೀತಿಯೆಲ್ಲವೂ ಸಾಮ್ರಾಜ್ಯದ ಭದ್ರತೆಯ ಬಗ್ಗೆ– ಈ ಕಾರ್ಯ ವನ್ನು ಸಾಧಿಸದೆ ಹೋದೆ. ಧರ್ಮ ಅಧರ್ಮಕ್ಕೆಡೆ ಕೊಟ್ಟಂದೇ, ನ್ಯಾಯವನ್ನು ಅನ್ಯಾಯವು ಆಕ್ರಮಿಸಿದಂದೇ ಸಾಮ್ರಾಜ್ಯದ ಅಳಿವೆಂದು ಪೂಜ್ಯ ವಿದ್ಯಾರಣ್ಯರ ಭವಿಷ್ಯವಾಣಿಯಿದೆ. ಇದನ್ನು ತ್ರಿಕಾಲದಲ್ಲೂ ನೆನೆಯುತ್ತಿರಿ, ಸಾಮ್ರಾಜ್ಯದ ಜನತೆಗೆ ಜನತಾ ಜನಾರ್ದನನಿಗೆ ತಿಳಿದೋ ತಿಳಿಯದೆಯೊ ಯಾವ ಬಗೆಯ ಅನ್ಯಾಯವೂ ನಡೆಯದಂತೆ ಹಿರಿಯರಾಗಿ ನೀವು ನಿಂತು ನೋಡಿಕೊಳ್ಳಿ. ಎಲ್ಲಿಯವರೆಗೆ ಪ್ರಭುವು ಸತ್ಯನಿಷ್ಠನಾಗಿರುವನೋ ಅಲ್ಲಿಯವರೆಗೆ ಅವನಿಂದ ಯಾವ ಅನ್ಯಾಯವೂ ಘಟಿಸುವುದಿಲ್ಲ. ಆದರೆ ಇದು ಅಸಾಧ್ಯವಾದ ವ್ರತ – ಖಡ್ಗದ ಮೊನೆಯ ಮೇಲೆ ನಿಂತು ನಡೆದಂತೆ. ಇದರಲ್ಲಿ ನನ್ನನಂತರದ ಸಾಮ್ರಾಟನು ಮುಗ್ಗರಿಸದಂತೆ ನೀವು ತ್ರಿಮೂರ್ತಿಗಳಾಗಿ ಸಾಮ್ರಾಜ್ಯ ರಕ್ಷಣೆ ಮಾಡಿ ಅಭಿಮಾನ ದೇವತೆಗಳಂತೆ ನಿಂತು ಸಾಮ್ರಾಜ್ಯವನ್ನು ಕಾಯಿರಿ.

"'ಪ್ರಭು ತಮ್ಮ ಆಜ್ಞೆಯನ್ನು ನಾವು ನಮ್ಮ ಪ್ರಾಣವಿರುವವರೆಗೆ ಶಿರಸಾ ವಹಿಸಿ ನಡೆಯುತ್ತೇವೆ.' ಅಯ್ಯೋ ಪ್ರಭುಗಳಿಗೆ ಕೊಟ್ಟಿದ್ದ ಈ ಮೂರನೇ ವಚನವನ್ನೂ ನಾನು ಪಾಲಿಸದೆ ಹೋದೆನಲ್ಲಾ ಎಂತಹ ನೀಚ ಬಾಳ್ವೆ ನನ್ನದು.

"'ಪ್ರಜೆಗಳನ್ನು ನಾನು ಇದುವರೆಗೆ ಮಕ್ಕಳಂತೆ ನೋಡಿಕೊಂಡಿದ್ದೇನೆ. ಅವರನ್ನು ಸಮರ್ಥರಾದ ಪ್ರಭುಗಳ ವಶಕ್ಕೆ ಒಪ್ಪಿಸಿ ಹೋಗುವ ಭಾಗ್ಯಶಾಲಿ ನಾನಾಗಲಿಲ್ಲ – ಅನ್ಯಾಯದ ಶಾಸನಗಳಿಂದ ಹಿಂಸೆಯಾಗದಂತೆ ನೋಡಿಕೊಳ್ಳಿ. ಪ್ರಭುಗಳು ಅಧಿಕಾರೋನ್ಮತ್ತರಾಗಿ ದಬ್ಬಾಳಿಕೆಯಿಂದ ಅವರನ್ನು ನೋಯಿಸ ದಂತೆ ಅವರ ಹಿತರಕ್ಷಣೆ ಮಾಡಿ.... ಇದು ಮಹತ್ಕಾರ್ಯವೆಂದು ನಾನು ಬಲ್ಲೆ. ಆದರೂ ನಿಮ್ಮ ಪ್ರಯತ್ನವನ್ನು ನೀವು ಮಾಡಿ. ಇಷ್ಟನ್ನು ನೆರವೇರಿಸಿಕೊಡ ಬೇಕೆಂದು ಭುವನೇಶ್ವರಿಯಲ್ಲಿ ನನ್ನ ಪ್ರಾರ್ಥನೆ.... ಇನ್ನೊಂದು ಸಂಗತಿ. ಇದನ್ನು ಉಳಿದವರಿಬ್ಬರಿಗೆ ತಿಳಿಸಿದ್ದೇನೆ – ಅದು ಗುಪ್ತನಿಧಿಯ ಸಂಗತಿ. ಇದನ್ನು ನಿಮಗೆ ತಿಳಿಸುವ ಪ್ರಸಂಗ ಬಂದಿರಲಿಲ್ಲ. ನೀವು ಈ ರಹಸ್ಯವನ್ನು ನಿಮ್ಮಲ್ಲೇ ಕಾಯ್ದಿರಿಸಿರಿ. ಸಾಮ್ರಾಜ್ಯದ ವಿಪತ್ತಿನಲ್ಲಿ ಮಾತ್ರ, ಅತ್ಯಂತ ದಾರುಣ ಪ್ರಸಂಗ ದಲ್ಲಿ ಮಾತ್ರ ಗುಪ್ತನಿಧಿಯಿಂದ ಹಣ ತೆಗೆಯಬೇಕಲ್ಲದೆ – ದೈನಂದಿನ ಆಡಳಿ

ತದ ವೆಚ್ಚಕ್ಕೆ ಈ ನಿಧಿಯನ್ನು ಬಳಸಬಾರದು. ಅನೇಕ ಶತಮಾನಗಳಿಂದ ಅನೇಕ ಸಾಮ್ರಾಟರ ತ್ಯಾಗದ ಫಲವಾಗಿ ಇದು ಬೆಳೆದುಬಂದಿದೆ. ಇದನ್ನು ಅರಮನೆಯ ನೆಲಮಾಳಿಗೆಯಲ್ಲಿ ವಿಚಿತ್ರ ಕವಾಟಗಳಿರುವ ಏಳು ಕೊಠಡಿಗಳಲ್ಲಿ ಇಡಲಾಗಿದೆ. ಒಂದೊಂದು ಕೊಠಡಿಗಳಲ್ಲಿ ಇರುವ ಮೊಹರು ಮಾಡಿದ ಪೆಟ್ಟಿಗೆಗಳಲ್ಲಿ ಅಮೂಲ್ಯವಾದ ಒಡವೆ, ವಸ್ತುಗಳು, ಮುತ್ತು, ರತ್ನ ವಜ್ರ, ವೈಡೂರ್ಯ, ಗಳನ್ನು ಚಿನ್ನದ ಪಾತ್ರೆಗಳು, ವರಹಗಳನ್ನು ಬೇರೆಬೇರೆಯಾಗಿ ಇಡಲಾಗಿದೆ. ಇಂತಹ ಪೆಟ್ಟಿಗೆಗಳು ನನಗೆ ತಿಳಿದಂತೆ ಎರಡು ಸಾವಿರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿವೆ – ಒಂದು ಮಾತಿನಲ್ಲಿ ಹೇಳುವುದಾದರೆ ಇವನ್ನು ಹೊರಗೆ ಸಾಗಿಸಲು ಸಾವಿರ ಆನೆಗಳೇ ಬೇಕಾಗಬಹುದು. ಇಂತಹ ಅಪೂರ್ವವಾದ ನಿಧಿಯನ್ನು ಹಿಂದಿನ ಅರಸರು ಸಾಮ್ರಾಜ್ಯದ ಅಭ್ಯುದಯಕ್ಕಾಗಿ ಕಾಯ್ದಿರಿಸಿ ಹೋಗಿದ್ದಾರೆ. ಏಳು ಘಟಸರ್ಪಗಳು ಏಳು ಕೋಣೆಯನ್ನೂ ಕಾಯುತ್ತಿರುವುದಾಗಿ ಹಿಂದಿನಿಂದ ಬಂದ ಪ್ರತೀತಿ ಇದೆ. ಭುವನೇಶ್ವರಿಯ ವಾಹನವಾದ ಸಿಂಹರಾಜನೇ ಇದನ್ನು ರಕ್ಷಿಸುತ್ತಿರುವುದಾಗಿ ಪೂರ್ವಿಕರ ಹೇಳಿಕೆ ಇದೆ ಈ ನಿಧಿಗೆ ಸರಿಯಾದ ಪೂಜೆ ಹವನ, ಹೋಮಗಳಿಲ್ಲದೆ ಇದನ್ನು ಮುಟ್ಟಲಾಗದು. ಸರಿಯಾದ ನೇಮನಿಷ್ಠೆಗಳಿಲ್ಲದೆ ಯಾರಿಂದಲೂ ಗುಪ್ತನಿಧಿಯ ವಿಚಿತ್ರ ಕವಾಟ ತೆರೆಯಲು ಸಾಧ್ಯವಿಲ್ಲ.' ಎಂದು ಹೇಳಿ ಆ ನಿಧಿಯು ಇರುವ ಸ್ಥಳ, ಅದನ್ನು ಸಾಧಿಸುವ ಬಗ್ಗೆ, ಅನೇಕ ವಿವರಗಳನ್ನು ಕೊಟ್ಟು ನನಗೆ ಒಂದು ನಕ್ಷೆಯನ್ನೂ ಕೊಟ್ಟಿದ್ದರು. ಆದರೆ ದುರ್ದೈವದಿಂದ, ಸಲಕಂ ಸೋದರರು ನನ್ನನ್ನು ಬಂಧಿಸಿದಾಗ ಸೆರೆಯಿಂದ ಜೀವರಹಿತ ತಪ್ಪಿಸಿಕೊಳ್ಳುವುದೇ ಕಷ್ಟವಾಯಿತು. ಹೀಗಾಗಿ ಆ ನಕ್ಷೆ ಹಾಳಾಗಿದೆ. ಈಗ ನಾನು ಕೇವಲ ನೆನಪಿನ ಆಧಾರದ ಮೇಲೆ ಆ ನಿಧಿಯ ಶೋಧನೆ ನಡಸಬೇಕಾಗಿದೆ. ಅರಮನೆಯ ನೂರಾರು ಕೋಣೆಗಳಲ್ಲಿ ಆ ಒಳಕೋಣೆಯನ್ನು ಪತ್ತೆಮಾಡುವುದು ಕಠಿಣ ಸಾಧ್ಯವಾಗಿದೆ. ಅದು ಪತ್ತೆಯಾದರೂ – ಆ ವಿಚಿತ್ರ ಕವಾಟವನ್ನು ತೆರೆಯುವ ಮಾರ್ಗ ಮಸುಕಾಗಿದೆ. ಹೀಗಾಗಿ ನಾನು ಚಿಂತಿಸುತ್ತಿದ್ದೇನೆ." ಎಂದು ಹೇಳಿದರು.

"ದೈವ ಸಂಕಲ್ಪ ಇದ್ದಂತೆ ನಡೆಯುತ್ತದೆ – ಪ್ರಯತ್ನ ನಮ್ಮದು – ನಾವು ನಿಶ್ಚಲ ಮನಸ್ಸಿನಿಂದ,ಪಂಪಾಪತಿಯನ್ನೂ, ತಾಯಿ ಭುವನೇಶ್ವರಿಯನ್ನೂ ಮಹರ್ಷಿ ವಿದ್ಯಾರಣ್ಯರನ್ನೂ ಪ್ರಾರ್ಥಿಸಿ ಈ ಕಾರ್ಯಕ್ಕೆ ತೊಡಗೋಣ. ಈಗ ನಮಗೆ ಆ ನಿಧಿಯ ಆವಶ್ಯಕತೆ ಬಹುವಾಗಿದೆ – ಇದರ ಮೇಲೆ ಸಾಮ್ರಾಜ್ಯದ ಅಳಿವು, ಉಳಿವು, ನಿಂತಿದೆ." ಎಂದು ಹೇಳಿದ ರಾಮರಾಯ.

ಅದರಂತೆ ಒಂದು ಶುಭದಿನ, ಸೂಕ್ತ ಪೂಜೆ, ಹವನ ಹೋಮಗಳನ್ನು

ಮಾಡಿ ರಾಜವೈದ್ಯರೊಡನೆ ಗುಪ್ತನಿಧಿಯ ಶೋಧನೆಗೆ ಆರಂಭಿಸಿದನು.

ಅವರ ಸುದೈವದಿಂದ ನಿಧಿಯಿದ್ದ ನೆಲಮಾಳಿಗೆಯ ಪ್ರವೇಶವು ಸುಟ್ಟು ಹೋಗಿದ್ದ ನೆಲಮಾಳಿಗೆಯ ಕವಾಟ ಶೋಧನೆ ಕಷ್ಟವಾಗಲಿಲ್ಲ. ಅದನ್ನು ಪ್ರವೇಶಿಸಿ ಹತ್ತಾರು ಮೆಟ್ಟಲುಗಳು ಕೆಳಗಿಳಿಯಲು ಒಂದರ ಪಕ್ಕದಲ್ಲಿ ಒಂದ ರಂತೆ ಸಾಲಾಗಿದ್ದ ಏಳು ಲೋಹದ ಕೊಠಡಿಗಳು ಕಾಣಿಸಿದುವು. ರಾಜವೈದ್ಯರು ನೆನಪಿನ ಆಧಾರದಿಂದ ಮೂರು ನಾಲ್ಕು ತಿರುಗಣಿಗಳನ್ನು ಹಿಂದಕ್ಕೆ ಮುಂದಕ್ಕೆ ತಿರುಗಿಸಿ ಬಲವನ್ನೆಲ್ಲಾ ಬಿಟ್ಟು ನೂಕಲು ಲೋಹದ ಬಾಗಿಲು ತೆರೆದುಕೊಂಡಿತು —ಒಳಗೆ ಅದರ ತುಂಬಾ ಮೊಹರು ಮಾಡಿದ ಪೆಟ್ಟಿಗೆಗಳಲ್ಲಿ ಅನರ್ಘ್ಯವಾದ ರತ್ನಾಭರಣಗಳೂ, ಕೋಟಿ ಕೋಟಿ ಬೆಲೆಬಾಳುವ ಮುತ್ತು ರತ್ನಗಳೂ ದೊರೆ ತುವು. ಇವುಗಳಲ್ಲಿ ತಮ್ಮ ಆಡಳಿತಕ್ಕೆ ಬೇಕಾಗುವಷ್ಟು ಸಂಪತ್ತನ್ನು ತೆಗೆದು ಕೊಂಡು ಮತ್ತೆ ಅವುಗಳನ್ನು ಮೊಹರುಮಾಡಿ, ಬಾಗಿಲು ಕವಾಟವನ್ನು ಭದ್ರ ಪಡಿಸಿ, ಆ ಸಂಪತ್ತನ್ನು ರಾಜಬೊಕ್ಕಸಕ್ಕೆ ಸಾಗಿಸಿದರು.

ಈ ಗುಪ್ತನಿಧಿಯನ್ನು ರಾಮರಾಯನಿಗೆ ಒಪ್ಪಿಸುವ ಮುನ್ನ ರಾಜವೈದ್ಯರು ರಾಮರಾಯನಿಂದ ಪ್ರಮಾಣ ಮಾಡಿಸಿ, ಆ ನಿಧಿಯನ್ನು ಸಾಮ್ರಾಜ್ಯದ ಸಲು ವಾಗಿ ವೆಚ್ಚಮಾಡುವ ಬಗ್ಗೆ ಅವನಿಂದ ಭಾಷೆ ತೆಗೆದುಕೊಳ್ಳುವುದನ್ನು ಮರೆಯ ಲಿಲ್ಲ.

## ೩

ದೈವಕೃಪೆಯಿಂದ ದೊರೆತ ಪೂರ್ವಿಕರ ಗುಪ್ತನಿಧಿಯ ಹಣದಿಂದ ವಿಜಯನಗರ ಸಾಮ್ರಾಜ್ಯವನ್ನು ಭದ್ರವಾದ ಆರ್ಥಿಕ ವ್ಯವಸ್ಥೆಯ ಬುನಾದಿಯ ಮೇಲೆ ನಿಲ್ಲಿಸಿ, ಅದಕ್ಕೆ ಮೊದಲಿನ ಹೆಗ್ಗಳಿಕೆಯನ್ನು ಗಳಿಸಿಕೊಡಲು ರಾಮ ರಾಯನು ಸಮರ್ಥನಾದನು. ರಾಮರಾಯನ ಉದಾರಸಹಾಯದಿಂದ ವಿದೇಶಿ ವರ್ತಕರು ವಿಜಯನಗರಕ್ಕೆ ಹಿಂದಿರುಗಿ ತಮ್ಮ ಮಳಿಗೆಗಳನ್ನು ತೆರೆದರು. ದೇಶ ವಿದೇಶಗಳ ವ್ಯಾಪಾರವು ಶತ್ರು ಭೀತಿಯಿಲ್ಲದೆ ನಿರ್ವಿಘ್ನವಾಗಿ ಅಭಿವೃದ್ಧಿ ಹೊಂದಿತು. ರಾಮರಾಯನು ಅನೇಕ ಕೆರೆ ಕಾಲುವೆಗಳನ್ನು ಕಟ್ಟಿಸಿ ಆಹಾರದ ಪರಿಸ್ಥಿತಿಯನ್ನು ಉತ್ತಮ ಪಡಿಸಿದುದಲ್ಲದೆ – ಜೀವನ ಹೆಚ್ಚು ನೆಮ್ಮದಿಯಾಗು ವಂತೆ, ಆದಷ್ಟು ಕಡಿಮೆ ತೆರಿಗೆಗಳನ್ನು ವಿಧಿಸಿದ್ದನು. ದೇಶದಲ್ಲಿ ಅನೇಕ ಗುಡಿ ಗೋಪುರಗಳನ್ನು ಕಟ್ಟಿಸಿದನು. ದೇವಾಲಯಗಳಿಗೆ ದೇವಮಾನ್ಯಗಳನ್ನೂ, ದತ್ತಿಗಳನ್ನೂ ಬಿಟ್ಟನು, ಇದರಿಂದ ಅವನು ಜನತೆಯ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದನು.

ದೇಶದ ಒಳಾಡಳಿತದಲ್ಲಿ ಅನೇಕ ಮಾರ್ಪಾಡುಗಳನ್ನು ತಂದನು. ಜನತೆಯ ಹಿತವನ್ನು ಸಾಧಿಸಿದನಂತರ, ರಾಮರಾಯನ ದೃಷ್ಟಿ ಹೊರಾಡಳಿತದ ಕಡೆಗೆ ತಿರುಗಿತು. ವಿಜಯನಗರವು ಕೃಷ್ಣದೇವರಾಯನ ಕಾಲದಲ್ಲಿ ವೈಭವದ ಪರಾಕಾಷ್ಠತೆಯನ್ನು ಮುಟ್ಟಿತ್ತು. ಅದರ ಹೆಸರು ಕೇಳಿದರೆ ಶತ್ರುರಾಜರು ಭಯಭಕ್ತಿಯಿಂದ ತಲೆಬಾಗುತ್ತಿದ್ದರು. ಪೋರ್ಚುಗೀಸರು ವಿಜಯನಗರದರಸರ ಸ್ನೇಹವನ್ನು ತಮ್ಮ ಭಾಗ್ಯವೆಂದು ಭಾವಿಸಿದ್ದರು. ಬಿಜಾಪುರದ ಸುಲ್ತಾನ ಅದಿಲ್‌ಷಹನು, ಕೃಷ್ಣದೇವರಾಯನ ಕೈಯಲ್ಲಿ ಅನೇಕ ಬಾರಿ ಸೋತು, ಅವನ ಕೃಪಾಭಿಕ್ಷೆಯನ್ನು ಬೇಡುತ್ತಾ ಅಲೆಯಬೇಕಾದ ಪ್ರಸಂಗ ಬಂದಿತ್ತು. ಬಿಜಾಪುರದ ಸುಲ್ತಾನನು ಸೆರೆಯಲ್ಲಿಟ್ಟಿದ್ದ ಪೂರ್ವದ ಬಹಮನೀ ವಂಶದ ರಾಜಕುಮಾರರನ್ನು ಬಂಧಮುಕ್ತರನ್ನಾಗಿ ಮಾಡಿ, ಅವರಲ್ಲಿ ಹಿರಿಯನಾದ ಅಲ್ಲಾವುದ್ದೀನನಿಗೆ ಪಟ್ಟಗಟ್ಟಿ, ಅವನನ್ನು ಬಹಮನೀ ಸಾಮ್ರಾಜ್ಯದ ಸುಲ್ತಾನನೆಂದು ಘೋಷಿಸಿ ಅವನಿಂದ ಗೌರವದ ನಜರನ್ನು ಒಪ್ಪಿಸಿಕೊಂಡಿದ್ದನು. ಸ್ವತಂತ್ರ ರಾಜ್ಯಗಳಾಗಿದ್ದ, ಅಹಮದ್ ನಗರ, ಬಿದರೆ, ಬೀರಾರ್, ಬಿಜಾಪುರ, ಗೋಲ್ಕಂಡಗಳಿಗೆ ಅಲ್ಲಾವುದ್ದೀನನನ್ನು ಅಂಗೀಕರಿಸಿ 'ಯವನರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಧರಿಸಿದ್ದನು. ಇದರಿಂದ ಬಹಮನೀ ಸುಲ್ತಾನರೈವರ ದ್ವೇಷವನ್ನು ಕಡೆತನಕ ಸೆರಗಿಗೆ ಕಟ್ಟಿಕೊಂಡಂತೆ ಎಂಬುದನ್ನು ಕೃಷ್ಣದೇವರಾಯನು ತಿಳಿಯದೆ ಹೋಗಿದ್ದ. ತನಗೆ ಮೇಲಿಂದ ಮೇಲೆ ದೊರೆತ ದಿಗ್ವಿಜಯಗಳಿಂದ ಸೊಕ್ಕಿ, ಸ್ನೇಹಭಿಕ್ಷೆ ಬೇಡಿದ – ಬಿಜಾಪುರದ ಸುಲ್ತಾನನ ರಾಯಭಾರಗಳನ್ನು ತಿರಸ್ಕಾರದಿಂದ ನೋಡಿ, ತುಂಬಿದ ಸಭೆಯಲ್ಲಿ ಸುಲ್ತಾನನು ತನ್ನ ಪಾದಚುಂಬನ ಮಾಡಿದರೆ ಮಾತ್ರ ಸ್ನೇಹಭಿಕ್ಷೆ ನೀಡುವುದಾಗಿ ಹೇಳಿಕಳುಹಿಸಿದ್ದನು. ಇದಕ್ಕೆ ಬಿಜಾಪುರದ ಸುಲ್ತಾನನು ಸಿದ್ಧನಿರಲಿಲ್ಲ – ಇತರ ಯಾವ ಸುಲ್ತಾನರೂ ಸಿದ್ಧರಿರಲಿಲ್ಲ. ಅವರು ಒಳಗೊಳಗೇ ಕೃಷ್ಣದೇವರಾಯನ ಉದ್ಧಟತನದಿಂದ ಕುದಿದು ಕ್ಷುಬ್ಧರಾಗಿದ್ದು ಅವನ ಮೇಲಿನ ಸಿಟ್ಟನ್ನು ತೀರಿಸಿಕೊಳ್ಳುವುದಕ್ಕೆ ಸಮಯ ಕಾಯುತ್ತಿದ್ದರು. ಕೃಷ್ಣದೇವರಾಯನು ಉದರವ್ಯಾಧಿಯಿಂದ ಅಸ್ವಸ್ಥನಾದ ಸಂಗತಿಯನ್ನು ಕೇಳಿ, ಬಹಮನೀ ಸುಲ್ತಾನರು ಅಲ್ಲಾವುದ್ದೀನನನ್ನು ಮೂಲೆಗೊತ್ತಿ, ಮತ್ತೆ ತಾವು ಸ್ವತಂತ್ರರಾದರು. ಇದೇ ಸಮಯದಲ್ಲಿ ಕೃಷ್ಣದೇವರಾಯನು ಮರಣಹೊಂದಿದನು. ಆಗ ಬಿಜಾಪುರದ ಸುಲ್ತಾನನು ತನ್ನ ಕೈಬಿಟ್ಟು ಹೋಗಿದ್ದ, ರಾಯಚೂರು, ಮುದ್ಗಲ್ಲುಗಳನ್ನು ಮತ್ತೆ ಸಾಧಿಸಿಕೊಂಡು ತನ್ನ ದ್ವೇಷವನ್ನು ತೀರಿಸಿಕೊಂಡಿದ್ದನು. ಅಚ್ಯುತರಾಯನ ಕಾಲದಲ್ಲಿ ಬಿಜಾಪುರದ ಇಬ್ರಾಹಿಂ ಅದಿಲ್‌ಷಹನು, ವಿಜಯನಗರದ

ಸೈನ್ಯವನ್ನು ಎರಡು ಬಾರಿ ಸೋಲಿಸಿ, ಅವರು ತನ್ನ ಕೃಪಾಕಟಾಕ್ಷಕ್ಕಾಗಿ ಮೊರೆಯಿಡುವಂತೆ ಮಾಡಿದ್ದನು. ಸಿಂಹಾಸನಕ್ಕಾಗಿ ವರದಾದೇವಿಗೂ, ಸಲಕಂ ಸೋದರರಿಗೂ ನಡೆದ ಯಾದವೀಕಲಹದಲ್ಲಿ ಅವನು ಇಬ್ಬರಿಗೂ ಬೇಕಾದವನಂತೆ ನಟಿಸಿ, ಇಬ್ಬರಿಂದಲೂ ಅಧಿಕವಾದ ಕಾಣಿಕೆಯನ್ನು ವಸೂಲು ಮಾಡಿ, ಇಬ್ಬರನ್ನೂ ಮೋಸಗೊಳಿಸಿದ್ದನು. ವಿಜಯನಗರದಲ್ಲಿ ಎರಡು ತಿಂಗಳ ಕಾಲ ಬೀಡುಬಿಟ್ಟು, ವಿಜಯನಗರವನ್ನು ತನ್ನ ಮಾಂಡಲೀಕ ರಾಷ್ಟ್ರವನ್ನಾಗಿ ಮಾಡಿಕೊಂಡು, ಅವರಿಂದ ಕಪ್ಪಕಾಣಿಕೆಯನ್ನು ವಸೂಲು ಮಾಡಿದ್ದನು. ಅವನನ್ನು ರಾಜಧಾನಿಯಿಂದ ಹೊರಗೆ ಕಳುಹಿಸಬೇಕಾದರೆ, ಸಲಕಂ ಸೋದರರಿಗೆ ಸಾಕು ಸಾಕಾಗಿತ್ತು. ಮುದ್ಗಲ್ಲು ರಾಯಚೂರುಗಳು ಇನ್ನೂ ಮುಸಲ್ಮಾನರ ವಶದಲ್ಲೇ ಇದ್ದುದರಿಂದ ಸಾಮ್ರಾಜ್ಯಕ್ಕೆ ಯಾವಾಗಲೂ ಭಯವಿದ್ದೇ ಇತ್ತು.

ಇದೇ ಸಮಯದಲ್ಲಿ ವಿಜಯನಗರದರಸರ ದೌರ್ಬಲ್ಯವನ್ನು ನೋಡಿಕೊಂಡು, ಇದುವರೆಗೆ ಮಿತ್ರರಾಗಿದ್ದ ಪೋರ್ಚುಗೀಸರು ಈಗ ಶತ್ರುಪಕ್ಷಕ್ಕೆ ಸೇರಿದ್ದರು. ಅವರು ಹಿಂದೆ ವಿಜಯನಗರದರಸರಿಂದ ತಮಗಾದ ಉಪಕಾರ, ಸಹಾಯಗಳನ್ನು ಮರೆತು—ಅವರ ವಿಷಯದಲ್ಲಿ ದ್ರೋಹಚಿಂತನೆಗೆ ಆರಂಭಿಸಿದ್ದರು. ಬಿಜಾಪುರದ ಸುಲ್ತಾನನು ಸಮರ್ಥರಾಜಕಾರಣ ಮುತ್ಸದ್ದಿಯೂ, ತಂತ್ರಗಾರನೂ ಆಗಿದ್ದ ಅಸದ್ ಖಾನನ ಮೂಲಕ ಗೋವೆಯ ಸುತ್ತಲಿನ ಪ್ರದೇಶವನ್ನು ಪೋರ್ಚುಗೀಸರಿಗೆ ಕೊಡುವುದಾಗಿ ಹೇಳಿ ಪೋರ್ಚುಗೀಸ್ ಗೌರ್ನರ್ ಡಾಕುನ್ಹನನ್ನು ವಿಜಯನಗರದ ವಿರುದ್ಧ ಎತ್ತಿ ಕಟ್ಟಿದ್ದನು. ವಿಜಯನಗರದೊಂದಿಗೆ ತುಂಬಾ ಲಾಭದಾಯಕವಾಗಿ ನಡೆದಿದ್ದ ಅಶ್ವವ್ಯಾಪಾರವು ಬಿಜಾಪುರದರಸರ ಪಾಲಾಗಿತ್ತು. ಅವರ ಬಳಿ ಇದ್ದ ಉತ್ಕೃಷ್ಟವಾದ ತುಪಾಕಿ ಹಾಗೂ ಅಶ್ವದಳಗಳೂ ಮದ್ದುಗುಂಡುಗಳೂ, ಫಿರಂಗಿಗಳೂ ಬಿಜಾಪುರದ ಸುಲ್ತಾನನ ಸೇವೆಗೆ ನಿಂತುವು. ಅವನ ಪ್ರಚೋದನೆಯಿಂದ, ಕೇವಲ ಅಂಗೈಯಗಲದ ಪ್ರದೇಶಕ್ಕೆ ಅಧಿಪತಿಗಳಾಗಿದ್ದ ಪೋರ್ಚುಗೀಸರು ವಿಸ್ತಾರವಾಗಿದ್ದ ವಿಜಯನಗರದ ಸಾಮ್ರಾಜ್ಯವನ್ನು ಎದುರಿಸಿ ನಿಲ್ಲುವಷ್ಟು ಸೊಕ್ಕು ಬಂದಿತ್ತು.

ವಿಜಯನಗರ ಸಾಮ್ರಾಜ್ಯವು ಇದೇ ಸ್ಥಿತಿಯಲ್ಲಿ ಮುಂದುವರೆದರೆ, ಅದರ ಕೀರ್ತಿಗೌರವಗಳು ಕಸಕ್ಕಿಂತ ಕಡೆಯಾಗಿ ಕಡೆಗೊಂದು ದಿನ ಸಾಮ್ರಾಜ್ಯವು ಅಳಿಯುವುದೆಂದು ರಾಮರಾಯನು ಅರಿತನು. ವಿಜಯನಗರದ ಕೃಪಾಭಿಕ್ಷೆಯಲ್ಲಿ ಬದುಕುತ್ತಿದ್ದ ಈ ರಾಷ್ಟ್ರಗಳು ಸೊಕ್ಕಿ ಮೆರೆಯಲು ಸಲಕಂ ಸೋದರರ ದೌರ್ಬಲ್ಯವೇ ಕಾರಣವಾಗಿತ್ತು. ಸಲಕಂ ಸೋದರರು ಸಿಂಹಾಸನವನ್ನು ತಮ್ಮದಾಗಿಸಿಕೊಳ್ಳುವ ಹುಚ್ಚಿನಲ್ಲಿ, ಬಿಜಾಪುರದ ಸುಲ್ತಾನನ ಮಾಂಡಲೀಕತ್ವವನ್ನು

ಒಪ್ಪಿಕೊಂಡಿದ್ದರು. ಅವರು ತಮ್ಮ ಗೌರವವನ್ನು ಗಾಳಿಗೆ ತೂರಿದ್ದಲ್ಲದೆ, ದೇಶದ ಗೌರವಕ್ಕೂ ಕಳಂಕ ತಂದಿದ್ದರು. ಅವರು ವಿಜಯನಗರದ ಸಾಮ್ರಾಜ್ಯ ಲಕ್ಷ್ಮಿಯನ್ನು ರಾಜರಾಜೇಶ್ವರಿಯನ್ನು, ಬಿಜಾಪುರದ ಸುಲ್ತಾನನಿಗೆ ತೊತ್ತಾಗಿ ಮಾಡಿ ದೇಶವನ್ನು ಅವರಿಗೆ ಅಡವು ಹಾಕಿದ್ದರು. ದೇಶದ ಮಹಾ ಜನತೆ ಯನ್ನು ತೊತ್ತಿನ ಮಕ್ಕಳಾಗಿ ಮಾಡಿದ್ದರು – ಇಂತಹ ಪರಿಸ್ಥಿತಿಯಲ್ಲಿ ವಿಜಯ ನಗರ ಸಾಮ್ರಾಜ್ಯವು ಹುಚ್ಚುದೊರೆಯ ಕೈ ತಪ್ಪಿ ರಾಮರಾಯನ ವಶಕ್ಕೆ ಬಂದಿತ್ತು. ಈಗ ವಿಜಯನಗರವನ್ನು ಅದರ ಮೊದಲಿನ ಗೌರವಸ್ಥಿತಿಗೆ ತರಲು ರಾಮರಾಯನು ಕಂಕಣ ತೊಟ್ಟನು. ರಾಮರಾಯನಿಗೆ ವಿಜಯನಗ ರದ ಪ್ರಬಲ ಶತ್ರುಗಳಾದ ಬಿಜಾಪುರದ ಸುಲ್ತಾನ ಹಾಗೂ ಪೋರ್ಚುಗೀಸರನ್ನು ಎದುರಿಸುವುದು ಅನಿವಾರ್ಯವಾಗಿತ್ತು. ರಾಮರಾಯನು ಗುಪ್ತನಿಧಿಯ ಬಹುಭಾಗವನ್ನು ದೇಶ ಸಂರಕ್ಷಣೆಗಾಗಿ ಸಮರ್ಥವಾದ ಸೈನ್ಯಕಟ್ಟಲು ವಿನಿಯೋ ಗಿಸಿದನು. ಅವನು ಅಧಿಕ ಬೆಲೆ ಕೊಟ್ಟು ಗುಜರಾತ್, ಶಿರಾಜ್ ಮತ್ತು ಅರೇಬಿಯ, ಓರ್ಮೆಜ್‌ಗಳಿಂದ ಉತ್ಕೃಷ್ಟ ಕುದುರೆಗಳನ್ನೂ, ಗಜಪತಿಯ ನಾಡಿನಿಂದ, ಪಶ್ಚಿಮಘಟ್ಟದ ಅರಸರಿಂದ ಆನೆಗಳನ್ನೂ ಪಡೆದು ತನ್ನ ಸೈನ್ಯ ವನ್ನು ತುಂಬಿದನು. ತನ್ನ ಪದಾತಿ ಸೈನ್ಯದಲ್ಲಿ ಹಿಂದೂಗಳು ಮಾತ್ರವಲ್ಲದೆ ಮಹಮದೀಯರಲ್ಲಿ ವೀರರೆಂದು ಪರಿಗಣಿತರಾಗಿದ್ದ ಪಠಾಣರನ್ನೂ, ತುರುಷ್ಕ ರನ್ನೂ ಅಧಿಕಸಂಖ್ಯೆಯಲ್ಲಿ ಸೇರಿಸಿಕೊಂಡನು. ಅಲ್ಲದೆ ಶಸ್ತ್ರಾಸ್ತ್ರಗಳನ್ನು ನಾಡಿನ ಮೂಲೆ ಮೂಲೆಗಳಿಂದ ತಯಾರಿಸಿ ಸಂಗ್ರಹಿಸಿದನು ಸಾಮ್ರಾಜ್ಯದ ಇನ್ನೂರು ಭಾಗಗಳಿಂದ, ಹಣದ ಪ್ರತಿಯಾಗಿ ಸೈನ್ಯವನ್ನು ಕಳುಹಿಸಿಕೊಡಲು ಸ್ನೇಹದ ನಿರೂಪಗಳನ್ನು ಕಳುಹಿಸಿಕೊಟ್ಟನು. ಈ ಕಾರ್ಯದಿಂದ ರಾಮರಾಯನು ರಾಜ್ಯಸೂತ್ರಹಿಡಿದ ಅತ್ಯಲ್ಪಕಾಲದಲ್ಲಿ ಹಾಳುಬಿದ್ದ ವಿಜಯನಗರವು ಸೈನಿಕ ರಿಂದಲೂ, ವ್ಯಾಪಾರಿಗಳಿಂದಲೂ ಕಿಕ್ಕಿರಿಯಿತು. ಎಲ್ಲೆಲ್ಲೂ ಪುನರೋದಯದ ಹೊಸ ಹುರುಪು ಉತ್ಸಾಹಗಳ ಹೊಳೆ ಹರಿದಿತ್ತು.

ಇಂತಹ ಸನ್ನಿವೇಶದಲ್ಲಿ ಬಿಜಾಪುರದ ಸುಲ್ತಾನನು ವಿಜಯನಗರದ ಅರಸರಿಗೆ ಯುದ್ಧದ ಬೆದರಿಕೆ ಹಾಕಿ, ಪತ್ರವೊಂದನ್ನು ಕಳುಹಿಸಿದ್ದನು.

ಬಿಜಾಪುರದ ಸುಲ್ತಾನ ಇಬ್ರಾಹಿಂ ಅದಿಲ್‌ಷಹನು ಕಳುಹಿಸಿಕೊಟ್ಟದ್ದ ಬಿಜಾಪುರದಿಂದ ಬಂದಿದ್ದ ಸಭೆಯಲ್ಲಿ ಸಿಂಹಾಸನಕ್ಕೆ ಸಲ್ಲಿಸಬೇಕಾದ ಮರ್ಯಾದೆ ಯನ್ನೂ ಸಭಾಗೌರವವನ್ನೂ ಕಾಯದೆ ಉದ್ಧಟತನದಲ್ಲಿ ಪತ್ರಕೊಟ್ಟನು.

" ಈ ಪತ್ರಕ್ಕೆ ಕೂಡಲೇ ಉತ್ತರ ತರಬೇಕೆಂದು ಖಾವಂದರು ಆಜ್ಞೆ ಮಾಡಿದ್ದಾರೆ " ಎಂದು ಹೇಳಿ ಅವನು ತನ್ನ ವರ್ತನೆಯಿಂದ ಚಕಿತರಾಗಿ ಕುಳಿತ

ಸಭಾಸದರನ್ನು ತಿರಸ್ಕಾರದಿಂದ ನೋಡಿದನು.

"ಈ ಪತ್ರಕ್ಕೆ ಉತ್ತರ ಕೊಡುವ ಮಾತು ಇದ್ದೇ ಇದೆ. ನಿಮ್ಮ ಸುಲ್ತಾನರು ಈ ಕಾರ್ಯಕ್ಕೆ ನಿಮಗಿಂತಲೂ ಯೋಗ್ಯರನ್ನು ಕಳುಹಿಸಿದ್ದರೆ ಲೇಸಾಗುತ್ತಿತ್ತು. ರಾಜಸಭೆಯ ಮರ್ಯಾದೆಯನ್ನು ತಿಳಿಯದ ನಿಮ್ಮಂಥಹ ಹುಂಬಜನರನ್ನು ಇಂತಹ ಜವಾಬ್ದಾರಿ ಕಾರ್ಯಕ್ಕೆ ಕಳುಹಿಸಿಕೊಟ್ಟು—ವಿವೇಕರಹಿತರಾಗಿ ವರ್ತಿಸಿದ್ದಾರೆ. ಇನ್ನು ಮುಂದಾದರೂ ಮಾನಮರ್ಯಾದೆಗಳನ್ನು ಬಲ್ಲ ಸುಸಂಸ್ಕೃತರಾದ ರಾಯಭಾರಿಗಳನ್ನು ಕಳುಹಿಸಲಿ. ನಿಮ್ಮ ಸುಲ್ತಾನರಿಗೆ ತಿಳಿಸಿ—ಇನ್ನು ಪತ್ರದ ವಿಷಯ. ಇದನ್ನು ಕೂಲಂಕಷವಾಗಿ ಪರ್ಯಾಲೋಚಿಸಿ, ನಿಮಗೆ ಆದಷ್ಟು ಬೇಗ ಉತ್ತರ ಕೊಡಲಾಗುವುದು—ಅಲ್ಲಿಯವರೆಗೆ ನೀವು ನಮ್ಮ ಅತಿಥಿಗಳಾಗಿ ಕಾರಭಾರಿಗಳು ತೋರಿಸುವ ಬಿಡಾರದಲ್ಲಿ ಇರಬೇಕಾಗಿ ಕೋರಿಕೆ." ಎಂದು ರಾಮರಾಯನು ಆ ಪತ್ರವನ್ನು ನೋಡದೆ, ಪತ್ರವಾಹಕನನ್ನು ಅಸಮಾಧಾನದಿಂದ ನೋಡುತ್ತಾ ಹೇಳಿದ.

"ಸುಲ್ತಾನರ ಅಪ್ಪಣೆಯನ್ನು ನಾನು ಪಾಲಿಸಬೇಕಾಗಿದೆ. ರಾಜಧಾನಿಯಲ್ಲಿ ಹೆಚ್ಚು ಕಾಲ ನಿಲ್ಲದೆ, ಕೂಡಲೇ ಉತ್ತರ ತರಲು ಆಜ್ಞೆ ಮಾಡಿದ್ದಾರೆ!"

"ಆಗಲಿ ಆದಷ್ಟು ಬೇಗ ಉತ್ತರ ಕೊಡುತ್ತೇವೆ. ನೀವು ಇಲ್ಲಿಂದ ಹೊರಡಬಹುದು."

"ಅದು ಸಾಧ್ಯವಿಲ್ಲ, ನಮಗೆ ನೀವು ಈಗಲೇ ಉತ್ತರ ಕೊಡಬೇಕು."

"ಈಗ ದರ್ಬಾರಿನಲ್ಲಿ ನಿಮ್ಮ ಪತ್ರಕ್ಕಿಂತ ಹೆಚ್ಚಿನ ಮಹತ್ವದ ಸಂಗತಿಗಳನ್ನು ಪರ್ಯಾಲೋಚಿಸಬೇಕಾಗಿದೆ. ನಮಗೆ ಸಮಯ ದೊರೆತಾಗ ನಿಮ್ಮ ಪತ್ರವನ್ನು ಪರಾಂಬರಿಸುತ್ತೇವೆ. ಇದಕ್ಕಾಗಿ ನೀವು ಕಾದಿರಬೇಕಾಗಿಲ್ಲ. ನಿಮ್ಮ ಸುಲ್ತಾನರಿಗೆ ಕೊಡಬೇಕಾದ ಉತ್ತರವನ್ನು ಬರೆದು ನಮ್ಮ ದೂತರ ಮೂಲಕ ಕಳುಹಿಸುತ್ತೇವೆ. ನೀವಿನ್ನು ನಿಮ್ಮ ಸುಲ್ತಾನರ ಬಳಿಗೆ ಹೊರಡಬಹುದು."

"ನೀವು ಯಾರೊಡನೆ ವ್ಯವಹರಿಸುತ್ತಿದ್ದೀರೆಂಬುದನ್ನು ನಾನು ವಿಷಾದಿಂದ ನೆನಪು ಮಾಡಿಕೊಡಬೇಕಾಗಿದೆ!"

"ಅದು ನಮಗೆ ತಿಳಿದಿದೆ–ಈ ಶ್ರಮ ನೀವು ತೆಗೆದುಕೊಳ್ಳಬೇಕಾಗಿಲ್ಲ!"

"ಇದು ಸಾಮಾನ್ಯ ಪತ್ರವೆಂದು ನೀವು ತಿಳಿದಂತಿದೆ."

"ಇಲ್ಲ—ಇದಕ್ಕೆ ಇರುವ ಬೆಲೆಯನ್ನು ನಾವು ಕೊಡುತ್ತಿದ್ದೇವೆ!"

"ಇದನ್ನು ಓದಿ ನೋಡಲು ಇಚ್ಛಿಸದ ನೀವು ಇದಕ್ಕೆ ಯಾವ ಬೆಲೆ ಕೊಡುವಿರೆಂದು ನಮಗೆ ತಿಳಿದಿದೆ. ನನ್ನ ಹಾಗೂ ನಮ್ಮ ಸುಲ್ತಾನರನ್ನು ತುಂಬಿದ ಸಭೆಯಲ್ಲಿ ಅಪಮಾನ ಮಾಡುತ್ತಿದ್ದೀರಿ. ಇದು ನಿಮಗೆ ಸಲ್ಲದು!"

" ಸಿಂಹಾಸನದಲ್ಲಿ ಮಂಡಿಸಿರುವ ಮಹಾಪ್ರಭುಗಳಿಗೆ ಕುರ್ನಿಸಾತು ಮಾಡುವ ಸೌಜನ್ಯವಾಗಲಿ, ಸಭಾಮರ್‍ಯಾದೆಯಾಗಲೀ ಇಲ್ಲದ ನಿಮಗೆ ನಮ್ಮ ವರ್ತನೆಯಿಂದ ಅಪಮಾನವಾಯಿತು. ಆಶ್ಚರ್ಯ! ಮಾನಾಪಮಾನಗಳ ಸಂಗತಿ ಈಗಲಾದರೂ ತಿಳಿಯಿತಲ್ಲ. ಅಷ್ಟೇ ಸಂತೋಷ."

"ಸಾಮ್ರಾಟರಾದ ನಮ್ಮ ಸುಲ್ತಾನರಿಗಲ್ಲದೆ, ಅವರ ಅಧೀನರಾದ ಮಾಂಡಲೀಕರಿಗೆ ನಾನು ಕುರ್ನಿಸಾತು ಮಾಡಲಾರೆ!"

" ಯಾರು ಸಾಮ್ರಾಟರು? ಯಾರು ಮಾಂಡಲೀಕರು?" ಚಕಿತನಾಗಿ ಕೇಳಿದ ರಾಮರಾಯ.

" ಈ ಪ್ರಶ್ನೆಯನ್ನು ನನಗೆ ಕೇಳುವುದಕ್ಕಿಂತ, ನಿಮ್ಮ ರಾಜರನ್ನೇ ಕೇಳಿ. ನಿಮಗೆ ಉತ್ತರ ತಿಳಿದೀತು!"

" ವಿಜಯನಗರದ ಸಾರ್ವಭೌಮರೆಂದಿಗೂ, ಯಾವ ಕಾಲಕ್ಕೂ ಇನ್ನೊಬ್ಬರ ಅಡಿಯಾಳಾಗಿರಲಿಲ್ಲ – ಇರುವುದಿಲ್ಲ. ಈ ಪವಿತ್ರವಾದ ರತ್ನಸಿಂಹಾಸನಕ್ಕೆ ಎಲ್ಲರೂ ತಲೆಬಾಗಬೇಕೇ ವಿನಾ – ಇದು ಅವರಿಗೆ ತಲೆಬಾಗದು. ಈ ಶ್ವೇತಛತ್ರದಡಿಯಲ್ಲಿ ಕುಳಿತ ವ್ಯಕ್ತಿಯನ್ನು ನೀವು ಯಾರೆಂದು ಭಾವಿಸಿದಿರಿ? ಮಹಾರಾಜಾಧಿರಾಜ ಪರಮೇಶ್ವರ, ಮೂರುರಾಯರ ಗಂಡ, ಇತ್ಯಾದಿ ಬಿರುದಾಂಕಿತರೆಂಬುದನ್ನು ನೀವು ಮರೆಯಬಾರದು. ಶತ್ರುರಾಜರ ಸೊಕ್ಕನ್ನು ಮೆಟ್ಟಿ ಹಾರುವ ಆ ವರಹಾಂಕಿತ ಧ್ವಜ ಅರಿರಾಯರಿಗೆ ಭಯಂಕರವೆಂಬುದನ್ನು ನೀವು ಮರೆಯಬಾರದು."

" ಯಾರು ಮೂರು ರಾಯರ ಗಂಡ? ಯಾರು ಅರಿರಾಯ ಭಯಂಕರ? ಈ ನಿಮ್ಮ ಪವಿತ್ರ ಸಿಂಹಾಸನದಲ್ಲಿ ಆ ದಿನ ನಮ್ಮ ಸುಲ್ತಾನರು ಶೋಭಿಸಿದಾಗ, ನಿಮ್ಮರಸರನ್ನು ಪದಾಕ್ರಾಂತಗೊಳಿಸಿ, ಮಾಂಡಲೀಕರೆಂದು ಓಲೈಸಿಕೊಂಡಾಗ, ಈ ನಿಮ್ಮ ದರ್ಪ ಎಲ್ಲಿ ಅಡಗಿತ್ತು? ಸಿಂಹಾಸನದಲ್ಲಿದ್ದ ಆ ರಣಹೇಡಿ ತಿರುಮಲನನ್ನು ಮೋಸದಿಂದ ಸಂಹರಿಸಿ, ನೀವು ಅಧಿಕಾರಕ್ಕೆ ಬಂದ ಮಾತ್ರಕ್ಕೆ, ವಿಜಯನಗರವು ನಮ್ಮ ಸುಲ್ತಾನರ ಆಶ್ರಿತರಾಜ್ಯವೆಂಬ ಸಂಗತಿಯನ್ನು ಮರೆಯಲಾದೀತೆ? ಆ ನಿಮ್ಮ ಪೆದ್ದತಿರುಮಲ ನಮ್ಮ ಸುಲ್ತಾನರ ನೆರವು ಬೇಡಿದುದು ಸುಳ್ಳೆ? ಮಾಂಡಲೀಕ ರಾಜ್ಯವೆಂದು ಒಪ್ಪಿ ಕಪ್ಪ ಕೊಡಲೊಪ್ಪಿದುದು ಸುಳ್ಳೆ?" ಎಂದು ತುಂಬಿದ ಸಭೆಯಲ್ಲಿ ಆತ ಗರ್ಜಿಸಿದ.

" ರಾಜದೂತರಾದ ನೀವು ನಿಮ್ಮ ನಾಲಗೆಯನ್ನು ಹೆಚ್ಚು ಹರಿಯಬಿಡುತ್ತಿದ್ದೀರಿ ಜೋಕೆ?" ಎಂದ ಇದನ್ನು ಕೇಳಿ ಸುಮ್ಮನಿರಲಾಗದೆ, ಸೇನಾನಾಯಕ ವೆಂಕಟಾದ್ರಿ.

" ಈ ಅಧಿಕ ಪ್ರಸಂಗಿತನವನ್ನು ನಾವು ಸಹಿಸೆವು – ಇದರ ಪರಿಣಾಮ ನೆಟ್ಟಗಾಗದು. ಜೋಕೆ !" ಎಂದ ಪ್ರಧಾನಿ ತಿರುಮಲ.

" ನೀವು ಯಾರೊಂದಿಗೆ ವ್ಯವಹರಿಸುತ್ತಿದ್ದೀರಿ ಎಂಬುದು ನಿಮಗೆ ಮೊದಲು ತಿಳಿದಿರಲಿ." ಎಂದು ರಾಮರಾಯ ಗುಡುಗಿದ.

" ನಿಮ್ಮಿಂದ ಪತ್ರಕ್ಕೆ ಉತ್ತರ ದೊರೆಯದೆ ನಾನು ಇಲ್ಲಿಂದ ಕದಲಲಾರೆ."

" ಹಾಗಾದರೆ ನಮ್ಮ ಜೀವ ನಿಮಗೆ ಭಾರವಾಗಿರಬೇಕು !"

" ಯಾರ ಜೀವ ಭಾರವಾಗಿದೆ ಎಂಬ ಸಂಗತಿಯನ್ನು ಸುಲ್ತಾನರು ವಿಚಾರಿಸಿಕೊಳ್ಳುತ್ತಾರೆ. ಈಗ ನೀವು ನಮ್ಮ ಪತ್ರಕ್ಕೆ ಉತ್ತರ ಕೊಡುವಿರೋ ಇಲ್ಲವೊ ?"

" ಈ ಬಗ್ಗೆ ನಮ್ಮ ನಿರ್ಧಾರವನ್ನು ಆಗಲೇ ತಿಳಿಸಿದ್ದೇವೆ – ನೀವಿನ್ನು ಹೊರಡಬಹುದು."

" ಇದೇ ಕಡೆಯ ನಿರ್ಧಾರವೇ ?"

" ಹೌದು !"

" ಇಂದು ದುಡುಕಿ ನಾಳೆ ಪಶ್ಚಾತ್ತಾಪಪಡುವ ಸಂದರ್ಭ ಬರಬಹುದು."

" ನಿಮ್ಮ ಸಲಹೆಯನ್ನು ನಾವು ಕೇಳಲಿಲ್ಲ. ನೀವಿನ್ನು ಹೊರಡಬಹುದು !"

" ಹೊರಡುವ ಕಾಲ ಬಂದಾಗ ನಾನೇ ಹೊರಡುತ್ತೇನೆ–ನಾನು ನಿಮ್ಮನ್ನು ಕೇಳಿ ಇಲ್ಲಿಗೆ ಬರಲಿಲ್ಲ – ಹೊರಡುವಾಗಲೂ ಅಷ್ಟೆ ! ನಾನು ನಮ್ಮ ಸುಲ್ತಾನರ ಆಜ್ಞೆಯಂತೆ ನಡೆಯುವೆನೇ ಹೊರತು, ಸುಲ್ತಾನರ ಆಶ್ರಿತರಾಜರ ಆಜ್ಞೆಯಂತೆ ನಡೆಯುವವನಲ್ಲ—"

" ನೀವು ಒಳ್ಳೆಯ ಮಾತಿನಲ್ಲಿ ಹೊರಡುವುದಿಲ್ಲವೆಂದು ಕಾಣುತ್ತದೆ. ನಮ್ಮ ಸಹನೆಗೂ ಮಿತಿಯಿದೆ ! ಇದುವರೆಗೂ ಸುಮ್ಮನೆ ಬಿಟ್ಟುದೇ ನಮ್ಮ ಅಪರಾಧ !" ಎಂದು ಹೇಳಿ ಅಲ್ಲಿದ್ದ ಪಹರೆಯ ಸೈನಿಕರನ್ನು ಕರೆದು, " ಈ ನೀಚನಿಗೆ ಕಿವಿ, ಮೂಗುಗಳನ್ನು ಕೊಯ್ದು, ಸುಲ್ತಾನರ ಪತ್ರಕ್ಕೆ ಇದೇ ನಮ್ಮ ಉತ್ತರವೆಂದು ತಿಳಿಸಿರಿ !" ಎಂದು ಗರ್ಜಿಸಿದ ರಾಮರಾಯ.

ಕೂಡಲೇ, ಬಲಶಾಲಿಗಳಾದ ನಾಲ್ವರು ಪಹರೆಯ ಸೈನಿಕರು, ಆ ಓಲೆಕಾರನ ಮೇಲೆ ಬಿದ್ದು ಅವನನ್ನು ಬಲಾತ್ಕಾರದಿಂದ ಕರೆದೊಯ್ದರು.

" ಅಸಹಾಯಕನಾದ ದೂತನ ಮೇಲೆ ತೋರಿಸುವ ನಿಮ್ಮ ಅಧಿಕಾರಕ್ಕೆ ಧಿಕ್ಕಾರ ! ನೀವು ನನ್ನ ಮೇಲೆ ಕೈಮಾಡಿದರೆ – ನಿಮ್ಮ ಕಾಫರ್ ರಾಜ್ಯವೇ ನಮ್ಮ ಸುಲ್ತಾನರ ಕ್ರೋಧದ ಉರಿಯಿಂದ ಬೆಂದುಹೋದೀತು " ಎಂದು ಅವನು ಬೊಬ್ಬೆ ಇಡುತ್ತಿದ್ದರೂ, ಅವನ ಮಾತನ್ನು ಲಕ್ಷಿಸದೆ ಸೈನಿಕರು ಅವನನ್ನು ಅಲ್ಲಿಂದ ಕರೆದೊಯ್ದರು.

ಇಷ್ಟೆಲ್ಲಾ ತಮ್ಮೆದುರಿನಲ್ಲೇ ನಡೆದುದರಿಂದ ಸಭಾಸದರ ಮನಸ್ಸು ಕ್ಷುಬ್ಧವಾಗಿತ್ತು. ಅವರಿಗೆ ಬಿಜಾಪುರದ ಸುಲ್ತಾನನ ಸೇವಕನ ಉದ್ಧಟತನದಿಂದ ಮನಸ್ಸು ರೋಸಿಹೋಗಿತ್ತು. ಅವನ ಪತ್ರದಲ್ಲಿ ಅದೇನು ಇದೆಯೋ ಎಂದು ತಿಳಿಯಲು ಉತ್ಸುಕರಾದರು. , ಇದನ್ನರಿತು ರಾಮರಾಯನು ಸಭಾಸದರಿಗೆ ಆ ಪತ್ರವನ್ನು ಗಟ್ಟಿಯಾಗಿ ಓದಿದನು:

ಸ್ವಸ್ತಿ. ಬಿಜಾಪುರಧ ಬಾದಷಾಹಿ ಸುಲ್ತಾನರ ಮಾಂಡಲೀಕರೂ, ಅವರ ಕೃಪಾಪೋಷಿತರೂ ಆಗಿರುವ ವಿಜಯನಗರದ ಅರಸರಿಗೆ, ಸುಲ್ತಾನರು ಬಶೆಸುವ ನಿರೂಪವೇನೆಂದರೆ,

"ನೀವು ನಮ್ಮ ಮಿತ್ರರಾಗಿದ್ದ, ಸಲಕಂ ಸೋದರರನ್ನು ಮೋಸದಿಂದ ಕೊಂದು, ವಿಜಯನಗರದ ಸಿಂಹಾಸನವನ್ನು ದುರಾಕ್ರಮಿಸಿಕೊಂಡಿದ್ದೀರಿ. ಇದು ಅಕ್ಷಮ್ಯ ಅಪರಾಧ. ಇಷ್ಟು ಮಾತ್ರವಲ್ಲ. ಸಾಮಂತರಾಜರಾದ ನೀವು, ಸ್ವತಂತ್ರ ರಾಜರೆಂದು ಘೋಷಿಸಿಕೊಂಡಿದ್ದೀರಿ. ಅಲ್ಲದೆ ನಮ್ಮ ಬೊಕ್ಕಸಕ್ಕೆ ಸಲ್ಲಬೇಕಾಗಿದ್ದ ಕಪ್ಪಕಾಣಿಕೆಗಳನ್ನು ತಡೆದಿದ್ದೀರಿ. ಇದು ಎಂತಹ ವಿದ್ರೋಹಕರ ಅಪರಾಧವೆಂದು ನಿಮಗೆ ತಿಳಿದಿದೆ. ನೀವು ನಮ್ಮೊಡನಿದ್ದ ಮೈತ್ರಿಯನ್ನು ಮುರಿದು ಯುದ್ಧದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವಿರೆಂಬ ವರ್ತಮಾನವನ್ನು ತಿಳಿದ ಮೇಲೂ ಸುಮ್ಮನಿರಲು ಸಾಧ್ಯವಿಲ್ಲ. ನೀವು ಕೂಡಲೇ ಇದಕ್ಕಾಗಿ ಪಶ್ಚಾತ್ತಾಪ ಪಟ್ಟು, ಸನ್ನಿಧಾನದಲ್ಲಿ, ಕ್ಷಮೆ ಯಾಚಿಸಿದರೆ ನಿಮ್ಮ ಸರ್ವಾಪರಾಧವನ್ನೂ ಮನ್ನಿಸಲಾಗುವುದು. ನೀವು ನಮ್ಮ ರಾಯಭಾರಿಯನ್ನು ನಮ್ಮ ಪ್ರತಿನಿಧಿಯಾಗಿ ನಿಮ್ಮ ಆಸ್ಥಾನದಲ್ಲಿಟ್ಟುಕೊಳ್ಳಬೇಕು – ನಿಮ್ಮ ವಿದೇಶೀಯ ವ್ಯವಹಾರಗಳಲ್ಲಿ, ಆತನ ಸಲಹೆಯಂತೆ, ನಡೆದುಕೊಳ್ಳಬೇಕು. ಇದುವರೆಗೆ ಆಗಿರುವ ಅಪಚಾರಕ್ಕೆ ದಂಡದ ರೂಪವಾಗಿ, ಎರಡು ಕೋಟಿ ಪಗೋಡಗಳನ್ನೂ, ಬಾಕಿ ನಿಂತಿರುವ ಎರಡು ವರ್ಷಗಳ ಪೊಗದಿ ಎರಡುಕೋಟಿ ಪಗೋಡಗಳನ್ನೂ ಕಳುಹಿಸಿ ಕೊಡಬೇಕು. ಈಗ ರಾಜಧಾನಿಯಲ್ಲಿರುವ ಸೈನ್ಯವನ್ನು ಅರ್ಧಕ್ಕೆ ಇಳಿಸಬೇಕು. ಈ ಮೂರು ಷರತ್ತುಗಳಿಗೆ ನೀವು ಒಪ್ಪುವುದಾದರೆ, ನಿಮ್ಮನ್ನು ಮಿತ್ರರೆಂದೇ ಭಾವಿಸಿ, ಸ್ನೇಹಭಿಕ್ಷೆ ನೀಡಲಾಗುತ್ತದೆ. ಇವುಗಳನ್ನು ಧಿಕ್ಕರಿಸುವುದಾದರೆ, ನಿಮ್ಮ ಅವಿಧೇಯತೆಯನ್ನು ಮಹಾಪರಾಧವೆಂದು ಪರಿಗಣಿಸಿ, ನಿಮ್ಮನ್ನು ತಕ್ಕರೀತಿಯಲ್ಲಿ ಶಿಕ್ಷಿಸಲಾಗುವುದು. ಯಾವುದಕ್ಕೂ ಕೂಡಲೇ ಉತ್ತರ ಬರೆದು. ದೂತನ ಕೈಲಿ ಕಳುಹಿಸಿ ಕೊಡಬೇಕಾಗಿ ಬಿನ್ನಹ."

ಇಂತು ನಿಮ್ಮ ಸ್ನೇಹಾಕಾಂಕ್ಷಿ,

ಬಿಜಾಪುರದ ಸುಲ್ತಾನ ಇಬ್ರಾಹಿಂ ಅದಿಲ್‌ಷಹ.

ಈ ಪತ್ರವನ್ನು ಓದಿ ರಾಮರಾಯನ ಮುಖ ಸಿಟ್ಟಿನಿಂದ ಕೆಂಪಾಯಿತು. ಅವನು ಔಡುಗಚ್ಚಿ ಹೂಂಕರಿಸಿದ, ವಿಜಯನಗರದ ಸಾಮ್ರಾಟರನ್ನು ತನ್ನ ಊಳಿಗದವರಂತೆ ನಡಸಿಕೊಂಡು, ಪತ್ರಬರೆದಿರುವ ಅದಿಲ್‌ಷಹನ ಉದ್ಧಟತನ ದುರಂಹಕಾರಗಳನ್ನು ಕಂಡು ಕೇಳಿ ಸಭಿಕರೆಲ್ಲರೂ ಗರ್ಜಿಸಿದರು: "ನಾವು ಪ್ರಾಣದಿಂದ ಇರುವವರೆಗೆ, ಇಂತಹ ಅಪಮಾನವನ್ನು ಸಹಿಸಲಾರೆವು – ನಾವು ರಣಹೇಡಿಗಳಲ್ಲ–ಸಾಮ್ರಾಟರ ಹಾಗೂ ಸಾಮ್ರಾಜ್ಯದ ಗೌರವವನ್ನು ಕಾಯ್ದು ಕೊಳ್ಳಲು, ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಲು ನಮ್ಮ ತನು, ಮನ, ಧನಗಳನ್ನು ಬಲಿಗೊಟ್ಟು ಹೋರಾಡುವೆವೇ ಹೊರತು, ಪರಕೀಯರ ದಾಸ್ಯವನ್ನು ಸಹಿಸ ಲಾರೆವು. ಈ ಬಗೆಯ ತೇಜೋವಧೆಯನ್ನು ಸಹಿಸಲಾರೆವು. ನಾವು ಕನ್ನಡ ಕಲಿಗಳಾಗಿರುವುದು ನಿಜವಾದರೆ, ಕೈಲಿ ಹಿಡಿದಿರುವುದು ಖಡ್ಗವಾದರೆ, ನಮ್ಮ ಸಾಮ್ರಾಟರಿಗೆ ಅಪಮಾನಮಾಡಿರುವ ಆ ಮದೋನ್ಮತ್ತ ಸುಲ್ತಾನನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಿ ಬುದ್ಧಿಕಲಿಸಬೇಕು!"

ಅವರ ಉತ್ಸಾಹ, ವೀರಾವೇಶಗಳನ್ನು ಕಂಡು, ಪುಳಕಿತನಾದ ರಾಮ ರಾಯ. ಅವರ ಆತ್ಮಾಭಿಮಾನ, ಸ್ವಾತಂತ್ರ್ಯ ಪ್ರೇಮಗಳನ್ನು ಕಂಡು ಸಂತೋಷ ಗೊಂಡ ಅವನು ಸಭಾಸದರು ಅಪೇಕ್ಷಿಸಿದ್ದ ಉತ್ತರವನ್ನೇ ಆ ಉದ್ಧಟ ಸುಲ್ತಾ ನನಿಗೆ ಕಳುಹಿಸಿಕೊಟ್ಟ – ಕಿವಿ ಮೂಗುಗಳನ್ನು ಕಳೆದುಕೊಂಡ ಚಾರನ ಕೈಲಿ.

ಬಿಜಾಪುರದ ಸುಲ್ತಾನನು ಏನನ್ನು ಬಯಸಿದ್ದನೊ, ಎಲ್ಲವೂ ತದ್ವಿರುದ್ಧ ನಡೆದಿತ್ತು. ಅದಿಲ್‌ಷಹನಿಗೆ ರಾಮರಾಯನ ಶೌರ್ಯಪ್ರತಾಪಗಳ ಬಗ್ಗೆ ತಿಳಿದಿ ದ್ದರೂ, ಬರಿದಾಗಿದ್ದ ಭಂಡಾರವನ್ನು ನೆಚ್ಚಿ, ಕ್ಷಾಮಡಾಮರಗಳಿಂದಲೂ, ಸಲಕಂ ಸೋದರರ ದಬ್ಬಾಳಿಕೆಯಿಂದಲೂ, ಅವನತಿಯ ದಾರಿ ತುಳಿದು, ಕಂಗಾಲವಾಗಿದ್ದ ಜನತೆಯನ್ನು ನಂಬಿ, ಬಲಿಷ್ಠನಾದ ತನ್ನನ್ನು ಅವನು ಸದ್ಯದ ವಿಷಮ ಪರಿಸ್ಥಿತಿಯಲ್ಲಿ ವಿರೋಧಿಸಿ ಬದುಕಲಾರನೆಂದು ಭಾವಿಸಿದ್ದನು. ಸಲಕಂ ಸೋದರರ ಸಾವಿನೊಂದಿಗೆ, ವಿಜಯನಗರವನ್ನು ಮುಸುಕಿದ್ದ ಕಾವಳ ಹರಿದು, ಸದಾಶಿವರಾಯನ ಕಾಲದಲ್ಲಿ ನವೋದಯವಾಯಿತೆಂಬ ಸಂಗತಿ ಸುಲ್ತಾನನಿಗೆ ತಿಳಿದಿರಲಿಲ್ಲ. ವಿನಾಶದ ದಾರಿಯಲ್ಲಿ ನಡೆದಿದ್ದ ಸಾಮ್ರಾಜ್ಯವು ಹಿಂದಿನವರೆಲ್ಲರ ಹಾರೈಕೆಯಿಂದ, ಪುಣ್ಯ ಪ್ರಭಾವದಿಂದ ಮತ್ತೆ ಚೇತರಿಸಿ ಕೊಂಡಿದೆ ಎಂದು ಪಾಪ, ಬಿಜಾಪುರದ ಸುಲ್ತಾನನಿಗೆ ಹೇಗೆ ತಿಳಿಯಬೇಕು! ಅವನು ಸಲಕಂ ಸೋದರರನ್ನು ನಡಸಿಕೊಂಡಂತೆ, ನೂತನ ಸಾಮ್ರಾಟನನ್ನೂ ನಡಸಿಕೊಳ್ಳಲು ಆಶಿಸಿದ್ದ.

ದೂತನಿಂದ ನಡೆದ ಎಲ್ಲ ವಾರ್ತೆಯನ್ನು ಕೇಳಿ ಇಬ್ರಾಹಿಂ ಅದಿಲ್

ಷಹನು ಕುಪಿತನಾಗಿ “ವಿಜಯನಗರದ ಮೇಲೆ ಯುದ್ಧ ಘೋಷಿಸಿ, ಅದವಾನಿಯನ್ನು ಮತ್ತೆ ಸ್ವಾಧೀನ ಪಡಿಸಿಕೊಳ್ಳಲು ತನ್ನ ದಂಡನಾಯಕನಾದ ಅಸದ್ ಖಾನನೊಡನೆ ಸೈನ್ಯ ಕಳುಹಿಸಿದನು. ಅಸದ್ ಖಾನನು ಸೈನ್ಯ ಸಮೇತ ಅದವಾನಿಯ ಮೇಲೆ ದಂಡೆತ್ತಿ ಬರುತ್ತಿರುವ ವಾರ್ತೆಯನ್ನು ಗುಪ್ತಚಾರರಿಂದ ತಿಳಿದ ರಾಮರಾಯನು, ಸಾಕಷ್ಟು ಬಲದೊಂದಿಗೆ ಅದವಾನಿಯ ರಕ್ಷಣೆಗೆ ತನ್ನ ಕಿರಿಯ ಸಹೋದರ ವೆಂಕಟಾದ್ರಿಯನ್ನು ಕಳುಹಿಸಿಕೊಟ್ಟನು. ಆಡಳಿತದಲ್ಲಿ ತನಗೆ ನೆರವಾಗಲು, ತಿರುಮಲನನ್ನು ತನ್ನ ರಾಜಧಾನಿಯಲ್ಲೇ ಇಟ್ಟುಕೊಂಡನು..

ವಿಜಯನಗರದ ಸಮುದ್ರ ಸಾದೃಶ ಸೈನ್ಯದೊಡನೆ ವೆಂಕಟಾದ್ರಿಯು ಅದವಾನಿಯ ರಕ್ಷಣೆಗೆ ಬಂದುದನ್ನು ನೋಡಿ, ತನಗಿಂತ ಅಧಿಕ ಸಂಖ್ಯೆಯಲ್ಲಿ ಸೈನ್ಯವಿರುವ ವೆಂಕಟಾದ್ರಿಯ ಮೇಲೆ ಯುದ್ಧ ಮಾಡಿದರೆ, ಸೋಲು ಖಂಡಿತವೆಂದು ಭಾವಿಸಿ, ಹಾಕಿದ ಮುತ್ತಿಗೆಯನ್ನು ತೆಗೆದು ಅಸದ್ ಖಾನನು ಹಿಮ್ಮೆಟ್ಟಿದನು. ಇದರಿಂದ ಉತ್ತೇಜಿತನಾದ ವೆಂಕಟಾದ್ರಿಯು ಅಸದ್ ಖಾನನು ತನಗೆ ಹೆದರಿ ಓಡಿದನೆಂದು ಭಾವಿಸಿ, ಅವನನ್ನು ಬೆನ್ನಟ್ಟಿ ಬಿರುಗಾಳಿಯ ವೇಗದಲ್ಲಿ ನಡೆದನು. ಈ ವೇಳೆಗೆ ಅಸದ್ ಖಾನನ ಸೈನ್ಯವು ಅದವಾನಿಯನ್ನು ಬಿಟ್ಟು, ಇಪ್ಪತ್ತು ಮೈಲಿಗಳಷ್ಟು ದೂರ ಹಿಂದಕ್ಕೆ ಓಡಿ ಹೋಗಿತ್ತು. ಅವರನ್ನು ಬೆನ್ನಟ್ಟಿ ಬಂದ ವೆಂಕಟಾದ್ರಿಯು ನಿರ್ವಾಹವಿಲ್ಲದೆ, ಅಸದ್ ಖಾನನ ಶಿಬಿರಕ್ಕೆ ಸುಮಾರು ಎಂಟು ಮೈಲಿ ದೂರದಲ್ಲಿ ಬಿಡಾರ ಹೂಡಿ, ಕೆಲಕಾಲ ಶತ್ರುಗಳ ಚಲನವಲನಗಳನ್ನು ಈಕ್ಷಿಸುತ್ತಾ, ವಿಶ್ರಾಂತಿ ತೆಗೆದುಕೊಳ್ಳಲು ನಿಶ್ಚಯಿಸಿದ.

ಈ ವಾರ್ತೆಯನ್ನು ಕೇಳಿ ಅಸದ್ ಖಾನನು ಮನದಲ್ಲೇ ಹಿಗ್ಗಿದನು. ಬೀಸಿದ್ದ ಪ್ರಹಾರ ಪರಿಹಾರವಾಯಿತೆಂದು ಹಿಗ್ಗಿದನೋ, ಅಥವಾ ಬೇರೊಂದು ತಂತ್ರದಿಂದ ವೆಂಕಟಾದ್ರಿಯನ್ನು ಸೋಲಿಸಲು ಆಲೋಚಿಸಿ ಹಿಗ್ಗಿದನೋ! ಅಂತೂ ವೆಂಕಟಾದ್ರಿಯು ಸೈನ್ಯ ಸಮೇತ ಬೀಡುಬಿಟ್ಟಿದ್ದ ಸಂಗತಿಯನ್ನು ಕೇಳಿ ಅವನಿಗೆ ಬಹಳ ಸಂತೋಷವಾಗಿತ್ತು.

## ೪

ಎರಡು ಸೈನಿಕ ಶಿಬಿರದಲ್ಲಿಯೂ ಯಾವ ಬಗೆಯ ಹೆಚ್ಚಿನ ಚಟುವಟಿಕೆಗಳಿಲ್ಲದೆ ಒಂದೆರಡು ವಾರ ಕಳೆಯಿತು. ಮತ್ತೆ ಅದವಾನಿಯನ್ನು ಮುತ್ತಲು ಬಂದರೆ, ಅವನ ಮೇಲೆ ಬಿದ್ದು ಸದೆಬಡಿಯಬೇಕೆಂದು ವೆಂಕಟಾದ್ರಿ ಕಾದು ಕುಳಿತಿದ್ದರೆ, ವೆಂಕಟಾದ್ರಿಯು ಹಿಂದಿರುಗಿದನಂತರ ಅದವಾನಿಯನ್ನು ಮುತ್ತ

ಬೇಕೆಂದು ಅಸದ್‌ಖಾನನು ಸೈನ್ಯ ಸಮೇತ ಕಾದುಕುಳಿತಿದ್ದನು. ಹೀಗೆ ಅನೇಕ ದಿನಗಳವರೆಗೆ, ಪರಸ್ಪರ ಶತ್ರುಗಳ ಚಲನವಲನಗಳನ್ನು ಈಕ್ಷಿಸುತ್ತಾ ಕುಳಿತು, ಎರಡು ಕಡೆಯ ಸೈನಿಕರಿಗೂ ಬೇಸರ ಬಂದಿತ್ತು. ಸೈನಿಕರಿಗೆ ಬೇಕಾಗಿದ್ದುದು ಕೈ ಕೈ ಕಾಳಗ. ಶಕ್ತಿ ಸಾಮರ್ಥ್ಯಗಳ ಪ್ರದರ್ಶನ – ಗೆಲವು ಇಲ್ಲವೇ ಸೋಲು. ಚಟುವಟಿಕೆ ರಹಿತವಾದ ದೀರ್ಘ ವಿರಾಮ, ಅವರಿಗೇ ಬೇಸರ ಹುಟ್ಟಿಸಿತ್ತು.

ಅಸದ್‌ಖಾನನು ಶತ್ರುಗಳ ಬಲಾಬಲಗಳನ್ನು ಆಯಕಟ್ಟಿನ ಸ್ಥಳಗಳನ್ನು ತಿಳಿದುಬರಲು ತನ್ನ ಗುಪ್ತಚಾರರಲ್ಲಿ ಕುಶಾಗ್ರಮತಿಗಳೆಂದು ಹೆಸರುಗಳಿಸಿದ್ದ ಹಜರತ್‌ಖಾನ್ ಮತ್ತು ಅಂಬಾಜಿರಾವ್ ಎಂಬ ಇಬ್ಬರನ್ನು ಕಳುಹಿಸಿಕೊಟ್ಟನು. ಅವರು ಹಾವಾಡಿಗರ ವೇಷವನ್ನು ಧರಿಸಿ ವಿಜಯನಗರದ ಸೇನಾ ಶಿಬಿರವನ್ನು ಹೊಕ್ಕರು.

ಹಾವಾಡಿಗರ ವೇಷದಲ್ಲಿದ್ದ ಅವರನ್ನು ಯಾರೂ ಶತ್ರುಪಕ್ಷದವರೆಂದು ಶಂಕಿಸುವಂತಿರಲಿಲ್ಲ.

ವೆಂಕಟಾದ್ರಿಯು ಬೀಡುಬಿಟ್ಟಿದ್ದ ಪ್ರದೇಶವು ಬೆಂಗಾಡಾಗಿದ್ದು, ಅಲ್ಲಿ ಅನೇಕ ಗಿಡಮರಗಳೂ ಹುತ್ತಗಳೂ ಇದ್ದುವು. ಅವುಗಳಲ್ಲಿ ಹಾವುಗಳು ವಾಸವಾಗಿದ್ದುವು. ಒಮ್ಮೆ ಪಹರೆಯವನು ರಾತ್ರಿ ಕಾವಲು ಕಾಯುತ್ತಿರುವಾಗ ಒಂದು ಸರ್ಪವನ್ನು ಮೆಟ್ಟಿದನಂತೆ. ಮತ್ತೊಮ್ಮೆ, ಹುತ್ತದೊಳಗೆ ಘಟಸರ್ಪವೊಂದು ಹೋಗುವುದನ್ನು ಹಲವರು ಕಂಡಿದ್ದರು. ಆ ದಿನ ಪುಂಗಿಯೂದುತ್ತ ಬಂದ ಹಾವಾಡಿಗರನ್ನು ನೋಡುತ್ತಲೇ, ಶಿಬಿರ ರಕ್ಷಣೆಯಲ್ಲಿದ್ದ ಜಮೇದಾರನೊಬ್ಬನಿಗೆ ಕುತೂಹಲ ಕೆರಳಿ ಅವರನ್ನು ತಡೆದು ನಿಲ್ಲಿಸಿದ.

"ಯಾರಲ್ಲಿ? ಅಲ್ಲೇ ನಿಲ್ಲಿ!"

"ನಾವು ಹುಜೂರ್, ಹಾವಾಡಿಗರು!"

"ಇಲ್ಲಿ ನಿಮಗೇನು ಕೆಲಸ?"

"ಹಾವಾಡಿಸಿ ಹೊಟ್ಟೆ ಹೊರೆಯುವುದು ನಮ್ಮ ಉದ್ಯೋಗ ಸರ್ಕಾರ್."

"ನಿಮಗೆ ಇಲ್ಲೇನೂ ಕೆಲಸವಿಲ್ಲ – ಈ ಕಡೆ ಬರಬೇಡಿ. ಹಾಗೇ ಹಾಗೇ ಹೊರಡಿ."

"ನಮ್ಮ ಬಳಿ ಒಳ್ಳೆಯ ಹಾವುಗಳಿವೆ ಸರ್ಕಾರ್! ಗೋಧಿನಾಗರ, ಕಾಳಿಂಗಸರ್ಪ, ಎಳೆನಾಗರ, ಹೆಬ್ಬಾವು, ಉರಿಮಂಡಲ, ಎಲ್ಲಾ ಇವೆ. ಕಾಳಿಂಗ ಸರ್ಪದ ಮೇಲೆ ಗೇಣುದ್ದ ಕೂದಲು ಇದೆ. ಹಣೆಯಲ್ಲಿ ರತ್ನವಿದೆ.... ಇದನ್ನು ರಾಜಮಹಾರಾಜರು ನೋಡಿ ಚಕಿತರಾಗಿದ್ದಾರೆ ಸರ್ಕಾರ್."

" ಹಾಗಾದರೆ ಎಲ್ಲಿ ಆ ಕಾಳಿಂಗ ಸರ್ಪ ?" ಅವರಿಗೆ ಇಷ್ಟು ಹೇಳಿದುದೇ ಸಾಕಾಯಿತು; ಅವರು ಅಲ್ಲೇ ಬಿಡಾರ ಹೂಡಿ, ತಮ್ಮ ಹೆಗಲಮೇಲೆ ಹೊತ್ತಿದ್ದ ಬಿದಿರುದೆಬ್ಬೆಯ ತಕ್ಕಡಿಯಿಂದ ಒಂದೊಂದಾಗಿ ಹಾವಿನ ಬುಟ್ಟಿಯನ್ನು ಕೆಳಗಿಳಿಸತೊಡಗಿದರು. ಬಳಿಯಲ್ಲಿದ್ದವನು ಡೋಲಿನ ಮೇಲೆ ಕೈಯಾಡಿಸಲು ಆರಂಭಿಸಿದನು. ಪುಂಗಿ ಹಾಗೂ ಡೋಲಿನ ಶಬ್ದ ಕೇಳಿದೊಡನೆಯೇ, ಕೆಲಸವಿಲ್ಲದೆ ತಮ್ಮ ಡೇರೆಗಳಲ್ಲಿ ಕುಳಿತು, ಹರಟೆ ಹೊಡೆಯುತ್ತಿದ್ದ ಸೈನಿಕರು, ಹಾವಾಡಿಸುವುದನ್ನು ನೋಡಲು ಶಿಬಿರಗಳಿಂದ ಓಡಿಬಂದರು. ನಿಮಿಷಾರ್ಧದಲ್ಲಿ ನೂರಾರು ಜನರ ಸಂದಣಿ ನೆರೆಯಿತು. ಒಂದೆರಡು ತಾಸುಗಳವರೆಗೆ ಹಾವಾಡಿಸುವವರು ತಮ್ಮ ಹಾವುಗಳನ್ನೆಲ್ಲಾ ಪ್ರದರ್ಶಿಸಿ, ಅದರೊಂದಿಗೆ ತಮಗೆ ಬಂದ ಒಂದೆರಡು ಯಕ್ಷಿಣಿ ವಿದ್ಯೆಯನ್ನೂ ತೋರಿಸಿ, ಎಲ್ಲರ ಮೆಚ್ಚುಗೆಗೆ ಪಾತ್ರರಾದರು; ಅವರಿಂದ ಭಕ್ಷೀಸನ್ನೂ ಪಡೆದರು.

ಆಟ ಮುಗಿಯಲು ನೆರೆದಿದ್ದವರಲ್ಲಿ ಒಬ್ಬನು ಮುಂದೆ ಬಂದು,

" ನಿಮಗೆ ಹಾವು ಹಿಡಿಯುವುದು ಬರುತ್ತದೆಯೆ ?" ಎಂದು ಪ್ರಶ್ನಿಸಿದ.

" ಬರುತ್ತದೆ ಸರ್ಕಾರ್! ನಾವು ಎಂತಹ ಹಾವನ್ನಾದರೂ ಹಿಡಿಯುತ್ತೇವೆ!"

" ಹಾವು ನಿಮ್ಮನ್ನೇನೂ ಮಾಡುವುದಿಲ್ಲವೆ ?"

" ಪಾಪ! ಅದು ನಮ್ಮನ್ನೇನು ಮಾಡೀತು. ಈ ಪುಂಗಿ ಊದಿದರೆ ಸಾಕು. ಅವು ಇದಕ್ಕೆ ಮರುಳಾಗಿ ಮೇಲೆ ಬರುತ್ತವೆ. ಮೇಲೆ ಬಂದಾಗ ನಮ್ಮ ಬುಟ್ಟಿಗೆ ಬಿದ್ದಿತೆಂದೇ ಅರ್ಥ."

" ನಿಮ್ಮನ್ನು ಅವು ಕಚ್ಚುವುದಿಲ್ಲವೆ ?"

" ನನ್ನಲ್ಲಿ ಗರುಡಮಚ್ಚೆಯಿದೆ. ಅಲ್ಲದೆ ವಿಷ ತೆಗೆಯುವ ಗರುಡಮಣಿಯೂ ಇದೆ. ನಮ್ಮ ಮುಂದೆ ಹಾವುಗಳ ಆಟ ನಡೆಯುವುದಿಲ್ಲ."

" ಹಾಗಾದರೆ ಆ ಹುತ್ತದಲ್ಲಿರುವ ಹಾವನ್ನು ಹಿಡಿಯುತ್ತೀರಾ ?"

" ಯಾವ ಹುತ್ತದಲ್ಲಿ ಹಾವಿದೆ ಸರ್ಕಾರ್ ?"

" ನಮ್ಮ ದಂಡನಾಯಕರ ಶಿಬಿರದ ಬಳಿ, ಒಂದು ಪೊದೆ ಇದೆ – ಅಲ್ಲಿ ಇರುವ ಹುತ್ತದೊಳಗೆ ದೊಡ್ಡ ಸರ್ಪವೊಂದು ಹೋದುದನ್ನು ಅವರು ಕಂಡರಂತೆ. ಅದನ್ನು ಹೊರಡಿಸಲು ನಾವು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾಯಿತು! ಅದನ್ನು ನೀವು ಹಿಡಿದುಕೊಟ್ಟರೆ ನಿಮಗೆ ಭಾರಿ ಇನಾಂ ಕೊಡುತ್ತೇವೆ ?" ಎಂದು ಹೇಳಿ ಜಮೇದಾರನು ಗಾರುಡಿಗರನ್ನು ದಂಡನಾಯಕನ ಶಿಬಿರದ ಬಳಿಯಿದ್ದ ಹುತ್ತಕ್ಕೆ ಕರೆದುಕೊಂಡು ಹೋದನು. ಒಂದೆರಡು ಗಂಟೆ

ಪುಂಗಿಯೂದಿದರೂ ಪ್ರಯೋಜನವಾಗಲಿಲ್ಲ. ಹಾವು ಹಿಡಿಯುವುದನ್ನು ನೋಡಲು ನೆರದಿದ್ದ ಜನಸಂದಣಿಯ ಗದ್ದಲದಿಂದ ಹಾವು ಹೊರಗೆ ಬರಲಿಲ್ಲ ವೆಂದು ಹೇಳಿ, ಪ್ರಮುಖನನ್ನು ಉಳಿಸಿ, ಉಳಿದವರನ್ನು ಹಿಂದಕ್ಕೆ ಕಳುಹಿಸ ಲಾಯಿತು. ಅನಂತರ ಪುಂಗಿಯನ್ನು ಊದುತ್ತಾ ಹುತ್ತವನ್ನು ನಾಲ್ಕಾರು ಬಾರಿ ಸುತ್ತುಹಾಕಿ, ಒಂದು ಕಡೆ ಬಂದು ಕುಳಿತುಕೊಂಡ. ಅದೇನು ಆಶ್ಚರ್ಯ! ಹುತ್ತದೊಳಗಿಂದ ತೋಳುಗಾತ್ರದ ನಾಗರಹಾವು, ಹೊರಗೆ ಬಂದು ಹೆಡೆಯನ್ನು ಬಿಚ್ಚಿ ಪುಂಗಿಯ ನಾದಕ್ಕೆ ತಲೆ ತೂಗುತ್ತಾ ಎಲ್ಲರನ್ನೂ ಚಕಿತಗೊಳಿಸಿತು. ಅದನ್ನು ಹಿಡಿದು ವಿಷದ ಹಲ್ಲುಗಳನ್ನು ಕೀಳುವುದು ಅವರಿಗೆ ಪ್ರಯಾಸವಾಗ ಲಿಲ್ಲ. ಎಲ್ಲರ ಸಮ್ಮುಖದಲ್ಲಿ ನಿಮಿಷಾರ್ಧದಲ್ಲಿ ಭಯಂಕರವೆನಿಸಿದ್ದ ಸರ್ಪ ಹೂವಿನ ಹಾರದಂತೆ, ಹಾವಾಡಿಗನ ಕತ್ತಿನಲ್ಲಿ ವಿರಾಜಿಸಿತು.

ಅವರ ಶಕ್ತಿ ಸಾಮರ್ಥ್ಯಗಳನ್ನು ಕೇಳಿ ದಂಡನಾಯಕನು, ಆ ಹಾವಾಡಿ ಗನನ್ನು ತನ್ನ ಬಿಡಾರಕ್ಕೆ ಬರಮಾಡಿಕೊಂಡು, ಅವರ ಪೂರ್ವೇತಿಹಾಸವನ್ನೆಲ್ಲಾ ಕೂಲಂಕಷವಾಗಿ ಕೇಳಿಕೊಂಡ; ಅವರಿಗೆ ಸೂಕ್ತರೀತಿಯಲ್ಲಿ ಮರ್ಯಾದೆ ಮಾಡಿ ಕಳುಹಿಸಿದ.

ಈ ಸುದ್ದಿ ಶಿಬಿರದಲ್ಲಿ ಹರಡಲು ಹೆಚ್ಚು ಕಾಲ ಬೇಕಾಗಲಿಲ್ಲ. ಕೆಲವೇ ದಿನಗಳಲ್ಲಿ ಆ ಹಾವಾಡಿಗರು ಸೈನಿಕರ ಪರಮ ಸ್ನೇಹಿತರಾದರು. ಅವರನ್ನು ಎಲ್ಲೂ ಯಾರೂ, ತಡೆಯುತ್ತಿರಲಿಲ್ಲ. ಅವರು ಅನೇಕ ದಿನಗಳು ಶಿಬಿರದಲ್ಲಿದ್ದು, ಒಂದು ದಿನ ಅಲ್ಲಿಂದ ಹೊರಟು ಹೋದರು.

ಅವರು ಅಲ್ಲಿಂದ ಕಣ್ಮರೆಯಾದ ಮೂರುದಿನಗಳಲ್ಲಿ ಶತ್ರುಶಿಬಿರ ಅಸದ್ ಖಾನನ ವಶವಾಯಿತು.

ಹಾವಾಡಿಗರು ಶಿಬಿರದಿಂದ ಹೊರಟಮೇಲೆ, ಒಂದೆರಡು ದಿನ ಶಿಬಿರದ ಜೀವನ ಮೊದಲಿನಂತೆ ಸಾಗಿತ್ತು. ಮೂರನೆಯ ದಿನ ರಾತ್ರಿ, ಎರಡು ಗಂಟೆಯ ಸುಮಾರಿಗೆ ಸೈನಿಕ ಶಿಬಿರದಲ್ಲಿ ಇದ್ದಕ್ಕಿದ್ದಂತೆ ಹಾಹಾಕಾರವೆದ್ದಿತು. ಶಿಬಿರ ವನ್ನು ಕಾಯುತ್ತಿದ್ದ ಶಸ್ತ್ರ ಸೈನಿಕರು ಏನಾಯಿತೆಂದು ತಿಳಿಯುವುದರೊಳಗೆ, ಭಯಂಕರ ಆಸ್ಫೋಟನೆಗಳು – ಸೈನಿಕರ ಚೀರಾಟವೂ, ಕುದುರೆಗಳ ಹೇಶಾ ರವವೂ, ಕೇಳಿಸಿದುವು. ಇದರೊಂದಿಗೆ, ಅಲ್ಲಾಹೋ ಅಕ್ಬರ್–ಬಿಸ್ಮಿಲ್ಲಾ ಎಂದು ಹೇಳಿಕೊಂಡು ಮಹಮದೀಯ ಸೈನಿಕರೂ, ಜೈ ಭವಾನಿ ಎಂದು ಹೇಳಿಕೊಂಡು ಮರಾಡೆಯವರ ದಂಡೂ ರಣಗರ್ಜನೆ ಮಾಡಿಕೊಂಡು – ವಿಜಯನಗರದ ಸೈನ್ಯದ ಮೇಲೆ ಬಿದ್ದಿದ್ದರು. ಅವರು ಕೈಗೆ ಸಿಕ್ಕಿದ್ದ ಗುಡಾರಗಳಿಗೆ ಬೆಂಕಿ ಯಿಡುತ್ತಾ, ಎದುರಾದವರನ್ನು ಕೊಲ್ಲುತ್ತಾ ಮುಂದೆ ನುಗ್ಗಿದ್ದರು ಶಸ್ತ್ರರಹಿತ

ರಾದ ಸೈನಿಕರು ಮಹಮದೀಯ ಸೈನ್ಯವನ್ನು ಎದುರಿಸಲಾರದೆ, ಪಲಾಯನ ಮಾಡಿದರು. ವೆಂಕಟಾದ್ರಿಯ ಸೇನಾ ಶಿಬಿರದಲ್ಲಿ ಹಾಹಾಕಾರವೆದ್ದಿತು. ಸೈನಿಕರು ಹಿಂಡು ಚೆದರಿದ ಕುರಿಯ ಮಂದೆಯಂತೆ, ದಿಕ್ಕಾಪಾಲಾಗಿ ಓಡಿದರು. ಹಾವಾಡಿಗರ ವೇಷದಲ್ಲಿ ಬಂದಿದ್ದ ಅಸದ್‌ಖಾನನ ಗೂಢಚಾರರು ಉಪಯುಕ್ತವಾಗಿದ್ದ ಅನೇಕ ಸಂಗತಿಗಳನ್ನು ಸಂಗ್ರಹಿಸಿಕೊಂಡು ಹೋಗಿದ್ದರು. ಇದರಿಂದ ಅಸದ್‌ಖಾನನು ಹೆಚ್ಚು ರಕ್ತಪಾತವಿಲ್ಲದೆ ಶತ್ರುಶಿಬಿರವನ್ನು ವಶಮಾಡಿಕೊಂಡಿದ್ದ.

ಶತ್ರುಶಿಬಿರ ತನ್ನ ವಶವಾದೊಡನೆ ಅಸದ್‌ಖಾನನು ವೆಂಕಟಾದ್ರಿಯನ್ನು ಕೈಸೆರೆ ಹಿಡಿಯಲು ಅವನ ಶಿಬಿರಕ್ಕೆ ನುಗ್ಗಿದ. ಆದರೆ ಆಗಷ್ಟೇ ವೆಂಕಟಾದ್ರಿಯು ಅಲ್ಲಿಂದ ತಪ್ಪಿಸಿಕೊಂಡು ಹೋಗಿದ್ದನು.

ಮಧ್ಯರಾತ್ರಿಯ ವೇಳೆಗೆ, ಹಠಾತ್ತನೆ ಕೇಳಿಸಿದ ಹಾಹಾಕಾರ ಕೇಳಿ, ವೆಂಕಟಾದ್ರಿಗೆ ತಟಕ್ಕನೆ ಎಚ್ಚರವಾಗಿತ್ತು. ಅವನು ಮಂಚದಿಂದ ಹಾರಿ, ಅಲ್ಲೇ ಇದ್ದ ಕವಚವನ್ನು ತೊಟ್ಟು, ಕತ್ತಿಯನ್ನು ಹೊರಕ್ಕೆ ಸೆಳೆದು ಬಿಡಾರದಿಂದ ಹೊರಗೆ ಬಂದನು. ರಾತ್ರಿಯ ಕತ್ತಲಿನಲ್ಲಿ ನಡೆದಿದ್ದ ವಿದ್ಯಮಾನವೇನೆಂಬುದು ತಿಳಿಯಲಿಲ್ಲ. ಅವನು ಅಲ್ಲಿದ್ದ ಪಹರೆಯವನನ್ನು ಸುದ್ದಿ ತಿಳಿದು ಬರಲು ಅಟ್ಟಿದ್ದ. ಹಾಹಾಕಾರ ನಿಮಿಷನಿಮಿಷಕ್ಕೂ ಹೆಚ್ಚಾಗುತ್ತಿತ್ತು. ಅದರೊಂದಿಗೆ ನಾಲ್ಕಾರು ಕಡೆಯಿಂದ ಬೆಂಕಿಯ ಜ್ವಾಲೆಗಳು ಕಾಣಿಸಿಕೊಂಡುವು. ಅವನು ಚಾರನಿಗಾಗಿ ಕಾದುಕುಳಿತ. ಆ ವೇಳೆಗೆ, ಹತ್ತಾರು ವ್ಯಕ್ತಿಗಳು ವೆಂಕಟಾದ್ರಿಯ ಶಿಬಿರದತ್ತ ಕೂಗಿಕೊಂಡು ಮುನ್ನುಗ್ಗಿದ್ದರು. ಆಗ ಒಬ್ಬ ಸೈನಿಕ ಓಡಿ ಬಂದು "ಪ್ರಭು! ಶಿಬಿರವು ಶತ್ರುಗಳ ಪಾಲಾಗಿದೆ. ಶತ್ರು ಸೈನಿಕರು ನಿಮ್ಮನ್ನು ಸೆರೆ ಹಿಡಿಯಲು ಇತ್ತಲೇ ಬರುತ್ತಿದ್ದಾರೆ. ಕೂಡಲೇ ಇಲ್ಲಿಂದ ತಪ್ಪಿಸಿಕೊಳ್ಳಿ!" ಎಂದು ಹೇಳಿ ಶತ್ರು ಸೈನಿಕರನ್ನು ಎದುರಿಸಲು ಹೊರಟ. ಆ ಕ್ಷಣಕ್ಕೆ ವೆಂಕಟಾದ್ರಿಗೆ – ಮಲಗಿದ್ದ ಹೆಂಡತಿ ಮಕ್ಕಳನ್ನು, ತನ್ನನ್ನು ನಂಬಿರುವ ಸೈನಿಕರನ್ನು ಶತ್ರುಗಳ ಪಾಲುಮಾಡಿ ಓಡಿಹೋಗುವುದೇ?, ಎಂದೆನಿಸಿತು.

ಹಾಗಾದರೆ – ಕಾಪಿನ ಭಟರೆಲ್ಲಾ ಏನಾದರು? ಶಿಬಿರ ಹೇಗೆ ಶತ್ರುಗಳ ಪಾಲಾಯಿತು? ಎಂದು ಯೋಚಿಸುತ್ತಾ ನಿಂತಾಗ ಒಬ್ಬ ಸೈನಿಕ ಓಡಿಬಂದು "ಪ್ರಭು! ಶತ್ರು ಸೈನಿಕರು ಕಾಪಿನ ಭಟರನ್ನೆಲ್ಲಾ ಕೊಂದು ಶಸ್ತ್ರಾಗಾರವನ್ನೂ ಇನ್ನಿತರ ವಾಹನಗಳನ್ನೂ ತಮ್ಮದು ಮಾಡಿಕೊಂಡಿದ್ದಾರೆ – ನಮ್ಮ ಎಲ್ಲ ಮದ್ದು ಗುಂಡುಗಳೂ ಅವರ ವಶವಾಗಿವೆ. ಈಗ ನಾವೇನೂ ಮಾಡುವಂತಿಲ್ಲ. ಎಲ್ಲೆಲ್ಲೂ ಶತ್ರು ಸೈನಿಕರೇ ತುಂಬಿದ್ದಾರೆ. ಬೇಗ ನೀವು ಇಲ್ಲಿಂದ ತಪ್ಪಿಸಿಕೊಳ್ಳಿ" ಎಂದು ಹೇಳಿ ಅಲ್ಲಿಂದ ಮಾಯವಾದ.

ಇದನ್ನು ಕೇಳಿ ದಿಗ್ಭ್ರಾಂತನಾಗಿ ನಿಂತ ವೆಂಕಟಾದ್ರಿ. ಅವನಿಗೆ ಏನು ಮಾಡಬೇಕೆಂದು ತಿಳಿಯದಾಯಿತು. ಶಸ್ತ್ರಾಗಾರವೆಲ್ಲ ಶತ್ರುವಶವಾಗಿರುವ ಪರಿಸ್ಥಿತಿಯಲ್ಲಿ ತಾನು ಅಲ್ಲೇ ನಿಂತರೆ ಮೂರ್ಖತನವಾದೀತೆಂದು ಭಾವಿಸಿ, ಪತ್ನೀ ಪುತ್ರರೊಡನೆ ತಲೆತಪ್ಪಿಸಿಕೊಳ್ಳಲು ನೋಡಿದ. ಅಷ್ಟರಲ್ಲಿ ನೂರು ಜನ ಪಂಜಿನ ಬೆಳಕಿನಲ್ಲಿ ಕತ್ತಿಯನ್ನು ಝುಳಪಿಸುತ್ತಾ ತನ್ನ ಶಿಬಿರದೆಡೆಗೆ ಬರುತ್ತಿರುವುದು ಕಾಣಿಸಿತು. ತಾನು ತಡಮಾಡಿದರೆ ಶತ್ರುಗಳಿಂದ ಪಾರಾಗುವುದು ಕಷ್ಟವೆಂದರಿತು, ಅವನು ಪತ್ನಿಯರಾದ ರಂಗಮ್ಮ ಮತ್ತು ಕೃಷ್ಣಮ್ಮ ಮತ್ತು ತನ್ನ ಕುಮಾರರಾದ ರಂಗಪ್ಪ ಮತ್ತು ರಾಮುರನ್ನು ಬಿಟ್ಟು ಶಿಬಿರದಿಂದ ಪಲಾಯನ ಮಾಡಿದ. ವೆಂಕಟಾದ್ರಿಯ ಪತ್ನಿ ಪುತ್ರರು ಸುಲಭವಾಗಿ ಅಸದ್‌ಖಾನನ ಕಡೆಯವರ ಕೈಗೆ ಸಿಕ್ಕಿಬಿದ್ದರು. ಶಿಬಿರ ಶತ್ರುವಶವಾದ ಮೇಲೆ ಇನ್ನು ಪ್ರತಿಭಟಿಸಿ ಪ್ರಯೋಜನವಿಲ್ಲವೆಂದು ಅವರು ಶರಣಾಗತರಾದರು. ವೆಂಕಟಾದ್ರಿಗಾಗಿ ಶಿಬಿರವನ್ನೆಲ್ಲಾ ಹುಡುಕಿದರೂ ಅವನ ಪತ್ತೆಯಾಗಲಿಲ್ಲ. ಈ ವೇಳೆಗೆ ಕತ್ತಲು ಹರಿದು ಬೆಳ್ಳಿ ಮೂಡಿತ್ತು. ಈ ವೇಳೆಗೆ ಇನ್ನೊಂದು ದಳವೂ ಬಂದು ಅಸದ್‌ಖಾನನನ್ನು ಕೂಡಿಕೊಂಡಿತ್ತು. ಇನ್ನು ಶತ್ರುಗಳನ್ನು ವೃಥಾ ಪ್ರತಿಭಟಿಸಿ ಪ್ರಯೋಜನವಿಲ್ಲವೆಂದು ಶಿಬಿರದ ಕೆಲವು ಸೈನಿಕರು ಶರಣಾಗತರಾದರು. ಇನ್ನುಳಿದವರು ತಮ್ಮ ನಾಯಕನನ್ನು ಕೂಡಿಕೊಳ್ಳಲು ತಪ್ಪಿಸಿಕೊಂಡು ಓಡಿದರು. ಒಟ್ಟಿನಲ್ಲಿ ಸೈನ್ಯದಲ್ಲಿದ್ದ ಸಹಸ್ರಾರು ಆನೆ ಕುದುರೆಗಳು – ಬೆಲೆಬಾಳುವ ಉಗ್ರಾಣಗಳೂ, ಶಸ್ತ್ರಾಸ್ತ್ರಗಳೂ, ಡೇರೆ, ಮತ್ತು ಇನ್ನಿತರ ಯುದ್ಧೋಪಕರಣಗಳೂ ಶತ್ರುಗಳ ಪಾಲಾದುವು. ಅವಕ್ಕಿಂತ ಹೆಚ್ಚಾಗಿ ವೆಂಕಟಾದ್ರಿಯ ಇಬ್ಬರು ಪತ್ನಿಯರೂ, ಪುತ್ರರೂ ಶತ್ರುಗಳಿಗೆ ಸೆರೆಸಿಕ್ಕಿದ್ದರು.

ಅಸದ್‌ಖಾನನು ರಾಜಕುಟುಂಬಕ್ಕೆ ಸೇರಿದ್ದ ಅವರನ್ನು ಮರ್ಯಾದೆಯಿಂದ ನಡೆಸಿಕೊಂಡು, ಅವರಿಗೆ ವ್ಯಕ್ತಿ ಸ್ವಾತಂತ್ರ್ಯವಿನಾ ಉಳಿದೆಲ್ಲ ಸೌಲಭ್ಯಗಳನ್ನೂ ಕಲ್ಪಿಸಿಕೊಟ್ಟನು.

ಆ ಒಂದು ರಾತ್ರಿ ನಡೆದ ರಕ್ತರಹಿತ ದಾಳಿಯಲ್ಲಿ ಅಸದ್‌ಖಾನನ ತಂತ್ರ ಫಲಿಸಿ, ಅವನಿಗೆ ವಿಜಯವು ದೊರೆತಿತ್ತು. ತಂತ್ರಜ್ಞನಾದ ಅಸದ್‌ಖಾನನು ಶಕ್ತಿಯಿಂದ ಸಾಧಿಸಲಾಗದದ್ದನ್ನು ಯುಕ್ತಿಯಿಂದ ಸಾಧಿಸಿದ್ದನು. ಅವನು ಈಗ ಅದವಾನಿಯನ್ನು ಮುತ್ತಿ ಸುಲಭವಾಗಿ ಅದನ್ನು ವಶಪಡಿಸಿಕೊಂಡು, ಅಲ್ಲಿ ತನ್ನ ಠಾಣೆಯನ್ನು ಊರಿ, ತನಗೆ ದೊರೆತ ದಿಗ್ವಿಜಯದ ವಾರ್ತೆಯನ್ನು ದೂತರ ಮೂಲಕ, ತನ್ನೊಡೆಯ ಇಬ್ರಾಹಿಂ ಆದಿಲ್‌ಷಹನಿಗೆ ಕಳುಹಿಸಿದನು.

ಅದೃಷ್ಟವಶಾತ್ ಅಸದ್‌ಖಾನನ ಕೈಗೆ ಸಿಕ್ಕದೆ, ಶಿಬಿರದಿಂದ ತಪ್ಪಿಸಿ

ಕೊಂಡು ವೆಂಕಟಾದ್ರಿಯೂ ರಾತ್ರಿಯೆಲ್ಲಾ ಪ್ರಯಾಣ ಮಾಡಿ, ಅದವಾನಿಗೆ ಅನೇಕ ಮೈಲಿಗಳ ದೂರದಲ್ಲಿದ್ದ ಒಂದು ಗ್ರಾಮವನ್ನು ತಲುಪಿದನು. ಅಲ್ಲಿ ಪ್ರಯಾಣದಿಂದ ಬಳಲಿದ್ದ ಕುದುರೆಗೆ ಮೇವು, ನೀರುಗಳನ್ನು ನೋಡಿಕೊಂಡು ಮತ್ತೆ ಪ್ರಯಾಣ ಬೆಳಸಿ ದಾರಿಯಲ್ಲಿ ಸಿಕ್ಕಿದ ದುರ್ಗವೊಂದರಲ್ಲಿ ಆಶ್ರಯ ಪಡೆದನು. ಅಲ್ಲಿ ನಿಂತು ಮತ್ತೆ ಸೈನ್ಯ ಕೂಡಿಸಿ, ರಾಜಧಾನಿಯಿಂದ ನೆರವು ಪಡೆದು, ಬಂಧನದಲ್ಲಿರುವ ಪತ್ನೀ ಪುತ್ರರನ್ನು ಹೇಗಾದರೂ ಬಿಡಿಸಿಕೊಳ್ಳ ಬೇಕೆಂಬುದೇ ಆತನ ಇಚ್ಛೆಯಾಗಿತ್ತು. ಅವನು ದುರ್ಗದಲ್ಲಿ ಅಡಗಿರುವ ಸಂಗತಿ ಯನ್ನು ಹೇಗೊ ತಿಳಿದ ಸೈನಿಕರು ಒಬ್ಬೊಬ್ಬರಾಗಿ ಬಂದು ಕೂಡಿಕೊಂಡರು. ಅವರಿಂದ ತನ್ನ ಪರಾಭವದ ಕಥೆಯನ್ನು ಕೇಳಿ ವೆಂಕಟಾದ್ರಿಗೆ ಬಹಳ ವ್ಯಥೆಯಾ ಯಿತು. ತನ್ನ ನಂಬಿಕೆಗೆ ಪಾತ್ರರಾಗಿದ್ದ ಇಬ್ಬರು ದಳಪತಿಗಳು ಆಸದ್‌ಖಾನನು ಕೊಟ್ಟ ಹಣದಾಶೆಗೆ ಬಲಿಬಿದ್ದು, ಆ ರಾತ್ರಿ ಅವನಿಗೆ ಗುಪ್ತವಾಗಿ ಶಸ್ತ್ರಾಸ್ತ್ರಗಳ ಕೋಣೆ ವಶವಾಗಲು ಸಹಾಯಮಾಡಿದರೆಂದು ತಿಳಿದಾಗ ಅವನಿಗಾದ ವ್ಯಥೆ ಅಷ್ಟಿಷ್ಟಲ್ಲ. ಅವನಿಗೆ ದ್ರೋಹ ಬಗೆದ ಆ ಇಬ್ಬರು ದಳಪತಿಗಳನ್ನು ಜೀವಂತ ಸುಡಬೇಕೆನ್ನುವಷ್ಟು ಸಿಟ್ಟು ಬಂದಿತು. ಅವನು ಅಸಹಾಯನಾಗಿ ಹಲ್ಲು ಕಡಿದ.

ಈ ವ್ಯಥೆಯಲ್ಲೂ ಒಂದು ಸಮಾಧಾನವೆಂದರೆ, ಆಸದ್‌ಖಾನನು ಕೈಸೆರೆ ಯಾದ ಪತ್ನೀ ಪುತ್ರರನ್ನು ಬಹಳ ಗೌರವದಿಂದ ನೋಡಿಕೊಂಡನೆಂಬ ಸಂಗತಿ.

ವೆಂಕಟಾದ್ರಿಯು ತನ್ನ ಕೈಸೆರೆಯಾಗದೆ ಅವನ ಪತ್ನೀ ಪುತ್ರರನ್ನು ಒಪ್ಪಿಸು ವುದಿಲ್ಲವೆಂದೂ, ವೆಂಕಟಾದ್ರಿಯನ್ನು ಹಿಡಿದು ಕೊಟ್ಟವರಿಗೆ, ಅಧಿಕ ಮೊತ್ತದ ಬಹುಮಾನವನ್ನು ಕೊಡಲಾಗುವುದೆಂದೂ ಆಸದ್‌ಖಾನನು ಘೋಷಿಸಿದನು. ಸಂಗತಿಯನ್ನು ಕೇಳಿ ವೆಂಕಟಾದ್ರಿಯ ಮನಸ್ಸಿಗೆ ತುಂಬಾ ಖೇದವಾಯಿತು. ಅವನಿಗೆ ಏನು ಮಾಡಬೇಕೆಂದು ತೋರಲಿಲ್ಲ. ಸ್ನೇಹಿತರ ಸಲಹೆಯಂತೆ ರಾಮರಾಯನಿಗೆ ನಡೆದ ಸಂಗತಿಯನ್ನು ತಿಳಿಸಿ, ಸಹಾಯ ಸೈನ್ಯ ಕೋರಿ, ಪತ್ರ ಬರೆದನು. ಸೋತು ರಾಜಧಾನಿಗೆ ಹೋಗಿ, ಅಣ್ಣನಿಗೆ ಮುಖ ತೋರಿಸಲು ಅವನಿಗೆ ನಾಚಿಕೆಯಾಗಿತ್ತು. ಸೋತುದಲ್ಲದೆ, ಪತ್ನೀ ಪುತ್ರರನ್ನು ಶತ್ರುಗಳ ಪಾಲು ಮಾಡಿ, ಹೇಡಿಯಂತೆ ತಲೆತಪ್ಪಿಸಿಕೊಂಡಿದ್ದ ಅವನಿಗೆ ಯಾರಿಗೆ ಮುಖ ತೋರಿಸಲೂ ಹೀನಾಯವಾಗಿತ್ತು. ಅವನು ರಾಜಧಾನಿಗೆ ಪತ್ರ ಬರೆದು – ಅದಕ್ಕೆ ಬರುವ ಉತ್ತರವನ್ನೇ ಚಾತಕ ಪಕ್ಷಿಯಂತೆ ಎದುರು ನೋಡುತ್ತಾ ಕುಳಿ ತನು. ಅವನ ಬಾಳಿನ ಈ ಕತ್ತಲೆಯಲ್ಲಿ ರಾಮರಾಯನ ಸಲಹೆ ಸಹಾಯಗಳು ಅಮೂಲ್ಯವಾಗಿದ್ದುವು.

ಈ ಪತ್ರವನ್ನು ಹೊತ್ತ ಸೇವಕ ವಿಜಯನಗರಕ್ಕೆ ಬಂದು, ಅಳಿಯ ರಾಮ

ರಾಯನನ್ನು ಕಂಡು, ಪತ್ರವನ್ನು ಒಪ್ಪಿಸಿ, ನಡೆದ ಎಲ್ಲ ಸಂಗತಿಯನ್ನೂ ನಿವೇದಿಸಿದನು.

ಇದನ್ನು ಕೇಳಿ ರಾಮರಾಯನಿಗೆ ಬಹಳ ಕೆಡುಕೆನಿಸಿತು. ಅವನು ಬಯಸಿದುದು ಒಂದು. ಆದುದು ಮತ್ತೊಂದು. ತನ್ನ ಆಳ್ವಿಕೆಯ ಪ್ರಥಮ ಹೆಜ್ಜೆಯಲ್ಲೇ ಇಂತಹ ಭಾರಿ ಸೋಲಾದೀತೆಂದು ಅವನು ತಿಳಿದಿರಲಿಲ್ಲ. ವಿಜಯನಗರದ ಅಗಾಧ ಸೈನ್ಯ, ಆದರ ಸಂಪತ್ತು ಶತ್ರುಗಳ ಪಾಲಾಗಿದ್ದುದಲ್ಲದೆ, ವೆಂಕಟಾದ್ರಿಯ ಪತ್ನೀಪುತ್ರರು ಶತ್ರುಗಳಿಗೆ ಸೆರೆ ಸಿಕ್ಕಿದ್ದರು. ಈಗ ಪ್ರಸಂಗ ಬಹಳ ಜಟಿಲವಾಗಿತ್ತು. ಯುದ್ಧದಿಂದ ಶತ್ರುಗಳನ್ನು ಗೆಲ್ಲಬಹುದಿತ್ತೇ ಹೊರತು, ವೆಂಕಟಾದ್ರಿಯ ಪತ್ನೀಪುತ್ರರನ್ನು ವಶಪಡಿಸಿಕೊಳ್ಳಲು ಸಾಧ್ಯವಿರಲಿಲ್ಲ. ಹೇಗಾದರೂ ಮಾಡಿ, ಅಸದ್‌ಖಾನನ ಮನವೊಲಿಸಿಕೊಂಡು, ತಮ್ಮ ಕಾರ್ಯ ಸಾಧಿಸುವುದೇ ಸೂಕ್ತವಾದ ದಾರಿಯಾಗಿತ್ತು. ಆದರಂತೆ ರಾಮರಾಯನು ಮುಕುಂದ ನಾಯಕನ ನೇತೃತ್ವದಲ್ಲಿ ದೊಡ್ಡದೊಂದು ಸೈನ್ಯವನ್ನು ಕಳುಹಿಸಿಕೊಟ್ಟು ಮುಕುಂದನಾಯಕನಿಗೆ ವೆಂಕಟಾದ್ರಿಯು ದುಡುಕದಂತೆ, ಬುದ್ಧಿ ಹೇಳಲು ಎಚ್ಚರಿಕೆಯ ಮಾತು ಹೇಳಿದ್ದ.

ಮುಕುಂದನಾಯಕನು ತನ್ನ ಸೈನ್ಯವನ್ನು ನಡಸಿಕೊಂಡು, ಶೀಘ್ರವಾಗಿ ಪ್ರಯಾಣ ಮಾಡಿ – ವೆಂಕಟಾದ್ರಿ ಇದ್ದ ದುರ್ಗಕ್ಕೆ ಬಂದು ಸೇರಿದನು. ಅವನು ವೆಂಕಟಾದ್ರಿಯನ್ನು ಅಂತರಂಗದಲ್ಲಿ ಕಂಡು, ರಾಮರಾಯನು ಕೊಟ್ಟಿದ್ದ ಪತ್ರವನ್ನು ಕೊಟ್ಟನು.

ಆ ಪತ್ರದಲ್ಲಿ ಹೀಗಿತ್ತು :

ಪ್ರಿಯ ಸಹೋದರ ವೆಂಕಟಾದ್ರಿಗೆ,

ನೀನು ಕಳುಹಿಸಿಕೊಟ್ಟ ಪತ್ರ ಸಕಾಲದಲ್ಲಿ ಮುಟ್ಟಿತು. ಹೀಗಾದೀತೆಂದು ನಾನು ಕನಸಿನಲ್ಲಿಯೂ ತಿಳಿದಿರಲಿಲ್ಲ. ಎಲ್ಲವೂ ದೈವಚಿತ್ತ. ನಮ್ಮವರೇ, ನಮ್ಮ ಉಪ್ಪುಂಡವರೇ ನಮಗೆ ದ್ರೋಹ ಬಗೆದ ಮೇಲೆ ನಾವು ಯಾರನ್ನು ಆಕ್ಷೇಪಿಸುವುದು ? ಪಂಪಾಪತಿಯ ಅನುಗ್ರಹ ನಮ್ಮ ಮೇಲೆ ಕಡಿಮೆಯಾದಂತಿದೆ. ಅದನ್ನು ಚಿಂತಿಸಿ ಫಲವಿಲ್ಲ. ಶತ್ರುಗಳ ವಶದಲ್ಲಿರುವ ನಮ್ಮವರನ್ನು ಬಿಡಿಸಿಕೊಳ್ಳುವ ದಾರಿಯನ್ನು ಮೊದಲು ಹುಡುಕಬೇಕು. ಅದು ಅತ್ಯಂತ ಸೂಕ್ಷ್ಮವೂ, ಗಹನವೂ, ಆದ ಸಂಗತಿ. ಇದನ್ನು ಬಲಪ್ರಯೋಗದಿಂದ ಸಾಧಿಸಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಶತ್ರುಗಳಿಗೆ ನಮ್ಮ ಗುಟ್ಟೆಲ್ಲಾ ತಿಳಿದಿದೆ. ಇಂತಹ ಪರಿಸ್ಥಿತಿಯಲ್ಲಿ ಯುದ್ಧದಿಂದ ವೃಥಾ ಹಾನಿಯಲ್ಲದೆ, ಕಾರ್ಯ ಸಿದ್ಧಿಸುವುದಿಲ್ಲವೆಂದು ನನ್ನ ಅಭಿಪ್ರಾಯ. ಎಲ್ಲವನ್ನೂ ಶಾಂತಚಿತ್ತದಿಂದ ಆಲೋಚಿಸಿ,

ಕಾರ್ಯಪ್ರವರ್ತನಾಗು. ನಾನು ಮುಕುಂದನಾಯಕನೊಡನೆ ನನಗೆ ಸಾಕಷ್ಟು ಸೈನ್ಯ ಕಳುಹಿಸಿದ್ದೇನೆ. ಅಲ್ಲದೆ ಈ ಪ್ರಸಂಗದಲ್ಲಿ ಬೇಕಾದೀತೆಂದು ಐವತ್ತು ಲಕ್ಷ ಪಗೋಡಗಳನ್ನು ಕಳುಹಿಸಿದ್ದೇನೆ....ಈಗ ಹಣದಿಂದ ನಾವು ಕಾರ್ಯ ಸಾಧಿಸಬೇಕಾಗಿದೆ.

ಶತ್ರುಗಳ ಕಡೆಯ ಅಸದ್‌ಖಾನನು ಮಹಾ ಕುಟಿಲಗಾರ, ಅವನನ್ನು ಮೋಸಗೊಳಿಸಲು ಸಾಧ್ಯವಿಲ್ಲ. ನೀನು ಮುಕುಂದನಾಯಕನ ಮೂಲಕ, ಅಸದ್‌ಖಾನನನ್ನು ಹಣ ಪ್ರಲೋಭಕ್ಕೆ ಒಡ್ಡಿ ನಿನ್ನ ಪತ್ನೀಪುತ್ರರ ಬಿಡುಗಡೆಯ ದಾರಿ ಹುಡುಕು. ಈ ವಿಷಯದಲ್ಲಿ ಇತರರನ್ನು ನಂಬಬೇಡ. ನಮ್ಮ ಸುತ್ತಲೂ ವಿಶ್ವಾಸಘಾತುಕರು ಅನೇಕರಿರುವರೆಂದು ಪ್ರಥಮಬಾರಿಗೆ ಅರಿವಾಗಿದೆ. ಈಗ ಹಣ ಮುಖ್ಯವಲ್ಲ. ಸಾಮ್ರಾಜ್ಯದ ಮರ್ಯಾದೆ ಗೌರವಗಳು ಮುಖ್ಯವಾಗಿದೆ. ನಮ್ಮದು ಬರಿಯ ಮಾತಿನ ಬಡಾಯಿ ಅಲ್ಲವೆಂದು ಅದಿಲ್‌ಷಹನಿಗೆ ತೋರಿಸಿ ಕೊಡಬೇಕಾಗಿದೆ. ಈಗ ಅಸದ್‌ಖಾನನೊಡನೆ ನಡಸುವ ಸಂಧಾನದ ಮೇಲೆ ನಮ್ಮ ಹಾಗೂ ಸಾಮ್ರಾಜ್ಯದ ಘನತೆ ಗೌರವಗಳು ನಿಂತಿವೆ. ಇಲ್ಲಿ ಆತ್ಮ ಗೌರವದ ಪ್ರಶ್ನೆ ಅಡಗಿದೆ. ಹಣವೆಷ್ಟು ವೆಚ್ಚವಾದರೂ ಚಿಂತೆಯಿಲ್ಲ. ಬುದ್ಧಿವಂತನೂ, ಚತುರನೂ ಸಾಮ್ರಾಜ್ಯನಿಷ್ಠ ಸೇವಕನೂ, ಆದ ಮುಕುಂದನಾಯಕನ ಸಲಹೆಯಂತೆ, ಈ ಪರಿಸ್ಥಿತಿಯಲ್ಲಿ ಯಾವುದು ಸೂಕ್ತವೋ ಆ ದಾರಿಯಲ್ಲಿ ನಡೆದುಕೊಳ್ಳುವುದು.

ನಿನ್ನ ಕಾರ್ಯ ಯಶಸ್ವಿಯಾಗಲಿ. ಪಂಪಾಪತಿಯ ಅನುಗ್ರಹ ನಿನ್ನ ಮೇಲಿರಲಿ.

ಇಂತು ನಿನ್ನ ಪ್ರೀತಿಯ ಸೋದರ,
ರಾಮರಾಯ.

ಈ ಪತ್ರವನ್ನು ಓದಿಕೊಂಡು ಯಾಕೋ ವೆಂಕಟಾದ್ರಿಯ ಕಣ್ಣಲ್ಲಿ ನೀರೂರಿತು. ರಾಮರಾಯನಿಗೆ ತನ್ನ ಬಗ್ಗೆ ಹೃದಯಾಂತರಾಳದಲ್ಲಿ ಎಷ್ಟು ಪ್ರೀತಿಯಿದೆ ಎಂಬುದು ಪ್ರಥಮಬಾರಿಗೆ ವ್ಯಕ್ತವಾಗಿತ್ತು. ರಾಮರಾಯನು ಸಾಮಾನ್ಯವಾಗಿ ಯಾರೊಂದಿಗೂ, ಹೃದಯ ಬಿಚ್ಚಿ ಮಾತನಾಡುವ ವ್ಯಕ್ತಿಯಲ್ಲ. ಅವನಲ್ಲಿನ ಶ್ರೀಮದ್ಗಾಂಭೀರ್ಯ ಅದಕ್ಕೆ ಅಡ್ಡ ಬರುತ್ತಿತ್ತು – ಅವನದು ಆಜಾನುಬಾಹುವಾದ ದೇಹ, ಗಂಭೀರವಾದ ಮುಖ – ವಯಸ್ಸಿನಲ್ಲಿ ಹಿರಿಯನಾದ ಅವನೊಡನೆ ವೆಂಕಟಾದ್ರಿಯಾಗಲೀ ತಿರುಮಲನಾಗಲೀ ಸಲಿಗೆಯಿಂದಿರುತ್ತಿರಲಿಲ್ಲ. ಅವನ ಹೃದಯಾಂತರಾಳದಲ್ಲಿ ತಮ್ಮ ಬಗ್ಗೆ ಹಾಗೂ ಸಾಮ್ರಾಜ್ಯದ ಬಗ್ಗೆ ಎಂತಹ ಭಾವನೆಗಳಿವೆ ಎಂಬುದು ಅವನಿಗೆ ತಿಳಿದಿರಲಿಲ್ಲ. ಅದನ್ನು ಆ ಪತ್ರ

ಬಯಲು ಮಾಡಿತ್ತು. ವೆಂಕಟಾದ್ರಿಯು ಎಲ್ಲಿ ರಾಮರಾಯನು ತನ್ನನ್ನು ಮೂದಲಿಸುವನೋ, ಹೇಡಿ ಎಂದು ಅವಹೇಳನ ಮಾಡುವನೋ ಎಂದು ಹೆದರಿದ್ದ. ಆದರೆ ಈ ಪತ್ರದಲ್ಲಿ ಅವನನ್ನು ಟೀಕಿಸುವ, ಇಲ್ಲವೇ ಅವಹೇಳನ ಮಾಡುವ ಯಾವ ಮಾತೂ ಇರಲಿಲ್ಲ. ಅವನ ವರ್ತನೆಯನ್ನು ವಿಮರ್ಶಿಸುವ ಗೋಜಿಗೆ ಹೋಗದೆ ಅವನ ಪರಿಸ್ಥಿತಿಯಿಂದ ಪಾರಾಗುವ ದಾರಿಯನ್ನು ತೋರಿಸಿದ್ದ. ರಾಮರಾಯನ ವಿಶಾಲಾಂತಃಕರಣ ವೆಂಕಟಾದ್ರಿಯ ಕಣ್ಣಿನಲ್ಲಿ ಕೃತಜ್ಞತೆಯ ಬಾಷ್ಪವನ್ನುಂಟುಮಾಡಿತ್ತು.

"ಮುಕುಂದನಾಯಕರೇ ಈಗೇನು ಮಾಡುವುದು? ಈ ಸಂದಿಗ್ಧ ಪರಿಸ್ಥಿತಿಯಿಂದ ಪಾರಾಗುವ ದಾರಿ ಹೊಳೆಯುತ್ತಿಲ್ಲ. ನೀವೇ ನನಗೆ ಬೆಳಕು ತೋರಿಸಬೇಕು." ಎಂದು ಹೇಳಿದ ವೆಂಕಟಾದ್ರಿ.

"ನಾವು ಪ್ರಭುಗಳ ನಲಹೆಯಂತೆ ನಡೆಯುವುದೇ ಸದ್ಯದ ಪರಿಸ್ಥಿತಿಯಲ್ಲಿ ಪರಮೋತ್ಕೃಷ್ಟ ದಾರಿ ಎಂದು ನನ್ನ ಭಾವನೆ." ಮುಕುಂದನಾಯಕ ಮೆಲ್ಲಗೆ ಹೇಳಿದ.

"ನನ್ನ ಆಶಯವೂ ಶಕ್ತಿಪ್ರದರ್ಶನಕ್ಕಿಂತಲೂ ಸಂಧಾನದ ಮೂಲಕ ಕಾರ್ಯ ಸಾಧಿಸಿಕೊಳ್ಳಬೇಕೆಂದಿದೆ."

"ಈ ಕಾರ್ಯಕ್ಕೆ ನೀವಲ್ಲದೆ ಅನ್ಯರು ಸಮರ್ಥರಲ್ಲ. ಇದು ನಿಮ್ಮಿಂದ ಮಾತ್ರವೇ ಸಾಧ್ಯ."

"ನಿಮ್ಮ ಪ್ರೀತಿ ವಿಶ್ವಾಸಗಳಿಗೆ ನಾನು ಕೃತಜ್ಞನಾಗಿದ್ದೇನೆ. ನಾನೊಂದು ಹುಲ್ಲುಕಡ್ಡಿಯಂತೆ ಬಿದ್ದಿದ್ದೆ. ನನ್ನನ್ನೆತ್ತಿ ಆದರಿಸಿ, ಪ್ರೀತಿಯ ಮಳೆ ಕರೆದು, ಖಡ್ಗವಾಗಿ ರೂಪಿಸಿದವರು ನಾಮ್ರಾಟರು. ಈ ನನ್ನ ಬಾಳ ಖಡ್ಗ ಎಂದಿದ್ದರೂ ಸಾಮ್ರಾಜ್ಯಕ್ಕೇ ಮೀಸಲು. ನಾನು ಈ ಮಹತ್ತರ ಕಾರ್ಯಕ್ಕೆ ಎಷ್ಟರ ಮಟ್ಟಿಗೆ ಅರ್ಹನೆಂದು ನನಗೆ ತಿಳಿಯದು. ಆದರೂ ಪ್ರಯತ್ನಿಸುತ್ತೇನೆ" ಎಂದು ಹೇಳಿ ಅಂದೇ ಈ ರಾಯಭಾರ ಸಾಧಿಸಿಕೊಂಡು ಬರಲು, ಸೂಕ್ತ ಪರಿವಾರದೊಡನೆ ಆದವಾನಿಗೆ ಹೊರಟ ಮುಕುಂದನಾಯಕ.

ಮುಕುಂದನಾಯಕನ ರಾಯಭಾರ ಯಶಸ್ವಿಯಾಯಿತು.

ಮುಕುಂದನಾಯಕನು ಅಸದ್‌ಖಾನನಿಗೆ ಹಣದ ಪ್ರಲೋಭನವೊಡ್ಡಿ ಅವನ ಮನವೊಲಿಸಿಕೊಂಡು ತನ್ನ ಕೆಲಸವನ್ನು ಸಾಧಿಸಿಕೊಂಡನು.

ಎರಡು ರಾಷ್ಟ್ರಗಳಿಗೂ ಗೌರವವಾದ ಒಪ್ಪಂದವೇರ್ಪಟ್ಟಿತ್ತು. ಬಿಜಾಪುರದ ಸುಲ್ತಾನನು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಂಡನು. ಬಂಧನದಲ್ಲಿ ಇದ್ದ ಎಲ್ಲ ಸೆರೆಯಾಳುಗಳನ್ನೂ, ರಾಜಕುಟುಂಬದವರನ್ನೂ ಯಾವ

ಷರತ್ತಿಲ್ಲದೆ ಬಿಡುಗಡೆ ಮಾಡಿದನು. ಅದವಾನಿಯಿಂದ ಅಸದ್ ಖಾನನ ಸೈನ್ಯ ಹಿಮ್ಮೆಟ್ಟಿತು. ಇದಕ್ಕೆ ಪ್ರತಿಯಾಗಿ ಯುದ್ಧದಲ್ಲಿ ಬಿಜಾಪುರದ ಸುಲ್ತಾನನಿಗೆ ದೊರೆತ ಸೂರೆ ಅವನಿಗೇ ಸೇರಿತು. ಎರಡು ರಾಷ್ಟ್ರಗಳಿಗೆ ತಾತ್ಕಾಲಿಕ ಸ್ನೇಹ ಸೌಹಾರ್ದಗಳು ಎರವಾದುವು. ಇಷ್ಟೆಲ್ಲಾ ಸಾಧಿಸಲು ವಿಜಯನಗರದವರು ತೆತ್ತ ಬೆಲೆ ಅಲ್ಪವಲ್ಲ. ಯುದ್ಧದಲ್ಲಿ ಸೋತ ಅಪಾರ ಸೂರೆಯನ್ನ ಬಿಟ್ಟುಕೊಟ್ಟದಲ್ಲದೆ, ಮುಕುಂದನಾಯಕನು ತಂದಿದ್ದ ಐದು ಲಕ್ಷ ದುರ್ಗಿ ವರಹಗಳು ಅಸದ್ ಖಾನನ ಕೈಸೇರಿತು. ರಾಜಕುಟುಂಬದವರು ಸುರಕ್ಷಿತವಾಗಿ ಹಿಂದಿರುಗಿ ಬಂದರು. ಇಂತಹ ಘನತರ ಒಪ್ಪಂದವನ್ನು ಸಾಧಿಸಿದ ಮುಕುಂದನಾಯಕನ ತೂಕ ರಾಮರಾಯನ ದೃಷ್ಟಿಯಲ್ಲಿ ಅಧಿಕವಾಯಿತು.

## ೫

ರಾಮರಾಯ ಹೆಸರಿಗೆ ರಾಜಪ್ರತಿನಿಧಿಯಾಗಿದ್ದರೂ ವಾಸ್ತವವಾಗಿ ಅವನು ವಿಜಯನಗರದ ಸಾಮ್ರಾಟನೇ ಆಗಿದ್ದನು. ಸಿಂಹಾಸನದಲ್ಲಿ ಕುಳಿತಿದ್ದ ಸಾಮ್ರಾಟ ಸದಾಶಿವರಾಯನಿಗೆ ಇಲ್ಲದ ಘನತೆ ಗೌರವಗಳು ಅವನವಾಗಿದ್ದುವು. ಜನ ರಾಮರಾಯನನ್ನೇ ವಿಜಯನಗರದ ಸಾಮ್ರಾಟನೆಂದು ತಿಳಿಯುವ ಮಟ್ಟಿಗೆ ಅವನ ಹೆಗ್ಗಳಿಕೆ ಇತ್ತು. ಸದಾಶಿವರಾಯನೂ ರಾಮರಾಯನನ್ನು ರಾಜಭೂವರರೆಂದು ಕರೆಯುತ್ತಿದ್ದನು. ಸಾಮಂತ ಮಂಡಲೀಕರೂ ಅವನನ್ನು ಪ್ರಭುವೆಂದೇ ಸಂಬೋಧಿಸುತ್ತಿದ್ದರು. ಒಂದು ಮಾತಿನಲ್ಲಿ ಹೇಳುವುದಾದರೆ ರಾಮರಾಯನು ವಿಜಯನಗರದ ಅನಭಿಷಿಕ್ತ ಸಾಮ್ರಾಟನೇ ಆಗಿದ್ದನು.

ಅವನು ವಾಸವಾಗಿದ್ದುದು ರಾಜಯೋಗ್ಯವಾದ ರತ್ನಕೂಟ ಅರಮನೆಯಲ್ಲಿ. ಹಿಂದಣ ಸಾಮ್ರಾಟರ ಅರಮನೆ ಭುವನವಿಜಯವು ತನ್ನ ಘನತೆ ಗೌರವಗಳಿಗೆ ಸಾಲದಾಯಿತೇನೋ ಅಂತಲೇ ತನಗೆಂದೇ ಬೇರೊಂದು ಅರಮನೆಯನ್ನು ಕಟ್ಟಿಸಿಕೊಂಡಿದ್ದನು. ಇದನ್ನು ರಾಮರಾಯನ ನೆಚ್ಚಿನ ಮಿತ್ರನೂ, ಅಮಾತ್ಯನೂ ಆಗಿದ್ದ ರಾಮಾತ್ಯನೆಂಬ ಶಿಲ್ಪಿಯು ರಾಮರಾಯನ ರಸಿಕತೆ, ಸೌಂದರ್ಯಾಭಿರುಚಿ, ಶೃಂಗಾರ ವೈಭವಗಳಿಗೆ ತಕ್ಕಂತೆ ಕಟ್ಟಿಸಿಕೊಟ್ಟಿದ್ದನು. ಇದು ದೇವೇಂದ್ರನ ಅರಮನೆಗಿಂತಲೂ ವೈಭವವಾಗಿತ್ತು. ಅರಮನೆಯ ಸುತ್ತಲೂ ಉದ್ಯಾನವನಗಳೂ, ಲತಾಮಂಟಪಗಳೂ ಅನೇಕ ಪುಷ್ಕರಣಿಗಳೂ ಇದ್ದುವು. ಅಲ್ಲದೆ ಚಂದ್ರಕಾಂತ ಶಿಲೆಯ ಮಂಟಪಗಳೂ ಅಮೃತ ಶಿಲೆಯ ವಿಗ್ರಹಗಳೂ ಬಗೆ ಬಗೆಯ ರಮ್ಯ, ಸುಗಂಧ ಪೂರಿತ ಪುಷ್ಪಗಳಿಂದ ಸದಾ ಘಮಘಮಿಸುವ ಉಪವನ

ಗಳೂ ಹೇರಳವಾಗಿದ್ದುವು. ನೀರಿನ ಕೊಳಗಳನ್ನು ಪಚ್ಚೆ, ಕೆಂಪುಗಳಿಂದ ಕಟ್ಟ ಲಾಗಿತ್ತು. ತಿಳಿನೀರಿನ ಮೂಲಕ ಹಾಯುತ್ತಿದ್ದ ಸೂರ್ಯರಶ್ಮಿಯಿಂದ ಅವು ಥಳ ಥಳಿಸಿ ನೀರಿಗೂ ತಮ್ಮ ಬಣ್ಣವನ್ನು ಚೆಲ್ಲುತ್ತಿದ್ದುವು. ಇದರಿಂದಾಗಿ ಒಂದೇ ಕೊಳದ ನೀರು ಹಲವು ವರ್ಣಗಳಿಂದ ತೋರಿ ಕಣ್ಣಿಗೆ ಹಬ್ಬವನ್ನುಂಟುಮಾಡು ತಿತ್ತು. ಈ ಶೀತಕೊಳಗಳಲ್ಲಿ ಕೆಂದಾವರೆಗಳೂ, ಕನ್ನೈದಿಲೆಗಳೂ, ಅನೇಕ ರಾಜಹಂಸಗಳೂ ಇದ್ದು ರಸಿಕರ ಮನಸನ್ನು ತಣಿಸುತ್ತಿದ್ದುವು. ಇಲ್ಲಿನ ಮಲ್ಲಿಕಾ ಮಂಟಪಗಳು ಎಲ್ಲ ಕಾಲದಲ್ಲಿಯೂ ಹೂಗಳಿಂದ ತುಂಬಿರುತ್ತಿದ್ದುವು. ಅವು ಪ್ರಣಯಿಗಳು, ರಸಿಕ ದಂಪತಿಗಳು ಮೃದುಸ್ಪರ್ಶಕ್ಕಾಗಿ ಹಾತೊರೆಯುವಂತೆ ಹೂವಿನ ಹಾಸಿಗೆಯನ್ನು ಸಿದ್ಧಪಡಿಸಿಟ್ಟುಕೊಂಡು ಕಾದಿದ್ದುವು

ರತ್ನಕೂಟದ ಅರಮನೆಯು ಹೆಸರಿಗೆ ತಕ್ಕಂತೆ ರತ್ನಕೂಟವೇ ಆಗಿತ್ತು. ಅದು ರಾಮರಾಯನ ರಸಿಕತೆ, ಸೌಂದರ್ಯಾಭಿರುಚಿಗಳಿಗೆ ಸಾಕ್ಷಿಯಾಗಿತ್ತು. ಅಲ್ಲಿ ದೇಶವಿದೇಶಗಳಿಂದ ಕರಸಿದ್ದ ಶಿಲ್ಪಿಗಳು, ರೂವಾರಿಗಳು ತಮ್ಮ ಶಿಲ್ಪ ಕೌಶಲ್ಯಗಳನ್ನು ಎರಕಹೊಯ್ದಿದ್ದರು. ಅರಮನೆಯ ಒಂದೊಂದು ಭಾಗವೂ ಸ್ವರ್ಗಲೋಕದ ವೈಭವನ್ನು ಭೂಮಿಗೆ ತಂದಿದ್ದುವು. ರಾಮರಾಯನು ವೃದ್ಧಾಪ್ಯವನ್ನು ಸಮೀಪಿಸಿದ್ದರೂ ವ್ಯವಸ್ಥಿತವಾದ ಅಂಗಸಾಧನೆ, ಆಹಾರ ನಿಯಮಗ ಳಿಂದ ಅವನು ಇನ್ನೂ ಮೂವತ್ತರ ಯುವಕನಂತೆಯೇ ಕಾಣಬರುತ್ತಿದ್ದನು. ಅವನ ತಲೆಯ ನರೆ ಕೂದಲು ಅವನ ವಯಸ್ಸು ಅರುವತ್ತು ತುಂಬಿವೆ ಎಂದು ಹೇಳುತ್ತಿದ್ದರೂ, ಸುಕ್ಕಿಲ್ಲದ ತೇಜಸ್ವಿಯಾದ ಆ ಮುಖ, ವಿಶಾಲವಾದ ಎದೆ, ನೀಳವಾದ ತೋಳುಗಳು, ಗಂಭೀರವಾದ ನಡಿಗೆ ಇವುಗಳು ಅವನಿನ್ನೂ ಹರೆಯದ ಯುವಕನೆಂದು ಹೇಳುತ್ತಿದ್ದುವು. ಅವನ ಅಮಿತೋತ್ಸಾಹ, ಇಂದ್ರಿಗಳಪಟುತ್ವ, ರಸಿಕತೆಗಳು ಇಪ್ಪತ್ತರನ್ನು ನಾಚಿಸುತ್ತಿತ್ತು. ವಯಸ್ಸಾದಂತೆ ಅವನಲ್ಲಿ ಜೀವನೋತ್ಸಾಹ ಅಧಿಕವಾಗುತ್ತಾ ನಡೆದಿತ್ತು. ಅವನಿಗೆ ಈ ವಯಸ್ಸಿನಲ್ಲೂ ವಿಷಯ ಸುಖಗಳಲ್ಲಿ ಆಸಕ್ತಿ ಇತ್ತು. ವಿಲಾಸಭೋಗಗಳು ಪ್ರಿಯವಾಗಿದ್ದುವು. ಸಾಹಿತ್ಯ ಸಂಗೀತಗಳಲ್ಲಂತೂ ಅವನಿಗೆ ಬಹಳ ಅಭಿಮಾನವಿತ್ತು. ಅವನಿಗೇ ಹಲವು ಲಲಿತ ಕಲೆಗಳಲ್ಲಿ ಪಾಂಡಿತ್ಯವಿತ್ತು. ಅವನು ಸೊಗಸಾಗಿ ವೀಣೆಯನ್ನು ನುಡಿಸಬಲ್ಲವನಾಗಿದ್ದನು. ಅವನೇ ತಾನಾಗಿ ನುಡಿಯುವ ಒಂದು ತಂತ್ರೀ ವಾದ್ಯವನ್ನು ರಚಿಸಿದ್ದನು. ಇವನ ಸಂಗೀತ ಜ್ಞಾನ, ಸಾಹಿತ್ಯದಲ್ಲಿದ್ದ ಅಭಿರುಚಿ, ಶಿಲ್ಪಕಲೆಯಲ್ಲಿದ್ದ ಆದರ ಅಭಿಮಾನಗಳು ಹಲವು ದೇಶಗಳ ಕಲಾವಿದರನ್ನು ಇವನ ಬಳಿಗೆ ಸೆಳೆತಂದಿದ್ದುವು. ಇವನ ಆಸ್ಥಾನ ಕಲಾವಿದರ ಆಶ್ರಯತಾಣವಾಗಿತ್ತು. ಇಷ್ಟು ಮಾತ್ರವಲ್ಲ, ಪಂಡಿತರ ನೆಲಮನೆಯಾಗಿತ್ತು. ರಾಮರಾಯನಿಗೆ ಸಾಹಿತ್ಯ

ಸಂಗೀತಗಳಲ್ಲಿ ಆಸಕ್ತಿ ಇದ್ದಂತೆ, ತತ್ವಶಾಸ್ತ್ರದಲ್ಲೂ ವೇದಾಂತ ಗ್ರಂಥಗಳನ್ನು ಪಠಿಸುವುದರಲ್ಲೂ ತಾತ್ವಿಕ ಚರ್ಚೆ, ಗೋಷ್ಠಿಗಳಲ್ಲೂ ಬಹಳ ಆಸಕ್ತಿ ಇತ್ತು. ಅವನಿಗೆ ಶ್ರೀವೈಷ್ಣವ ಪಂಥದ ತಿರುಮಲೆ ಶ್ರೀ ತಾತಾಚಾರ್ಯರು ಮಿತ್ರರೂ, ಗುರುಗಳೂ ಆಗಿದ್ದರು. ಅವರೊಡನೆ ರಾಮರಾಯನು ಆಗಾಗ್ಗೆ ಚಂದ್ರಗಿರಿಯ ಪ್ರಶಾಂತ ಅರಮನೆಯಲ್ಲಿ ನಿಂತು ಅನೇಕ ಶಾಸ್ತ್ರಗ್ರಂಥಗಳನ್ನು ಆಸೆಯಿಂದ ಪಠಿಸುತ್ತಿದ್ದನು. ಧರ್ಮ ಗ್ರಂಥಗಳನ್ನು, ವೇದಾಂತ ವಿಚಾರಗಳನ್ನು ಅವರೊಡನೆ ಚರ್ಚಿಸಿ ತನ್ನ ಜ್ಞಾನಪಿಪಾಸೆಯನ್ನು ತಣಿಸಿಕೊಳ್ಳುತ್ತಿದ್ದನು.

ರಾಮರಾಯನಿಗೆ ತಿರುಮಲಾದೇವಿ, ಅಪ್ಪಲಾಂಬ, ಕೊಂಡಮ್ಮ ಮತ್ತು ಲಕ್ಷಮ್ಮ ಎಂಬ ನಾಲ್ಕುಮಂದಿ ಮುಖ್ಯ ಪತ್ನಿಯರಿದ್ದರು. ಇವರಲ್ಲದೆ ಅವನ ಪ್ರೇಯಸಿಯರು ಅನೇಕರಿದ್ದರು. ಸತ್ಯಭಾಮಾದೇವಿ, ದೇವಚಿಂತಾಮಣಿ, ಮನಮೋಹಿನಿ, ನಿಜಸ್ವರೂಪಿಣಿ, ತಿರುವೆಂಗಳಮ್ಮ, ಸುಭದ್ರೆ, ಮಿತ್ರವೃಂದೆ ಜಾಂಬವಂತೆ, ರಾಧೆ, ಮೋಹಿನಿ, ಚಾಮವರ್ಣೆ ಮುಂತಾದ ಅರುವತ್ತು ನಾಲ್ಕು ಕಲೆಗಳಲ್ಲಿ ನಿಷ್ಣಾತರಾದ ಕಲಾವಿದ ಪ್ರೇಯಸಿಯರಿದ್ದರು. ಇವರಲ್ಲದೆ ಅನೇಕ ಭೋಗಕಾಂತೆಯರೂ, ಗಂಧರ್ವ ಪತ್ನಿಯರೂ, ಬಂಗಾರದವರೂ ಇದ್ದರು. ಇವರ ಸೇವೆಗೆ ನೂರಾರು ಮಂದಿ ಚೇಟಿಯರೂ, ಪರಿವಾರದವರೂ ಇದ್ದರು. ರಾಣಿಯರಿಗೆಲ್ಲಾ ರತ್ನಕೂಟ ಅರಮನೆಯಲ್ಲಿ ಪ್ರತ್ಯೇಕವಾದ ಅಂತಃಪುರಗಳನ್ನು ಏರ್ಪಡಿಸಲಾಗಿತ್ತು.

ರಾಮರಾಯನು ಕುಟುಂಬ ಜೀವನದಲ್ಲೂ ಅದೃಷ್ಟಶಾಲಿ. ಇವನಿಗೆ ತಿರುಮಲಾದೇವಿಯಲ್ಲಿ ಕೃಷ್ಣ ಮತ್ತು ಪೆದ್ದತಿಮ್ಮನೆಂಬ ಇಬ್ಬರು ಮಕ್ಕಳೂ ಅಪ್ಪಲಾಂಬೆಯಲ್ಲಿ ಇಬ್ಬರು ಪುತ್ರರೂ, ಕೊಂಡಮಾಂಬೆಯಲ್ಲಿ ಕೊಂಡ ಮತ್ತು ತಿಮ್ಮ ಎಂಬಿಬ್ಬರು ಪುತ್ರರೂ, ಲಕ್ಷಮ್ಮನಲ್ಲಿ ರಂಗನೆಂಬ ಮಗನೂ ಜನಿಸಿದ್ದರು. ಇವರಲ್ಲದೆ ಅವನಿಗೆ ಇಬ್ಬರು ಪುತ್ರಿಯರೂ ಇದ್ದರು. ಇವರನ್ನು ಜೋಡು ಮಹಾರಾಜ ಮತ್ತು ಭಾಗ್ಯವಂತನೆಂಬ ರಾಜಪುತ್ರರಿಗೆ ವಿವಾಹ ಮಾಡಿಕೊಟ್ಟಿದ್ದನು. ಹೀಗೇ ತುಂಬುಸಂಸಾರ ಜೀವನದಲ್ಲಿ ರಾಮರಾಯನು ತೃಪ್ತಿ ಶಾಂತಿ, ಸಂತೋಷಗಳನ್ನು ಹೊಂದಿದ್ದನು. ಅವನ ಬಾಳು ಜೇನಿನಂತೆ ಮಧುರವಾಗಿತ್ತು. ಅವನಿಗೆ ಜೀವನದಲ್ಲಿ ಯಾವ ಕೊರತೆಯೂ ಇರಲಿಲ್ಲ.

ರಾಮರಾಯನ ದೃಢ ಮೈಕಟ್ಟಿಗೆ, ಯೌವನಕ್ಕೆ, ಜೀವನೋತ್ಸಾಹಕ್ಕೆ ಅವನ ನಿತ್ಯ ದಿನಚರಿಯೇ ಕಾರಣವಾಗಿತ್ತು – ರಾಮರಾಯನು ಪ್ರತಿದಿನವೂ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಿದ್ದನು. ಇದರಿಂದ ತನ್ನ ದೇಹದಲ್ಲಾಗುತ್ತಿದ್ದ ಪ್ರತಿಯೊಂದು ಬದ

ಲಾವಣೆಯೂ ಅವನಿಗೆ ತಿಳಿಯುತ್ತಿದ್ದುದು ಮಾತ್ರವಲ್ಲದೆ, ಕನ್ನಡಿಯನ್ನು ನೋಡುವುದು ಶುಭಸಂಕೇತವೂ ಆಗಿತ್ತು. ಅನಂತರ ಮದುವೆಯಾಗದ ಕನ್ಯೆಯರನ್ನು ಮುಟ್ಟಿ, ಕಪ್ಪು ಹಸುಗಳನ್ನು ಸಂದರ್ಶಿಸಿ, ವಿಪ್ರೋತ್ತಮರ ಪಾದಗಳಿಗೆ ನಮಸ್ಕರಿಸುತ್ತಿದ್ದನು. ಆಮೇಲೆ ಸ್ನಾನಸಂಧ್ಯಾವಂದನೆ. ಜಪತಪ, ಧಾರ್ಮಿಕ ಗ್ರಂಥಗಳ ಪಠಣ ನಡೆಯುತ್ತಿತ್ತು. ಇವು ಮುಗಿದ ಮೇಲೆ ಅವನು ನೂರೆಂಟು ಕ್ಷೇತ್ರಗಳಿಂದ ಆಗಮಿಸಿದ್ದ ತೀರ್ಥಪ್ರಸಾದಗಳನ್ನೂ, ವಿಭೂತಿ, ಚಂದನ, ಶ್ರೀಗಂಧಗಳನ್ನೂ, ಹರಕೆ ಆಶೀರ್ವಾದಗಳನ್ನೂ ಸ್ವೀಕರಿಸುತ್ತಿದ್ದನು. ಈ ಸಮಯದಲ್ಲಿ ಅವನು ಬ್ರಾಹ್ಮಣರಿಂದ ದೇಶದ ಎಲ್ಲ ದೇವಾಲಯಗಳ ಸ್ಥಿತಿಗತಿಗಳನ್ನೂ ಗೋಬ್ರಾಹ್ಮಣರ ಯೋಗಕ್ಷೇಮವನ್ನೂ, ಪ್ರಜೆಗಳ ಸುಖ ದುಃಖಗಳನ್ನೂ ವಿಚಾರಿಸಿಕೊಳ್ಳುತ್ತಿದ್ದನು.

ಅನಂತರ ಕುದುರೆ ಸವಾರಿ, ಕತ್ತಿವರಸೆ, ಮಲ್ಲಯುದ್ಧ, ಮುಂತಾದ ವೀರೋಚಿತವಾದ ಶಕ್ತಿವರ್ಧಕ ಅಂಗ ಸಾಧನೆಗಳು. ಇವುಗಳು ಮುಗಿದ ಮೇಲೆ ಸ್ನಾನಮಾಡಿ, ಶುಭ್ರ ವಸನ ಧರಿಸಿ, ಲಘುಫಲಹಾರವನ್ನು ಸ್ವೀಕರಿ ೂಂಡ ಲೌಕಿಕ ಗ್ರಂಥಗಳನ್ನು ಪಠಿಸುವುದರಲ್ಲೂ, ರಾಜಕೀಯ ಸಂಗತಿಗಳನು ಯುವುದರಲ್ಲೂ, ಆಡಳಿತ ಸಂಗತಿಗಳನ್ನು ಚರ್ಚಿಸುವುದರಲ್ಲೂ, ಮಾ' ವಾಣಿಜ್ಯ ನಾಯಕ, ಬೇಹುಗಾರರೊಡನೆ ಸಮಾಲೋಚನೆಯಲ್ಲಿ ಕಳೆಯ ನು ದಕ್ಷಿಣಾ ನಾಡಿನ ಜಲದುರ್ಗ, ವನದುರ್ಗ, ಸ್ಥಲದುರ್ಗಗಳ ಸ್ಥಿತಿಯನ್ನೂ, ಕಟ್ಟಿದ್ದನು. ಕಷ್ಟಸುಖಗಳನ್ನೂ ವಿಚಾರಿಸಿಕೊಳ್ಳುತ್ತಿದ್ದನು. ದಂಡನಾಯಕರು, ಚಾರರು, ತಿರುಗುವ ಜಂಗಮಯ್ಯ, ಜೋಗಿ, ಸಂಪ್ರತಿ, ತಾಳಾರಿ, ಮುಂತಾದವರು ಸಾಮ್ರಾಜ್ಯದ ಎಲ್ಲ ಭಾಗಗಳ ಸ್ಥಿತಿಗತಿಗಳನ್ನು ವಿವರಿಸುತ್ತಿದ್ದರು. ಸಾಮ್ರಾಜ್ಯದ ಹದಿನೆಂಟು ರೇವುಪಟ್ಟಣಗಳ ವ್ಯಾಪಾರ, ಭಂಡಾರದ ಆದಾಯ ವೆಚ್ಚಗಳ ತನಿಖೆ, ಪರಿಶೀಲನೆಗಳು ನಡೆಯುತ್ತಿದ್ದುವು.

ಮಧ್ಯಾಹ್ನ ಭೋಜನದ ವೇಳೆಯಾಗುವ ತನಕ ದಂಡನಾಯಕ ಮಂತ್ರಿಗಳೊಂದಿಗೆ ಆಪ್ತ ಸಮಾಲೋಚನೆ, ಸಾಮಂತರ ಭೇಟಿ, ಒಡ್ಡೋಲಗಗಳು ನಡೆಯುತ್ತಿದ್ದುವು. ಇವುಗಳನ್ನು ಮುಗಿಸಿಕೊಂಡು ಅರಮನೆಗೆ ಹಿಂತಿರುಗಿ ಊಟಮಾಡಿ ಒಂದೆರಡು ತಾಸು ವಿಶ್ರಾಂತಿಯನ್ನು ಅನುಭವಿಸುತ್ತಿದ್ದನು. ಮತ್ತೆ ಮೂರುಗಂಟೆಗೆ ತನ್ನ ದೈನಂದಿನ ರಾಜಕಾರ್ಯಗಳಿಗೆ ಗಮನವೀಯುತ್ತಿದ್ದನು. ಸಾಮಂತ ಮಾಂಡಲೀಕರನ್ನೂ ಎಪ್ಪತ್ತೇಳು ನಿಯೋಗಗಳನ್ನೂ ಸಾಮ್ರಾಜ್ಯದ ಪ್ರಮುಖ ವ್ಯಕ್ತಿಗಳನ್ನೂ, ಪಾಳೆಯಗಾರರನ್ನೂ ಅಮರನಾಯಕರನ್ನೂ, ಹಿತೈಷಿಗಳು, ಆಶ್ರಿತರು, ಪಂಡಿತರು ಪುರೋಹಿತರು, ಆಚಾರ್ಯರು

ಸಾಧುಗಳು, ಜೋತಿಷ್ಯರು, ವೈದ್ಯರು, ರಾಹುತರು, ಮಾಹುತರು, ರಕ್ಷಕದಳ ದವರು ವಂದಿಮಾಗಧರು, ವೈತಾಳಿಕರು ಗಾಯಕರು, ಶಿಲ್ಪಿಗಳು, ಕಲಾವಿದರು, ವೈಣಿಕರು ವೈಯಾಕರಣಿಗಳು. ಪೌರಣಿಕರು, ವಿಜ್ಞಾನಿಗಳು ಹೀಗೆ ಎಲ್ಲ ವೃತ್ತಿಯ ಎಲ್ಲ ಕಸುಬಿನ ಜನರನ್ನೂ ಅವಕಾಶ ಸಿಕ್ಕಿದಾಗ ಕಂಡು ಅವರೊಡನೆ ರಾಜ್ಯದ ಆಗುಹೋಗುಗಳನ್ನು ಸಮಾಲೋಚಿಸುತ್ತಿದ್ದನು. ಅಲ್ಲದೆ ಲೋಕ ಸಂಗ್ರಹಮಾಡಿಕೊಳ್ಳುತ್ತಿದ್ದನು. ಇದರಿಂದ ರಾಮರಾಯನಿಗೆ ತನ್ನ ಸಾಮ್ರಾಜ್ಯ ದಲ್ಲಿ ನಡೆಯುವ ಪ್ರತಿಯೊಂದು ವ್ಯಾಪಾರವೂ ತಿಳಿದಿರುತ್ತಿತ್ತು.

ಕೆಲವು ಬಾರಿ ತಾನು ಕೇಳಿದ ಸಂಗತಿಯನ್ನು ಕಣ್ಣಾರನೋಡಿ ತಿಳಿಯಲು ಅವನು ವೇಷಾಂತರದಲ್ಲಿ ದೇಶ ಸಂಚಾರ ಕೈಗೊಳ್ಳುತ್ತಿದ್ದುದೂ ಉಂಟು. ಇದ ರಿಂದಾಗಿ ಅವನಿಗೇ ಪ್ರಜೆಗಳ ನಿಜವಾದ ಸುಖದುಃಖಗಳ ನೋವು ನಲಿವುಗಳ ಪರಿಚಯವಾಗುತ್ತಿತ್ತು. ಹೀಗೆ ಪ್ರಜೆಗಳ ಹಿತಸಾಧನೆಯಲ್ಲಿ ಅವನು ತನ್ನ ಬಹು ಪಾಲು ಕಾಲವನ್ನು ವಿನಿಯೋಗಿಸುತ್ತಾ, ಹಿಂದಿನ ಕಾಲದ ಚಂದ್ರಗುಪ್ತ, ಅಶೋಕ, ಶ್ರೀಹರ್ಷ, ಪುಲಿಕೇಶಿ ಮುಂತಾದ ಚಕ್ರವರ್ತಿಗಳ ಆದರ್ಶವನ್ನು ಭೋಗಿಕರಿಸುತ್ತಿದ್ದನು.

ಇವರ ರಾಮರಾಯನು ಆಡಳಿತಸೂತ್ರವನ್ನು ಕೈಗೆ ತೆಗೆದುಕೊಂಡನಂತರ ರಾಣಿಯರಿಗೆ ಸೋದರರ ಕಾಲದಲ್ಲಿ ದೇಶದಲ್ಲಿ ಉಂಟಾಗಿದ್ದ ಅನಾಯಕತೆ, ಅರಾಜ ಏರ್ಪಡಿಸಲ್ಪಿತದ ಅವ್ಯವಸ್ಥೆಗಳನ್ನು ಸರಿಪಡಿಸಲು ಅನೇಕ ವರ್ಷಗಳು ಹಣ

ರ್. ಅವನು ಅನ್ಯಾಯವಾಗಿದ್ದ ತೆರಿಗೆ–ಕರಗಳನ್ನು ತೆಗೆದುಹಾಕಿದನು. ತಿತ್ರಧಿಕಾರಿಗಳು ಪ್ರಜೆಗಳ ಹಿಂಸಕರಾಗದಂತೆ ಶಾಸನಮಾಡಿ, ಮದೋನ್ಮತ್ತ ಅಧಿ ಕಾರಿಗಳನ್ನು ಕ್ರೂರವಾಗಿ ಶಿಕ್ಷಿಸಿದನು ದೇಶದಲ್ಲಿ ಕಳ್ಳಕಾಕರ ಭಯವನ್ನು ನಿರ್ಮೂಲಮಾಡಿದನು. ಶತ್ರುಭೀತಿಯನ್ನು ತಪ್ಪಿಸಿದನು. ವಾಣಿಜ್ಯ, ವ್ಯಾಪಾರ ಗಳನ್ನು ಹೆಚ್ಚಿಸಲು ತನ್ನಿಂದಾಗುವ ಎಲ್ಲ ನೆರವನ್ನು ಕೊಟ್ಟನು ಕಲಾವಿದರಿಗೆ ಪ್ರೋತ್ಸಾಹ ಕೊಟ್ಟು ಕಲೆಯ ಪುನರುಜ್ಜೀವನ ಮಾಡಿದನು. ಇದರಿಂದಾಗಿ ದೇಶದಲ್ಲಿ ಸುಭದ್ರವಾದ ಆಡಳಿತ ನೆಲೆಗೊಂಡು, ವಾಣಿಜ್ಯ, ವ್ಯಾಪಾರಗಳು ಉನ್ನತಿಗೇರಿದುವು. ಪರದೇಶದ ವ್ಯಾಪಾರವೂ ಹೆಚ್ಚಾಯಿತು. ಗೋವಾ, ಹೊನ್ನಾವರ, ಭಟ್ಕಳ ಮುಂತಾದ ಹದಿನೆಂಟು ಬಂದರುಗಳ ಮೂಲಕ ಸಾಮ್ರಾ ಜ್ಯದ ನಿತ್ಯ ಜೀವನಕ್ಕೆ ಬೇಕಾಗುವ ವಸ್ತುಗಳೂ, ಭೋಗೋಪಯೋಗಿ ವಸ್ತು ಗಳೂ ಹಡಗುಗಳಲ್ಲಿ ಬರುತ್ತಿದ್ದುವು.

ಪರದೇಶಗಳಿಂದ ಗೋವೆಯ ಮೂಲಕ ವಿಜಯನಗರಕ್ಕೆ ಪ್ರತಿದಿನವೂ ಅರೇಬಿಯಾದ ಉತ್ತಮಾಶ್ವಗಳೂ, ವೆಲ್ವಾಸುಗಳೂ, ದಮ್ಮಾಸ್ ಬಟ್ಟೆಗಳೂ,

ಉತ್ಕೃಷ್ಟವಾದ ಸ್ಯಾಟಿನ್ ಬಟ್ಟೆಗಳೂ, ಬರುತ್ತಿದ್ದುವು. ಅಲ್ಲದೆ, ಒಳದೇಶದ ಬಂಗಾಳದಿಂದ ಆರ್ಮೆಸಿನ್ ವಸ್ತ್ರಗಳೂ ಚೀನಾಂಬರಗಳೂ ಪೀತಾಂಬರಗಳೂ ಮತ್ತಿತರ ಬಣ್ಣಬಣ್ಣದ ರಾಜಯೋಗ್ಯವಾದ ವಸ್ತ್ರಗಳೂ, ಬರುತ್ತಿದುವು. ವಿಜಯನಗರದಿಂದ ಹೊರದೇಶಕ್ಕೆ ಮುತ್ತುರತ್ನಗಳೂ, ಚಿನ್ನದ ವರಹಗಳೂ, ದೇಶೀಯ ವಸ್ತ್ರಗಳೂ, ಕಸೂತಿನ ವೆಲ್ವೆಟ್ಟುಗಳೂ ಮುಸ್ಲಿನ್ ಮುಂತಾದವೂ, ಬಣ್ಣಬಣ್ಣಗಳ ವಡವೆವಸ್ತ್ರಗಳೂ ನಿರ್ಯಾತವಾಗುತ್ತಿದ್ದುವು. ಅಲ್ಲದೆ ಚಿತ್ರ ಕೆಲಸ ಮಾಡಿದ ಬಣ್ಣದ ಕುಲಾವಿಗಳೂ ದಂತದ ಸಾಮಾನುಗಳೂ ದೇಶೀಯ ಸುಗಂಧ ದ್ರವ್ಯಗಳೂ ಪರದೇಶಕ್ಕೆ ಸಾಗುತ್ತಿದ್ದುವು. ಇವುಗಳಿಗೆ ಬದಲಾಗಿ ದ್ರಾಕ್ಷಾರಸ, ಸುಗಂಧದ್ರವ್ಯಗಳು, ರತ್ನಗಂಬಳಿ ಮುಂತಾದವನ್ನು ಪಡೆಯುತ್ತಿದ್ದರು. ಒಂದು ಮಾತಿನಲ್ಲಿ ಹೇಳುವುದಾದರೆ, ಅಭಿವೃದ್ಧಿಹೊಂದಿದ ಪರದೇಶದ ವ್ಯಾಪಾರ ವಿಜಯನಗರದ ಭಂಡಾರಕ್ಕೆ ಹೊನ್ನಿನ ಮಹಾಪೂರವನ್ನೇ ಹರಿಸಿತ್ತು. ದೇಶದಲ್ಲಿ ಮಳೆ ಬೆಳೆಗಳೂ, ಶಾಂತಿನೆಮ್ಮದಿಗಳೂ ಜನತೆಯನ್ನು ಸಾಹಿತ್ಯ ಸಂಗೀತಗಳ ಕಡೆಗೆ ಒಲಿಯುವಂತೆ ಮಾಡಿದುವು. ಹೀಗಾಗಿ ರಾಮರಾಯನು ವಿಜಯನಗರ ಸಾಮ್ರಾಜ್ಯದ ಅಧಿಕಾರ ಸೂತ್ರವನ್ನು ಕೈಗೊಂಡ ಹತ್ತು ವರ್ಷಗಳಲ್ಲಿ, ವಿಜಯನಗರದ ಕಲೆ, ಸಂಸ್ಕೃತಿ, ನಾಗರಿಕತೆ, ವಾಣಿಜ್ಯ ವ್ಯಾಪಾರಗಳು ತನ್ನ ಮೊದಲಿನ ಉಚ್ಛ್ರಾಯಸ್ಥಿತಿಗೇ ಏರಿತ್ತು.

ಇವಿಷ್ಟರಿಂದ ರಾಮರಾಯನು ತೃಪ್ತನಾಗಿರಲಿಲ್ಲ. ಅವನು ದಕ್ಷಿಣಾಪಥದಲ್ಲಿ ಅಖಂಡ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಲು ಕನಸುಕಟ್ಟಿದ್ದನು. ಅದರಂತೆಯೇ ಹಿಂದೂ ಮುಸ್ಲಿಮ ಸಾಮರಸ್ಯದ ಕನಸನ್ನೂ ಕಟ್ಟಿದ್ದನು. ಇವುಗಳನ್ನು ನನಸುಮಾಡಲು ಹಗಲಿರುಳೂ ಶ್ರಮಿಸುತ್ತಿದ್ದನು.

ಈಗಾಗಲೇ ದಕ್ಷಿಣದಲ್ಲಿ ದಂಡಯಾತ್ರೆಯನ್ನು ಕೈಗೊಂಡು ರಾಮರಾಯನ ನೆಚ್ಚಿನ ದಂಡನಾಯಕರಾದ ವಿಠಲದೇವ ಹಾಗೂ ವಿಶ್ವನಾಥನಾಯಕರು ಚೋಳ ಕೇರಳವನ್ನು ಗೆದ್ದು, ಸಿಂಹಳದವರೆಗೂ ವಿಜಯನಗರದ ಸಾಮ್ರಾಜ್ಯದ ಎಲ್ಲೆಯನ್ನು ವಿಸ್ತರಿಸಿದ್ದರು. ಅವರು ಕನ್ನಡ ರಾಜೇಶ್ವರಿಯನ್ನು ಮೂರು ಸಮುದ್ರಗಳೂ ಓಲೈಸುವಂತೆ ಮಾಡಿದ್ದರು. ಸಿಂಹಳದ ಪ್ರಭುವೂ ವಿಜಯನಗರ ಅರಸರಿಗೇ ಕಪ್ಪ ಕೊಡಲು ಒಪ್ಪಿದ್ದನು. ವಿದೇಶೀಯರಾದ ಪೋರ್ಚುಗೀಸರು ರಾಮರಾಯನೊಂದಿಗೇ ಒಪ್ಪಂದ ಮಾಡಿಕೊಂಡು ಮಿತ್ರರಾಗಿದ್ದರು. ಅಂತೆಯೇ ಉತ್ತರದ ಬಹಮನಿ ಸುಲ್ತಾನರೂ ರಾಮರಾಯನ ಶಕ್ತಿಸಾಮರ್ಥ್ಯಗಳನ್ನು ಅರಿತು ಅವನೊಡನೆ ಸ್ನೇಹಾಕಾಂಕ್ಷಿಗಳಾಗಿದ್ದರು. ಇದರಿಂದ ರಾಮರಾಯನು ಕಟ್ಟಿದ್ದ ಹಿಂದೂ ಮುಸ್ಲಿಮ ಸಖ್ಯದ ಕನಸು, ದಕ್ಷಿಣಾ ಪಥದಲ್ಲಿ

ಹಿಂದೂ ಸಾಮ್ರಾಜ್ಯದ ಸ್ಥಾಪನೆಯ ಕನಸು ಇನ್ನೇನು ನನಸಾಗುವುದರಲ್ಲಿ ಇದ್ದವು. ಇದರಿಂದ ತೃಪ್ತನಾಗದೆ ರಾಮರಾಯನು, ವಿಜಯನಗರದ ಹೆಗ್ಗಳಿಕೆಯನ್ನು ಬಹಮನಿ ಸುಲ್ತಾನರು ಒಪ್ಪಿ, ವಿಜಯನಗರಕ್ಕೆ ಅವರು ಆಶ್ರಿತರಾಜರಾಗಿರುವಂತೆ ಮಾಡುವ ಹುಚ್ಚುಬಯಕೆ ಇತ್ತು.... ಇದನ್ನು ಕಾರ್ಯಗತ ಮಾಡಲು ಅವನು ಹಾತೊರೆಯುತ್ತಿದ್ದನು. ಅವನ ಸಾಮ್ರಾಜ್ಯತೃಷ್ಣೆ ವಿಜಯನಗರಕ್ಕೆ ಯಾವುದು ಹಿತ ಯಾವುದು ಅಹಿತವೆಂಬ ಸದ್ವಿವೇಕವನ್ನು ಮರೆಸಿತ್ತು. ಅವನು ವಿಜಯನಗರದ ಹೆಗ್ಗಳಿಕೆಯನ್ನು ಮೆರೆಸಲು ಬಹಮನಿ ಸುಲ್ತಾನರ ಅಂತಃಕಲಹಗಳಲ್ಲಿ ಕೈಹಾಕಿದ್ದನು.

ರಾಮರಾಯನು ಬಹುಕಾಲದಿಂದ ಬಯಸುತ್ತಿದ್ದ ಸುಸಂದರ್ಭವು ಅನಾಯಾಸವಾಗಿ ಬಂದಿತ್ತು.

ಬಿಜಾಪುರದ ಸುಲ್ತಾನ ಇಬ್ರಾಹಿಂ ಆದಿಲ್‌ಷಹನು, ತನ್ನ ಸಿಂಹಾಸನದ ಮೇಲೆ ಕಣ್ಣಿಟ್ಟಿದ್ದ ಸಹೋದರನಾದ ಅಬ್ದುಲ್ಲನಿಂದ ಸಿಂಹಾಸನವನ್ನು ಭದ್ರಪಡಿಸಿಕೊಳ್ಳಲು ಅಹಮದ್‌ನಗರದ ಸುಲ್ತಾನ ಬುರಾನ ನಿಜಾಮುಷಹನೊಂದಿಗೆ ಒಂದು ಒಪ್ಪಂದಕ್ಕೆ ಬಂದಿದ್ದನು ಇಬ್ರಾಹಿಂ ಆದಿಲ್‌ಷಹನು ತನ್ನ ಸಹೋದರನಾದ ಮಾಲೂಖಾನನನ್ನು ಮೋಸದಿಂದ ಕೊಂದು, ಬಿಜಾಪುರದ ಸಿಂಹಾಸನವನ್ನು ಆಕ್ರಮಿಸಿಕೊಂಡಿದ್ದನು. ಆದರೆ ಹಕ್ಕುದಾರನಾಗಿ ಇನ್ನೊಬ್ಬ ಸಹೋದರ ಅಬ್ದುಲ್ಲನು ಬದುಕಿರುವ ತನಕ ಬಿಜಾಪುರದ ಸಿಂಹಾಸನಕ್ಕೆ ಅಪಾಯತಪ್ಪಿರಲಿಲ್ಲ. ಅವನನ್ನು ಇಬ್ರಾಹಿಂ ಆದಿಲ್‌ಷಹನು ಬಂಧಿಸಿ ಸೆರೆಯಲ್ಲಿಡುವ ಮೊದಲೇ ಅವನು ಬಿಜಾಪುರದಿಂದ ತಪ್ಪಿಸಿಕೊಂಡು, ಗೋವೆಯ ಪೋರ್ಚುಗೀಸರ ಆಶ್ರಯಕ್ಕೆ ಹೋಗಿದ್ದನು. ಅವನು ತನಗೆ ಬಿಜಾಪುರದ ಸುಲ್ತಾನಗಿರಿಯನ್ನು ದೊರಕಿಸಿಕೊಡುವುದಾದರೆ, ಅವರಿಗೇ ಸಾಲ್ಸೆಟ್ ಮತ್ತು ಬಾರ್ಡೋಜ ಪ್ರಾಂತಗಳನ್ನು ಕೊಡುವುದಾಗಿ ಪೋರ್ಚುಗೀಸರೊಡನೆ ಒಪ್ಪಂದಮಾಡಿಕೊಂಡಿದ್ದನು. ಇದಕ್ಕೆ ತಕ್ಕಂತೆ ಅಹಮದ್‌ನಗರದ ನಿಜಾಮುಷಹನೂ ಅಬ್ದುಲ್ಲನ ಪಕ್ಷಕಟ್ಟಿ ಬಿಜಾಪುರದ ಸಿಂಹಾಸನದಿಂದ ಇಬ್ರಾಹಿಂ ಆದಿಲ್‌ಷಹನನ್ನು ಉರುಳಿಸಲು ಪಿತೂರಿ ನಡಸಿದ್ದನು. ಇದರಿಂದ ಭಯಗೊಂಡ ಇಬ್ರಾಹಿಂ ಆದಿಲ್ ಷಹನು ಧನಕನಕ ವಾಹನಗಳಿಂದ ಬುರಾನ ನಿಜಾಮುಷಹನ ಮನವೊಲಿಸಿಕೊಂಡು ಅವನನ್ನು ಮಿತ್ರನನ್ನಾಗಿ ಮಾಡಿಕೊಂಡಿದ್ದನು.

ಅವನೊಡನೆ ಮಾಡಿಕೊಂಡಿದ್ದ ಒಪ್ಪಂದದ ಪ್ರಕಾರ ಕಡೆತನಕ ತಾವು ಪರಸ್ಪರ ಸ್ನೇಹಿತರಾಗಿದ್ದು, ಸಮಯ ಸಾಧಿಸಿ ತಮ್ಮ ರಾಜ್ಯಗಳನ್ನು ವಿಸ್ತರಿಸಿಕೊಳ್ಳಬೇಕೆಂಬುದೇ ಆಗಿತ್ತು. ಇದರಿಂದ ಉತ್ತೇಜಿತನಾದ ನಿಜಾಮುಷಹನು

ಅದಿಲ್‌ಷಹನ ಸಹಾಯವನ್ನು ನೆಚ್ಚಿ ಪಕ್ಕದ ರಾಜ್ಯವಾದ ಬೀರಾರಿನ ಮೇಲೆ ಹಠಾತ್ತನೆ ಬಿದ್ದು, ಅದನ್ನು ಆಕ್ರಮಿಸಿದನು. ಕಾರಣವಿಲ್ಲದೆ ಹಠಾತ್ತನೆ ದಾಳಿಯಿಟ್ಟ ನಿಜಾಮುಷಹನನ್ನು ಎದುರಿಸಲಾರದೆ, ಬೀರಾರಿನ ಸುಲ್ತಾನ ಅಮೀರ್ ಬರೀದ್ ಷಹನು ತನ್ನ ಹಳೆಯ ಮಿತ್ರನಾಗಿದ್ದ ಬಿಜಾಪುರದ ಸುಲ್ತಾನನ ನೆರವನ್ನು ಕೋರಲು ಅವನ ಬಳಿಗೆ ಹೋದನು. ಪಾಪ! ಅದಿಲ್‌ಷಹನೂ, ನಿಜಾಮುಷಹನೂ ಪರಸ್ಪರ ರಹಸ್ಯ ಒಪ್ಪಂದ ಮಾಡಿಕೊಂಡು ಸ್ನೇಹಿತರಾಗಿರುವ ಸಂಗತಿ ಅವನಿಗೆ ಹೇಗೆ ತಿಳಿಯಬೇಕು? ಅವನು ಹಿಂದಣ ಸ್ನೇಹವನ್ನು ನೆನೆದು ಬಿಜಾಪುರಕ್ಕೆ ಹೋದನು. ಮಿತ್ರದ್ರೋಹಿ, ವಿಶ್ವಾಸ ಘಾತುಕನು ಆದ ಆದಿಲ್‌ಷಹನು ಅವನಿಗೆ ಸ್ನೇಹ ಹಸ್ತ ನೀಡುವ ಬದಲು ಅವನನ್ನು ಬಂಧಿಸಿ ಸೆರೆಮನೆಯಲ್ಲಿಟ್ಟನು. ಇದೀಗ ನಡೆದಿದ್ದ ವಿದ್ಯಮಾನವೇನೆಂದು ಬೀರಾರಿನ ಸುಲ್ತಾನನಿಗೆ ತಿಳಿಯಿತು. ಅವನು ಹತಾಶನಾಗಿ, ತನಗೆ ನೆರವೀಯಲು ವಿಜಯನಗರದ ರಾಮರಾಯನಲ್ಲಿ ಮೊರೆಯಿಟ್ಟು, ಆಪ್ತರೊಡನೆ ಒಂದು ಪತ್ರವನ್ನು ಕಳುಹಿಸಿಕೊಟ್ಟಿದ್ದನು. ಆ ಪತ್ರವನ್ನು ರಾಮರಾಯನು ಓದಿಕೊಂಡು ಬಹಮನಿ ಸುಲ್ತಾನರ ಮೇಲೆ ತನ್ನ ಪ್ರಭಾವವನ್ನು ಬೀರಲು ಇದೀಗ ಯೋಗ್ಯ ಸಮಯವೆಂದು ಅಮೀರ್ ಬರೀದ್ ಷಹನಿಗೆ ನೆರವು ಕೊಡಲು ನಿಶ್ಚಯಿಸಿದನು. ಸೈನ್ಯವನ್ನು ಅಹಮದ್ ನಗರದ ಮೇಲೆ ಕಳುಹಿಸುವ ಮುನ್ನ ವಿಜಯನಗರದ ಹೆಸರಿಗೆ ಸಾಮ್ರಾಟನಾಗಿದ್ದ ಸದಾಶಿವರಾಯನ ಕಿವಿಯ ಮೇಲೆ ತನ್ನ ನಿರ್ಧಾರವನ್ನು ಹಾಕಿ ಅವನ ಒಪ್ಪಿಗೆಯನ್ನು ಪಡೆದುಕೊಳ್ಳಲು ಬಂದನು.

ಸದಾಶಿವರಾಯನು ಇದುವರೆಗೂ ರಾಮರಾಯನ ಯಾವ ಸಲಹೆಯನ್ನೂ, ಮಾತನ್ನೂ ತಿರಸ್ಕರಿಸಿದವನಲ್ಲ. ರಾಮರಾಯನ ಕೃಪೆಯಿಂದ ತಾನು ಸಾಮ್ರಾಟನಾದೆನೆಂಬ ಕೃತಜ್ಞತೆಯಿಂದಲೋ, ರಾಮರಾಯನಂತಹ ಪ್ರಬಲ ವ್ಯಕ್ತಿಯನ್ನು ಎದುರಿಸಿ ಮಾತನಾಡಲು ಧೈರ್ಯವಿಲ್ಲದೆಯೋ, ರಾಜನೀತಿಯಲ್ಲಿ ತಾನಿನ್ನೂ ಅನನುಭವಿ ಎಂಬ ಕಾರಣದಿಂದಲೋ ಇದುವರೆಗೆ ಅವನು ರಾಮರಾಯನ ಎದುರು ನಿಂತು, ತಲೆ ಎತ್ತಿ ಮಾತನಾಡುತ್ತಿರಲಿಲ್ಲ. ಇದನ್ನು ದುರುಪಯೋಗಿಸಿಕೊಂಡು ರಾಮರಾಯನು ರಾಜ್ಯಾಡಳಿತದ ಅನೇಕ ವಿಷಯಗಳಲ್ಲಿ ಅವನ ಸಲಹೆಯನ್ನು ತೆಗೆದುಕೊಳ್ಳುವ ಮಾತು ಹಾಗಿರಲಿ, ಅವನ ಕಿವಿಗೆ ಹಾಕದೆ, ತನ್ನ ನಿರ್ಧಾರಗಳನ್ನು, ನಿರ್ಣಯಗಳನ್ನು ಕಾರ್ಯಗತಗೊಳಿಸುತ್ತಿದ್ದನು. ಉತ್ಸವವಿಗ್ರಹದಂತಿದ್ದ ರಾಮರಾಯನು ಮೂಲವಿಗ್ರಹದ ಸ್ಥಾನವನ್ನು ಅತಿಕ್ರಮಿಸಿ ತಾನೇ ಮೂಲವಿಗ್ರಹವೆಂಬಂತೆ ಮೆರೆದನು. ಇತ್ತೀಚಿನ ದಿನಗಳಲ್ಲಂತೂ ರಾಮರಾಯನು ಸದಾಶಿವರಾಯನು ವಿಜಯನಗರದ ಸಾಮ್ರಾಟ

ನೆಂಬುದನ್ನೂ ಮರೆತಂತೆ ವರ್ತಿಸುತ್ತಿದ್ದನು. ಆವಶ್ಯಕವಾಗಿದ್ದ ನಿರೂಪ, ಪತ್ರ, ಘೋಷಣೆ, ಶಾಸನಗಳಿಗೆ ಸಾಮ್ರಾಟರ ಸಹಿಯನ್ನು ನಿರ್ವಾಹವಿಲ್ಲದೆ ಹಾಕಿಸ ಬೇಕಾದ ಸಂದರ್ಭಗಳನ್ನು ಬಿಟ್ಟು ಉಳಿದ ವೇಳೆಯಲ್ಲಿ ಸದಾಶಿವರಾಯ ನನ್ನು ಏನೆಂದು ವಿಚಾರಿಸಲೂ ಹೋಗುತ್ತಿರಲಿಲ್ಲ. ಈಗ ನೆರೆರಾಷ್ಟ್ರವಾದ ಬಹ ಮನಿ ರಾಜ್ಯದ ಮೇಲೆ ದಂಡೆತ್ತಿ ಹೋಗಬೇಕಾದ ಪ್ರಸಂಗ ಬಂದಿದ್ದುದರಿಂದ, ಪದ್ಧತಿಯಂತೆ ಯುದ್ಧಘೋಷಣೆಯ ಪತ್ರಕ್ಕೆ ಸದಾಶಿವರಾಯನ ಅಂಕಿತವನ್ನು ಹಾಕಿಸಲು, ಬಂದಿದ್ದನು.

ಸದಾಶಿವರಾಯನು ಅದನ್ನು ನಿಧಾನವಾಗಿ ಓದಿಕೊಂಡು "ರಾಜಭೂ ವರರೇ, ಈಗ ನಾವು ಅಹಮದ್‌ನಗರದ ಮೇಲೆ ದಂಡೆತಿ ಹೋಗಬೇಕಾದ ಪ್ರಮೇಯವೇನು ಬಂದಿದೆ? ಅವರು ನಮಗೆ ಯಾವ ಅನ್ಯಾಯ ಮಾಡಿದ್ದಾರೆ?" ಎಂದು ನಗುತ್ತಲೇ ಕೇಳಿದ.

ಈ ಪ್ರಶ್ನೆಯನ್ನು ಕೇಳಿ ರಾಮರಾಯನು ಅವಾಕ್ಕಾದನು. ಇಂತಹ ದೊಂದು ಪ್ರಶ್ನೆ ಸದಾಶಿವರಾಯನಿಂದ ಬರುವುದೆಂದು ಅವನು ನಿರೀಕ್ಷಿಸಿರಲಿಲ್ಲ. ತಾನು ಹೇಳುವುದಕ್ಕೆಲ್ಲಾ ಹೂಗುಟ್ಟುತ್ತಿದ್ದ, ಕೇಳಿದುದಕ್ಕೆಲ್ಲಾ ಒಪ್ಪಿಗೆ ಕೊಡು ತ್ತಿದ್ದ ಈ ಪೋರ ಈಗ ತನಗೆ ಪ್ರಶ್ನೆ ಕೇಳುವಂತಾದನೆ ಎಂದು ರಾಮರಾಯನು ತನ್ನಲ್ಲೇ ವಿಸ್ಮಯಪಟ್ಟನು. ಇದುವರೆಗೆ ರಾಮರಾಯನೆಂದೂ ಇಂತಹ ಪ್ರಸಂಗವನ್ನು ಎದುರುಗೊಂಡಿರಲಿಲ್ಲ. ಅವನು ಆಡಳಿತ ವಹಿಸಿಕೊಂಡ ಹತ್ತು ವರ್ಷಗಳಲ್ಲಿ ಸದಾಶಿವರಾಯನು ಒಮ್ಮೆಯಾದರೂ ರಾಮರಾಯನ ಮಾತನ್ನು ಧಿಕ್ಕರಿಸುವ ಸಾಹಸ ಮಾಡಿರಲಿಲ್ಲ. ಅವನು ಹೇಳಿದುದಕ್ಕೆಲ್ಲ ಮರುಮಾತಿಲ್ಲದೆ ಸಹಿಮಾಡುತ್ತಿದ್ದ. ಆದರೆ ಇಂದು ಪ್ರಥಮಬಾರಿಗೆ ಅವನ ನಡತೆಯಲ್ಲಿ ವ್ಯತ್ಯಾಸ ಉಂಟಾಗಿತ್ತು. ಯುದ್ಧಘೋಷಣೆಗೆ ಸಹಿಮಾಡುವ ಬದಲು ಅವನು ರಾಮ ರಾಯನನ್ನು ಎದುರಿಸಿ ಮರು ಪ್ರಶ್ನಿಸಿದ್ದ. ಅದೂ ನೆಟ್ಟ ನೋಟದಲ್ಲಿ ತನ್ನನ್ನು ನೋಡುತ್ತಾ – ಪರಿಹಾಸಗೈಯುವ ದನಿಯಲ್ಲಿ. ರಾಮರಾಯನಿಗೆ ಸದಾಶಿವರಾ ಯನ ಈ ಅನಿರೀಕ್ಷಿತ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂಬುದು ಆ ಕ್ಷಣಕ್ಕೆ ಹೊಳೆಯದಾಯಿತು. ಅವನು ತಡವರಿಸುತ್ತಲೇ ಹೇಳಿದ "ಏಕೆ? ಯುದ್ಧ ವೆಂದರೆ ಸಾಮ್ರಾಟರಿಗೆ ಹೆದರಿಕೆಯೆ?" ಅವನ ಮುಖ ಅಸಮಾಧಾನದಿಂದ ಕೆಂಪಾಗಿ, ಹುಬ್ಬುಗಂಟಿಕ್ಕಿತ್ತು.

ಸದಾಶಿವರಾಯನು ರಾಮರಾಯನ ಅಸಮಾಧಾನದ ಮುಖವನ್ನು ಕಂಡರೂ, ಆ ಬಗ್ಗೆ ವಿಚಲಿತನಾಗದೆ, ನಿರ್ವಿಕಾರ ಧ್ವನಿಯಲ್ಲಿ ಹೇಳಿದ.

"ಹೆದರಿಕೆಯ ಪ್ರಶ್ನೆಯಲ್ಲ ಭೂವರರೇ, ನಾವು ಅಹಮದ್‌ನಗರದ

ಸುಲ್ತಾನನ ಮೇಲೆ ಯುದ್ಧ ಘೋಷಿಸಲು ಕಾರಣ ತಿಳಿಯಲು ಕೇಳಿದೆ. ಅವರ ಮೇಲೆ ಯುದ್ಧ ಹೂಡುವಂತಹ ಯಾವ ತಪ್ಪು, ಅನ್ಯಾಯ ಅವರಿಂದ ನಮಗೆ ಆಗಿದೆ ಎಂದು ತಿಳಿಯಲು ಕೇಳಿದೆ ಅಷ್ಟೇ ”

“ ಪ್ರಭುಗಳು ಬರೀದ್‌ಶಹರ ಪತ್ರವನ್ನು ಹಿಂದಿನ ದರ್ಬಾರಿನಲ್ಲಿ ಪರಾಂಬರಿಸಿದ್ದೀರಿ. ಇನ್ನೂ ವಿವರಣೆ ಬೇಕೆ? ಇದಕ್ಕೆ ವಿವರಣೆ ಆವಶ್ಯಕವೆಂದು ನನಗನಿಸುವುದಿಲ್ಲ – ಎಲ್ಲವೂ ಸ್ಪಷ್ಟವಾಗಿದೆ !” ಅಸಹನೆಯಿಂದ ಕೆರಳಿ ಹೇಳಿದ ರಾಮರಾಯ ಕೊಂಚ ಒರಟಾಗಿ. “ ಹೌದು, ಬರೀದ್ ಷಹರು ನಮ್ಮ ನೆರವು ಕೇಳಿ ಪತ್ರ ಬರೆದಿದ್ದಾರೆ. ನನಗೆ ತಿಳಿದಿದೆ. ಅಹಮದ್‌ನಗರದ ಸುಲ್ತಾನನ ಮೇಲೆ ನಾವು ದಂಡೆತ್ತಿ ಹೋಗಿ ಶಿಕ್ಷಿಸುವಂತಹ ಯಾವ ತಪ್ಪು ಅಚಾತುರ್ಯಗಳೂ ಅವರಿಂದ ನಡೆದಿರುವಂತೆ ತಿಳಿಯುವುದಿಲ್ಲ. ಅಂತಲೇ ವಿವರಣೆಗಾಗಿ ನಿಮ್ಮನ್ನು ಕೇಳಿದೆ. ನನ್ನ ಮಾತಿನಿಂದ ನಿಮಗೆ ಬೇಸರವಾಗಿದ್ದರೆ ಕ್ಷಮಿಸಿ.... ಇದು ಸಂಧಿ ವಿಗ್ರಹದ ಪ್ರಶ್ನೆ. ಇಂದು ದುಡುಕಿ ನಾಳೆ ಪಶ್ಚಾತ್ತಾಪ ಪಡುವಂತಾಗಬಾರದಲ್ಲ !”

“ ಇದು ದುಡುಕುವ ಪ್ರಶ್ನೆಯಲ್ಲವೆಂದು ನನಗೂ ತಿಳಿದಿದೆ. ಮಂತ್ರಿ ಪರಿಷತ್ತಿನಲ್ಲಿ ಹಾಗೂ ದಂಡನಾಯಕರೊಡನೆ ಈ ಬಗ್ಗೆ ಸಮಾಲೋಚಿಸಿ, ಈ ಯುದ್ಧ ಪ್ರಯತ್ನದ ಬಗ್ಗೆ ನಿರ್ಧಾರಕ್ಕೆ ಬರಲಾಗಿದೆ.”

“ಈ ಸಂಗತಿಗಳು ನನ್ನ ಕಿವಿಗೂ ಬಿದ್ದಿದೆ ಅಂತಲೇ ನಿಮ್ಮನ್ನು ಪ್ರಶ್ನಿಸಿದೆ!”

“ ಅರಿತಿದ್ದೂ ಪ್ರಶ್ನೆಯೆ ?”

“ ಹೌದು. ಇದು ಸ್ನೇಹದಿಂದಿರುವ ರಾಷ್ಟ್ರವನ್ನು ಯುದ್ಧಕ್ಕೆಳೆಯುವ ಪ್ರಸಂಗ. ಯುದ್ಧ ಘೋಷಿಸುವ ಮೊದಲು ಇದರ ಔಚಿತ್ಯದ ಬಗ್ಗೆ ನಾನು ಕೆಲವು ಹಿರಿಯರೊಡನೆ ವಿಚಾರ ಮಾಡಿದ್ದೇನೆ.

ಈಗ ರಾಮರಾಯನಿಗೆ ಮತ್ತಷ್ಟು ಅಚ್ಚರಿಯಾಯಿತು. ಹಿರಿಯರೊಡನೆ ಈ ಘೋರ – ಇನ್ನೂ ಚೆನ್ನಾಗಿ ಮೀಸೆ ಮೂಡದ ತರುಣ–ಈ ಮೊದಲೇ ಯುದ್ಧದ ಬಗ್ಗೆ ಚರ್ಚಿಸಿದ್ದಾನೆ ! ಹಾಗಾದರೆ ಯಾರು ಆ ಹಿರಿಯರು ? ತನ್ನ ವಿರುದ್ಧ ನಿಂತು ತಲೆ ಎತ್ತಿ ಮಾತನಾಡಲು ಕಲಿಸಿಕೊಟ್ಟ ಆ ಹಿರಿಯರು ಯಾರು ? ರಾಮರಾಯನಿಗೆ ಮೈ ಉರಿಯಿತು – ಸಿಟ್ಟಿನಿಂದ. ಅವನು ಹಾವಿನಂತೆ ಬುಸುಗುಟ್ಟುತ್ತಾ, ಕೆಂಗಣ್ಣು ಬಿಡುತ್ತಾ, ಕೆರಳಿ ಪ್ರಶ್ನಿಸಿದ.

“ ಯಾರು ಆ ಹಿರಿಯರು ? ಯುದ್ಧ ಬೇಡವೆಂದು ಹೇಳಿದ ಆ ಮತಿಗೇಡಿ ಹಿರಿಯರು ಯಾರು ? ನಾನು ತಿಳಿಯಬಹುದೆ ?”

“ ನೀವು ತಿಳಿಯಲು ನನ್ನ ಆಕ್ಷೇಪವಿಲ್ಲ. ಆದರೆ ಈಗ ಅವರ ಹೆಸರು

ಯನ್ನೇ ತಂದರು! ಅವರು ನನ್ನ ಮನಸ್ಸಿನ ಮೇಲೆ ಪರಿಣಾಮ ಮಾಡಿದಷ್ಟು ಬೇರಾರೂ ಮಾಡಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆ! ಅವರ ಸಂಪರ್ಕ ಸಹವಾಸಗಳಿಂದ ನನ್ನ ಬಾಳು ಪುನೀತವಾಯಿತು! ಆ ತಾಯಿಯ ಋಣವನ್ನು ಹೇಗೆ ತೀರಿಸಬೇಕೆಂಬುದೇ ತಿಳಿಯದಾಗಿದೆ!" ಎಂದ ಭಾವೋನ್ಮಾದದಲ್ಲಿ ಮೈಮರೆತು ಸದಾಶಿವರಾಯ.

ಇದನ್ನೆಲ್ಲಾ ಕೇಳಿ ರಾಮರಾಯನಿಗೆ ಅದೇನೆನಿಸಿತೋ. ಅವನು ಹೇಳಿದ:

"ನನಗೆ ಈ ತಾಯಿಮಕ್ಕಳ ಬಾಂಧವ್ಯದ ನಡುವೆ ಬರಲು ಇಷ್ಟವಿಲ್ಲ. ಆದರೆ ನನ್ನದೊಂದು ಸಲಹೆಯುಂಟು. ನೀವು ವಿಜಯನಗರ ಸಾಮ್ರಾಟರೆಂಬ ಕಾರಣದಿಂದ ಈ ಮಾತನ್ನು ನಿಮಗೆ ಹೇಳುತಿದ್ದೇನೆ! ನೀವು ಅನ್ಯಥಾ ಭಾವಿಸಬಾರದು!" ಎಂದು ಹೇಳಿ ಚಣಕಾಲ ಮೌನವಾದ.

"ಏನದು?" ಅವನನ್ನೇ ಎವೆಯಿಕ್ಕದೆ ನೋಡುತ್ತಾ ಕೇಳಿದ ಸದಾಶಿವರಾಯ.

"ರಾಜಕೀಯ ವಿಷಯಗಳಲ್ಲಿ ನೀವು ನನ್ನ ವಿನಾ ಅನ್ಯರ ಸಲಹೆಯನ್ನು ಸ್ವೀಕರಿಸಬಾರದು!"

"ಏಕೆ?"

"ಇದರಿಂದ ನಮ್ಮ ನಿಮ್ಮ ಮಧುರ ಬಾಂಧವ್ಯದಲ್ಲಿ ಕಹಿಯುಂಟಾಗುವ ಸಂಭವವಿದೆ!"

"ಹೇಗೆ?"

"ಅದು ಹೇಗೆಂದು ನಿಮಗೆ ಈಗಲೇ ತಿಳಿಯಲಾರದು. ನೀವು ಇನ್ನಿಷ್ಟು ದೊಡ್ಡವರಾದ ಮೇಲೆ ಬಹುಶಃ ತಿಳಿದೀತು. ಈಗ ಈ ವಿಷಯ ಇಷ್ಟು ಸಾಕು. ಅಹಮದ್‌ನಗರದ ಮೇಲೆ ಯುದ್ಧ ಕೂಡದೆನ್ನಲು ನಿಮ್ಮ ಕಾರಣವಾದರೂ ಏನು, ತಿಳಿಯಬಹುದೆ?"

"ಬಿಜಾಪುರದ ಸುಲ್ತಾನನ ಮೇಲೆ ಯುದ್ಧಕ್ಕೆ ಹೊರಟು ನಾವು ಆದ ಮುತ್ತಿಗೆಯಲ್ಲಿ ಪಟ್ಟ ಭವಣೆ ತಮಗೆ ಮರೆತುಹೋಗಿದೆಯೆ?"

"ಅಂದಿನ ಪರಿಸ್ಥಿತಿ ಬೇರೆ, ಇಂದಿನ ಪರಿಸ್ಥಿತಿ ಬೇರೆ!"

"ಈಗ ಅಹಮದ್ ನಗರದ ಸುಲ್ತಾನನ ಮೇಲೆ ನೀವು ಅಕಾರಣವಾಗಿ ಯುದ್ಧವನ್ನು ಮಾಡುವುದೇಕೆ?"

"ಬೀರಾರಿನ ಬರೀದ್ ಷಹರು ನಮ್ಮ ಸಹಾಯವನ್ನು ಕೋರಿ ಪತ್ರಬರೆದಿರುವುದರಿಂದ! ಆಶ್ರಿತರ – ಶರಣಾಗತರಾದವರ ರಕ್ಷಣೆಗಾಗಿ ನಾವು ಯುದ್ಧ ಮಾಡಬೇಕಾಗಿದೆ!"

“ಇದು ಅವರ ಒಳಜಗಳ. ಅವರ ಗೃಹಕಲಹವಿದ್ದಂತೆ. ಇಂದು ಜಗಳ ವಾಡಿ ನಾಳೆ ಒಂದಾಗುತ್ತಾರೆ. ಅವರಿಗೆ ನೆರವಾಗಲು ಹೊರಟ ನಾವೇ ನಾಳೆ ಪರಕೀಯರಾಗುವವರು. ಬಹಮನಿ ಸುಲ್ತಾನರೆಲ್ಲಾ ಒಂದೇ – ಇದನ್ನು ಇತಿಹಾಸದಿಂದ ನಾವು ನೋಡಿಲ್ಲವೆ?”

“ಇದು ಬಹುಮನಿ ಸುಲ್ತಾನರ ಅಂತಃಕಲಹ – ಒಳಜಗಳವಲ್ಲ. ಇದು ನಮಗೂ ಸಂಬಂಧಿಸಿದೆ. ಅಹಮದ್ ನಗರದ ಸುಲ್ತಾನನು ಬಿಜಾಪುರದ ಸುಲ್ತಾನನ ನೆರವಿನಿಂದ ನಮ್ಮ ಮೇಲೂ ಬೀಳಲಿದ್ದಾನೆ! ಅವನು ನಮ್ಮ ಮೇಲೆ ಯುದ್ಧಕ್ಕೆ ಬರುವ ಮುನ್ನವೇ ನಾವು ಅವನ ಸೊಕ್ಕನ್ನು ಅಡಗಿಸಿ, ನಮ್ಮ ತಂಟೆಗೆ ಬರದಂತೆ ಮಾಡಬೇಕಾಗಿದೆ. ಅಲ್ಲದೆ ರಾಜನೀತಿಯಿಂದಲೂ ಈ ಯುದ್ಧ ಅನಿವಾರ್ಯವಾಗಿದೆ!”

“ಅದು ಹೇಗೆ?”

“ಬಿಜಾಪುರದ ಸುಲ್ತಾನ – ಅಹಮದ್‌ನಗರದ ಸುಲ್ತಾನರು ಒಂದಾಗಿ ನಮ್ಮ ಮೇಲೆ ಬೀಳುವ ಮೊದಲೇ ನಾವು ಅವನನ್ನು ಸದೆಬಡಿದರೆ ಇದರಿಂದ ಬಹಮನಿ ಸುಲ್ತಾನರ ಮೇಲೆ ನಮ್ಮ ಪ್ರಭಾವ ವೃದ್ಧಿಸುವುದರಲ್ಲಿ ಸಂದೇಹವಿಲ್ಲ!”

“ಅಹಮದ್‌ನಗರದ ಮೇಲೆ ನಾವು ದಂಡೆತ್ತಿ ಹೊರಟಾಗ ಬಿಜಾಪುರದ ಸುಲ್ತಾನನೂ ತನ್ನ ಸಕಲ ಸೈನ್ಯದಿಂದ ಬಂದು ಅವರಿಗೆ ನೆರವಾದರೆ, ಈ ಎರಡು ಸೈನ್ಯಗಳನ್ನೂ ಎದುರಿಸಿ ಹೋರಾಡಿ ಗೆಲ್ಲುವ ಶಕ್ತಿ ನಮಗಿದೆಯೆ?”

ಅವನು ಮಾತು ಮುಗಿಸುವ ಮುನ್ನ ರಾಮರಾಯ ಉಚ್ಚಸ್ವರದಲ್ಲಿ ಗರ್ಜಿಸಿದ:

“ಪ್ರಭುಗಳು ನನ್ನ ಮಾತನ್ನು ಕಿವಿಗೊಟ್ಟು ಕೇಳಬೇಕು. ವಿಜಯನಗರದ ಸಾಮ್ರಾಟರಾದರೂ ನಿಮ್ಮ ಶಕ್ತಿ ಸಾಮರ್ಥ್ಯಗಳ ಕಲ್ಪನೆ ಇನ್ನೂ ನಿಮಗೆ ಉಂಟಾಗದೇ ಇರುವುದು ಶೋಚನೀಯ. ವಿಜಯನಗರದ ಸೈನ್ಯವು ನೀವು ತಿಳಿದಿರುವಷ್ಟು ಅಸಮರ್ಥವಾಗಿಲ್ಲ. ಇದಕ್ಕೆ ದಕ್ಷಿಣಾಪಥದಲ್ಲಿ ಮೇಲಿಂದ ಮೇಲೆ ನಮಗೆ ದೊರತ ದಿಗ್ವಿಜಯಗಳೇ ಸಾಕ್ಷಿ! ನಮ್ಮ ಹೆಸರೆತ್ತಿದರೆ ಸಾಕು ಪೋರ್ಚುಗೀಸರು ತತ್ತರಿಸುತ್ತಾರೆ. ನಮ್ಮ ಸ್ನೇಹ ಹಸ್ತಕ್ಕಾಗಿ ಅವರು ಮಾತ್ರವಲ್ಲ – ಬಹಮನಿ ಸುಲ್ತಾನರೂ ಬಾಯಿಬಿಡುತ್ತಿದ್ದಾರೆ, ಎಂಬುದನ್ನು ನೀವು ಮರೆಯಬಾರದು....

“ಇನ್ನೊಂದು ಮಾತು....ಸ್ವಶಕ್ತಿಯಲ್ಲಿ ನಂಬಿಕೆ ಇಲ್ಲದ ನಾವು ಏನನ್ನು ತಾನೇ ಸಾಧಿಸಬಲ್ಲೆವು? ಈ ಸಾಮ್ರಾಜ್ಯವನ್ನು ತಾನೇ ನಾವು ಯಶಸ್ವಿಯಾಗಿ ಆಳಬಲ್ಲವೆ? ಶತ್ರುಗಳಿಂದ ಈ ಸಾಮ್ರಾಜ್ಯವನ್ನು ರಕ್ಷಿಸಬಲ್ಲೆವೆ?” ಎಂದು ಜರೆದು ನುಡಿದ ರಾಮರಾಯ.

" ನೀವು ನನ್ನನ್ನು ತಪ್ಪು ತಿಳಿದಂತೆ ಇದೆ. ನಾನು ಅಂಜುಕುಳಿ, ಹೇಡಿಯಾಗಿರುವುದರಿಂದ ಯುದ್ಧ ಬೇಡವೆನ್ನುತ್ತಿರುವೆನೆಂದು ನೀವು ಭಾವಿಸಿದಂತೆ ಇದೆ. ಆದರೆ ನಾನು ಹೇಡಿಯಲ್ಲ, ಅಂಜುಕಳಿಯೂ ಅಲ್ಲ. ನಿಮ್ಮ ಶಿಷ್ಯ ನಾನೆಂದ ಮೇಲೆ ಯುದ್ಧಕ್ಕೆ ನಾನು ಹೆದರುವೆನೆ? ನಾನು ಹೇಳಿದುದು ಅದಲ್ಲ. ಯುದ್ಧವೆಂದರೆ ಜಯಾಪಜಯಗಳು ಅನಿಶ್ಚಿತ. ಅಲ್ಲದೆ ಇದರಿಂದ ವೃಥಾ ಹಾನಿಯಲ್ಲದೇ ಯಾವ ಲಾಭವೂ ಇದ್ದಂತೆ ಕಾಣುವುದಿಲ್ಲ. ಈ ಯುದ್ಧದ ಮಾರಿಯನ್ನು ನಾವು ಆಹ್ವಾನಿಸುವುದು ಬೇಡ. ಬಂದಾಗ ಯುದ್ಧ ಮಾಡೋಣ ಶತ್ರುಗಳು ಮತ್ತೆ ನಮ್ಮ ತಂಟೆಗೇ ಬರದಂತೆ ನಮ್ಮ ಬಾಹುಬಲ ಪ್ರದರ್ಶನ ಮಾಡೋಣ !" ಎಂದು ಹೇಳಿದ ಸದಾಶಿವರಾಯ.

" ಹಾಗಾದರೆ ನಿಮಗೆ ಆ ವಿರಕ್ತ ಸನ್ಯಾಸಿಯ ಉಪದೇಶ ಚೆನ್ನಾಗಿ ಆಗಿದೆ ಎಂದಾಯಿತು. ಇರಲಿ, ನನ್ನ ಮಾತನ್ನು ನೀವು ಗಮನವಿಟ್ಟುಕೇಳಬೇಕು. ಈಗ ನಾವು ರಾಜ್ಯವನ್ನು ವಿಸ್ತರಿಸಬೇಕಾಗಿದೆ. ಅಲ್ಲದೆ ಬಹಮನಿ ಸುಲ್ತಾನರಿಗೇ ವಿಜಯನಗರದವರ ಶಕ್ತಿಸಾಮರ್ಥ್ಯಗಳೇನೆಂದು ಪರಿಚಯಮಾಡಿಕೊಡಬೇಕಾಗಿದೆ. ಅವಕಾಶ ದೊರೆತಾಗ ನಾವು ಸಾಮ್ರಾಜ್ಯದ ಕೀರ್ತಿಯನ್ನು ದಶದಿಕ್ಕುಗಳಲ್ಲೂ ಹರಡಬೇಕಾಗಿದೆ. ವಿಜಯನಗರ ಸಾಮ್ರಾಜ್ಯವು ಸಾಹಿತ್ಯ, ಸಂಸ್ಕೃತಿ ನಾಗರಿಕತೆಗಳ ನೆಲಮನೆಯಾಗಿ ದಕ್ಷಿಣಪಥದಲ್ಲೆಲ್ಲಾ ಪ್ರಭಾವಶಾಲಿಯಾದ ರಾಷ್ಟ್ರವಾಗುವುದು ಅವಶ್ಯಕವಾಗಿದೆ. ಇದನ್ನು ಸ್ಥಾಪಿಸಲು ನೀವು ಒಂದು ಅಹಮದ್‌ನಗರ ಯುದ್ಧಮಾತ್ರವಲ್ಲ – ಇಂತಹ ನೂರು ಯುದ್ಧಗಳಿಗೆ ಸಿದ್ಧರಾಗಬೇಕಾಗುತ್ತದೆ. ಇದು ಸಾಮ್ರಾಜ್ಯವನ್ನು ವಿಸ್ತರಿಸುವ ಕಾಲ. ಈಗ ನಾವು ಮುಂದಡಿ ಇಡದಿದ್ದರೆ – ನಮ್ಮ ಮೃತ್ಯುವನ್ನು ನಾವೇ ಆಹ್ವಾನಿಸಿಕೊಂಡಂತಾಗುತ್ತದೆ. ಈಗ ನಾವು ಸಾಮ್ರಾಜ್ಯಕ್ಕೆ ಬಲವಾದ ಅಡಿಪಾಯ ಹಾಕಿದರೆ ಇದರ ಮೇಲೆ ನಾಳೆ ಭವ್ಯವಾದ ಮಂದಿರ ಮೇಲೇಳುತ್ತದೆ. ಈಗ ನಾವು ಧೈರ್ಯದಿಂದ ಮುನ್ನುಗ್ಗಬೇಕು. ಸಿಕ್ಕಿದ ಅವಕಾಶವನ್ನು ಬಿಡಬಾರದು, ನಾವು ಬೃಹದ್ ಚೇತನರಾದರೇ ನಮ್ಮಿಂದ ಮಹತ್ಕಾರ್ಯಗಳು ಸಾಧಿಸಲ್ಪಡುತ್ತವೆ. ನೀವು ರಾಷ್ಟ್ರದ ಭವ್ಯೋನ್ನತಿಗಾಗಿ ದುಡಿಯುವ ಶಿಲ್ಪಿಗಳಾಗಬೇಕು. ಪುರುಷ ಸಿಂಹಗಳಾಗಬೇಕು. ಇದು ಸಾಧ್ಯವೇ? ಎಂಬ ಪ್ರಶ್ನೆಗಿಂತಲೂ ನಮ್ಮಿಂದ ಯಾವುದು ಸಾಧ್ಯವಿಲ್ಲ? ಎಂಬ ಪ್ರಶ್ನೆ ನಮ್ಮ ಮುಂದಿರಬೇಕು. ನಾವು ಸ್ವಶಕ್ತಿಯಲ್ಲಿ ನಂಬಿಕೆ ಇರಿಸಿ ಆತ್ಮ ನಿಷ್ಠರಾಗಬೇಕು. ನಾವು ಈಗ ದಂಡಯಾತ್ರೆ ಕೈಗೊಂಡರೆ ಹೇಡಿಗಳು ವೀರರಾಗುತ್ತಾರೆ; ವೀರರು ಕಲಿಗಳಾಗುತ್ತಾರೆ. ಇಂತಹ ಕಲಿಗಳ ಬಲಿದಾನ ತ್ಯಾಗಗಳ ಮೇಲೆ ನಾಳಿನ ಭವ್ಯ, ಆದರ್ಶ

ಸಾಮ್ರಾಜ್ಯಮಂದಿರವು ರೂಪುಗೊಳ್ಳುತ್ತದೆ ; ಆ ಸಾಮ್ರಾಜ್ಯವು ಆಚಂದ್ರಾರ್ಕವಾಗಿ ಉಳಿಯುತ್ತದೆ.” – ಎಂದು ಆವೇಶಪೂರ್ಣವಾಗಿ ಮಾತನಾಡಿದ ರಾಮರಾಯ.

ಇದನ್ನು ಕೇಳಿ ಸದಾಶಿವರಾಯನ ದೇಹದಲ್ಲಿ ಮಿಂಚು ಸಂಚರಿಸಿದಂತೇ ಆಯಿತು. ಅವನು ಅವಾಕ್ಕಾಗಿ ಆಲಿಸಿದ. ರಾಮರಾಯನಲ್ಲಿ ಸಾಮ್ರಾಜ್ಯದ ಬಗ್ಗೆ ಇಷ್ಟೆಲ್ಲಾ ಭವ್ಯಕಲ್ಪನೆ, ಆದರ್ಶ ಇತ್ತೆಂದು ಅವನಿಗೆ ತಿಳಿದಿರಲಿಲ್ಲ. ಅವನು ಮಹತ್ವಾಕಾಂಕ್ಷಿ ಎಂಬುದು ತಿಳಿದಿತ್ತು. ಆದರ್ಶವಾದಿ ಎಂದು ತಿಳಿದುದು ಈಗಲೇ. ಅವನು ರಾಮರಾಯನ ಮಾತುಗಳನ್ನು ವಿಚಾರಮಾಡುತ್ತಾ ಮೌನವಾಗಿ ಕುಳಿತ.

ಇದನ್ನು ಕಂಡು ರಾಮರಾಯನೆಂದ.

“ ಈಗಲಾದರೂ ತಮಗೆ ಮನವರಿಕೆಯಾಯಿತೇ ಪ್ರಭು! ಯುದ್ಧ ಏಕೆ ಅನಿವಾರ್ಯವೆಂದು ?”

ಇದಕ್ಕೆ ಉತ್ತರ ಕೊಡುವ ಬದಲು ಸದಾಶಿವರಾಯನು ಗಂಭೀರ ದೃಷ್ಟಿಯಿಂದ ರಾಮರಾಯನನ್ನು ಎವೆಯಿಕ್ಕದೆ ನೋಡಿದ. ಆ ನೋಟದಲ್ಲಿ ರಾಮರಾಯನು ಬಯಸಿದ್ದ ಉತ್ತರವಿತ್ತು. ತಾನು ಬಂದ ಕಾರ್ಯ ಯಶಸ್ವಿಯಾಯಿತೆಂದು ಅವನು ಅಲ್ಲಿಂದ ಎದ್ದು ಹೊರಟ.

ಈ ಬಾರಿ ರಾಮರಾಯನೇ ದಂಡಯಾತ್ರೆಯನ್ನು ಕೈಗೊಂಡಿದ್ದನು. ಈ ಅವಧಿಯಲ್ಲಿ ಬಿಜಾಪುರದ ಸುಲ್ತಾನನು ಅಹಮದ್ ನಗರದ ನಿಜಾಮಷಹನಿಂದ ಪ್ರಚೋದಿತನಾಗಿ ವಿಜಯನಗರದ ಮೇಲೆ ಯುದ್ಧ ಘೋಷಿಸಿದ್ದ. ರಾಮರಾಯನು ಸೈನ್ಯಸಮೇತ ಹೊರಡುವುದು ನಿಧಾನವಾಗಿದ್ದರೆ ಅದಿಲ್‌ಷಹನು ವಿಜಯನಗರದ ಬಳಿ ಬಂದಿಳಿಯುತ್ತಿದ್ದನೋ ಏನೋ! ರಾಮರಾಯನು ಸಕಾಲದಲ್ಲಿ ಸೈನ್ಯಸಮೇತ ಹೊರಟಿದ್ದರಿಂದ ಬಿಜಾಪುರದ ಗಡಿಯಲ್ಲಿ ಬಿಜಾಪುರದ ಸುಲ್ತಾನನನ್ನು ತಡೆಯಲು ಶಕ್ಯವಾಯಿತು.

ಬಿಜಾಪುರದ ಸೈನ್ಯದಮೇಲೆ ಬೀಳಲು ರಾಮರಾಯನ ಸೈನ್ಯವು ಗೋಲ್ಕೊಂಡ ಮತ್ತು ಬಿದರೆಗಳ ಮೂಲಕ ಹಾದುಹೋಗಲೇಬೇಕಾಗಿತ್ತು. ರಾಮರಾಯನು ತನ್ನ ಸೈನ್ಯವನ್ನು ಮೂರು ಭಾಗಮಾಡಿ ಒಂದು ಸೈನ್ಯವನ್ನು ತಿರುಮಲನ ಕೈಕೆಳಗೆ ಬಿದರೆಯ ಸುಲ್ತಾನನ ಮೇಲೆ ಏರಿ ಹೋಗಲು ಕಳುಹಿಸಿಕೊಟ್ಟನು ಇನ್ನೊಂದು ಭಾಗವನ್ನು ಸೊನ್ನಲಾಪುರದ ಹಂಡೆ ಹನುಮಪ್ಪನಾಯಿಡು ಎಂಬ ಸಮರ್ಥ ದಳಪತಿಯ ಕೈಲಿ ಕೊಟ್ಟು ಅಹಮದ್ ನಗರವನ್ನು ಮುತ್ತಲು ಕಳುಹಿಸಿಕೊಟ್ಟನು. ಉಳಿದ ಸೈನ್ಯದೊಡನೆ ತಾನೇ ಗೋಲ್ಕೊಂಡದ ಮೇಲೆ ಹೊರಟನು.

ಕಲ್ಯಾಣಿಯ ಬಳಿ ಘೋರಸಂಗ್ರಾಮ ನಡೆಯಿತು. ಯುದ್ಧದಲ್ಲಿ ಅಹ ಮದ್ ನಗರದ ಸೈನ್ಯವು ಸೋತು ಹಿಮ್ಮೆಟ್ಟಿತು. ಕಲ್ಯಾಣಿಯು ರಾಮರಾಯನ ವಶವಾಯಿತು. ಅದನ್ನು ಅಹಮದ್ ನಗರದ ಸುಲ್ತಾನನ ಮೇಲಿನ ಸಿಟ್ಟಿನಿಂದ ಸುಟ್ಟು ಬೂದಿಮಾಡಿದನು. ನಿಜಾಮುಷಹನೂ, ಅವನ ಆಪ್ತ ವಜೀರರೂ ಕಲ್ಯಾಣಿಯಿಂದ ಓಡಿಹೋಗಿ ಬಳಿಯಲ್ಲಿದ್ದ ಕಾಡಿನಲ್ಲಿ ತಲೆಮರೆಸಿಕೊಳ್ಳಬೇಕಾ ಯಿತು.

ಕಲ್ಯಾಣಿ ವಶವಾದಮೇಲೆ ಅದರ ರಕ್ಷಣೆಗೆ ಸೂಕ್ತ ವ್ಯವಸ್ಥೆಮಾಡಿ 'ಕಲ್ಯಾಣನಗರ ಸಾಧಕ'ನೆಂಬ ನೂತನ ಬಿರುದನ್ನು ರಾಮರಾಯನು ಧರಿಸಿದನು. ಅಷ್ಟರಲ್ಲಿ ಕಾಡಿನಲ್ಲಿ ತಲೆತಪ್ಪಿಸಿಕೊಂಡಿದ್ದ ನಿಜಾಮುಷಹನನ್ನೂ, ಅವನ ವಜೀರ ನನ್ನೂ ಸೊನ್ನಲಾಪುರದ ಹಂಡೆ ಹನುಮಪ್ಪನು ಉಪಾಯಾಂತರದಲ್ಲಿ ಸೆರೆ ಹಿಡಿದು ತಂದು ರಾಮರಾಯನಿಗೆ ಒಪ್ಪಿಸಿದನು.

ರಾಮರಾಯನು ಸೋತು ಸೆರೆಸಿಕ್ಕಿದ ನಿಜಾಮುಷಹನನ್ನು ಅಪಮಾನ ಗೊಳಿಸದೆ ಅವನನ್ನು ಮರ್ಯಾದೆಯಿಂದಲೇ ನಡಸಿಕೊಂಡು ಅವನಿಗೆ ಬುದ್ಧಿಹೇಳಿ ಅವನನ್ನು ಕ್ಷಮಿಸಿ ಬಿಡುಗಡೆ ಮಾಡಿದನು. ತನ್ನ ತಂಟೆಗೆ ಬಂದರೆ ಯಾವ ಗತಿ ಬರುವುದೆಂಬುದನ್ನು ನಿಜಾಮುಷಹ ಚೆನ್ನಾಗಿ ನೆನಪುಮಾಡಿಕೊಡಲು ಅಹಮದ್ ನಗರದ ಕೋಟೆಯನ್ನು ಕೆಡವಿ ನೆಲಸಮಮಾಡಿಸಿದನು. ಆ ಪ್ರದೇಶದಲ್ಲಿ ಹರ ಳನ್ನು ಬಿತ್ತಿಸಿದನು. ಅಹಮದ್‌ನಗರವನ್ನು ಹಾಳುಗೆಡವಿದುದರ ನೆನಪಿಗಾಗಿ ರಾಮರಾಯನು 'ಅಹಮದ್‌ನಗರ ಸಾಲಭಂಜನ'ವೆಂಬ ನೂತನ ಬಿರುದನ್ನು ಧರಿಸಿದನು. ಅಲ್ಲದೆ ಬಿರಾರಿನ ಬರೀದ್‌ಷಹನಿಂದ ಕಿತ್ತುಕೊಂಡಿದ್ದ ಎಲ್ಲ ಪ್ರದೇಶವನ್ನೂ ಅವನಿಗೆ ಹಿಂತಿರುಗಿಸುವಂತೆ ಆಜ್ಞೆಮಾಡಿ ಅವನೊಡನೆ ಒಪ್ಪಂದ ಮಾಡಿಕೊಂಡು ಬಿಜಾಪುರದ ಸುಲ್ತಾನನ ಸೊಕ್ಕನ್ನು ಅಡಗಿಸಲು ಅತ್ತ ತಿರುಗಿ ದನು.

ರಾಮರಾಯನ ದೃಷ್ಟಿ ರಾಯಚೂರಿನ ಮೇಲೆ ಬಿದ್ದಿತ್ತು. ರಾಯಚೂರು ಕೃಷ್ಣದೇವರಾಯನ ಕಾಲದಿಂದಲೂ ವಾದಗ್ರಸ್ತ ಪ್ರದೇಶವಾಗಿತ್ತು. ಅದು ಕೆಲವು ಬಾರಿ ವಿಜಯನಗರದರಸರಿಗೂ, ಮತ್ತೆ ಕೆಲವು ಬಾರಿ ಬಿಜಾಪುರದ ಸುಲ್ತಾನರಿಗೂ ಸೇರಿತ್ತು. ಕೃಷ್ಣದೇವರಾಯನು ಅದನ್ನು ಗೆದ್ದು ಸ್ವಾಧೀನ ಪಡಿಸಿಕೊಂಡಿದ್ದರೂ, ಅಚ್ಯುತರಾಯನ ಕಾಲದಲ್ಲಿ ಅದು ಮತ್ತೆ ಬಿಜಾಪುರದ ಸುಲ್ತಾನನಿಗೆ ಸೇರಿಹೋಗಿತ್ತು. ಇದನ್ನು ಹೇಗಾದರೂ ಮಾಡಿ ಮತ್ತೆ ವಶ ಪಡಿಸಿಕೊಳ್ಳಬೇಕೆಂಬುದೇ ರಾಮರಾಯನ ಇಚ್ಛೆಯಾಗಿತ್ತು. ಈಗ ಅಂತಹ ಅವಕಾಶ ತಾನಾಗಿ ಬಂದಿತ್ತು. ಅವನು ರಾಯಚೂರನ್ನು ವಶಪಡಿಸಿಕೊಳ್ಳಲು

ಸೈನ್ಯಸಮೇತ ಹೊರಟು ಅದಕ್ಕೆ ಮುತ್ತಿಗೆಹಾಕಿದನು. ಅದರ ರಕ್ಷಣೆಗೆಂದು ಬಂದ ಅದಿಲ್‌ಷಹನ ಸೈನ್ಯವನ್ನು ವೆಂಕಟಾದ್ರಿಯು ಭೀಮಾನದಿಯ ದಂಡೆಯ ಮೇಲೆ ಎದುರಿಸಿ, ಸೋಲಿಸಿ, ಓಡಿಸಿದನು. ಎಲ್ಲೆಲ್ಲೂ ಬಿಜಾಪುರದ ಸೈನ್ಯಕ್ಕೆ ಸೋಲಾಯಿತು. ಅವನಿಗೆ ಸ್ನೇಹಿತರಾಗಿದ್ದವರು ಈಗ ಶತ್ರುಗಳಾಗಿದ್ದರು. ಯಾರ ಸಹಾಯವನ್ನು ನೆಚ್ಚಿ ವಿಜಯನಗರದಮೇಲೆ ಯುದ್ಧಕ್ಕೆ ಬಂದಿದ್ದನೋ ಆ ಅಹಮುದ್‌ನಗರದ ನಿಜಾಮುಷಹನೇ ಈಗ ಅವನ ಶತ್ರುವಾಗಿ ಮಾರ್ಪಟ್ಟಿದ್ದನು. ಇಷ್ಟೇ ಅಲ್ಲ, ರಾಮರಾಯನೊಡನೆ ಒಪ್ಪಂದ ಮಾಡಿಕೊಂಡಿದ್ದ ಅಹಮುದ್ ನಗರದ ಸುಲ್ತಾನನೂ, ಗೋಲ್ಕಂಡದ ಸುಲ್ತಾನನೂ ಬಿಜಾಪುರದಮೇಲೆ ತಿರುಗಿಬಿದ್ದರು ಹೀಗೆ ಎಲ್ಲೆಲ್ಲೂ ಶತ್ರುಗಳೇ ಆಗಿ, ನಂಬಿದ ನೆಲ ಕುಸಿದಂತೆ ಆಗಲು ಅವನಿಗೆ ರಾಮರಾಯನೊಡನೆ ಸಂಧಾನಮಾಡಿಕೊಳ್ಳದ ಹೊರತು ಗತ್ಯಂತರ ಉಳಿಯಲಿಲ್ಲ. ಈ ಕಾರ್ಯವನ್ನು ಹೇಗಾದರೂ ಸಾಧಿಸಿ ಬರಲು ತನ್ನ ನಂಬಿಕೆಯ ಸೇವಕನಾಗಿದ್ದ ಅಸದ್‌ಖಾನನನ್ನು ರಾಮರಾಯನ ಬಳಿಗೆ ರಾಯಭಾರಿಯಾಗಿ ಕಳುಹಿಸಿಕೊಟ್ಟನು.

ರಾಮರಾಯನು ಅಸದ್‌ಖಾನನನ್ನು ವಿಶ್ವಾಸದಿಂದಲೇ ಬರಮಾಡಿಕೊಂಡು, ಅವನು ಬಂದ ಕಾರ್ಯವನ್ನು ವಿಚಾರಿಸಿಕೊಂಡನು.

"ಖಾವಂದರು ನಮ್ಮ ಮೇಲೆ ಕೃಪೆಮಾಡಿ, ನಮಗೆ ಸ್ನೇಹಭಿಕ್ಷೆಯನ್ನು ದಯಪಾಲಿಸಬೇಕು" ಎಂದು ಅಸದ್‌ಖಾನನು ರಾಮರಾಯನನ್ನು ಪ್ರಾರ್ಥಿಸಿದನು.

"ನಂಬಿಕೆ ದ್ರೋಹ ಮಾಡಿದ ನಿಮ್ಮ ಸುಲ್ತಾನರಿಗೆ ಸ್ನೇಹಭಿಕ್ಷೆಯೆ ?" ಎಂದು ಕಟುವಾಗಿ ಕೇಳಿದ ರಾಮರಾಯ ನಗುತ್ತಾ.

"ನಾವು ನಿಮಗೆ ಮಾಡಿದ ಅಪರಾಧವಾದರೂ ಏನು ? ನಾವು ನಿಮಗೆ ಎಂದು ದ್ರೋಹ ಬಗೆದೆವು ?"

"ನೀವು ನಮಗೆ ಅಪರಾಧ ಮಾಡಲಿಲ್ಲ, ದ್ರೋಹ ಬಗೆಯಲಿಲ್ಲ ನಿಜ. ಆದರೆ ನಿಮ್ಮ ಸುಲ್ತಾನರು ಸ್ನೇಹಿತರೆಂದು ಆಶ್ರಯಕ್ಕೆ ಬಂದ ಬಿರಾರಿನ ಬರೀದ್ ಷಹರಿಗೆ ದ್ರೋಹ ಬಗೆದರು. ಅವರಿಗೆ ಮಾಡಿದ ನಂಬಿಕೆದ್ರೋಹ ಸಾಮಾನ್ಯ ಅಪರಾಧವೆಂದು ಭಾವಿಸಿದ್ದೀರಾ ?"

"ನಮ್ಮ ಸುಲ್ತಾನರು ತಿಳಿಯದೆ ತಪ್ಪು ಮಾಡಿದರು ಹುಜೂರ್ ! ನೀವು ಸಾಮ್ರಾಟರು, ಉದಾರಚರಿತರು. ನಮ್ಮ ಸುಲ್ತಾನರು ಮಾಡಿರುವ ಅಪರಾಧವನ್ನು ಮನ್ನಿಸಬೇಕು. ನೀವು ಅಹಮುದ್ ನಗರ ಸುಲ್ತಾನ ನಿಜಾಮುಷಹನನ್ನು ಮನ್ನಿಸಿದಂತೆ ನಮ್ಮ ಸುಲ್ತಾನರನ್ನೂ ಮನ್ನಿಸಬೇಕು. ಅವರಿಗಿತ್ತ ಕ್ಷಮಾದಾನ ನಮಗೂ ದೊರೆಯಬೇಕು...."

"ಆರಂಭದಿಂದಲೂ ನಮ್ಮ ಬಗೆಗೆ ಕುಟಿಲ ನೀತಿಯನ್ನೇ ಅನುಸರಿಸುತ್ತಿರುವ ನಿಮ್ಮ ಸುಲ್ತಾನರಿಗೆ ಕ್ಷಮೆಯಿಲ್ಲ!" ರಾಮರಾಯ ಹಿಂದಣದನ್ನೆಲ್ಲಾ ನೆನೆದು ಗುಡುಗಿದ.

"ಹೀಗೆ ಹೇಳಿದರೆ ಹೇಗೆ ಖಾವಂದ್! ಗುಬ್ಬಿಯ ಮೇಲೆ ಆನೆ ಹೆಜ್ಜೆ ಇಟ್ಟರೆ ಅದು ಬದುಕುವುದೇ? ನಾವು ಈ ಬಾರಿ ದುಡುಕಿ ಅಪರಾಧ ಮಾಡಿದೆವು ನಿಜ. ಆದರೆ ಈ ಹಿಂದೆ ನಾವು ನಿಮ್ಮ ಮಿತ್ರರಾಗಿ ಇರಲಿಲ್ಲವೆ? ನಿಮ್ಮೆದುರಿಗೆ ಮಾಡಿಕೊಂಡಿದ್ದ ಒಪ್ಪಂದವನ್ನು ಪಾಲಿಸಿರಲಿಲ್ಲವೆ? ನೀವು ನಮ್ಮ ಮೇಲೆ ಪೂರ್ವಾಗ್ರಹದಿಂದ ಕುಪಿತರಾಗಿದ್ದೀರಿ. ಇತರ ಶತ್ರುಗಳಿಗೆ ನೀಡಿದಂತೆ ನಮಗೂ ಕ್ಷಮಾದಾನಮಾಡಿ, ಸ್ನೇಹ ಹಸ್ತ ನೀಡಿ ಉದ್ಧರಿಸಬೇಕು."

"ನಿಮ್ಮ ಕೋರಿಕೆಯನ್ನು ನಾವು ಮನ್ನಿಸುತ್ತೇವೆ. ಆದರೆ ನಿಮ್ಮಿಂದ ಕಿತ್ತುಕೊಂಡ ಪ್ರದೇಶಗಳನ್ನು ಹಿಂದಿರುಗಿಸಲು ನೀವು ಎಷ್ಟು ಹಣ ಕೊಡುತ್ತೀರಿ?" ಎಂದು ರಾಮರಾಯ ಪ್ರಶ್ನಿಸಿದ – ಅವನಿಗೆ ಆದವಾನಿಯ ಪ್ರಕರಣ ನೆನಪುಮಾಡುವಂತೆ.

"ಹುಜೂರ್, ನಾವು ಆಗ ತಪ್ಪುಮಾಡಿದೆವು. ನೀವು ಮುಯ್ಯಿಗೆ ಮುಯ್ಯಿ ತೀರಿಸಬಾರದು. ನಾವು ನೆಲಕ್ಕೆ ಬಿದ್ದಿದ್ದೇವೆಂದು ಕಾಲಿನಲ್ಲಿ ಒದೆಯಬಾರದು. ತಪ್ಪುಕಾಣಿಕೆಯಾಗಿ ನಾವು ನಿಮ್ಮಿಂದ ಆಗ ಪಡೆದ ಸಮಸ್ತ ಸೂರೆಯನ್ನೂ ಈಗ ಒಪ್ಪಿಸುವುದು ಬೇಕಿದ್ದರೆ ಹಾಗೆಯೇ ಮಾಡುತ್ತೇವೆ. ನಿಮ್ಮಿಂದ ಕಿತ್ತುಕೊಂಡ ರಾಯಚೂರನ್ನು ಬೇಡಿದರೆ ಹಿಂತಿರುಗಿಸುತ್ತೇವೆ. ನೀವು ನಮ್ಮ ಮೇಲೆ ಕೃಪೆಮಾಡಬೇಕು." ಎಂದು ದೈನ್ಯದಿಂದ ಅಸದ್‌ಖಾನ್ ಪ್ರಾರ್ಥಿಸಿದ.

"ಈಗ ನಿಮಗೆ ನಿಮ್ಮ ತಪ್ಪೇನೆಂದು ಅರಿವಾಯಿತೆ? ನೀವು ನೆಲಕ್ಕೆ ಬಿದ್ದಿರುವುದಾಗಿ ಹೇಳಿದ್ದೀರಿ. ನೆಲಕ್ಕೆ ಬಿದ್ದವರನ್ನು ವಿಜಯನಗರದರಸರು ಒದೆಯುವುದಿಲ್ಲ. ಅವರು ಶರಣಾಗತರಾದವರನ್ನು ಉದ್ಧರಿಸುವವರು. ನಿಮ್ಮ ಸುಲ್ತಾನರು ನಮ್ಮೊಂದಿಗೆ ನಿಜವಾದ ಸ್ನೇಹಸೌಹಾರ್ದಗಳಿಂದ ಇರಲಾಶಿಸಿದರೆ ನಮ್ಮ ಸ್ನೇಹ ಹಸ್ತ ಸದಾ ಸಿದ್ಧವಿದೆ. ಆದರೆ ನಮ್ಮ ಕೆಲವೊಂದು ಷರತ್ತುಗಳುಂಟು. ಅವುಗಳಂತೆ ನಡೆಯುವುದಾದರೆ ನಿಮ್ಮೊಂದಿಗೆ ಗೌರವವಾದ ಒಪ್ಪಂದಕ್ಕೆ ಬರಲು ನಮ್ಮ ಆಕ್ಷೇಪಣೆ ಇಲ್ಲ."

"ಅವೇನೆಂದು ಅಪ್ಪಣೆ ಕೊಡಿಸಬೇಕು ಹುಜೂರ್!"

"ಬಂಧನದಲ್ಲಿ ಇರುವ ಬರೀದ್‌ಷಹರನ್ನು ನಿಮ್ಮ ಸುಲ್ತಾನರು ಕೂಡಲೇ ಬಿಡುಗಡೆ ಮಾಡಬೇಕು!"

"ಅಪ್ಪಣೆ!"

" ಅವರಿಂದ ಕಿತ್ತುಕೊಂಡಿರುವ ಪ್ರದೇಶವನ್ನು ಅವರಿಗೆ ಹಿಂದಿರುಗಿಸ ಬೇಕು."

" ಅಪ್ಪಣೆ !"

" ನಿಮ್ಮ ಸುಲ್ತಾನರು ನಮ್ಮಿಂದ ವಶಪಡಿಸಿಕೊಂಡಿರುವ ರಾಯಚೂರನ್ನು ನಮಗೆ ಹಿಂದಿರುಗಿಸಬೇಕು !"

" ಅಪ್ಪಣೆ !"

" ನಿಮ್ಮ ಸುಲ್ತಾನರು ನಾಳೆ ನಮ್ಮ ದರ್ಬಾರಿನಲ್ಲಿ ಬಂದು ನಮ್ಮೊಂದಿಗೆ ಸ್ನೇಹದಿಂದ ಇರುವುದರ ಕುರುಹಾಗಿ, ನಮ್ಮ ಕೈಯಿಂದ ವೀಳ್ಯವನ್ನು ಪಡೆಯಬೇಕು !"

" ಅಪ್ಪಣೆ !"

ಅಸದ್ ಖಾನನ ರಾಯಭಾರ ಯಶಸ್ವಿಯಾಯಿತು. ರಾಮರಾಯನ ಎಲ್ಲ ಷರತ್ತುಗಳಿಗೆ ಬಿಜಾಪುರದ ಸುಲ್ತಾನನು ನಿರ್ವಾಹವಿಲ್ಲದೆ ಒಪ್ಪಿಕೊಂಡನು. ರಾಮರಾಯನ ಕೋರಿಕೆಯಂತೆ ರಾಯಚೂರನ್ನು ವಿಜಯನಗರಕ್ಕೆ ಒಪ್ಪಿಸಿದನು. ಆಸ್ಥಾನದಲ್ಲಿ ಅವನ ಕೈಯಿಂದ ವೀಳ್ಯವನ್ನೂ ಪಡೆದನು.

ರಾಮರಾಯನು ಸ್ನೇಹಭಿಕ್ಷೆ ಬೇಡಿ ಬಂದ ಇಬ್ರಾಹಿಂ ಆದಿಲ್‌ಷಹನನ್ನು ಗೌರವದಿಂದಲೇ ನಡಸಿಕೊಂಡು, ಅವನಿಗೆ ರಾಜೋಚಿತ ಮರ್ಯಾದೆಯನ್ನು ಮಾಡಿದನು ರಾಯಚೂರನ್ನು ಗೆದ್ದುದರ ಕುರುಹಾಗಿ, ಬಿಜಾಪುರದ ಸುಲ್ತಾನನ ಸೊಕ್ಕನ್ನು ಅಡಗಿಸಿದುದರ ಸಂತೋಷವಾಗಿ ರಾಮರಾಯನು 'ರಾಯಚೂರು ರಾಜ್ಯ ಹರಣ' ಮತ್ತು 'ಬಿಜಾಪುರ ಭಯನಾಯಕ' ಎಂಬ ನೂತನ ಬಿರುದುಗಳನ್ನು ಧರಿಸಿದನು.

## ೬

ರಾಮರಾಯನಿಗೆ ವಿಜಯನಗರವನ್ನು ಶತ್ರುಗಳಿಂದ ಅಬಾಧಿತಗೊಳಿಸುವುದು ಮಾತ್ರವಲ್ಲ. ದಕ್ಷಿಣಾಪಥದಲ್ಲೇ ಅದನ್ನು ಅತ್ಯಂತ ಬಲಿಷ್ಠರಾಷ್ಟ್ರವಾಗಿ ಮಾಡುವ ಆಸೆ ಇತ್ತು. ವಿಜಯನಗರ ಸಾಮ್ರಾಜ್ಯವನ್ನು ಹಿಂದೂ ಧರ್ಮ ಸಂಸ್ಕೃತಿ ನಾಗರಿಕತೆಗಳ ರಕ್ಷಾಮಣಿಯನ್ನಾಗಿ ಮಾಡಿ ಭಾರತವರ್ಷದಲ್ಲೆಲ್ಲಾ ಅದರ ಕೀರ್ತಿ ಪತಾಕೆಯನ್ನು ಮೆರೆಸುವ ಉತ್ಕಟ ಇಚ್ಛೆ ಇತ್ತು. ಬಹಮನಿ ಸುಲ್ತಾನರು ಮಾತ್ರವಲ್ಲ. ದಿಲ್ಲಿಯ ಬಾದಷಹನೂ ವಿಜಯನಗರವನ್ನು ಮನ್ನಿಸಿ ಗೌರವಿಸುವಂತೆ ಮಾಡಬೇಕೆಂಬುದೇ ಅವನ ಮಹತ್ವಾಕಾಂಕ್ಷೆ

ಯಾಗಿತ್ತು. ಈ ಕಾರ್ಯದಲ್ಲಿ ಅವನು ಸಾಕಷ್ಟು ಯಶಸ್ವಿಯಾಗಿದ್ದನೆಂದೇ ಹೇಳಬೇಕು. ವಿಜಯನಗರ ಸಾಮ್ರಾಜ್ಯವು ಉತ್ತರದಲ್ಲಿ ಬಂಗಾಳದ ಸಾಸ್ ದ್ವೀಪದಿಂದ ತೊಡಗಿ ದಕ್ಷಿಣದಲ್ಲಿ ಮಲಯ, ಸಿಂಹಳಗಳವರೆಗೂ ಹಬ್ಬಿತ್ತು. ಪಶ್ಚಿಮದ ಗೋಲ್ಕಂಡದಿಂದ ತೊಡಗಿ, ಪೂರ್ವತೀರದ ಎಲ್ಲ ದ್ವೀಪಗಳನ್ನೂ ಒಳಗೊಂಡು ದಕ್ಷಿಣಾ ಪಥದಲ್ಲೇ ಅತ್ಯಂತ ದೊಡ್ಡ ಚಕ್ರಾಧಿಪತ್ಯವಾಗಿತ್ತು. ವಿಜಯನಗರದಲ್ಲಿ ಹದಿನೈದು ಲಕ್ಷಕ್ಕೂ ಮಿಕ್ಕಿ ಸೈನ್ಯವಿತ್ತು. ಅಲ್ಲದೆ ನಾಲ್ಕು ಸಾವಿರ ಗಜ ಸೈನ್ಯವೂ, ನಲವತ್ತು ಸಾವಿರ ಅಶ್ವದಳವೂ ಇತ್ತು. ವಿಜಯನಗರದ ಸೈನಿಕಬಲದ ಮುಂದೆ ಬಹಮನಿ ಸುಲ್ತಾನರು ನಿಲ್ಲಲಾರದೆ ಹೋಗಿದ್ದರು. ಅವರು ರಾಮರಾಯನ ಬಾಹುಬಲಕ್ಕೆ ಮಣಿದಿದ್ದರು. ವಿಜಯನಗರದ ಸ್ನೇಹ ತಮ್ಮ ಭಾಗ್ಯವಿಶೇಷವೆಂದು ಪರಿಗಣಿಸುವಂತೆ ಆಗಿತ್ತು. ಬಹಮನಿ ಸುಲ್ತಾನರು ತಮ್ಮ ಅಂತಃಕಲಹ, ವೈಷಮ್ಯಗಳಲ್ಲಿ ವಿಜಯನಗರದ ಅರಸರ ನೆರವನ್ನು ಪಡೆಯುವುದು ಗೌರವವೆಂದು ಭಾವಿಸಿದ್ದರು. ಅಂತಲೇ ಗೋಲ್ಕಂಡದಲ್ಲಿ ಸಿಂಹಾಸನಕ್ಕಾಗಿ ಹೋರಾಟ ನಡೆದಾಗ ಇಬ್ರಾಹಿಂ ಕುತುಬ್‌ಷಹನು ರಾಮರಾಯನ ನೆರವನ್ನು ಕೋರಿದ್ದನು. ಯಾರೇ ಇರಲಿ, ತಮ್ಮನ್ನು ಮಿತ್ರರೆಂದು ಬಗೆದು ನೆರವು ಕೋರಿದಾಗ ಅವರಿಗೆ ನೆರವೀಯುವುದು ಸ್ನೇಹಧರ್ಮವೆಂದು ತಿಳಿದಿದ್ದ ರಾಮರಾಯನಿಗೆ ಬಹಮನಿ ಸುಲ್ತಾನರ ಅಂತಃಕಲಹಗಳಲ್ಲಿ ಮತ್ತೊಮ್ಮೆ ಕೈ ಹಾಕಬೇಕಾದ ಪ್ರಸಂಗ ಬಂದಿತ್ತು!

ಗೋಲ್ಕಂಡದ ಸುಲ್ತಾನನಾಗಿದ್ದ ಜಂಷದ್ ಕುತುಬ್‌ಷಹನು ರಾಮರಾಯನ ಮಿತ್ರನಾಗಿದನ್ನು. ಅವನು ವೃದ್ಧಾಪ್ಯದ ದೆಸೆಯಿಂದಲೂ, ನರಗಳ ದೌರ್ಬಲ್ಯದಿಂದಲೂ ಕಾಹಿಲೆ ಬಿದ್ದು ಹಾಸಿಗೆ ಹಿಡಿದಿದ್ದನು. ಅವನು ತನ್ನ ನಿಶ್ಶಕ್ತಿ – ಅಸಹಾಯತೆಗಳಿಂದಾಗಿ ಎಲ್ಲರ ಮೇಲೂ ರೇಗುತ್ತಿದ್ದ. ಅಲ್ಪ ಸ್ವಲ್ಪ ಕಾರಣಗಳಿಗಾಗಿ ಸಿಟ್ಟು ಮಾಡುತ್ತಿದ್ದನು. ದಿನಗಳೆದಂತೆ ಅವನ ಸಿಟ್ಟು ಮಿತಿಮೀರಿ ಕಡೆಗಾಲಕ್ಕೆ ಹುಚ್ಚಾಗಿ ಪರಿಣಮಿಸಿತ್ತು. ಅವನು ಸಣ್ಣ ಪುಟ್ಟ ಕಾರಣಗಳಿಗಾಗಿ ಸೇವಕರಿಂದ ಹಿಡಿದು ವಜೀರರ ತನಕ ಕ್ರೂರವಾಗಿ ಶಿಕ್ಷಿಸಿದ್ದನು. ಅನೇಕರಿಗೆ ಮರಣದಂಡನೆಯನ್ನು ವಿಧಿಸಿದ್ದನು. ಒಮ್ಮೆ ತನ್ನ ಕಾಹಿಲೆಯನ್ನು ವಾಸಿಮಾಡಲಾಗದ ರಾಜವೈದ್ಯರ ಮೇಲೆ ಸಿಟ್ಟಿಗೆದ್ದಾಗ ನಿಷ್ಕಾರಣವಾಗಿ ಅವರನ್ನು ಆನೆಯ ಕಾಲಿಗೆ ಕಟ್ಟಿಸಿ, ಕ್ರೂರವಾಗಿ ಕೊಲ್ಲಿಸಿದ್ದ. ಇದನ್ನು ವಿರೋಧಿಸಿದ ವಜೀರರನ್ನು ತೋಪಿನ ಬಾಯಿಗೆ ಕಟ್ಟಿಸಿದ್ದ. ಸಿಟ್ಟಿಗೆದ್ದ ಸೈನಿಕರನ್ನು ಕರುಣೆಯಿಲ್ಲದೆ ಕತ್ತಿಗೆ ಬಲಿ ಕೊಟ್ಟಿದ್ದ. ಇದನ್ನೆಲ್ಲಾ ಕಂಡು ಜಂಷದ್ ಕುತುಬ್‌ಷಹನ ಸೋದರರಾದ ಇಬ್ರಾಹಿಂ ಮತ್ತು ಹೈದರಖಾನರಿಗೆ

ರೋಸಿಹೋಗಿತ್ತು. ಅವರಾದರೂ ಏನೂ ಮಾಡುವಂತೆ ಇರಲಿಲ್ಲ. ಯಾವ ಗಳಿಗೆಯಲ್ಲಾದರೂ ಸುಲ್ತಾನನು ಅವರ ಶಿರಚ್ಛೇದನ ಮಾಡಬಹುದಾಗಿತ್ತು. ಈ ಹುಚ್ಚು ಸುಲ್ತಾನನ ಬಳಿ ಇರುವಷ್ಟು ಕಾಲ ತಮ್ಮ ಜೀವಕ್ಕೆ ಗಂಡಾಂತರವೆಂದು ಬಗೆದು ಅವರು ಯಾರಿಗೂ ತಿಳಿಸದೆ ಗೋಲ್ಕಂಡದಿಂದ ತಪ್ಪಿಸಿಕೊಂಡು ಹೋಗಿ ಬಿದರೆಯಲ್ಲಿ ರಕ್ಷಣೆ ಪಡೆದರು.

ಬಿದರೆಯ ಸುಲ್ತಾನ ಖಾಸಿಂ ಬರೀದ್‌ಷಹನು ಈ ಸಹೋದರರನ್ನು ವಿಶ್ವಾಸದಿಂದಲೇ ಬರಮಾಡಿಕೊಂಡು, ಅವರಿಗೆ ಬಂದಿದ್ದ ಭವಣೆಗಾಗಿ ಮರುಗಿ, ಅವರಿಗೆ ರಕ್ಷಣೆ ಕೊಟ್ಟದುದಲ್ಲದೆ ತನ್ನಿಂದಾಗುವ ಎಲ್ಲ ನೆರವೀಯಲು ಆಶ್ವಾಸನ ಕೊಟ್ಟನು. ಅವನ ಉದಾರಾಂತಃಕರಣಗಳಿಗೆ ಮಾರುಹೋದ ಈ ಸಹೋದರರು ಬಿದರೆಗೆ ತಮ್ಮ ಸಮಸ್ತ ಸಂಪತ್ತನ್ನೂ ಸಾಗಿಸಿ, ಅಲ್ಲಿ ನಿಶ್ಚಿಂತರಾದರು. ಅನನುಭವಿಗಳೂ ಸವಿಮಾತುಗಳಿಗೆ ಮಾರು ಹೋಗುವವರೂ ಆಗಿದ್ದ ಈ ತರುಣ ಸೋದರರನ್ನು ವಂಚಿಸಿ ಸ್ವಾರ್ಥ ಸಾಧಿಸಿಕೊಳ್ಳಲು ಬರೀದ್‌ಷಹನಿಗೆ ಕಷ್ಟವಾಗಲಿಲ್ಲ. ಅವನು ಸ್ನೇಹಿತನಂತೆ ನಟಿಸುತ್ತಾ, ಅವರ ಸಮಸ್ತ ಸಂಪತ್ತನ್ನೂ ವಶಪಡಿಸಿಕೊಂಡು ಅವುಗಳಿಗೆ ತಾನೇ ಒಡೆಯನಾಗಲು ಆಶಿಸಿದನು. ಈ ಸಹೋದರರನ್ನು ವಂಚಿಸುವ ಹಂಚಿಕೆಯನ್ನೂ ಹೂಡಿದನು.

ಗೋಲ್ಕಂಡದಿಂದ ಬಂದಿದ್ದ ಸಹೋದರರಲ್ಲಿ ಕಿರಿಯವನಾದ ಹೈದರ್‌ಖಾನನಿಗೆ ಬಿದರೆಯ ಹವ ನೀರುಗಳು ಒಗ್ಗದೆ ಅವನು ಬಹುಬೇಗ ಕಾಹಿಲೆ ಬಿದ್ದನು. ಹಾಸಿಗೆಯಲ್ಲಿ ಕೆಲವು ದಿನ ನರಳಿ ಕಡೆಗೆ ವ್ಯಾಧಿಯಿಂದ ತೀರಿಕೊಂಡನು. ಸಹೋದರನ ಮರಣ ಇಬ್ರಾಹಿಂ ಖಾನನ ಮೇಲೆ ಬಹಳ ಪರಿಣಾಮ ಉಂಟುಮಾಡಿತು. ಅವನು ಗತಿಸಿದ ಸೋದರನಿಗಾಗಿ ದುಃಖಿಸುತ್ತಿದ್ದಾಗ ಸುಲ್ತಾನ ಖಾಸಿಂ ಬರೀದ್‌ಷಹನೇ ಬಂದು ಅವನನ್ನು ಸಾಂತ್ವನವಚನಗಳಿಂದ ಸಮಾಧಾನಪಡಿಸಿದ್ದ. ಮೇಲಿಂದ ಮೇಲೆ ಒದಗಿದ್ದ ತನ್ನ ಕಷ್ಟಗಳಿಂದ ಕಂಗೆಟ್ಟಿದ್ದ ಇಬ್ರಾಹಿಂಖಾನನಿಗೆ ಅವನು ಪರಮಾಪ್ತ ಮಿತ್ರನಂತೆ ತೋರಿದನು. ಆದರೆ ಮುಂದೊಂದು ದಿನ ತನ್ನ ಸೈನ್ಯವನ್ನೂ, ಆನೆಕುದುರೆಗಳನ್ನೂ, ಜತೆಯಲ್ಲಿ ತಂದಿದ್ದ ಬೆಲೆಬಾಳುವ ವಸ್ತುವನ್ನೂ ಖಾಸಿಂ ಬರೀದ್‌ಷಹನು ರಕ್ಷಣೆಯ ಹೆಸರನಲ್ಲಿ ತನ್ನ ವಶಕ್ಕೆ ತೆಗೆದುಕೊಳ್ಳುವ ಮಾತು ತೆಗೆದಾಗ ಅವನ ವಿಶ್ವಾಸದ ನಿಜವಾದ ಸ್ವರೂಪ ಬಯಲಾಯಿತು. ಈ ಬಗ್ಗೆ ಇಬ್ರಾಹಿಂಖಾನನು ಪ್ರತಿಭಟಿಸಲು ಖಾಸಿಂ ಬರೀದ್‌ಷಹನು ಅವುಗಳನ್ನು ಬಲಾತ್ಕಾರದಿಂದ ತೆಗೆದುಕೊಳ್ಳಲು ಹಿಂದೆಗೆಯಲಿಲ್ಲ. ಇಬ್ರಾಹಿಂಖಾನನು ತನ್ನ ಅರಮನೆಯಲ್ಲೇ ಬಂದಿಯಾಗಬೇಕಾಯಿತು. ಬರೀದ್‌ಷಹನನ್ನು ಮಿತ್ರನೆಂದು ತಿಳಿದುದಕ್ಕೆ ತಕ್ಕ ಪ್ರತಿಫಲ ದೊರೆತಿತ್ತು.

ಇಲ್ಲಿ ಹೆಚ್ಚು ಕಾಲವಿದ್ದರೆ ತನ್ನ ಪ್ರಾಣಕ್ಕೂ ಸಂಚಕಾರ ಬರುವುದೂ ಹೆಚ್ಚಲ್ಲವೆಂದು ಬಗೆದು ಇಬ್ರಾಹಿಂಖಾನನು ತನ್ನಲ್ಲಿದ್ದ ಅಮೂಲ್ಯ ವಸ್ತುಗಳನ್ನು ಸೇವಕರಿಗೆ ಲಂಚವಾಗಿ ಇತ್ತು, ಉಪಾಯದಲ್ಲಿ ಸೆರೆ ತಪ್ಪಿಸಿಕೊಂಡು, ತನ್ನ ಆಪ್ತಮಿತ್ರರೊಡನೆ ಅಲ್ಲಿಂದ ಪಾರಾದನು. ಈಗ ಅವನಿಗೆ ಎಲ್ಲಿಗೆ ಹೋಗುವುದು ? ಏನು ಮಾಡುವುದೆಂಬುದು ತಿಳಿಯದಾಗಿತ್ತು. ಭದ್ರವೆಂದು ನೆಚ್ಚಿ ಕಾಲಿಟ್ಟ ಭೂಮಿ ನುಂಗಲೆತ್ನಿಸಿತ್ತು. ಬರೀದ್‌ಷಹ ಗೆಳೆಯನೆಂದು ಹೇಳಿಕೊಂಡು ಅವನ ಸರ್ವಸ್ವವನ್ನೂ ಅಪಹರಿಸಿ ಇದೀಗ ಪ್ರಾಣಕ್ಕೆ ಅಪಾಯವನ್ನು ತಂದಿದ್ದ. ಇನ್ನು ಯಾರನ್ನು ನಂಬಬೇಕು? ಎಲ್ಲಿ ಆಶ್ರಯ ಪಡೆಯಬೇಕು? ಈಗ ಮತ್ತೆ ಗೋಲ್ಕಂಡಕ್ಕೆ ಹೋಗುವಂತೆ ಇರಲಿಲ್ಲ ಇತರ ಬಹಮನಿ ಸುಲ್ತಾನರಲ್ಲಿ ಅವರಿಗೆ ಯಾವ ನಂಬಿಕೆಯೂ ಉಳಿಯಲಿಲ್ಲ. ತನ್ನ ಕಷ್ಟದಲ್ಲಿ ತನಗೆ ನೆರವಾಗಬಲ್ಲವರು ಯಾರಾದರೂ ಇದ್ದರೆ ಅದು ವಿಜಯನಗರದರಸರು ಮಾತ್ರ, ಎಂದು ಯೋಚಿಸಿ, ರಾಮರಾಯನ ಆಶ್ರಯಕ್ಕೆ ಹೋಗಲು ನಿಶ್ಚಯಿಸಿದನು. ಅವನ ಜತೆಯಲ್ಲಿ ಅವನ ವಿಶ್ವಾಸಕ್ಕೆ ಪಾತ್ರರಾಗಿದ್ದ ಸೈಯದ್ ಹೈ ಮತ್ತು ರೈಮಾನ್ ಎಂಬ ಅಬಿಸೀನಿಯಾ ದೇಶದ ವೀರರೂ, ಕನ್ನೋಜಿ ಎಂಬ ಬ್ರಾಹ್ಮಣನೂ ಇದ್ದರು. ಕನ್ನೋಜಿಯ ಸಲಹೆಯಂತೆಯೇ ಇಬ್ರಾಹಿಂಖಾನನು ವಿಜಯನಗರಕ್ಕೆ ಹೋಗಲು ನಿಶ್ಚಯಿಸಿದನು.

ಈ ನಾಲ್ವರೂ ವೇಷಾಂತರದಲ್ಲಿ ಪ್ರಯಾಣ ಬೆಳೆಸಿ ಶತ್ರುಗಳ ಕೈಯಿಂದ ಪಾರಾಗಿ, ಸುರಕ್ಷಿತವಾಗಿ ವಿಜಯನಗರವನ್ನು ತಲುಪಿದರು. ತನ್ನ ವಿಪನ್ನಾವಸ್ಥೆಯಲ್ಲಿ ತಾನು ರಾಮರಾಯನನ್ನು ಕಂಡರೆ ಅವನು ತನಗೆ ನೆರವೀಯಲು ನಿರಾಕರಿಸಬಹುದೆಂಬ ಸಂದೇಹದಿಂದ ಇಬ್ರಾಹಿಂಖಾನನು ವಿಜಯನಗರದ ಒಂದು ಛತ್ರದಲ್ಲಿ ತಂಗಿ. ರಾಮರಾಯನಿಗೆ ತನ್ನ ಪರಿಸ್ಥಿತಿಯನ್ನು ತಿಳಿಸಿ, ತನಗೆ ಆಶ್ರಯ ಕೊಡಬೇಕೆಂದು ಬೇಡಿ ಒಂದು ಪತ್ರವನ್ನು ಬರೆದು ಅದನ್ನು ಕನ್ನೋಜಿಯ ಮೂಲಕ ರಾಮರಾಯನಿಗೆ ಕಳುಹಿಸಿಕೊಟ್ಟನು.

ಕನ್ನೋಜಿಯು ಬಂದು ರತ್ನಕೂಟ ಅರಮನೆಯಲ್ಲಿ ರಾಮರಾಯನನ್ನು ಭೇಟಿಮಾಡಿ, ತಂದಿದ್ದ ಪತ್ರವನ್ನಿತ್ತು, ತನ್ನೊಡೆಯನ ದುಸ್ಥಿತಿಯನ್ನು ಆದ್ಯಂತವಾಗಿ ಹೇಳಿದನು. ಈಗ ತಾವು ರಾಮರಾಯನ ಆಶ್ರಯಕ್ಕೆ ಬಂದಿರುವುದಾಗಿಯೂ, ತಮಗೆ ಆಶ್ರಯವಿತ್ತು ರಕ್ಷಿಸಬೇಕೆಂದೂ ಪ್ರಾರ್ಥಿಸಿದನು.

ರಾಮರಾಯನು ಇಬ್ರಾಹಿಂಖಾನನ ಕರುಣ ಕಥೆಯನ್ನು ಶಾಂತವಾಗಿ ಆಲಿಸಿದನು. ಇಬ್ರಾಹಿಂಖಾನನ ಸ್ಥಿತಿಯನ್ನು ಕೇಳಿ ಮನ ಕರಗಿತು. ಅವನಿಗೆ ಆಗಿರುವ ಅನ್ಯಾಯವನ್ನು ಕೇಳಿ ಬಿದರೆಯ ಬರೀದ್‌ಷಹನ ಮೇಲೆ ರಾಮ

ರಾಯನಿಗೆ ಸಿಟ್ಟು ಬಂದಿತು. ಹಾಗಾದರೆ ಜಗತ್ತಿನಲ್ಲಿ ನಿಜವಾದ ಸ್ನೇಹಕ್ಕೆ ಬೆಲೆಯೇ ಇಲ್ಲವೇ ಎಂದು ಆಚ್ಚರಿಪಟ್ಟನು. ಲೋಭಿಯೂ, ವಿಶ್ವಾಸಘಾತುಕನೂ ಆದ ಬಿದರೆಯ ಸುಲ್ತಾನನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಿ, ಅವನಿಗೆ ತಕ್ಕ ಪಾಠ ಕಲಿಸಿಕೊಡಲು ನಿಶ್ಚಯಿಸಿ ಇಬ್ರಾಹಿಂ ಖಾನನ ಬಗ್ಗೆ ವಿಚಾರಿಸಿಕೊಂಡನು.

"ಈಗ ನಿಮ್ಮ ಒಡೆಯರು ಎಲ್ಲಿದ್ದಾರೆ?

"ಇಲ್ಲಿನ ಛತ್ರವೊಂದರಲ್ಲಿ ತಂಗಿದ್ದಾರೆ!"

"ಅವರೇಕೆ ನೇರ ಬಂದು ನನ್ನನ್ನು ಕಾಣಲಿಲ್ಲ! ನಾವು ರಕ್ಷಣೆ ಕೊಡುತ್ತೇವೋ ಇಲ್ಲವೋ ಎಂಬ ಸಂದೇಹವೇ? ಅಥವಾ ನಮ್ಮನ್ನೂ ಬರೀದ್‌ಷಹರಂತೆ ಭಾವಿಸಿದರೋ ಹೇಗೆ?" ನಗುತ್ತ ಕೇಳಿದ.

"ಪ್ರಭುಗಳು ಕ್ಷಮಿಸಬೇಕು. ತಮ್ಮ ಬಗ್ಗೆ ನಮಗೆ ಸಂಶಯ ಬಂದಿದ್ದರೆ ನಾವೇಕೆ ಇಲ್ಲಿ ಆಶ್ರಯ ಬಯಸಿ ಬರುತ್ತಿದ್ದೆವು? ಈಗ ನಮಗೆ ಇರುವ ಏಕಮಾತ್ರ ಮಿತ್ರರೆಂದರೆ ತಾವು. ಈಗ ನೀವು ನಮಗೆ ರಕ್ಷಣೆ ಕೊಟ್ಟರೆ ನಾವು ಮನುಷ್ಯರಾಗುತ್ತೇವೆ. ಇಲ್ಲವೇ ದೇಸಿಗರಂತೆ ತಿರುಗುತ್ತಾ – ಕಾಡುಪಾಲಾಗುತ್ತೇವೆ. ನಮ್ಮನ್ನು ನೀವು ಕೈಹಿಡಿದು ಉದ್ಧರಿಸಬೇಕು, ಇಬ್ರಾಹಿಂಖಾನರು ತಾವಿದ್ದ ಸ್ಥಿತಿಯಲ್ಲಿ ಬಂದು ಸಾಮ್ರಾಟರನ್ನು ನೋಡಲು ಸಂಕೋಚಪಟ್ಟುಕೊಂಡು ನನ್ನನ್ನು ತಮ್ಮ ಬಳಿಗೆ ಕಳುಹಿಸಿಕೊಟ್ಟಿದ್ದಾರೆ. ನೀವು ಅವರನ್ನ ನೋಡುವುದಾದರೆ ಈ ಕ್ಷಣದಲ್ಲಿ ಅವರನ್ನು ಸನ್ನಿಧಾನಕ್ಕೆ ಕರೆತರುತ್ತೇನೆ." ಎಂದು ಹೇಳಿದ ಚತುರನಾದ ಕನ್ನೋಜಿ.

"ನಮ್ಮನ್ನು ನೋಡಲು ಅವರೇಕೆ ಸಂಕೋಚಗೊಳ್ಳಬೇಕು! ವಿಜಯನಗರದ ಜನರು ಬಡವ ಬಲ್ಲಿದ, ಹಿರಿಯ ಕಿರಿಯ, ಉಚ್ಚ ನೀಚ, ಸ್ತ್ರೀಪುರುಷರೆಂಬ ಭೇದವಿಲ್ಲದೆ ದೀನದಲಿತರನ್ನು ದುಃಖಿಗಳನ್ನು ಸದಾ ಸ್ವಾಗತಿಸುತ್ತಾರೆ. ಈ ಮಾತನ್ನು ನಿಮ್ಮ ಸುಲ್ತಾನನಿಗೆ ತಿಳಿಸಿ. ಅವರು ಯಾವ ಸಂಕೋಚವಿಲ್ಲದೆ ಬಂದು ನಮ್ಮನ್ನು ಯಾವಾಗಬೇಕಾದರೂ ಬಂದು ನೋಡಲಿ. ಅವರಿಗೆ ಉಂಟಾಗಿರುವ ಅನ್ಯಾಯಕ್ಕೆ ನಾವು ತುಂಬ ಮರುಗಿದ್ದೇವೆಂದು, ಅವರು ನಮ್ಮ ಆಶ್ರಯದಲ್ಲಿ ಯಾವ ಭಯಭೀತಿಗಳಿಲ್ಲದೆ ನಿರಾತಂಕವಾಗಿ ಇರಬೇಕೆಂದು, ಅವರಿಂದ ಕಿತ್ತುಕೊಂಡಿರುವ ಅವರ ಧನಕನಕವಾಹನಗಳನ್ನು ಮತ್ತೆ ಬರೀದ್‌ಷಹನಿಂದ ಹಿಂದಕ್ಕೆ ಪಡೆಯಲು ಪ್ರಯತ್ನಿಸುವುದಾಗಿ ನಿಮ್ಮ ಸುಲ್ತಾನರಿಗೆ ತಿಳಿಸಿ, ಎಂದು ಹೇಳಿ ಇಬ್ರಾಹಿಂಖಾನನನ್ನೂ ಅವರ ಪರಿವಾರವನ್ನೂ ರಾಜೋಚಿತವಾದ ಬಿಡಾರದಲ್ಲಿ ಇಡಲು ಸಂಬಂಧಪಟ್ಟ ಅಧಿಕಾರಿಗಳಿಗೆ ಕೂಡಲೇ ಆಜ್ಞೆ ಮಾಡಿದನು.

ಕನ್ನೋಜಿಯು ಛತ್ರಕ್ಕೆ ಹಿಂದಿರುಗುವ ಮೊದಲೇ ಅರಮನೆಯ ಅಧಿಕಾರಿಗಳು ಬಂದು ಇಬ್ರಾಹಿಂಖಾನನನ್ನು ಭೇಟಿಯಾಗಿ ಅವನು ಇಳಿದುಕೊಳ್ಳಲು ಅನುಕೂಲವಾದ ಮನೆಯನ್ನು ಅವನಿಗೆ ತೋರಿಸಿ, ಅವನಿಗೆ ಬೇಕಾದ ಎಲ್ಲ ವಸ್ತುಗಳನ್ನೂ ವ್ಯವಸ್ಥೆ ಮಾಡಿದ್ದರು. ಈಗ ಕನ್ನೋಜಿ ಬಂದು ರಾಮರಾಯನ ಆಶ್ವಾಸನವನ್ನು ತಿಳಿಸಿದಾಗ ಇಬ್ರಾಹಿಂಖಾನನಿಗೆ 'ಇದೆಲ್ಲವೂ ಕನಸೋ ನನಸೋ ತಿಳಿಯದಾಯಿತು. ತಮಗೆ ವಿಜಯನಗರದಲ್ಲಿ ಇಂತಹ ರಾಜಯೋಗ್ಯವಾದ ಸ್ವಾಗತ ದೊರೆಯುವುದೆಂದು ಅವನು ಭಾವಿಸಿರಲಿಲ್ಲ. ಕನ್ನೋಜಿಯಿಂದ ರಾಮರಾಯನ ಹೇಳಿಕೆಯನ್ನು ಕೇಳಿದಮೇಲೆ ತನ್ನ ಕಷ್ಟಕಾರ್ಪಣ್ಯಗಳು ಇಂದಿಗೆ ಪರಿಹಾರವಾಯಿತೆಂದು ಅವನು ಹರ್ಷಿಸಿದನು.

ಅದೇ ದಿನ ರಾಮರಾಯನ ಕೋರಿಕೆಯಂತೆ ಇಬ್ರಾಹಿಂಖಾನನು ಅರಮನೆಯಲ್ಲಿ ರಾಮರಾಯನನ್ನು ಕಂಡು ಭೇಟಿಮಾಡಿದನು. ತನ್ನೊಡನೆ ತಂದಿದ್ದ ಪರ್ಶಿಯಾದೇಶದ ಅತ್ತರನ್ನೂ ಮುತ್ತುರತ್ನಗಳ ಹಿಡಿಯುಳ್ಳ ಒಂದು ವಿದೇಶಿ ಉಕ್ಕಿನ ಕಠಾರಿಯನ್ನೂ ಸ್ನೇಹದ ಕಾಣಿಗೆಯಾಗಿ ರಾಮರಾಯನಿಗೆ ಇತ್ತು ಕುರ್ನಿಸಾತುಮಾಡುತ್ತ "ಸಾಮ್ರಾಟರು ಗರೀಬನ ಈ ಅಲ್ಪ ಕಾಣಿಕೆಗಳನ್ನು ಸ್ವೀಕರಿಸುವ ಕೃಪೆಮಾಡಬೇಕು!" ಎಂದು ನಮ್ರವಾಗಿ ಹೇಳಿದನು.

"ನೀವು ಈ ಬಗ್ಗೆ ಸಂಕೋಚಗೊಳ್ಳುವ ಕಾರಣವಿಲ್ಲ ಇಬ್ರಾಹಿಂಖಾನರೇ. ನಿಮ್ಮ ಸೇಹಪ್ರೀತಿವಿಶ್ವಾಸದ್ಯೋತಕವಾಗಿ ನೀವು ಅರ್ಪಿಸಿರುವ ಈ ಕಾಣಿಕೆಗಳೇ ನಮಗೆ ಹೆಚ್ಚು ಅಮೂಲ್ಯವಾದುವು. ಇವು ನಿಮ್ಮ ನಿರ್ಮಲಾಂತಃಕರಣ, ಸ್ನೇಹಬುದ್ಧಿಯ ಸಂಕೇತವಾಗಿವೆ. ಇವುಗಳನ್ನು ಸ್ವೀಕರಿಸಲು ನಮಗೆ ತುಂಬಾ ಸಂತೋಷವಾಗುತ್ತದೆ." ಎಂದು ಹೇಳಿ, ಅವನಿಗೆ ಕುಳಿತುಕೊಳ್ಳಲು ಆಸನ ತೋರಿಸಿದನು.

"ಪ್ರಭುಗಳು ನಮ್ಮನ್ನು ಹೊಗಳಿ, ನಮ್ಮ ಅಲ್ಪತನಕ್ಕೆ ನಾಚುವಂತೆ ಮಾಡಬಾರದು. ಖಾವಂದರ ಪಾದದೂಳಿನ ಯೋಗ್ಯತೆ ಇಲ್ಲದ ನನ್ನನ್ನು ಹಾಗೆಲ್ಲಾ ಹೊಗಳಬಾರದು. ನಾನು ಜೀವನದಲ್ಲಿ ತುಂಬ ನೊಂದಿರುವ ವ್ಯಕ್ತಿ. ನಿಮಗೆ ಶರಣು ಬಂದಿದ್ದೇನೆ. ನೀವು ನನ್ನ ಮೇಲೆ ಅನುಗ್ರಹಿಸಿದರೆ ನಾನು ಕೃತಾರ್ಥನಾದಂತೆಯೇ ಸರಿ!" ಎಂದ ವಿನೀತನಾಗಿ ಇಬ್ರಾಹಿಂಖಾನ್.

"ನೀವು ನಮ್ಮ ಮಾತನ್ನು ಅನ್ಯಥಾ ಭಾವಿಸಬಾರದು. ನಿಮ್ಮನ್ನು ನಾಚಿಸಲೆಂದಾಗಲೀ, ನಿಮ್ಮ ಬಡತನವನ್ನು ಮೂದಲಿಸಲೆಂದಾಗಲೀ ನಾವು ಆ ಮಾತುಗಳನ್ನು ಹೇಳಲಿಲ್ಲ. ನೀವು ಕೊಟ್ಟ ಕಾಣಿಕೆಗಳ ಹಿರಿಮೆಯನ್ನು ತೋರಿಸಲು ಹಾಗೆ ಹೇಳಿದೆವು ಅಷ್ಟೆ. ನಾವು ಹೇಳಿದ ಮಾತು ಅತಿಶಯೋಕ್ತಿಯಲ್ಲ. ನೋಡಿ,

ಈ ಅತ್ತರು ತನ್ನ ಸೌರಭವನ್ನು ಉಚ್ಚ ನೀಚನೆಂಬ ಭೇದವಿಲ್ಲದೆ ಎಲ್ಲೆಡೆಗಡ ಹರಡುವಂತೆ, ನಿಮ್ಮ ಸ್ನೇಹ, ನಿರ್ಮಲಾಂತಃಕರಣಗಳೂ, ನಮ್ರವಾದ ನಡೆ ನುಡಿಗಳೂ ಎಲ್ಲೆಡೆಗೂ ಹರಡಿವೆ. ಅತ್ತರಿನಂತೆಯೇ ನಿಮ್ಮ ನಡೆನುಡಿಗಳು ನಮಗೆ ಪ್ರಿಯವಾಗಿವೆ." ಎಂದು ಹೇಳಿದ ರಾಮರಾಯ ಅತ್ತರಿನ ಭರಣಿ ಯನ್ನು ಬಾರಿಬಾರಿಗೂ ಮೂಸಿ ನೋಡಿ ಆನಂದಿಸುತ್ತಾ.

"ಪ್ರಭುಗಳ ರಸಿಕತೆ. ವಿನೋದಶೀಲತೆ, ಸೂಕ್ಷ್ಮಗ್ರಹಣ ಬುದ್ಧಿ, ಉದಾರಚರಿತೆ, ಸ್ನೇಹ ಪ್ರೀತಿವಿಶ್ವಾಸಗಳನ್ನು ನಾನು ಇದುವರೆಗೆ ಕೇಳಿ ಬಲ್ಲವ ನಾಗಿದ್ದೆ. ಈಗ ಇವುಗಳನ್ನು ನೋಡಿ ತಿಳಿದಂತೆ ಆಯಿತು. ಖಾವಂದರ ಚಿತ್ತಕ್ಕೆ ನಾನು ಬಂದಿದ್ದರೆ ನನ್ನ ನಸೀಬು ದೊಡ್ಡದೆಂದು ಹೇಳಬೇಕು!" ಎಂದು ಹೇಳಿದ ಇಬ್ರಾಹಿಂಖಾನ್ ವಿನೋದವಾಗಿ.

"ನೀವು ನಮ್ಮಲ್ಲಿ ಚಾಕರಿಗೇ ಸೇರಲು ಬಂದಿದ್ದಿರೋ ಇಲ್ಲವೇ ರಕ್ಷಣೆ ಬಯಸಿ ಬಂದಿದ್ದಿರೋ ನನಗೆ ತಿಳಿಯದಾಗಿದೆ!"

"ಏಕೆ ಪ್ರಭು?"

"ನೀವು ಹೊಗಳುವ ಕಲೆಯಲ್ಲಿ ಒಳ್ಳೆ ಜಾಣರಿರುವಂತೆ ತೋರುತ್ತದೆ. ನೀವು ಸ್ಪರ್ಧೆಗೆ ನಿಂತರೆ ನಮ್ಮ ದರಬಾರಿನ ಸ್ತುತಿಪಾಠಕರು – ವಂದಿಮಾಗಧರು ಪಾಪ, ಹಿಂದೆ ಬಿದ್ದಾರು!" ಎಂದು ಹೇಳಿ ನಕ್ಕ.

"ನಮ್ಮ ಪಾದದೂಳಿನ ಸೋಂಕಿನಿಂದ ಪರಶುಶಿಲೆಯಿಂದ ಹಿತ್ತಾಳೆಯು ಚಿನ್ನವಾದಂತೆ ನಾನು ಹೊಗಳುಭಟ್ಟನಾಗಿದ್ದರೆ ಅದು ನನ್ನ ತಪ್ಪಲ್ಲ ಪ್ರಭು! ಅದು ನಿಮ್ಮ ತಪ್ಪು!"

"ಅದು ಹೇಗೆ?"

"ನನ್ನನ್ನು ನೋಡುತ್ತಲೇ ನೀವು ನಮ್ಮನ್ನು ಹೊಗಳಿ ಅಟ್ಟಕ್ಕೇರಿಸಿದಿರಿ. ನೀವೆಲ್ಲಿ? ನಾನೆಲ್ಲಿ? ನಿಮ್ಮ ಯೋಗ್ಯತೆಯೇನು? ನನ್ನ ಯೋಗ್ಯತೆ ಏನು? ನೀವು ವಿಜಯನಗರದ ಅನಭಿಷಿಕ್ತ ಸಾಮ್ರಾಟರು. ನಾನು ನಿರ್ಗತಿಕ! ದೇಶ ಕೋಶಗಳಿಲ್ಲದ ಗರೀಬ ನಾನು! ನಿಮ್ಮಲ್ಲಿ ಭಿಕ್ಷೆ ಬೇಡಲು ಬಂದ ಫಕೀರ! ನನ್ನನ್ನು ಪ್ರಥಮ ನೋಟದಲ್ಲೇ ಮಿತ್ರನೆಂದು ಬಗೆದ ನಿಮ್ಮ ಹೃದಯದ ಸಿರಿ ವಂತಿಕೆಯ ಮುಂದೆ ನಾನೆಷ್ಟು ದರಿದ್ರನೆಂಬುದು ನನಗೆ ಅರಿವಾಗಿದೆ. ನಿಮ್ಮನ್ನು ಕಂಡು ನಾನು ಮನ್ಮೂಕನಾಗಿದ್ದೇನೆ. ಏನು ಹೇಳಬೇಕೆಂಬುದು ತಿಳಿಯ ದಾಗಿದೆ. ನಿಮ್ಮ ಕೃಪೆಗೆ ನಾನು ಪಾತ್ರನಾದುದು ನಿಮ್ಮ ಅನುಗ್ರಹ ಬುದ್ಧಿ ಯಿಂದಲೇ ಹೊರತು, ನನ್ನ ಯೋಗ್ಯತೆಯಿಂದಲ್ಲ. ಆದರೂ ಖಾವಂದರು

ನನ್ನ ಮೇಲೆ ವಿಶೇಷ ಕೃಪೆಮಾಡಿರುವುದನ್ನು ನೋಡಿದರೆ ನಾನು ಖಂಡಿತ ಭಾಗ್ಯಶಾಲಿಯೇ ಸರಿ!"

"ನಾವು ನಿಮ್ಮ ಮೇಲೆ ಅನುಗ್ರಹಿಸಲಿಲ್ಲ. ಕೃಪೆಮಾಡಲೂ ಇಲ್ಲ. ಇದೆಲ್ಲವೂ ದರ್ಪಣ ನ್ಯಾಯ ಅಷ್ಟೆ!"

"ತಮ್ಮ ಮಾತು ನನಗೆ ಅರ್ಥವಾಗಲಿಲ್ಲ ಪ್ರಭು!"

"ನೀವು ನಮ್ಮಲ್ಲಿ ವಿಶ್ವಾಸ ತೋರಿಸಿದಿರಿ. ಅದನ್ನೇ ನಾವು ಪ್ರತಿಬಿಂಬಿಸಿದ್ದೇವೆ ಅಷ್ಟೇ. ನೀವು ನಮ್ಮನ್ನು ಆದರಿಸಿ ಗೌರವಿಸಿದಿರಿ. ನಾವು ಅದನ್ನೇ ಹಿಂದಿರುಗಿಸಿದೆವು. ನೀವು ನಮ್ಮ ಸ್ನೇಹ ಬಯಸಿ, ಆಶ್ರಯತೋರಿದ್ದೀರಿ; ನಾವು ಅದನ್ನೇ ಕೊಟ್ಟಿದ್ದೇವೆ. ಇದಕ್ಕಿಂತಲೂ ಹೆಚ್ಚಿನದೇನನ್ನೂ ನಾವು ಮಾಡಲಿಲ್ಲ" ಎಂದು ಹೇಳಿ ನಕ್ಕ.

"ಸಕಲವನ್ನೂ ತಿಳಿದ ಪ್ರಭುಗಳಿಗೆ ನಾನು ಏನುತಾನೆ ಹೇಳಬಲ್ಲೆ? ಆದರೆ ಸರ್ವಸ್ವವನ್ನೂ ಕಳೆದುಕೊಂಡು ನಿಲ್ಲಲು ನೆಲೆ ಇಲ್ಲದೆ ಪರದೇಶಿಯಂತೆ ಬಂದು ನಿಮ್ಮ ಎದುರಿಗೆ ನಿಂತಾಗ ನೀವು ನನ್ನನ್ನು ಕೈಹಿಡಿದು ಉದ್ಧರಿಸಿದ್ದೀರಿ. ಇದಕ್ಕೆ ನಾನು ಆಜೀವ ಪರ್ಯಂತ ಕೃತಜ್ಞನಾಗಿರುತ್ತೇನೆ ಎಂದಷ್ಟು ಮಾತ್ರ ಹೇಳಬಲ್ಲೆ." ಕೃತಜ್ಞತೆಯಿಂದ ಭಾರವಾದ ಧ್ವನಿಯಲ್ಲಿ ಹೇಳಿದ ಇಬ್ರಾಹಿಂ ಖಾನ್.

"ಇದನ್ನು ನೀವು ಸ್ಮರಿಸುವುದಾದರೆ ಅದು ನಿಮ್ಮ ಕೃತಜ್ಞತೆಗೆ ಸೇರಿದೆ. ಆದರೆ ನಿಮಗೆ ನೆರವು ನೀಡುವುದರಲ್ಲಿ ನಾವು ನಮ್ಮ ಕರ್ತವ್ಯವನ್ನು ಪಾಲಿಸಿದ್ದೇವೆಯೇ ಹೊರತು ಹೆಚ್ಚಿಗೆ ಏನನ್ನೂ ಮಾಡಲಿಲ್ಲ. ಹೆಚ್ಚಿಗೆ ನಿಮಗೆ ಏನಾದರೂ ಸಹಾಯ ಮಾಡುವುದಿದ್ದರೆ – ನಿಮಗೆ ಬಿದರೆಯ ಸುಲ್ತಾನನಿಂದ ಆಗಿರುವ ಅನ್ಯಾಯವನ್ನು ಸರಿಪಡಿಸಿಕೊಳ್ಳಲು ನನ್ನಿಂದಾದಷ್ಟು ಪ್ರಯತ್ನ ಮಾಡಬೇಕು. ಅದನ್ನು ಮಾಡುತ್ತೇನೆ. ಆ ವಿಶ್ವಾಸಘಾತುಕ ಬರೀದ್‌ಷಹನು ನಿಮ್ಮಿಂದ ಮೋಸದಿಂದ ಕಿತ್ತುಕೊಂಡ ಪ್ರತಿಯೊಂದು ವಸ್ತುವನ್ನೂ ಹಿಂದಿರುಗಿಸುವಂತೆ ಇಂದೇ ಪತ್ರ ಬರೆಯುತ್ತೇನೆ. ನನ್ನ ಮಾತನ್ನು ಧಿಕ್ಕರಿಸಿದರೆ, ಮುಂದೆ ಬಲಾತ್ಕರಿಸಬೇಕಾಗುವುದೆಂಬ ಎಚ್ಚರಿಕೆಯನ್ನು ಈಗಲೇ ಕೊಡುತ್ತೇನೆ. ಬರೀದ್‌ಷಹನು ವಿವೇಕಿಯಾಗಿದ್ದರೆ ರಾಜನೀತಿನಿಪುಣನಾಗಿದ್ದರೆ, ಇಷ್ಟು ಅಲ್ಪ ಲಾಭಕ್ಕಾಗಿ ವಿಜಯನಗರದ ಶತ್ರುತ್ವವನ್ನು ಸೆರಗಿಗೆ ಗಂಟು ಹಾಕಿಕೊಳ್ಳುವುದಿಲ್ಲವೆಂದು ತಿಳಿದಿದ್ದೇನೆ."

"ಪ್ರಭು ನಿಮ್ಮ ವಿಶ್ವಾಸ ನನ್ನ ಮೇಲೆ ಆದಂತಾಯಿತು. ಇದನ್ನು ನಾನು ಹೇಗೆ ತೀರಿಸಬೇಕೋ ನನಗೆ ತಿಳಿಯದಾಗಿದೆ. ನೀವು ಬಾಯಾರಿ

ಒಂದು ಬೊಗಸೆ ನೀರು ಬೇಡಿದವನಿಗೆ ಕ್ಷೀರಸಮುದ್ರವನ್ನೇ ತೆರೆದಿದ್ದೀರಿ. ಹಸಿವಿನಿಂದ ಕಂಗೆಟ್ಟು ತುತ್ತು ಅನ್ನ ಬೇಡಿದವನಿಗೆ ಮೃಷ್ಟಾನ್ನ ಬಡಿಸಿದ್ದೀರಿ. ಈ ಉಪಕಾರವನ್ನು ನಿಮಗೆ ನಾನು ಹೇಗೆ ತೀರಿಸಲಿ?"

"ನೀವು ಹಾಗೆಲ್ಲಾ ತಿಳಿಯಬಾರದು. ಇಲ್ಲಿ ಉಪಕಾರ, ಋಣದ ಪ್ರಶ್ನೆಯೇ ಇಲ್ಲ. ನೀವು ನಮ್ಮ ಮಿತ್ರರಾದ ಮೇಲೆ ಮಿತ್ರರ ಸಲುವಾಗಿ ನಾವು ಇಷ್ಟು ಅಲ್ಪ ಸಹಾಯ ಮಾಡುವುದರಲ್ಲಿ ಏನು ವಿಶೇಷವಿದೆ? ಅಲ್ಲದೆ ಪ್ರೀತಿ ವಿಶ್ವಾಸಗಳು ಸಹಜವಾಗಿ ಮೊಳೆಯುತ್ತವೆ. ನಿಮ್ಮ ಪ್ರೀತಿ ವಿಶ್ವಾಸ ನಮ್ಮ ಹೃದಯದಲ್ಲಿ ಪ್ರತಿಬಿಂಬಿಸಿ ಈಗ ಅದು ನಿಮ್ಮವೇ ಆಗಿವೆ. ಇಲ್ಲಿ ಋಣದ ಪ್ರಶ್ನೆ ಏಳುವುದಿಲ್ಲ. ನೀವು ನಮ್ಮ ಮಿತ್ರರಾದ ಮೇಲೆ ಸಂಕೋಚಕ್ಕೆ ಎಡೆಯಿಲ್ಲ. ನಿಮ್ಮ ತೊಂದರೆಗಳೇನಿದ್ದರೂ ನೀವು ನಿಸ್ಸಂಕೋಚವಾಗಿ ನಮ್ಮೊಂದಿಗೆ—ನಿಮ್ಮ ಗೆಳೆಯರೊಂದಿಗೆ ಹೇಳಿಕೊಳ್ಳಿ. ಅದರ ನಿವಾರಣೆಗೆ ನಮ್ಮಿಂದಾಗುವ ಪ್ರಯತ್ನ ಮಾಡುತ್ತೇವೆ. ಆಗಲೇ ನಮ್ಮ ನಿಮ್ಮಲ್ಲಿ ನಿಜವಾದ ಸ್ನೇಹವಿದೆ ಎಂದು ಅರ್ಥ."

"ಪ್ರಭುಗಳ ಕರುಣೆ ನಮ್ಮ ಮೇಲೆ ಅಪಾರವಾಗಿದೆ. ನಿಮ್ಮ ದರ್ಶನದಿಂದ ನಮ್ಮ ಎಲ್ಲ ತೊಂದರೆಗಳೂ ನಿವಾರಣೆಯಾದುವು. ಆಶ್ರಿತವತ್ಸಲರೂ, ಧರ್ಮಪಾರಾಯಣರೂ, ಸಜ್ಜನಮಿತ್ರರೂ ಆಗಿರುವ ನಿಮ್ಮಲ್ಲಿ ಆಶ್ರಯ ಪಡೆದ ಮೇಲೆ ನಮಗೆ ಬಡತನವೆಲ್ಲಿ ಬಂತು!"

"ನಿಮ್ಮ ಹೃದಯಾಂತರಾಳದಿಂದ ಬರುವ ಮಾತು ಕೇಳಿ ನಮಗೆ ನಾವಿಷ್ಟು ದೊಡ್ಡಮನುಷ್ಯರೇ ಎಂದು ಕೇಳಿಕೊಳ್ಳುವಂತೆ ಆಗಿದೆ. ಇರಲಿ, ನಿಮ್ಮ ನಿರ್ಮಲವಾದ ಸ್ನೇಹ ನಮಗೆ ಅಮೂಲ್ಯವಾದುದು. ಏಕೆಂದರೆ ನಾವು ಬಹಳ ದಿನಗಳಿಂದಲೂ ಹಿಂದೂಮುಹಮುದೀಯರ ಸಖ್ಯಸಾಮರಸ್ಯಗಳ ಕನಸು ಕಾಣುತ್ತಿದ್ದೇವೆ. ಅದನ್ನು ಪ್ರಥಮಬಾರಿಗೆ ಕಾರ್ಯಗತ ಮಾಡುವ ಸುಯೋಗ ದೊರೆತುದಕ್ಕೆ ನಾವಿಂದು ನಿಜವಾಗಿಯೂ ಭಾಗ್ಯಶಾಲಿಗಳು. ಅಖಂಡ ಹಿಂದೂಸ್ಥಾನದಲ್ಲಿ ಹಿಂದೂಮುಹಮುದೀಯರು ಎಲ್ಲ ಅಂತಃಕಲಹಗಳನ್ನು ಮರೆತು ಸಹೋದರರಂತೆ ಬಾಳಬೇಕೆಂಬುದೇ ನಮ್ಮ ಬಹುದಿನಗಳ ಹಾರೈಕೆ, ಈ ನನ್ನ ಕನಸು ಇಂದು ನನಸಾಗಿದೆ. ನೀವು ವಿಜಯನಗರದಲ್ಲಿ ಮನಸ್ಸು ಬಂದಷ್ಟು ಕಾಲ ಮಿತ್ರರಂತೆ, ಸಹೋದರರಂತೆ ಇರಬಹುದು. ನಮ್ಮ ಆಕ್ಷೇಪವಿಲ್ಲ. ಈ ಗಳಿಗೆಯಿಂದ ನೀವು ವಿಜಯನಗರದ ಮಿತ್ರರು, ನಿಮ್ಮ ಮಿತ್ರರು ನಮ್ಮ ಮಿತ್ರರು—ನಿಮ್ಮ ಶತ್ರುಗಳು ನಮ್ಮ ಶತ್ರುಗಳು. ನೀವು ಗೋಲ್ಕಂಡದ ಸಿಂಹಾಸನ ದೊರೆಯುವವರೆಗೆ ಇಲ್ಲೇ ನೆಮ್ಮದಿಯಿಂದ ಇರಿ. ಪ್ರತಿಯೊಂದಕ್ಕೂ ನಿಮಗೆ ನಮ್ಮನ್ನು ಕೇಳುವುದಕ್ಕೆ ಸಂಕೋಚ ಉಂಟಾಗುವುದಾದರೆ ನಾನು ನಿಮಗೊಂದು ಜಹಗೀರಿಯನ್ನು ಕೊಡು

ತ್ತೇನೆ. ಅದನ್ನು ಅನುಭವಿಸಿಕೊಂಡು ನೀವು ನಿರಾತಂಕವಾಗಿ ಇಲ್ಲಿ ಇರಬಹುದು." ಎಂದು ಹೇಳಿದ ರಾಮರಾಯ.

" ಪ್ರಭು, ನೀವು ನಮ್ಮ ಮೇಲೆ ಕರೆದಿರುವ ಅಮೃತವೃಷ್ಟಿಯೇ ಸಾಕಾಗಿದೆ. ಇನ್ನೇಕೆ ನಮಗೆ ಬೇರೆ ಬಳುವಳಿ ?"

" ಹಾಗೆಲ್ಲ ನೀವು ಇಲ್ಲಿ ಯಾವುದಕ್ಕೂ ತೊಂದರೆಪಡಬಾರದು, ಸಂಕೋಚ ಪಡಬಾರದು. ಅಲ್ಲದೆ ನಮ್ಮ ನಿಮ್ಮ ಸ್ನೇಹದ ನಡುವೆ ಉಚ್ಚನೀಚರೆಂಬ ಭಾವನೆ ಬರಬಾರದು. ನಮ್ಮ ಮಿತ್ರರಿಗೆ ನಾವು ಮೆಚ್ಚಿ ಒಂದು ಜಹಗೀರಿಯನ್ನು ಕೊಟ್ಟರೆ ನಮಗೆ ಯಾವ ನಷ್ಟವೂ ಇಲ್ಲ. ನಮ್ಮ ನಿಮ್ಮ ಚಿರಂತರ ಸ್ನೇಹಕ್ಕೆ ಇದು ಸಂಕೇತವಾಗಿರಲಿ!" ಎಂದು ಹೇಳಿ ಅಂದೇ, ಅದೇ ಗಳಿಗೆಯಲ್ಲೇ ಪ್ರಧಾನರನ್ನು ಬರಮಾಡಿಕೊಂಡು, ಇದುವರೆಗೆ ಅಂಬರ್ ಖಾನನೆಂಬ ಸರದಾರನು ಅನುಭವಿಸುತ್ತಿದ್ದ ಪೆನುಗೊಂಡೆ ಮಂಡಲವನ್ನು ಇಬ್ರಾಹಿಂಖಾನನಿಗೆ ಜಹಗೀರಿಯಾಗಿ ಕೊಟ್ಟು, ಅಧಿಕಾರದ ವೀಳ್ಯವನ್ನೂ ಕೊಟ್ಟನು.

ಇಬ್ರಾಹಿಂಖಾನನು ಮಹಾಪ್ರಸಾದವೆಂದು ಅದನ್ನು ಸ್ವೀಕರಿಸಿದನು. ರಾಮರಾಯನನ್ನು ವಂದಿಸಿ ತನ್ನ ಬಿಡಾರಕ್ಕೆ ಹಿಂದಿರುಗಿ ಸುಪ್ಪತ್ತಿಗೆಯ ಮೇಲೆ ಉರುಳಿದನು. ಬಹು ಕಾಲ ಅವನಿಗೆ ಇದೆಲ್ಲ ಕನಸೋ ನನಸೋ ತಿಳಿಯದಾಯಿತು. ಅವನು ರಾಮರಾಯನ ಸದ್ಗುಣಗಳನ್ನು ಕೊಂಡಾಡುತ್ತಾ ತನ್ನ ತೊಂದರೆಯನ್ನೆಲ್ಲಾ ಮರೆತನು. ಆದರೆ ರಾಮರಾಯನು ತನಗೆ ಅನುಗ್ರಹಿಸಿದ್ದ ಜಹಗೀರಿ ಹೂವಿನ ಹಾಸಿಗೆಯಲ್ಲಿ ಹಾವಿನ ಹೆಡೆ. ಅದನ್ನು ಹಿಡಿದುಕೊಂಡುದು ಮೃತ್ಯುವಿಗೇ ಆಹ್ವಾನ ಎಂಬುದು ಅವನಿಗೆ ಆಗ ತಿಳಿಯದೆ ಹೋಗಿತ್ತು.

ರಾಮರಾಯನು ಇಬ್ರಾಹಿಂನಿಗೆ ಸ್ನೇಹದ ಕಾಣಿಕೆಯಾಗಿ ಕೊಟ್ಟಿದ್ದ ಪೆನುಗೊಂಡೆ ಮಂಡಲದ ಜಹಗೀರಿ—ಅಂಬರಖಾನನೆಂಬ ಸರದಾರನಿಗೆ ಸೇರಿತ್ತು. ಇವನು ಅಬಸೀನಿಯಾ ದೇಶದವನು. ರಾಮರಾಯನ ಸೇವೆಯಲ್ಲಿ ಬಹುಕಾಲದಿಂದಲೂ ಇದ್ದು, ಸ್ವಶಕ್ತಿ ಸಾಮರ್ಥ್ಯಗಳಿಂದಲೂ, ಸ್ವಾಮಿನಿಷ್ಠೆಯಿಂದಲೂ ಮುಂದಕ್ಕೆ ಬಂದಿದ್ದ ದಳಪತಿ. ಆದರೆ ಇತ್ತೀಚೆಗೆ ಅವನು ರಾಮರಾಯನು ತನ್ನಲ್ಲಿ ಇಟ್ಟಿದ್ದ ನಂಬಿಕೆಯನ್ನು ದುರುಪಯೋಗ ಪಡಿಸಿಕೊಂಡು, ತನ್ನ ಜಹಗೀರಿಯ ಜನರಿಗೆ ಉಪಟಳ ಕೊಡಲು ಆರಂಭಿಸಿದ್ದನು. ಅವನು ರಾಮರಾಯನಿಗೆ ಸಲಕಂ ಸಹೋದರರ ವಿರುದ್ಧ ನಡೆದ ರಾಜ್ಯಕ್ರಾಂತಿಯಲ್ಲಿ ನೆರವಾಗಿದ್ದನು. ತಾನು ಅಧಿಕಾರಕ್ಕೆ ಬರುತ್ತಲೂ ರಾಮರಾಯನು ಇದನ್ನು ನೆನೆದು ಅವನಿಗೆ ಪೆನುಗೊಂಡೆಯನ್ನು ಜಹಗೀರಿಯಾಗಿ ಕೊಟ್ಟಿದ್ದನು. ಅವನು ಯುದ್ಧ ವಿದ್ಯೆಯಲ್ಲಿ ಸಮರ್ಥನಿದ್ದಂತೆ ಆಡಳಿತದಲ್ಲಿ ಸಮರ್ಥನಲ್ಲವೆಂಬ ಅಂಶ ಮನಗಂಡು

ಅವನನ್ನು ಪೆನುಗೊಂಡೆಯಿಂದ ಹಿಂದಕ್ಕೆ ಕರೆಸಿಕೊಂಡು ತನ್ನ ಸಹೋದರರ ಮೈಗಾವಲು ಪಡೆಯ ದಳಪತಿಯಾಗಿ ನೇಮಿಸಿದ್ದನು. ಆದರೆ ಜಹಗೀರಿ ಮಾತ್ರ ಅವನ ಕೈತಪ್ಪಿರಲಿಲ್ಲ. ಈ ಬದಲಾವಣೆಯನ್ನು ಕಂಡು ಅಂಬರ್ ಖಾನನಿಗೆ ಅಸಮಾಧಾನವಾಯಿತು. ಇದನ್ನು ರಾಮರಾಯನ ಎದುರಿಗೇ ಒಂದೆರಡು ಬಾರಿಗೆ ಪ್ರಕಟಿಸಿದ್ದ. ಆದರೂ ಯಾವ ಪ್ರಯೋಜನವಾಗಲಿಲ್ಲ. ರಾಮರಾಯನು ಅವನಿಗೆ ವಾಸ್ತವ ಸಂಗತಿಯನ್ನು ತಿಳಿಸಿ, ರಾಜಧಾನಿಯಲ್ಲಿದ್ದರೆ ದೇಶಕ್ಕೆ ಅವನಿಂದ ಹೆಚ್ಚಿನ ಸೇವೆ ಸಲ್ಲುವುದೆಂದು ಸ್ಪಷ್ಟವಾಗಿ ಹೇಳಿ ಅವನ ಕೋರಿಕೆಯನ್ನು ತಳ್ಳಿಹಾಕಿದ್ದನು. ತನಗೆ ಆಗದವರು ಯಾರೋ ರಾಮರಾಯನಿಗೆ ಚಾಡಿ ಹೇಳಿ ಹೀಗೆ ತನ್ನ ಸ್ಥಳಾಂತರಕ್ಕೆ ಕಾರಣರಾಗಿದ್ದಾರೆ ಎಂದು ರಾಮಯನ ಮೇಲೆ ಪ್ರಥಮಬಾರಿಗೆ ಅಸಮಾಧಾನ ಉಂಟಾಯಿತು. ಅಲ್ಲದೆ ಅವನು ತನ್ನ ಮಿತ್ರರೆದುರು ಇದನ್ನು ಪ್ರಕಟಿಸಿ, ತನ್ನ ಒಳಗುದಿಯನ್ನು ತೋಡಿಕೊಂಡಿದ್ದನು. ಅವನು ಸಿಟ್ಟಿನ ಭರದಲ್ಲಿ ಆಡಿದ್ದ ಒಂದೆರಡು ಮಾತುಗಳು ರಾಮರಾಯನ ಕಿವಿಗೂ ಬಿದ್ದು, ಅವನು ಕರೆಸಿ ಅಂಬರಖಾನನಿಗೆ ಬುದ್ಧಿ ಹೇಳಿದ. ಇದರಿಂದ ಯಾವ ಪ್ರಯೋಜನವಾಗಲಿಲ್ಲ. ಇದರ ಬದಲು ರಾಮರಾಯನ ಮೇಲೆ ಅವನಿಗಿದ್ದ ದ್ವೇಷ ಹೆಚ್ಚಾಯಿತು. ಅವನು ರಾಮರಾಯನು ತನಗೆ ಅನ್ಯಾಯಮಾಡಿರುವನೆಂದೂ, ಸಹಾಯಮಾಡಿದ ತನಗೇ ದ್ರೋಹ ಬಗೆದಿರುವನೆಂದೂ ವೆಂಕಟಾದ್ರಿ ತಿರುಮಲರ ಮನಸ್ಸು ಕೆಡಿಸಲು ಪ್ರಯತ್ನಿಸಿದ್ದ. ಇದನ್ನು ರಾಮರಾಯನು ಹೇಗೆ ತಿಳಿದುಕೊಂಡನೋ, ಅಂಬರ್ ಖಾನನ ಕೈಯಿಂದ ಜಹಗೀರಿಯನ್ನೂ ಅಂಗರಕ್ಷಕ ದಳದ ಅಧಿಕಾರವನ್ನೂ ತಪ್ಪಿಸಿ, ಅವನನ್ನು ಸೈನ್ಯಕ್ಕೆ ವರ್ಗಾಯಿಸಬೇಕೆಂದಿದ್ದನು. ಈ ಸಮಯದಲ್ಲಿ ಇಬ್ರಾಹಿಂ ಖಾನನು ಅವನ ಆಶ್ರಯಕ್ಕೆ ಬಂದಿದ್ದನು. ಸ್ನೇಹದ ಭರದಲ್ಲಿ ತಾನೇನು ಮಾಡುತ್ತಿರುವೆನೆಂದು ಆಲೋಚಿಸದೆ ರಾಮರಾಯನು ಪೆನುಗೊಂಡೆಯನ್ನು ಅಂಬರ್ ಖಾನನಿಗೆ ತಪ್ಪಿಸಿ ಇಬ್ರಾಹಿಂ ಖಾನನಿಗೆ ಕೊಟ್ಟುಬಿಟ್ಟಿದ್ದ. ಎಲ್ಲವೂ ಅನಿರೀಕ್ಷಿತವಾಗಿ ನಡೆದುಹೋಗಿತ್ತು. ಮುಂದೆ ತಾನು ಹೀಗೆ ಮಾಡಿದುದು ದುಡುಕಾಯಿತೆಂದು ರಾಮರಾಯನಿಗೆ ಅನಿಸಿತಾದರೂ ಈ ವೇಳೆಗೆ ಇಬ್ರಾಹಿಂ ಖಾನನಿಗೆ ಅಧಿಕಾರವನ್ನು ವಹಿಸಿಕೊಟ್ಟಾಗಿತ್ತು. ಈಗ ಅವನು ತನ್ನ ವಚನವನ್ನು ಹಿಂದಕ್ಕೆ ತೆಗೆದುಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ.

ತನ್ನನ್ನು ಈ ಬಗ್ಗೆ ಒಂದು ಮಾತು ಕೇಳದೆ, ತನ್ನ ಒಪ್ಪಿಗೆಯನ್ನು ಪಡೆಯದೆ ತನ್ನದಾಗಿದ್ದ ಜಹಗೀರಿಯನ್ನು ಕಾರಣವಿಲ್ಲದೆ ತನ್ನ ಕೈತಪ್ಪಿಸಿ ಇಬ್ರಾಹಿಂ ಖಾನನಿಗೆ ಒಪ್ಪಿಸಿದುದರಿಂದ ಅಂಬರ್ ಖಾನನಿಗೇ ರಾಮರಾಯನ ಮೇಲೆ ಭಯಂ

ಕರ ಸಿಟ್ಟುಬಂದಿತ್ತು. ಇದಕ್ಕೆಲ್ಲ ಕಾರಣನಾದ ಇಬ್ರಾಹಿಂಖಾನನ ಮೇಲೂ ಅಸಮಾಧಾನವಾಗಿತ್ತು. ಅವನು ತನಗಾದ ಅನ್ಯಾಯವನ್ನು ಸರಿಪಡಿಸಿಕೊಳ್ಳಲು ನಿಶ್ಚಯಿಸಿದನು. ಆದರೆ ಅವನು ಕತ್ತಿಯನ್ನು ಹಿಡಿಯಲು ಸಮರ್ಥನಾಗಿದ್ದರಿಂದ ಇಂತಹ ವ್ಯವಹಾರ ವಿಷಯಗಳಲ್ಲಿ ದಕ್ಷನಾಗಿರಲಿಲ್ಲ. ಅಂತಲೇ ರಾಮರಾಯನ ಅವಿಶ್ವಾಸಕ್ಕೆ ಪಾತ್ರನಾಗಿ ಜಹಗೀರಿಯನ್ನು ಕಳೆದುಕೊಂಡಿದ್ದನು. ಈಗ ಅದನ್ನು ಮತ್ತೆ ದೊರಕಿಸಿಕೊಳ್ಳುವ ಪ್ರಯತ್ನದಲ್ಲಿ ಅವನು ತನ್ನ ಪ್ರಾಣವನ್ನೇ ಒಪ್ಪಿಸಬೇಕಾದ ಪ್ರಸಂಗ ಬಂದಿತ್ತು.

ಅಂಬರ್‌ಖಾನನಿಗೆ ತನ್ನ ಗೆಳೆಯನ ಮೂಲಕ ಜಹಗೀರಿಯು ತನ್ನ ಕೈಬಿಟ್ಟುಹೋಯಿತೆಂಬ ಸುದ್ದಿ ತಿಳಿದಾಗ ಅವನು ಆ ಮಾತನ್ನು ನಂಬಲಿಲ್ಲ. ಸಾಮ್ರಾಟರೇ ಆಗಲಿ, ಯಾರೇ ಆಗಲಿ ಒಬ್ಬರ ಜಹಗೀರಿಯನ್ನು ಕಿತ್ತು ಮತ್ತೊಬ್ಬರಿಗೆ ಕೊಡಲು ಅಧಿಕಾರವಿಲ್ಲವೆಂದು ಅವನ ಅಭಿಪ್ರಾಯ. ಅಲ್ಲದೆ ತಾನು ಯಾವ ತಪ್ಪು, ಅಪರಾಧ ಮಾಡಿಲ್ಲದಿದ್ದರೂ ತನಗೆ ಹೀಗೆ ಮಾಡಿದುದು ಅನ್ಯಾಯದ ಪರಾಕಾಷ್ಠೆ ಎಂದು ತಿಳಿದಿದ್ದನು. ಇದನ್ನು ರಾಮರಾಯನ ಮುಂದೆ ಬಂದು ಹೇಳಿದ್ದರೆ – ಅದಕ್ಕೆ ಒಂದು ಪರಿಹಾರ ದೊರೆಯುತ್ತಿತ್ತೋ ಏನೋ. ಇಲ್ಲವೆ ಸದಾಶಿವರಾಯನ ಮುಂದೆ ಉಸುರಿದ್ದರೆ, ಅವನು ದುಡುಕದಂತೆ ತಡೆಯುತ್ತಿದ್ದನೋ ಏನೋ; ಅನ್ಯಾಯವನ್ನು ಸರಿಪಡಿಸಲೆತ್ನಿಸುತ್ತಿದ್ದನೋ ಏನೋ. ಆದರೆ ಅಂಬರ್‌ಖಾನನು ತನಗಾದ ಅನ್ಯಾಯವನ್ನು ಯಾರಿಗೂ ಹೇಳಲಿಲ್ಲ. ಅವನು ಕೋಪದಿಂದ ಕ್ಷುಬ್ಧನಾಗಿ ಹುಚ್ಚನಂತೆ ಬೀದಿಯಲ್ಲಿ ಒಂದೆರಡು ದಿನ ತಿರುಗಿದನು. ತನಗಾದ ಅನ್ಯಾಯಕ್ಕೆ ಪ್ರತೀಕಾರ ಬಗೆಯಲು ದಾರಿ ತಿಳಿಯದೆ, ಮತಿಭ್ರಷ್ಟನಂತೆ ಅಲೆದನು. ಹೀಗೆ ಅವನು ಬೀದಿಯಲ್ಲಿ ಒಂದು ದಿನ ತಿರುಗುತ್ತಿರುವಾಗ ಅಕಸ್ಮಾತ್ತಾಗಿ ಇಬ್ರಾಹಿಂಖಾನನನ್ನು ನೋಡಿದನು. ಅವನು ಯಾವುದೋ ಕೆಲಸಕ್ಕೆಂದು ಆ ಬೀದಿಯಲ್ಲಿ ಗೆಳೆಯರೊಡನೆ ನಡೆದುಹೋಗುತ್ತಿದ್ದನು. ಅಂಬರ್‌ಖಾನನು ಅವನನ್ನು ದೂರದಿಂದ ನೋಡುತ್ತಲೇ ಛಂಗನೆ ಹಾರಿ ಅವನ ಬಳಿಗೆ ಬಂದುನಿಂತು, ಮುಖವನ್ನು ಗಂಟಿಕ್ಕಿ "ನೀನೇ ತಾನೇ ಆ ನೀಚ ಇಬ್ರಾಹಿಂಖಾನ್? ನನ್ನ ಕೈಯಿಂದ ಜಹಗೀರಿಯನ್ನು ಕಸಿದುಕೊಂಡ ದ್ರೋಹಿ?" ಎಂದು ಚೀರಿದನು.

ಅವನ ಮಾತು ಕೇಳಿ ಏನು ಸಂಗತಿ ಎಂದು ತಿಳಿಯದೇ ಇಬ್ರಾಹಿಂಖಾನನು ಅವಾಕ್ಕಾಗಿ ನಿಂತನು.

"ನೀವು ಯಾರು? ನಿಮ್ಮ ಪರಿಚಯ ನನಗೆ ಇಲ್ಲ. ನಿಮಗೆ ನನ್ನಿಂದೇನಾಗಬೇಕಿತ್ತು?" ಎಂದು ವಿನಯವಾಗಿ ಪ್ರಶ್ನಿಸಿದನು ಇಬ್ರಾಹಿಂಖಾನ್.

"ನಾನು....ಯಾರೆಂದು ತಿಳಿಯಲಿಲ್ಲವೆ? ನಿನ್ನ ಶತ್ರು ಅಂಬರ್‌ಖಾನ್ ನಿನ್ನ ಭಾಗದ ಸೈತಾನ್!"

"ಓ! ನೀವೇನೇ ಅಂಬರ್‌ಖಾನರು?" ಮತ್ತೆ ಪ್ರಶ್ನಿಸಿದ ಅವನ ಮಾತನ್ನು ನಂಬದವನಂತೆ.

"ಹೌದು ನಾನೇ ಅಂಬರ್‌ಖಾನ್!" ಮತ್ತೆ ಗರ್ಜಿಸಿದ.

"ನಿಮಗೆ ನನ್ನಿಂದ ಏನು ಆಗಬೇಕಿತ್ತು?"

"ನನ್ನ ಜಹಗೀರಿ ಹಿಂದಕ್ಕೆ ಕೊಡಬೇಕು!—ಪ್ರಾಣದ ಮೇಲೆ ಆಸೆ ಇದ್ದರೆ ಖಂಡಿತ ಅದನ್ನು ಹಿಂದಿರುಗಿಸುತ್ತೀರಿ!"

"ನನಗೆ ಸ್ನೇಹದ ಕಾಣಿಕೆಯಾಗಿ ಸಾಮ್ರಾಟರು ಅನುಗ್ರಹಿಸಿರುವ ಜಹಗೀರಿಯನ್ನು ತಮಗೆ ಹೇಗೆ ಹಿಂದಿರುಗಿಸಲಿ?"

"ಹಾಗಾದರೆ ನಿಮಗೆ ಪ್ರಾಣದ ಮೇಲೆ ಆಸೆ ಇಲ್ಲವೆಂದಾಯಿತು. ಎಲ್ಲಿ ಕೈಗೆ ಕತ್ತಿ ತೆಗೆದುಕೊಳ್ಳಿ!"

"ಏಕೆ?"

"ಜಹಗೀರಿ ಯಾರಿಗೆ ಸೇರಬೇಕೆಂಬುದನ್ನು ಈ ಕತ್ತಿಯೇ ನಿರ್ಧರಿಸಲಿ! ನಾನು ಬದುಕಿರುವ ತನಕ ನನ್ನ ಜಹಗೀರಿಯನ್ನು ಅನ್ಯರ ಪಾಲು ಮಾಡುವುದಿಲ್ಲ! ತಿಳಿಯಿತೆ?" ಎಂದು ಹೇಳಿ ತನ್ನ ಒರೆಯಿಂದ ಕತ್ತಿಯನ್ನು ಹೊರಗೆ ಳಿದು ನಿಂತನು.

"ಮಾತಿನಲ್ಲಿ ಬಗೆಹರಿಸಬೇಕಾದ ಅಲ್ಪಸಂಗತಿಗೆ ಕತ್ತಿಯನ್ನು ತೆಗೆದುಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ಈ ಜಹಗೀರಿಯ ಬಗ್ಗೆ ನಿಮ್ಮ ಆಕ್ಷೇಪಣೆ ಏನಿದ್ದರೂ ಅದನ್ನು ಸಾಮ್ರಾಟರಲ್ಲಿ ಹೇಳಿಕೊಳ್ಳಿ. ಅವರು ಜಹಗೀರಿಯನ್ನು ನಿಮಗೆ ಹಿಂದಿರುಗಿಸಲು ಆಜ್ಞೆಮಾಡಿದರೆ ನಾನು ಸಂತೋಷದಿಂದ ಅದನ್ನು ನಿಮಗೆ ಒಪ್ಪಿಸುತ್ತೇನೆ!" ಎಂದು ಸಂಧಾನಾಕಾಂಕ್ಷಿಯಾಗಿ ಇಬ್ರಾಹಿಂಖಾನನು ಹೇಳಿದ.

ಆದರೆ ಇದಕ್ಕೆ ಕಿವಿಗೊಡುವ ಸ್ಥಿತಿಯಲ್ಲಿ ಅಂಬರ್‌ಖಾನನು ಇರಲಿಲ್ಲ. ಅವನು ಸಂಧಾನದ ಮಾತು ಕೇಳಿ ಇಬ್ರಾಹಿಂಖಾನನು ಹೇಡಿಯೆಂದೇ ತೀರ್ಮಾನಿಸಿದ. ತನ್ನಂತಹ ಧೀರನ ಕೈಯಿಂದ ಜಹಗೀರಿಯನ್ನು ತಪ್ಪಿಸಿ, ಈ ಹೇಡಿಯ ಪಾಲು ಮಾಡುವುದೆ? ಸಾಧ್ಯವಿಲ್ಲ. ಖಂಡಿತ ಇದು ನಡೆಯುವ ಮಾತಲ್ಲ. ಜಹಗೀರಿ ತನ್ನದು. ಉಳಿದರೆ ತನ್ನದಾಗಿ ಉಳಿಯಬೇಕು! ಇಲ್ಲವೇ ಈ ಪ್ರಾಣ ಹಾರಿಹೋಗಬೇಕು—ಎಂದು ನಿರ್ಧರಿಸಿದ್ದ ಅಂಬರ್‌ಖಾನನು ಇಬ್ರಾಹಿಂಖಾನನ ಮಾತನ್ನು ಕಿವಿಗೆ ಹಾಕದೆ ಅವನ ಮೇಲೆ ಬೀಳಲು ಪಶುವಿನಂತೆ ಮುನ್ನುಗ್ಗಿ

ದನು. ತನ್ನ ಮೇಲೆ ಕತ್ತಿ ಹಿರಿದು ದೈತ್ಯಾವೇಶದಲ್ಲಿ ಬರುತ್ತಿದ್ದ ಅಂಬರ್ ಖಾನನನ್ನು ಎದುರಿಸದಿದ್ದರೆ ಅವರ ಕತ್ತಿಗೆ ತಾನು ಬಲಿಯಾಗುವುದು ಖಂಡಿತ ವೆಂದು ಬಗೆದ ಇಬ್ರಾಹಿಂಖಾನನು ಸರಕ್ಕನೆ ಪಕ್ಕಕ್ಕೆ ಸರಿದು, ಸಂಗಡಿಗನ ಬಳಿ ಇದ್ದ ಕತ್ತಿಯೊಂದನ್ನು ಎಳೆದುಕೊಂಡು ಅಂಬರ್‌ಖಾನನೊಡನೆ ಹೋರಾಡಲು ಸಿದ್ಧನಾದನು.

ಇಬ್ಬರು ವೀರರಿಗೆ ನಡುಬೀದಿಯಲ್ಲೇ ಹೋರಾಟ ಆರಂಭವಾಗಿತ್ತು. ಇದನ್ನು ನೋಡಲು ನೂರಾರು ಜನ ಗುಂಪುಗೂಡಿದರು.

ಇಬ್ಬರೂ ಸಮವೀರರು. ಖಡ್ಗ ವಿದ್ಯೆಯಲ್ಲಿ ನಿಪುಣರು. ಮೊದಲು ದೇಹ ಶಕ್ತಿಯಲ್ಲಿ ಬಲ ಭೀಮನಂತಿದ್ದ ಅಂಬರ್‌ಖಾನನ ಕೈ ಮೇಲಾದಂತೆ ಕಂಡಿತು. ಅವನು ಹಾಕುತ್ತಿದ್ದ ಬಲವಾದ ಪೆಟ್ಟುಗಳನ್ನು ಎದುರಿಸುವುದೇ ಇಬ್ರಾಹಿಂಖಾನನಿಗೆ ಕಷ್ಟವಾಯಿತು. ಇನ್ನೇನು ಅಂಬರ್‌ಖಾನನ ಕೈಗೆ ಸಿಕ್ಕಿ ಇಬ್ರಾಹಿಂಖಾನನ ಕತೆ ಮುಗಿಯಿತೆಂದು ಸುತ್ತಲಿನ ಜನ ತಿಳಿದರು. ಪರಿಸ್ಥಿತಿ ಹಾಗೇ ಇತ್ತು. ಆದರೆ ಇಬ್ರಾಹಿಂಖಾನನು ಖಡ್ಗವಿದ್ಯೆಯಲ್ಲಿ ಅಂಬರ್‌ಖಾನನಿಗಿಂತಲೂ ಚತುರನಾಗಿದ್ದನು. ಅವನು ಉಪಾಯವಾಗಿ ಅಂಬರ್‌ಖಾನನ ಪೆಟ್ಟುಗಳನ್ನು ತಪ್ಪಿಸಿಕೊಂಡು ಅಂಬರ್‌ಖಾನನನ್ನು ಒದ್ದಾಡಿಸಿತ್ತು. ದಣಿಸಿದ, ಸ್ಥೂಲ ಕಾಯವನ್ನು ಹೊತ್ತು ಓಡಾಡಿ ಆವೇಶಗೊಂಡ ಅಂಬರ್‌ಖಾನನು ಮೊದಲಿನಂತೆ ವೀರಾವೇಶದಿಂದ ಹೋರಾಡಲಾಗದೆ ಹಿಂದೆಬಿದ್ದಿದ್ದ. ಈಗ ಇಬ್ರಾಹಿಂಖಾನನ ಕೈ ಮೇಲಾಯಿತು. ಅವನು ತನ್ನ ಹಸ್ತಲಾಘವದಿಂದ ನಿಮಿಷಾರ್ಧದಲ್ಲಿ ಅಂಬರ್‌ಖಾನನ ಕೈಯಿಂದ ಕತ್ತಿಯನ್ನು ಹಾರಿಸಿದ. ಅಂಬರ್‌ಖಾನನು ಅದನ್ನು ಎತ್ತಿಕೊಳ್ಳುವ ಮೊದಲೇ ಅದು ಇಬ್ರಾಹಿಂಖಾನನ ಸ್ವಾಧೀನವಾಗಿತ್ತು. ಆಗ ಅಂಬರ್‌ಖಾನನಿಗೆ ಬೇರೇನು ಮಾಡಲೂ ತೋರದೆ, ಅವನು ಅಲ್ಲಿದ್ದ ದೊಡ್ಡದೊಂದು ಕಲ್ಲುಗುಂಡನ್ನು ತೆಗೆದುಕೊಂಡು ಇಬ್ರಾಹಿಂಖಾನನಿಗೆ ಗುರಿ ಇಟ್ಟು ಎಸೆದ. ಇಬ್ರಾಹಿಂಖಾನನು ಛಂಗನೆ ಸರಿದು ಕಲ್ಲಿನ ಪೆಟ್ಟನ್ನು ತಪ್ಪಿಸಿಕೊಂಡ. ಇನ್ನು ಸುಮ್ಮನೆ ಬಿಟ್ಟರೆ ಆ ದುರುಳನು ತನ್ನನ್ನು ಕೊಲ್ಲದೆ ಬಿಡನೆಂದು ಭಾವಿಸಿ, ಅವನು ಇನ್ನೊಂದು ಕಲ್ಲುಗುಂಡನ್ನು ಎತ್ತಿಕೊಳ್ಳುವುದರೊಳಗೆ ಅವನ ಕಡೆ ಕತ್ತಿಯನ್ನು ಬೀಸಿದ. ನಿಮಿಷಾರ್ಧದಲ್ಲಿ ಅಂಬರ್‌ಖಾನನ ರುಂಡ ಕಳಚಿ ದೂರ ಬಿತ್ತು – ಜನ ಹೋ ಎಂದು ಚೀರಿದರು! ಅವನ ಸಂಗಡಿಗರು ಜಯಘೋಷ ಮಾಡಿದರು. ಎಲ್ಲರಿಗೂ ದೈತ್ಯಾಕಾರದ ಅಂಬರ್‌ಖಾನನನ್ನು ಕೊಂದ ಈ ವೀರನಾರು? ಎಂದು ತಿಳಿಯುವ ಕುತೂಹಲ. ಆದರೆ ಇಬ್ರಾಹಿಂಖಾನನು ತನ್ನ ಕೆಲಸ ಮುಗಿಯುತ್ತಲೇ ಅಲ್ಲಿ ನಿಲ್ಲದೆ ಸಂಗಡಿಗರೊಡನೆ ಎಂದೋ ಕಾಲ್ತೆಗೆದಿದ್ದ!

ವಿಜಯನಗರಕ್ಕೆ ಬಂದ ತರುಣದಲ್ಲೇ ತಾನು ಇಂತಹ ಅಹಿತ ಘಟನೆಯನ್ನು ಎದುರುಗೊಳ್ಳಬೇಕಾಗುವುದೆಂದು ಇಬ್ರಾಹಿಂಖಾನನು ತಿಳಿದಿರಲಿಲ್ಲ. ಎಲ್ಲವೂ ಸುಸೂತ್ರವಾಗಿ ಮುಕ್ತಾಯವಾಯಿತು. ತನಗೆ ಇನ್ನು ಯಾವ ಕಷ್ಟ ಕಾರ್ಪಣ್ಯಗಳಿಲ್ಲ, ತೊಂದರೆ ತೊಡಕುಗಳಿಲ್ಲ ಎಂದು ಸಂತೋಷಪಡುತ್ತಿದ್ದ ಅವನಿಗೆ ಒಮ್ಮೆಲೇ ಅಂಬರ್‌ಖಾನನ ಪ್ರಸಂಗದಿಂದ ಮತ್ತೊಮ್ಮೆ ಚಿಂತೆಗೆ ಕಾರಣವಾಯಿತು. ತಾನು ವಿಜಯನಗರಕ್ಕೆ ಬಂದುದು ಆಶ್ರಯ ಬೇಡಲು. ಇಲ್ಲಿ ತಾನು ಮಾಡಿದುದು ಸಾಮ್ರಾಟರ ವಿಶ್ವಾಸಕ್ಕೆ ಪಾತ್ರನಾಗಿದ್ದ ಒಬ್ಬ ಸರದಾರನನ್ನು ನಡುಬೀದಿಯಲ್ಲಿ ಸಂಹರಿಸಿದುದು. ತನಗೆ ರಾಮರಾಯನು ಮಾಡಿದ ಉಪಕಾರಕ್ಕೆ ತಾನು ಈ ಪ್ರತ್ಯುಪಕಾರ ಮಾಡುವುದೇ! ಇದರಿಂದ ರಾಮರಾಯನು ತನ್ನ ಬಗ್ಗೆ ಏನು ತಿಳಿಯುವನು? ವಿಜಯನಗರದ ಆಸ್ಥಾನಿಕರು ಏನು ಭಾವಿಸುವರು? ತನ್ನ ನಡತೆಯನ್ನು ಕಂಡು ವಿಜಯನಗರದ ಜನ ಏನು ಯೋಚಿಸುವರು? ಮುಸಲ್ಮಾನನಿಗೆ ಆಶ್ರಯವಿತ್ತರೆ ಆಗುವ ಫಲವಿದೆಂದು ಟೀಕಿಸುವವರಿಗೆ ತಾನೇನು ಉತ್ತರ ಕೊಡಬಲ್ಲೆ? ಎಂಬಿವೇ ವಿಚಾರಗಳಿಂದ ಅವನು ಜರ್ಜರಿತನಾದ.

ಈ ಪ್ರಸಂಗದಲ್ಲಿ ತನ್ನದು ಯಾವ ತಪ್ಪೂ ಇರಲಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ತನ್ನ ಮೇಲೆ ಕತ್ತಿ ಹಿರಿದು ಏರಿಬಂದ ಮದೋನ್ಮತ್ತ ಸರದಾರನಿಗೆ ತಕ್ಕ ಬುದ್ಧಿ ಕಲಿಸಿದ್ದೆ. ಆದರೆ ಅವನೊಡನೆ ಘರ್ಷಣೆಯನ್ನು ಉಪಾಯವಾಗಿ ತಪ್ಪಿಸಿಕೊಳ್ಳಬೇಕಾಗಿತ್ತು. ಆದರೆ? ಅಂಬರ್‌ಖಾನನು ಇಬ್ರಾಹಿಂಖಾನನನ್ನು ಕೊಲ್ಲಲು ಬಂದಿದ್ದ. ತನ್ನ ಜಹಗೀರಿ ಕೈಬಿಟ್ಟುಹೋದುದಕ್ಕೆ ಅವನೇ ಕಾರಣನೆಂದು ಅವನನ್ನು ಮುಗಿಸಿಬಿಡಲು ಬಂದಿದ್ದ. ತಮ್ಮಿಬ್ಬರಲ್ಲಿ ಒಬ್ಬರು ಮಾತ್ರ ಜಹಗೀರಿಗೆ ಹಕ್ಕುದಾರರಾಗಿ ಉಳಿಯಬೇಕೆಂದು ಸ್ಪಷ್ಟವಾಗಿ ಹೇಳಿ ರಣಕಣಕ್ಕೆ ಕತ್ತಿಯ ಆಹ್ವಾನ ಕೊಟ್ಟಿದ್ದ. ಅದನ್ನು ಸ್ವೀಕರಿಸುವ ಮುನ್ನವೇ ಕತ್ತಿಯನ್ನು ಇಬ್ರಾಹಿಂಖಾನನ ಕಡೆಗೆ ಬೀಸಿದ್ದ. ಆತ್ಮರಕ್ಷಣೆಯ ಸಲುವಾಗಿ ಅವನನ್ನು ಕೊಲ್ಲಬೇಕಾಯಿತು. ಇದರಲ್ಲಿ ತನ್ನ ತಪ್ಪೇನೂ ಇಲ್ಲ ಎಂದು ಒಮ್ಮೆ ಸಮಾಧಾನವಾಗುವುದು. ಇನ್ನೊಮ್ಮೆ ತಾನು ಮತ್ತೊಬ್ಬರು ಅನುಭವಿಸುತ್ತಿದ್ದ ಜಹಗೀರಿಯನ್ನು ಪಡೆದು ನಿರಪರಾಧಿ ವ್ಯಕ್ತಿಯನ್ನು ಕೊಂದಿರುವುದು ಮಹಾಪರಾಧ ಮಾತ್ರವಲ್ಲ – ರಾಜದ್ರೋಹ ಎಂದು ಅವನ ಇನ್ನೊಂದು ಮನಸ್ಸು ಹೇಳುತ್ತಿತ್ತು. ಇದರಲ್ಲಿ ತಾನು ಮಾಡಿದ್ದು ತಪ್ಪೇ ಸರಿಯೇ ಎಂಬುದನ್ನು ನಿರ್ಣಯಿಸಲಾರದೆ, ಎಲ್ಲವನ್ನೂ ರಾಮರಾಯನಿಗೆ ನಿವೇದಿಸಿ, ಅವನ ಆಜ್ಞೆಯಂತೆ ನಡೆಯುವುದೆಂದು ನಿರ್ಧರಿಸಿ ಇಬ್ರಾಹಿಂ

ಖಾನನು ನೇರ ರತ್ನಕೂಟಕ್ಕೆ ಬಂದು ರಾಮರಾಯನನ್ನು ಭೇಟಿಮಾಡಿದನು.

ಸುದ್ದಿ ಕೊಡದೆ, ಹಠಾತ್ತನೆ ಬಂದು ಕಾಣಿಸಿಕೊಂಡ ಇಬ್ರಾಹಿಂಖಾನನನ್ನು ನೋಡುತ್ತಲೇ ಏನೋ ವಿಶೇಷವಿದೆ, ಎಂದು ರಾಮರಾಯನು ಭಾವಿಸಿದ.

"ಖಾವಂದ್! ನನ್ನಿಂದ ಒಂದು ಅಚಾತುರ್ಯ ಸಂಭವಿಸಿದೆ. ಅನ್ನ ವಿಟ್ಟು ಆಶ್ರಯ ಕೊಟ್ಟ ಮಿತ್ರರಿಗೆ ದ್ರೋಹ ಮಾಡಿದ್ದೇನೆ!" ಎಂದು ಹೇಳಿ ನಡೆದಿದ್ದ ಎಲ್ಲ ಸಂಗತಿಯನ್ನೂ ಚಾಚೂ ಬಿಡದೆ ವಿವರಿಸಿದನು. ಕಡೆಗೆ,

"ಹುಜೂರ್, ನಾನು ಅಂಬರ್‌ಖಾನರನ್ನು ಕೊಲ್ಲಬಾರದೆಂದಿದ್ದೆ. ಅವರೊಡನೆ ಸಂಧಾನಕ್ಕೆ ಬರಲು ಎಷ್ಟೋ ಪ್ರಯತ್ನಿಸಿದೆ. ಆದರೆ ಪ್ರಯೋಜನವಾಗಲಿಲ್ಲ. ನಾನು ಅವರನ್ನು ಸಮಾಧಾನಪಡಿಸಲೆತ್ನಿಸಿದಾಗ ಅವರು ನನ್ನನ್ನು ಕೊಲ್ಲಲು ಕತ್ತಿ ಹಿರಿದು ಬಂದರು. ನಿರ್ವಾಹವಿಲ್ಲದೆ ಆತ್ಮರಕ್ಷಣೆಗಾಗಿ ನಾನೂ ಕತ್ತಿ ಹಿರಿಯಬೇಕಾಯಿತು. ಇದಕ್ಕಾಗಿ ನನಗೆ ಬಹಳ ವ್ಯಥೆಯಾಗುತ್ತಿದೆ. ನಾನು ಮಾಡಿರಬಹುದಾದ ಅಪರಾಧವನ್ನು ತಾವು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದ.

ರಾಮರಾಯನು ಈ ಎಲ್ಲ ಸಂಗತಿಯನ್ನೂ ಕೇಳಿ ಚಣಕಾಲ ಗಂಭೀರವಾಗಿ ಕುಳಿತ. ಅವನಿಗೆ ಈ ಎಲ್ಲ ವಿಷಯ ಕೇಳಿ ವಿಸ್ಮಯವಾಗಿತ್ತು. ತಾನು ಇಬ್ರಾಹಿಂಖಾನನಿಗೆ ಅಂಬರ್‌ಖಾನನ ಜಹಗೀರಿಯನ್ನು ಕೊಟ್ಟುದೇ ಇಷ್ಟೆಲ್ಲ ಹಗರಣವಾಗಲು ಕಾರಣವಾಯಿತೆಂದು ಅನಿಸಿತು. ಒಮ್ಮೆ ತಾನು ಸ್ನೇಹದ ಭರದಲ್ಲಿ ಇನ್ನೊಬ್ಬನ ಜಹಗೀರಿಯನ್ನು ಇಬ್ರಾಹಿಂಖಾನನಿಗೆ ಕಾಣಿಕೆಯಾಗಿತ್ತು ದುಡುಕಿದೆನೆನ್ನುವ ಭಾವನೆ ಸುಳಿಯದೇ ಇರಲಿಲ್ಲ. ತಾನು ಇಬ್ರಾಹಿಂಖಾನನ ಮಿತ್ರನೆಂದು ಹೇಳಿಕೊಳ್ಳುತ್ತ ಅವನ ಮೇಲೆ ಎಂತಹ ಪ್ರಸಂಗ ಬರುವಂತೆ ಮಾಡಿದೆ ಎಂದು ಚಣಕಾಲ ಅಂತರ್ಮುಖಿಯಾದ.

ತನ್ನ ಕಥೆಯನ್ನೆಲ್ಲ ಕೇಳಿದನಂತರವೂ ರಾಮರಾಯನ ಬಾಯಿಂದ ಯಾವ ಉತ್ತರವೂ ಬರದಿದ್ದುದನ್ನು ಕಂಡು ಇಬ್ರಾಹಿಂಖಾನನಿಗೆ ಕೆಡಕೆನಿಸಿತು. ತಾನು ತಪ್ಪಿತಸ್ಥನೆಂದು ರಾಮರಾಯನು ಯೋಚಿಸಿ ಹೀಗೆ ಮೌನ ಧರಿಸಿರಬೇಕು. ಆಶ್ರಯಕ್ಕೆಂದು ಬಂದು, ಹೀಗೆ ದ್ರೋಹ ಬಗೆದ ತನ್ನನ್ನು ಏನು ಮಾಡಬೇಕೆಂದು, ಯಾವ ಶಿಕ್ಷೆ ವಿಧಿಸಬೇಕೆಂದು ಆಲೋಚಿಸುತ್ತಿರಬಹುದು ಎಂಬಿವೇ ವಿಚಾರಗಳಿಂದ ಇಬ್ರಾಹಿಂಖಾನನು ಗಾಬರಿಗೊಂಡನು. ಅವನ ಮುಖ ಬೆವರಿನ ಹನಿಗಳಿಂದ ತುಂಬಿತು. ಮುಖದಲ್ಲಿ ಆತಂಕದ ಭಾವ ಎದ್ದು ಕಾಣಿಸಿತು. ಅದನ್ನು ಸೂಕ್ಷ್ಮವಾಗಿ ಅವಲೋಕಿಸಿದ ರಾಮರಾಯನು ತನ್ನ ಮೌನವು ಅಪಾರ್ಥಕ್ಕೆ ಕಾರಣವಾಗಬಹುದೆಂದು ಮಾತನಾಡಿದನು.

"ಇಬ್ರಾಹಿಂಖಾನರೇ ಇದರಲ್ಲಿ ನಿಮ್ಮ ಯಾವ ತಪ್ಪೂ ಇಲ್ಲವೆಂದು ನಾನು ತಿಳಿದಿದ್ದೇನೆ. ನೀವು ಅಂಬರ್‌ಖಾನನನ್ನು ಕೊಲೆಮಾಡಿದುದಕ್ಕೆ ವ್ಯಥೆಪಡುವ ಕಾರಣವಿಲ್ಲ. ಅವನ ಉದ್ಧಟ ನಡವಳಿಕೆಯನ್ನು ತಿಳಿದವರು ಯಾರೂ ಇದಕ್ಕೆ ನೀವೇ ಕಾರಣರೆಂದು ಹೇಳಲಾರರು. ಅವನು ಹಠಮಾರಿ. ತಲೆ ಗಟ್ಟಿಯಾಗಿದೆ ಎಂದು ಕಲ್ಲಿಗೆ ಹೊಡೆದು ನೋಡುವ ವ್ಯಕ್ತಿ ನಿಮ್ಮ ಮುನ್ನೆಚ್ಚರಿಕೆಯನ್ನು ನಿರ್ಲಕ್ಷಿಸಿ, ನಡುರಸ್ತೆಯಲ್ಲಿ ಅಪಮಾನಗೊಳಿಸಲು ಬಂದ ಆ ಧೂರ್ತನಿಗೆ ತಕ್ಕುದನ್ನೇ ಮಾಡಿದಿರಿ! ಈ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ. ಕೇವಲ ಆತ್ಮರಕ್ಷಣೆಗಾಗಿ ಅವನನ್ನು ಕೊಂದ ನಿಮ್ಮಿಂದ ಯಾವ ಅಪರಾಧವೂ ನಡೆದಿಲ್ಲ. ನೀವು ಈ ಬಗ್ಗೆ ನಿಶ್ಚಿಂತರಾಗಿರಿ!" ಎಂದು ಇಬ್ರಾಹಿಂಖಾನನನ್ನು ಸಮಾಧಾನಪಡಿಸಿದ.

ರಾಮರಾಯನಿಂದ ಇಂತಹ ಮಾತು ಬಂದೀತೆಂದು ಇಬ್ರಾಹಿಂಖಾನನು ಊಹಿಸಿರಲಿಲ್ಲ. ಈ ಮಾತು ಕೇಳಿ ಅವನಿಗೆ ಹೋದ ಜೀವ ಮತ್ತೆ ಮರಳಿದಂತೆ ಆಯಿತು. ಅವನು ರಾಮರಾಯನಿಗೆ ಕುರ್ನಿಸಾತು ಮಾಡಿ, ಬಾರಿ ಬಾರಿಗೂ ವಂದಿಸುತ್ತಾ, ಅವನ ಉದಾರ ಗುಣವನ್ನೂ, ನಿಷ್ಪಕ್ಷಪಾತ ದೃಷ್ಟಿಯನ್ನೂ, ನ್ಯಾಯತೀರ್ಮಾನವನ್ನೂ ಹೊಗಳುತ್ತಾ ತನ್ನ ಬಿಡಾರಕ್ಕೆ ಹಿಂದಿರುಗಿದನು. ಮೈಮೇಲೆ ಬಂದಿದ್ದ ಅಂಬರ್‌ಖಾನನ ಪ್ರಸಂಗ ಹೀಗೆ ನಿವಾರಣೆಯಾದುದಕ್ಕೆ ತಾನು ನಿಜವಾಗಿಯೂ ಅದೃಷ್ಟಶಾಲಿ ಎಂದುಕೊಂಡು, ಸಮಾಧಾನದ ನಿಟ್ಟುಸಿರುಬಿಟ್ಟ.

ಅಂಬರ್‌ಖಾನನ ಪ್ರಸಂಗ ಇಲ್ಲಿಗೇ ಮುಗಿಯಲಿಲ್ಲ. ಅವನ ಮರಣದಿಂದ ಅಪಾಯಕಾರಿಯಾದ ಧೂರ್ತನೊಬ್ಬನ ನಿವಾರಣೆಯಾಯಿತೆಂದು ರಾಮರಾಯನು ಇದರಿಂದ ಸಂತೋಷಗೊಂಡರೂ, ಅಂಬರ್‌ಖಾನನ ಮರಣದಿಂದ ವ್ಯಥೆಗೊಂಡ ವ್ಯಕ್ತಿಗಳಿಗೇನೂ ಕಡಿಮೆ ಇರಲಿಲ್ಲ. ಅಂತಹವರ ಪೈಕಿ ರಾಮರಾಯನ ತಮ್ಮಂದಿರಾದ ತಿರುಮಲ ಮತ್ತು ವೆಂಕಟಾದ್ರಿ ಇವರು ಮುಖ್ಯರು. ಇವರಿಗೆ ತಮ್ಮ ಅಂಗರಕ್ಷಣೆ ಪಡೆಯ ಅಂಬರ್‌ಖಾನನ ವಿಷಯದಲ್ಲಿ ಒಂದು ಬಗೆಯ ಆದರ ಅಭಿಮಾನಗಳು ಇದ್ದುವು. ರಾಮರಾಯನು ಅವನ ಜಹಗೀರಿಯನ್ನು ಕಿತ್ತುಕೊಂಡು ಆಗಂತುಕನಾದ ಇಬ್ರಾಹಿಂಖಾನನಿಗೆ ಕೊಟ್ಟುದು ಅವರಿಗೆ ಸೇರಿರಲಿಲ್ಲ. ಇದೊಂದು ಅನ್ಯಾಯವೆಂದೇ ಅವರ ಅಭಿಪ್ರಾಯ. ಈ ಬಗ್ಗೆ ರಾಮರಾಯನೊಡನೆ ಮಾತನಾಡಿ ಆಗಿರುವ ಅನ್ಯಾಯವನ್ನು ಸರಿಪಡಿಸಬೇಕೆಂದು ಅವರಿರುವಾಗಲೇ ಅಂಬರ್‌ಖಾನನು ಒಮ್ಮೆಲೇ ಕಾಣೆಯಾಗಿದ್ದ. ಇದೀಗ ಅವನು ಇಬ್ರಾಹಿಂಖಾನನಿಂದ ಕೊಲ್ಲಲ್ಪಟ್ಟನೆಂಬ ಸುದ್ದಿ ಮಿಂಚಿನಂತೆ ಬಂದಿತ್ತು. ಇದನ್ನು ಕೇಳಿ ಅವರಿಗೆ ರಾಜಧಾನಿಯಲ್ಲಿ ಇಂತಹ ಅನ್ಯಾಯ ನಡೆಯಲು

ಸಾಧ್ಯವೇ? ಎಂದು ವಿಸ್ಮಯವಾಯಿತು. ಅವರಿಗೆ ಆಗಂತುಕನೊಬ್ಬನು ತಮ್ಮ ಅಂಗರಕ್ಷಕನ ಜಹಗೀರಿಯನ್ನು ಕಸಿದುಕೊಂಡುದಲ್ಲದೇ ಅವನ ಪ್ರಾಣವನ್ನೂ ಅಪಹರಿಸಿದನೆಂಬ ವಾರ್ತೆ ಮಹಾಪರಾಧವಾಗಿ ತೋರಿತು. ವಿಜಯನಗರದ ನಡುಬೀದಿಯಲ್ಲಿ ಅಂಬರ್‌ಖಾನನನ್ನು ಕೊಲೆಮಾಡಬೇಕಾದರೆ ಆ ಇಬ್ರಾಹಿಂ ಖಾನನಿಗೆ ಅದೆಷ್ಟು ಧೈರ್ಯ! ಅದೆಷ್ಟು ಸೊಕ್ಕು! ಅದೂ ತಮ್ಮ ಮೈಗಾವಲು ಪಡೆಯ ಮುಖ್ಯ ಸರದಾರನನ್ನು ಕೊಲೆಮಾಡುವುದೆಂದರೆ ಇದಕ್ಕಿಂತ ಘೋರವಾದ ಅಪರಾಧ – ರಾಜದ್ರೋಹ ಬೇಕೆ? ಕೂಡಲೇ ಈ ಬಗ್ಗೆ ವಿಚಾರಣೆ ನಡಸಿ ಅಪರಾಧಿಗಳನ್ನು ಶಿಕ್ಷಿಸದಿದ್ದರೆ, ಸಾಮ್ರಾಜ್ಯದಲ್ಲಿ ನಿರಪರಾಧಿಗಳಿಗೆ ಯಾವ ರಕ್ಷಣೆಯೂ ಇಲ್ಲದೆ ಹೋದೀತು – ಎಂದು ಬಗೆದು, ಅವರು ರಾಮರಾಯನನ್ನು ಭೇಟಿಮಾಡಿದರು.

ಸಹೋದರರು ಬಂದ ರೀತಿ, ಅವರ ಮುಖದಲ್ಲಿ ಕವಿದಿದ್ದ ಚಿಂತೆ ಅಸಮಾಧಾನಗಳ ಕಾರ್ಮೋಡಗಳನ್ನು ಕಂಡೇ ಏನೋ ಅಸಂಗತಿ ನಡೆದಿದೆ ಎಂದು ರಾಮರಾಯನು ಗಾಬರಿಯಾದ. ಇದನ್ನು ಕಂಡು ಸಹೋದರರ ಮುಖ ಅಸಮಧಾನದಿಂದ ಮತ್ತಷ್ಟು ಕಪ್ಪಾಯಿತು. ಅವರು ಉಪಚಾರದ ಮಾತನ್ನೆಲ್ಲಾ ಒಂದೆರಡು ಮಾತಿನಲ್ಲಿ ಮುಗಿಸಿ, ತಾವು ಬಂದ ಕಾರ್ಯವನ್ನು ನೇರ ಪ್ರಸ್ತಾಪಿಸಿದರು.

"ಪ್ರಭುಗಳಿಗೆ ಈ ಎಲ್ಲ ಸಂಗತಿ ಈ ವೇಳೆಗೆ ತಿಳಿದಿರಬೇಕೆಂದು ನಮ್ಮ ಗ್ರಹಿಕೆ. ಆದರೂ ಇದರ ಪ್ರಸ್ತಾಪ ಇನ್ನೊಮ್ಮೆ ಮಾಡಬೇಕಾಗಿದೆ. ನೀವು ಕೆಲವು ದಿನಗಳ ಹಿಂದೆ ಆಶ್ರಯಕೊಟ್ಟ ಆ ಮದೋನ್ಮತ್ತ ಗೋಲ್ಕಂಡದ ಸರದಾರ ನಮ್ಮ ಅಂಗರಕ್ಷಕ ಪಡೆಯ ಅಂಬರ್‌ಖಾನನನ್ನು ಕೊಲೆ ಮಾಡಿದನೆ! ಆ ದ್ರೋಹಿಯನ್ನು ಹಿಡಿತರಿಸಿ, ಮೊದಲು ಶಿಕ್ಷಿಸಬೇಕಾಗಿದೆ. ಎಲ್ಲಿಂದಲೋ ಬಂದು ಇಲ್ಲಿ ಆಶ್ರಯ ಪಡೆದು ಸಾಮ್ರಾಜ್ಯದ ನಿಷ್ಠಾವಂತ ಸ್ವಾಮಿಭಕ್ತನನ್ನು ನಡುಬೀದಿಯಲ್ಲಿ ಕೊಲ್ಲುವುದೆಂದರೇನು? ನಗರದ ಜನತೆ ಈ ಘಟನೆಯಿಂದ ಕ್ಷುಬ್ಧಗೊಂಡಿದ್ದಾರೆ. ಆ ದ್ರೋಹಿಯನ್ನು ಕೂಡಲೇ ಬಂಧಿಸಿ, ವಿಚಾರಣೆಗೆ ಗುರಿಪಡಿಸಿ, ಕ್ರೂರವಾಗಿ ಶಿಕ್ಷಿಸಬೇಕೆಂದು ಜನ ಬೊಬ್ಬೆ ಇಡುತ್ತಿದ್ದಾರೆ, ಇದನ್ನು ತಮ್ಮ ಗಮನಕ್ಕೆ ತರಲು ನಾವು ಬಂದಿದ್ದೇವೆ!"

—ನಿರುದ್ವೇಗದಲ್ಲಿ ತಿರುಮಲನು ಹೇಳಿದ, ಆದರೂ ಅವನ ಧ್ವನಿ ಕಂಪಿಸುತ್ತಿತ್ತು.

"ಈ ಅಲ್ಪ ಸಂಗತಿಗೆ ನೀವು ಏಕೆ ಇಷ್ಟು ಹಚ್ಚಿಕೊಳ್ಳಬೇಕು!"

—ರಾಮರಾಯ ಸಮಾಧಾನದಿಂದಲೇ ಪ್ರಶ್ನಿಸಿದ.

"ಇದು ಅಲ್ಪಸಂಗತಿಯಲ್ಲ ಪ್ರಭು, ಪರರಾಷ್ಟ್ರದವನೊಬ್ಬನು, ನಮ್ಮ ಕೃಪಾಛತ್ರದಡಿಯಲ್ಲಿ ನಮ್ಮ ಸ್ವಾಮಿನಿಷ್ಠ ಸೇವಕನನ್ನು ಯಾವ ತಪ್ಪಿಲ್ಲದೆ, ಅನ್ಯಾಯವಾಗಿ ನಡುಬೀದಿಯಲ್ಲಿ ಕೊಂದಿರುವುದು ಅಲ್ಪಸಂಗತಿಯಲ್ಲ ಪ್ರಭು!" ವೆಂಕಟಾದ್ರಿ ಹೇಳಿದ.

"ಇದು ನನಗೆ ತಿಳಿದಿದೆ!"

"ಹಾಗಾದರೆ ಅಪರಾಧಿಗೆ ತಕ್ಕ ಶಿಕ್ಷೆಯಾಗಬೇಕು!"

"ಅಪರಾಧಿಗಳು ಯಾರು?"

"ಇಬ್ರಾಹಿಂಖಾನ್!"

"ಅವರು ಅಪರಾಧಿಯಲ್ಲ, ಅವರು ಯಾವ ತಪ್ಪನ್ನೂ ಮಾಡಿಲ್ಲ. ಅವರಿಗೆ ಶಿಕ್ಷೆ ವಿಧಿಸುವ ಆಗತ್ಯ ನನಗೆ ಕಾಣುವುದಿಲ್ಲ!"

"ಅಂದರೆ?"

"ಇಬ್ರಾಹಿಂಖಾನರು ನಿರಪರಾಧಿಗಳಾಗಿದ್ದಾರೆ?"

"ಆ ದ್ರೋಹಿ ಇಬ್ರಾಹಿಂಖಾನನು ಅಂಬರಖಾನನನ್ನು ಕೊಲೆಮಾಡಿಯೂ ನಿರಪರಾಧಿಯೆ?"

"ಹೌದು. ಇಬ್ರಾಹಿಂಖಾನರು ಆತ್ಮರಕ್ಷಣೆಗಾಗಿ, ತಮ್ಮ ಮೇಲೆ ಏರಿಬಂದ ಅಂಬರ್‌ಖಾನನನ್ನು ಕೊಲೆಮಾಡಬೇಕಾಯಿತು!"

"ಇಬ್ರಾಹಿಂಖಾನನು ಆತ್ಮರಕ್ಷಣೆಗಾಗಿ ಅಂಬರ್‌ಖಾನನನ್ನು ಕೊಲೆಮಾಡಿದನೆ?"

"ಹೌದು!"

"ತಮಗೆ ಇದನ್ನು ಯಾರು ತಿಳಿಸಿದರು?"

"ಸ್ವಯಂ ಇಬ್ರಾಹಿಂಖಾನರೇ ಬಂದು ಎಲ್ಲವನ್ನೂ ತಿಳಿಸಿದ್ದಾರೆ! ಇದರಲ್ಲಿ ಅವರದು ಯಾವ ತಪ್ಪಿಲ್ಲ. ಆದರಿಂದ ಯಾವ ರಾಜದ್ರೋಹದ ಅಪರಾಧವೂ ನಡೆದಿಲ್ಲವೆಂದು ನನಗೆ ಮನವರಿಕೆಯಾಗಿದೆ."

"ಏಕಪಕ್ಷೀಯ ಹೇಳಿಕೆಯಿಂದ ಈ ನ್ಯಾಯ ತೀರ್ಮಾನ ಸಲ್ಲದು ಪ್ರಭು! ಅಂಬರ್‌ಖಾನನು ನಿರಸ್ತ್ರನಾಗಿದ್ದಾಗ ಇಬ್ರಾಹಿಂಖಾನನು ಕೊಲೆಮಾಡಿದನೆಂದು ನೋಡಿದವರನೇಕರು ಹೇಳಿದ್ದಾರೆ. ಅಲ್ಲದೆ ತನಗೆ ದೊರೆತ ಜಹಗೀರಿಯನ್ನು ದಕ್ಕಿಸಿಕೊಳ್ಳಲು ಅವನು ಅಂಬರ್‌ಖಾನನನ್ನು ಕೊಂದಿರುವನೆಂದು ಆಡಿಕೊಳ್ಳುತ್ತಿದ್ದಾರೆ. ಇದರಲ್ಲಿ ನ್ಯಾಯಾನ್ಯಾಯಗಳನ್ನು ವಿಮರ್ಶಿಸಿ, ತಪ್ಪುಮಾಡಿದವರಿಗೆ ಶಿಕ್ಷೆ ವಿಧಿಸುವುದು ಪ್ರಭುತ್ವದ ಕರ್ತವ್ಯವಾಗಿದೆ!"

"ಹಾಗಾದರೆ ನೀವು ಪ್ರಭುತ್ವಕ್ಕೆ ಕರ್ತವ್ಯದ ನೆನಪುಮಾಡಲು ಬಂದಿದ್ದೀರೋ!"

"ಇಲ್ಲ ಪ್ರಭು, ನಡೆದಿರುವ ಸಂಗತಿಯನ್ನು ತಮ್ಮ ಚಿತ್ತಕ್ಕೆ ತಂದು ಅಪರಾಧಿಗಳನ್ನು ಶಿಕ್ಷಿಸಿ ಆ ಮೂಲಕ ಜನತೆಗೆ ನ್ಯಾಯತೀರ್ಮಾನದಲ್ಲಿರುವ ನಂಬಿಕೆಯನ್ನು ಉಳಿಸಬೇಕಾಗಿದೆ !"

"ಇದು ಪ್ರಭುತ್ವದವರು ವಿಚಾರಣೆ ಮಾಡಬೇಕಾಗಿರುವ ಪ್ರಸಂಗವೇ ಅಲ್ಲ. ಅಂಬರ್‌ಖಾನನು ಅಸಭ್ಯರೀತಿಯಲ್ಲಿ ನಮ್ಮ ಅತಿಥಿಗಳ ಮೇಲೆ ನಡುರಸ್ತೆಯಲ್ಲಿ ಕೈಮಾಡಿ ಅವರಿಗೆ ಮಾತ್ರವಲ್ಲ, ನಮಗೂ ಅಪಚಾರ ಮಾಡಿದ್ದಾನೆ. ಆ ಧೂರ್ತನನ್ನು ವಧಿಸಿ ನಮಗಾದ ಅಪಮಾನವನ್ನು ಅವರು ಪರಿಹರಿಸಿದ್ದಾರೆ. ಇದಕ್ಕೆ ನಾವು ಅವರಿಗೆ ಕೃತಜ್ಞರಾಗಿರಬೇಕು!"

"ಇದಕ್ಕೆಲ್ಲಾ ಅಂಬರ್‌ಖಾನರ ಜಹಗೀರಿಯನ್ನು ಕಿತ್ತುಕೊಂಡು ಆ ಇಬ್ರಾಹಿಂಖಾನರಿಗೆ ಕೊಟ್ಟುದೇ ಕಾರಣ ! ಯಾವ ತಪ್ಪೂ ಮಾಡದ ಅಂಬರ್‌ಖಾನನ ಕೈಯಿಂದ ಅವನ ಜಹಗೀರಿಯನ್ನು ತಪ್ಪಿಸುವ ಕಾರಣವೇನಿತ್ತು ? ಪ್ರಭುತ್ವಮಾಡಿದ ಈ ಅವಿವೇಕಕ್ಕೆ ಪ್ರಭುತ್ವವೇ ಹೊಣೆಗಾರರು. ಅಂಬರ್‌ಖಾನನ ಪ್ರಕರಣದಲ್ಲಿ ಪ್ರಭುತ್ವ ಅನ್ಯಾಯಮಾಡಿದೆ. ಅಧರ್ಮಮಾರ್ಗವನ್ನು ತುಳಿದಿದೆ !"

"ಪ್ರಭುತ್ವವೆಂದೂ ಅನ್ಯಾಯಮಾಡಿಲ್ಲ—ಮಾಡುವುದಿಲ್ಲ. ಅಂಬರ್‌ಖಾನನು ದ್ರೋಹಿಯಾಗಿದ್ದುದರಿಂದ ಅವನ ಕೈಯಿಂದ ಅವನ ಜಹಗೀರಿಯನ್ನು ತಪ್ಪಿಸಿದೆ. ಅಲ್ಲದೆ ಇದನ್ನು ನ್ಯಾಯವಾಗಿ, ಶಾಸನಬದ್ಧವಾಗಿ ಪ್ರಜಾಪ್ರಭುತ್ವವು ವಿಶ್ವಾಸಪಾತ್ರರಿಗೆ ಕಾಣಿಕೆಯಾಗಿ ಕೊಟ್ಟಿದೆ. ಇದರಲ್ಲೂ ಪ್ರಭುತ್ವವೆಂದಿಗೂ ಅಧರ್ಮದ ಮಾರ್ಗ ತುಳಿದಿಲ್ಲ! " ಶಾಂತವಾಗಿ ಹೇಳಿದ ರಾಮರಾಯ.

"ನೀವು ಅಂಬರ್‌ಖಾನನನ್ನು ದ್ರೋಹಿ ಎಂದು ಅವನ ಕೈಯಿಂದ ಜಹಗೀರಿಯನ್ನು ಕಿತ್ತುಕೊಂಡುದಾದರೆ, ಇದಕ್ಕೆ ಮೊದಲು ಅವನ ದ್ರೋಹಕಾರ್ಯವೇನೆಂದು ಸಿದ್ಧಪಡಿಸಬೇಕಾಗುತ್ತದೆ. ಆದರೆ ಸಾಮ್ರಾಜ್ಯದ ಜನತೆ ತಿಳಿದಿರುವಂತೆ ಸಲಕಂ ಸಹೋದರರ ವಿರುದ್ಧ ನಡೆದ ಕ್ರಾಂತಿಯಲ್ಲಿ ಅವನು ಮಹತ್ವದ ಪಾತ್ರವಹಿಸಿದ್ದಾನೆ. ಸಾಮ್ರಾಜ್ಯದ ಇತಿಹಾಸದಲ್ಲಿ ನೂತನ ಅಧ್ಯಾಯ ಆರಂಭವಾಗಲು ಅವನು ಸ್ವಾಮಿನಿಷ್ಠ ಸೇವಕನಂತೆ ದುಡಿದಿದ್ದಾನೆ. ಈಗ ಅವನು ನಮ್ಮ ಅಂಗರಕ್ಷಣೆ ಪಡೆಯಲ್ಲಿದ್ದು ನಮಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾನೆ. ಇಂತಹವರಿಗೆ ರಾಜದ್ರೋಹದ ಆಪಾದನೆ ಹೊರಿಸಿ, ಜಹಗೀರಿಯನ್ನು ಕಿತ್ತುಕೊಂಡರೆ ಜನತೆ ಇದನ್ನು ನ್ಯಾಯವೆಂದು ಒಪ್ಪುವುದಿಲ್ಲ !"

"ಜನತೆಗೆ ಅಂಬರ್‌ಖಾನನು ಎಂಥವನೆಂದು ಏನು ತಿಳಿದಿದೆ ? ಅವನು ಮೊದಲು ನಮ್ಮ ವಿಶ್ವಾಸಕ್ಕೆ ಪಾತ್ರನಾಗಿದ್ದ ; ಸ್ವಾಮಿನಿಷ್ಠ ಸೇವಕನಾಗಿದ್ದುದು

ನಿಜ. ಇತ್ತೀಚಿನ ದಿನಗಳಲ್ಲಿ ಅವನು ನಮ್ಮ ವಿರುದ್ಧ, ಸಾಮ್ರಾಜ್ಯದ ವಿರುದ್ಧ ದ್ರೋಹಚಿಂತನೆ ಮಾಡುತ್ತಿದ್ದನೆಂಬುದಕ್ಕೆ ನಮಗೆ ಸಾಕಷ್ಟು ಆಧಾರಗಳಿವೆ."

"ಅಂಬರ್‌ಖಾನನು ನಿಜವಾಗಿಯೂ ಸ್ವಾಮಿದ್ರೋಹಿ, ರಾಜದ್ರೋಹಿಯಾಗಿದ್ದರೆ, ಅವನ ಅಪರಾಧಗಳನ್ನು ನ್ಯಾಯಾಲಯದ ಮುಂದೆ ವಿಚಾರಣೆಗೆ ತಂದು ಶಿಕ್ಷಿಸಬೇಕಾಗಿತ್ತು. ಅವನನ್ನು ಕೇವಲ ರಾಜದ್ರೋಹದ ಆರೋಪಣೆಯಿಂದ ಶಿಕ್ಷಿಸಿದುದು ಪ್ರಭುತ್ವ ಮಾಡಿದ ಮೊದಲನೆಯ ಅಪರಾಧ! ಈಗ ಅವನನ್ನು ಕೊಂದ ಇಬ್ರಾಹಿಂಖಾನನನ್ನು ಶಿಕ್ಷಿಸದೆ ಇರುವುದು ಎರಡನೆಯ ಅಪರಾಧ. ಇದನ್ನೆಂದಿಗೂ ಜನತೆ ಕ್ಷಮಿಸುವುದಿಲ್ಲ. ಧರ್ಮರಾಜ್ಯದಲ್ಲಿ ಅಪರಾಧಕ್ಕೆ ತಕ್ಕ ದಂಡನೆ ನಡೆಯಲೇಬೇಕು. ಇಲ್ಲವಿದ್ದರೆ ಸಾಮ್ರಾಜ್ಯ ಅಧರ್ಮಪ್ರವರ್ತಕವಾದಂತೆಯೇ ಸರಿ. ಸಾಮ್ರಾಜ್ಯವು ಅಧರ್ಮಪ್ರವರ್ತಕವಾದರೆ ಅದು ತನ್ನ ದುರಂತವನ್ನು ತಾನೇ ಆಹ್ವಾನಿಸಿಕೊಂಡಂತಾಗುತ್ತದೆ. ಆದುದರಿಂದ ಪ್ರಭುಗಳು ದುಡುಕದೆ ಎಲ್ಲವನ್ನೂ ದೀರ್ಘವಾಗಿ ವಿಚಾರಣೆ ಮಾಡಿ ಇಬ್ರಾಹಿಂಖಾನರು ಸ್ನೇಹಿತರೆಂಬ ಕಾರಣದಿಂದ ನ್ಯಾಯವನ್ನು ವಂಚಿಸಬಾರದೆಂದು ವಿನಮ್ರನಾಗಿ ಬೇಡುತ್ತೇನೆ. ನನ್ನ ಮಾತು ಕಠಿಯಾಗಿದ್ದರೆ ಕ್ಷಮಿಸಬೇಕು!" ಎಂದು ಹೇಳಿದ ತಿರುಮಲ.

"ನಾನು ಎಲ್ಲವನ್ನೂ ದೀರ್ಘವಾಗಿ ಯೋಚಿಸಿಯೇ ಈ ನಿರ್ಧಾರ ಕೈಗೊಂಡಿರುವುದು. ನನ್ನಿಂದ – ಪ್ರಭುತ್ವದಿಂದ ಯಾವ ಅನ್ಯಾಯವೂ ನಡೆದಿಲ್ಲವೆಂಬ ಆತ್ಮವಿಶ್ವಾಸ ನನಗೆ ಇದೆ. ಇದರಲ್ಲಿ ಆಲೋಚಿಸಬೇಕಾದ ಸಂಗತಿಗಳೂ ಧರ್ಮಸೂಕ್ಷ್ಮಗಳೂ ಯಾವುವೂ ಇಲ್ಲ. ಎಲ್ಲವೂ ಸ್ವಯಂ ಸ್ಪಷ್ಟವಾಗಿವೆ. ಅಂಬರ್‌ಖಾನನ ಕೊಲೆ ಆತ್ಮರಕ್ಷಣೆಯ ಸಲುವಾಗಿ ನಡೆದಿದೆ, ಎಂಬುದರ ಬಗ್ಗೆ ನನಗೆ ಸಂಶಯವಿಲ್ಲ. ಈ ಬಗ್ಗೆ ವಿಚಾರಣೆಯ ಅಗತ್ಯವಿಲ್ಲ. ಈ ಪ್ರಸಂಗ ಇಲ್ಲಿಗೆ ಸಮಾಪ್ತಿಯಾಗುತ್ತದೆ. ಇದಕ್ಕಿಂತಲೂ ಹೆಚ್ಚಿಗೆ ನಾನೇನೂ ಹೇಳಲಾರೆ" ಎಂದು ತನ್ನ ಮಾತನ್ನು ಮುಗಿಸಿದ ರಾಮರಾಯ.

"ನನ್ನದೊಂದು ಕಡೆಯ ಮಾತಿದೆ. ಪ್ರಭುಗಳು ಸಮಾಧಾನ ಚಿತ್ತದಿಂದ ಆಲಿಸಬೇಕು! ಪ್ರಭುಗಳ ವೈಯುಕ್ತಿಕ ಅಭಿಪ್ರಾಯ ನ್ಯಾಯ ತೀರ್ಮಾನಕ್ಕೆ ಬಾಧಕವಾಗಬಾರದು. ಧರ್ಮಸಾಮ್ರಾಜ್ಯದಲ್ಲಿ ಬಡವ ಬಲ್ಲಿದ, ಕಿರಿಯ ಹಿರಿಯನೆಂಬ ಭೇದವಿಲ್ಲದೆ ಸರ್ವರಿಗೂ ಸಮಾನವಾದ, ನಿಷ್ಪಕ್ಷಪಾತವಾದ ನ್ಯಾಯದಾನ ಪಡೆಯುವ ಹಕ್ಕಿದೆ. ಇದನ್ನು ಯಾರೂ ಕಸಿದುಕೊಳ್ಳಲಾರರು. ಪ್ರಭುತ್ವಸಹಿತ ಇದಕ್ಕೆ ಅಡ್ಡಬರಬಾರದು. ಧರ್ಮಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯದಲ್ಲಿ ನ್ಯಾಯಕ್ಕೆ ಮನ್ನಣೆ ದೊರೆಯಬೇಕೇ

ಹೊರತು ಅನ್ಯಾಯಕ್ಕಲ್ಲ. ಅಧರ್ಮಕ್ಕಲ್ಲ! ಧರ್ಮ ಅಧರ್ಮಕ್ಕೆ ಎಡೆಕೊಟ್ಟಂದೇ ನ್ಯಾಯ ಅನ್ಯಾಯಕ್ಕೆ ಎಡೆಕೊಟ್ಟಂದೇ ವಿಜಯನಗರ ಸಾಮ್ರಾಜ್ಯಕ್ಕೆ ಗಂಡಾಂತರವೆಂದು ಪೂಜ್ಯ ವಿದ್ಯಾರಣ್ಯಮುನೀಂದ್ರರ ಭವಿಷ್ಯವಾಣಿ ಇದೆ. ಪ್ರಸ್ತುತ ಸಂದರ್ಭದಲ್ಲಿ ನ್ಯಾಯ ವಂಚಿಸಲ್ಪಡುತ್ತಿದೆ. ಪ್ರಭುತ್ವ ಅಧರ್ಮ ಮಾರ್ಗದಲ್ಲಿ ಕಾಲಿಟ್ಟಿದೆ. ಇದರಿಂದ ನಾವಾಗಿ ನಾವು ಸಾಮ್ರಾಜ್ಯವನ್ನು ಗಂಡಾಂತರಕ್ಕೆ ನೂಕುತ್ತಿದ್ದೇವೆ. ಎಲ್ಲವನ್ನೂ ತಿಳಿದ ಪ್ರಭುಗಳು ವಿಚಾರ ಮಾಡಬೇಕು. ನಿಮ್ಮ ನಿರ್ಧಾರದ ಮೇಲೆ ಸಾಮ್ರಾಜ್ಯದ ನ್ಯಾಯಪದ್ಧತಿಯ ಭವಿಷ್ಯ ನಿಂತಿದೆ.... ಜನತೆ ಇಟ್ಟಿರುವ ನಂಬಿಕೆ, ಶ್ರದ್ಧೆಗಳನ್ನು ಬುಡಮೇಲು ಮಾಡುವಂತಹ ಯಾವ ನಿರ್ಧಾರವನ್ನೂ ನೀವು ಕೈಗೊಳ್ಳುವುದಿಲ್ಲವೆಂದು ನನ್ನ ಭಾವನೆ."

ಎಂದು ಹೇಳಿ ಸಹೋದರನೊಡನೆ ತಿರುಮಲನು ಅಲ್ಲಿಂದ ಹೊರಟು ಹೋದನು. ಅವರು ಹೊರಟುಹೋದರೂ ಅವರು ಹೇಳಿದ ಮಾತುಗಳು ರಾಮರಾಯನ ಕಿವಿಯಲ್ಲಿ ಬಹುಕಾಲದ ತನಕ ಮೊಳಗುತ್ತಲೇ ಇದ್ದುವು.

ಇಷ್ಟುಕಾಲದ ಮೇಲೆ ಆ ಸಹೋದರರಲ್ಲಿ ಪ್ರಪ್ರಥಮಬಾರಿಗೆ ವೈಮನಸ್ಸು ಉಂಟಾಗಿತ್ತು. ರಾಮರಾಯನು ಇಬ್ರಾಹಿಂಖಾನನಿಗೆ ಆಶ್ರಯಕೊಟ್ಟುದಕ್ಕೆ ತಿರುಮಲ, ವೆಂಕಟಾದ್ರಿ ಇವರು ರಾಮರಾಯನನ್ನು ಆಕ್ಷೇಪಿಸಲಿಲ್ಲ. ಆದರೆ ಪೂರ್ವಪರಿಚಯವಿಲ್ಲದ ಆಗಂತುಕನೊಬ್ಬನನ್ನ ಸ್ನೇಹಿತನೆಂದು ಕರೆದು, ಅವನಿಗೆ ಹಳೆಯ ರಾಜಸೇವಕನೊಬ್ಬನ ಜಹಗೀರಿಯನ್ನು ಕಿತ್ತುಕೊಂಡು ಕೊಟ್ಟುದು ಮಾತ್ರ ಅವರಿಗೆ ಸರಿಬರಲಿಲ್ಲ. ಈ ಕಾರ್ಯವನ್ನು ಅವರು ರಾಮರಾಯನ ಸಮ್ಮುಖದಲ್ಲಿ ಅಂದೇ ವಿರೋಧಿಸುವವರಿದ್ದರು. ಆದರೆ ಇಬ್ರಾಹಿಂಖಾನನ ಮುಂದೆ ಹಗರಣವಾಗಬಾರದೆಂದು ಆ ದಿನ ಅಧಿಕಾರದ ವೀಳ್ಯ ಕೊಡುವಾಗ ನಾಲಗೆಯನ್ನು ಬಿಗಿಹಿಡಿದಿದ್ದರು. ಆದರೆ ಈ ಪ್ರಸಂಗ ಇಷ್ಟಕ್ಕೇ ಮುಗಿದಿರಲಿಲ್ಲ. ತಿರುಮಲ ವೆಂಕಟಾದ್ರಿಯ ನಂಬುಗೆಯ ಸೇವಕನಾಗಿದ್ದ ಅಂಬರ್‌ಖಾನನ ಕೊಲೆಯಾಗಿತ್ತು. ಇದನ್ನು ಕೇಳಿ ಆ ಸಹೋದರರು ನಡೆದಿರುವ ಅನ್ಯಾಯದಿಂದ ಕನಲಿ ಅಪರಾಧಿಗಳಿಗೆ ತಕ್ಕ ಶಿಕ್ಷೆಯಾಗಬೇಕೆಂದು ರಾಮರಾಯನ ಮುಂದೆ ಬಂದಾಗ ಎಲ್ಲವೂ ತಿರುಗುಮುರುಗಾಗಿತ್ತು. ಅಪರಾಧ ಮಾಡಿದ ಇಬ್ರಾಹಿಂ ಖಾನನು ರಾಮರಾಯನ ಅಭಿಪ್ರಾಯದಲ್ಲಿ ನಿರಪರಾಧಿಯಾಗಿದ್ದ. ಆದರ ಬದಲು ಅಪರಾಧದ ಆರೋಪ ಮಾಡಿದ ತಿರುಮಲ ವೆಂಕಟಾದ್ರಿಯರೇ ರಾಮರಾಯನ ಕಣ್ಣಿನಲ್ಲಿ ಅಪರಾಧಿಗಳಾಗಿ ಮಾರ್ಪಟ್ಟಿದ್ದರು. ಪ್ರಥಮ ಬಾರಿಗೆ ಆ ಸಹೋದರರ ಪ್ರೀತಿವಿಶ್ವಾಸಗಳ ನಡುವೆ ವೈಮನಸ್ಸು ತಲೆ ಹಾಕಿತ್ತು. ರಾಮರಾಯನಿಗೆ ತಮ್ಮ ಪ್ರಜೆಗಳಿಗಿಂತಲೂ, ಆಗಂತುಕನಾಗಿದ್ದ ಇಬ್ರಾಹಿಂಖಾನನ ಸ್ನೇಹವೇ

ಅಧಿಕವಾಗಿತ್ತು. ಇದರಿಂದ ತಿರುಮಲ ವೆಂಕಟಾದ್ರಿಯರ ಮನಸ್ಸು ಬಹುವಾಗಿ ನೊಂದಿತು. ತಮಗಿಂತಲೂ ನಿನ್ನೆ ಮೊನ್ನೆ ಬಂದ ಪರಕೀಯನೂ ವಿಧರ್ಮಿಯೂ ಆದ ಇಬ್ರಾಹಿಂಖಾನನೇ ಆತ್ಮೀಯ ವ್ಯಕ್ತಿಯಾಗಿ ಬಂದನಲ್ಲ ಎಂಬ ಅಸಮಾಧಾನದಿಂದ ಕುದಿಯುತ್ತಿದ್ದರು.

ತಮ್ಮಂದಿರಿಗೆ ತನ್ನ ವಿಷಯದಲ್ಲಿ ಉಂಟಾಗಿದ್ದ ಅಸಮಾಧಾನದ ಸುಳಿವು ರಾಮರಾಯನಿಗೆ ತಿಳಿಯದೆ ಹೋಗಲಿಲ್ಲ. ಅವರ ನೋಟ, ನಿಲುವು, ಮಾತುಗಳೆಲ್ಲವೂ ರಾಮರಾಯನ ವಿಷಯದಲ್ಲಿ ಅವರಿಗಿದ್ದ ಅಸಂತೃಪ್ತಿ, ಅಸಮಾಧಾನಗಳ ಪ್ರತೀಕವಾಗಿದ್ದುವು. ಅವರು ರಾಮರಾಯನ ಮುಂದೆ ಎಂದೂ ಈ ರೀತಿ ವಿರೋಧಿಸಿ ಮಾತಾಡಿರಲಿಲ್ಲ. ಅವರೆಂದೂ ಈ ರೀತಿ ರಾಮರಾಯನನ್ನು ಆಕ್ಷೇಪಿಸಿ ನುಡಿದಿರಲಿಲ್ಲ. ಅವರು ತಮ್ಮ ತಂದೆಯು ತೀರಿಕೊಂಡನಂತರ ಹಿರಿಯುನಾದ ರಾಮರಾಯನನ್ನೇ ತಂದೆ ಎಂದು ತಿಳಿದಿದ್ದರು. ಅಂತೆಯೇ ಗೌರವಿಸಿದ್ದರು. ರಾಮರಾಯನೂ ತಮ್ಮಂದಿರನ್ನು ತಂದೆಯಂತೆಯೇ ನೋಡಿಕೊಂಡು ಅವರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದನು. ಆದರೆ ಇಂದು ಅವರ ಪ್ರೀತಿ ವಿಶ್ವಾಸಗಳ ನಡುವೆ ಅಸಮಾಧಾನ ತಲೆ ಹಾಕಿತ್ತು. ಸಹೋದರರ ನಡುವೆ ಇದ್ದ ಮಧುರ ಸಂಬಂಧದಲ್ಲಿ ಇಬ್ರಾಹಿಂಖಾನನ ಪ್ರಸಂಗ ವಿಷ ಹಾಕಿತ್ತು. ಅವರು ಪರಸ್ಪರ ದ್ವೇಷಿಸುವಂತೆ ಮಾಡಿತ್ತು. ಈ ಪ್ರಸಂಗ ಅನಿರೀಕ್ಷಿತವಾಗಿ ತಲೆ ಹಾಕಿದ್ದುದರಿಂದ ಇಬ್ಬರಿಗೂ ಈ ಬಗ್ಗೆ ಮನಸ್ಸು ನೊಂದಿತ್ತು. ಇಬ್ಬರ ಮನಸ್ಸೂ ಹೀಗಾಗಬಾರದೆಂದು ಕಳವಳಗೊಂಡಿತ್ತು. ಆದರೆ ಪ್ರಸಂಗ ಇಬ್ಬರ ಕೈ ಮೀರಿತ್ತು. ರಾಮರಾಯನು ಕೊಟ್ಟಿದ್ದ ಜಹಗೀರಿಯನ್ನು ಹಿಂತೆಗೆದುಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಇಬ್ರಾಹಿಂಖಾನನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವ ಸ್ಥಿತಿಯಲ್ಲಿರಲಿಲ್ಲ. ಆದರೆ ಅವನನ್ನು ವಿಚಾರಣೆಗೆ ಗುರಿಪಡಿಸಿ ದಂಡಿಸಬೇಕೆಂದು ಸಹೋದರರು ಒತ್ತಾಯಪಡಿಸಿದರು. ಅಲ್ಲಿ ಅಂಬರ್ ಖಾನನಿಗಾಗಿದ್ದ ಅನ್ಯಾಯಕ್ಕೆ, ಅವನ ಕೊಲೆಗೆ ರಾಮರಾಯನೇ ಜವಾಬ್ದಾರನೆಂದು ಅವರು ಸ್ಪಷ್ಟವಾಗಿ ತಿಳಿಸಿ ಅವನ ಪ್ರಭುತ್ವವನ್ನು ದೂರಿದ್ದರು. ಹೋಗುವಾಗ ಅವನಿಗೆ ಅವನ ಕರ್ತವ್ಯದ ಬಗ್ಗೆ ಎಚ್ಚರಿಕೆ ಕೊಟ್ಟು ಹೋಗಿದ್ದರು!

ಇದು ಎಚ್ಚರಿಕೆಯಲ್ಲ, ಬೆದರಿಕೆ ಎಂದುಕೊಂಡ ರಾಮರಾಯ.

ಹಿಂದೆಂದೂ, ಯಾವ ಪ್ರಸಂಗದಲ್ಲೂ ತಿರುಮಲ ವೆಂಕಟಾದ್ರಿಯರು ರಾಮರಾಯನೊಂದಿಗೆ ಇಷ್ಟು ಅವಿನಯದಿಂದ ನಡೆದುಕೊಂಡಿರಲಿಲ್ಲ. ಇಷ್ಟು ತಿರಸ್ಕಾರದಿಂದ ಮಾತನಾಡಿರಲಿಲ್ಲ. ಅಂತಲೇ ಈ ಪ್ರಸಂಗ ರಾಮರಾಯನ ನಿರೀಕ್ಷೆಗೂ ಮೀರಿದ ಪರಿಣಾಮವನ್ನು ಉಂಟುಮಾಡಿತ್ತು. ಪ್ರಥಮ ಬಾರಿಗೆ ತನಗೂ

ತನ್ನ ತಮ್ಮಂದಿರಿಗೂ ಒಮ್ಮತವಿಲ್ಲವೆಂಬುದು ಕಂಡು ಬಂದಿತ್ತು. ಏಕೋ ರಾಮ ರಾಯನಿಗೆ ಇದು ಕೆಡುಕೆನಿಸಿತು. ಅವನ ಮನಸ್ಸು ತಲ್ಲಣಗೊಂಡಿತು.

ಈಗಲೂ ಎಚ್ಚತ್ತುಕೊಳ್ಳಲು ಕಾಲ ಮಿಂಚಿರಲಿಲ್ಲ. ರಾಮರಾಯನು ಸಹೋದರರ ಸಲಹೆಯಂತೆ ನಡೆದಿದ್ದರೆ ದೂರ ಸಿಡಿದಿದ್ದ ಸಹೋದರರು ಮತ್ತೆ ಹತ್ತಿರ ಬರುತ್ತಿದ್ದರು. ತಮ್ಮಂದಿರ ವಿಶ್ವಾಸವನ್ನು ಗಳಿಸಿಕೊಳ್ಳಬೇಕಾಗಿದ್ದರೆ ತಾನು ಮಿತ್ರನೆಂದು, ನಿರಪರಾಧಿ ಎಂದು, ತಿಳಿದಿದ್ದ ಇಬ್ರಾಹಿಂಖಾನನ್ನು ನ್ಯಾಯಾಲಯದಲ್ಲಿ ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸಬೇಕಾಗುತ್ತಿತ್ತು. ಇದರಿಂದ ರಾಮರಾಯನು ವಚನಭ್ರಷ್ಟನಾಗುತ್ತಿದ್ದ. ಇಬ್ರಾಹಿಂಖಾನನ ದೃಷ್ಟಿಯಲ್ಲಿ ರಾಮರಾಯನು ಹುಲುಮನುಜನಾಗುತ್ತಿದ್ದ. ಅವನು ಸಾಧಿಸಲೆಳಸಿದ್ದ ಹಿಂದೂ ಮಹಮದೀಯರ ಸಾಮರಸ್ಯದ ಕನಸು ಒಡೆಯುತ್ತಿತ್ತು. ಅವನ ಜೀವಿತದ ಆದರ್ಶವೊಂದು ಬುಡಮೇಲಾಗುತ್ತಿತ್ತು. ಸಹೋದರರನ್ನು ಮೆಚ್ಚಿಸಲು ಹೊರಟಿದ್ದರೆ ರಾಮರಾಯನು ತನ್ನ ವ್ಯಕ್ತಿತ್ವವನ್ನೇ ಕಳೆದುಕೊಳ್ಳುವ ಪ್ರಸಂಗ ಬರುತ್ತಿತ್ತು. ಆದರೆ ರಾಮರಾಯನಿಗೆ ತನ್ನ ವ್ಯಕ್ತಿತ್ವಕ್ಕೆ, ಸತ್ಕೀರ್ತಿಗೇ ಕುಂದು ಬರುವ ಯಾವ ಕಾರ್ಯವಾಡಲೂ ಇಚ್ಛೆ ಇರಲಿಲ್ಲ. ಇಬ್ರಾಹಿಂಖಾನನಿಗೆ ನೀಡಿದ ಸ್ನೇಹಹಸ್ತವನ್ನು ತಮ್ಮಂದಿರ ಸಲುವಾಗಿ ಹಿಂದಕ್ಕೆ ತೆಗೆದುಕೊಳ್ಳಲು ಅವನ ಆತ್ಮಾಭಿಮಾನ ಹಿಂದೆಗೆದಿತ್ತು.

ರಾಮರಾಯನು ಅಧಿಕಾರಕ್ಕೆ ಬಂದ ಮೇಲೆ ಮೊದಲಿನ ರಾಮರಾಯ ನಾಗಿರಲಿಲ್ಲ. ವಿಜಯನಗರದ ಅನಭಿಷಕ್ತ ಸಾಮ್ರಾಟಪದವಿ ಅವನ ಮೇಲೆ ತನ್ನ ಪ್ರಭಾವವನ್ನು ಸಾಕಷ್ಟು ಬೀರಿತ್ತು. ಈಗ ತನ್ನ ಮಾತೇ ಸರಿ ಎಂಬ ಹಠಭಾವ ಅವನಲ್ಲಿ ಮನೆಮಾಡಿಕೊಂಡಿತ್ತು. ಇತರರು ತನಗೆ ಉಪದೇಶ ಕೊಡುವ ಕಾರಣವಿಲ್ಲವೆಂಬ ದುರಭಿಮಾನ ಮೂಡಿತ್ತು. ಮತ್ತೊಬ್ಬರ ಮಾತು ಸಲಹೆ ಸ್ವೀಕರಿಸದಷ್ಟು ಆತ್ಮಪ್ರತಿಷ್ಠೆಗಳು ಅವನಲ್ಲಿ ಬೆಳೆದಿದ್ದುವು. ಅವನಿಗೆ ಇತರರು ತನಗೆ ಸೋಲುವುದು ಸೇರುತ್ತಿರಲಿಲ್ಲ. ಮೇಲಿಂದ ಮೇಲೆ ತನಗೆ ದೊರೆತ ದಿಗ್ವಿಜಯಗಳು ತಾನು ಸರ್ವಶಕ್ತನೆಂಬ ಕಲ್ಪನೆಯನ್ನು ಅವನ ತಲೆ ಯಲ್ಲಿ ತುಂಬಿದ್ದುವು. ಸ್ವಶಕ್ತಿಯಲ್ಲಿ ಅವನಿಗೆ ಅಪರಿಮಿತ ನಂಬಿಕೆಯುಂಟಾಗಿತ್ತು. ಅವನ ಆತ್ಮಗೌರವ, ಆತ್ಮಾಭಿಮಾನಗಳಿಗೆ ಇತರರು ಕೀಳಾಗಿ ಕಾಣುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅವನಲ್ಲಿ ಆತ್ಮಪ್ರಶಂಸೆ ಇತರರಿಂದ ಹೊಗಳಿಸಿಕೊಳ್ಳುವ ಚಟಗಳು ಬೆಳೆದಿದ್ದುವು. ಅವನನ್ನು ಹೊಗಳಿ ಯಾರೂ ಏನು ಕೆಲಸ ಬೇಕಾ ದರೂ ಸಾಧಿಕೊಳ್ಳಬಲ್ಲರೆಂಬುದಕ್ಕೆ ಇಬ್ರಾಹಿಂಖಾನನ ಪ್ರಸಂಗವೇ ಸಾಕ್ಷಿಯಾ ಯಾಗಿತ್ತು. ಅವನ ಸೂತ್ರಪ್ರಿಯತೆಯ ಅವಮಾನವನ್ನು ಅರಿತುಕೊಂಡಿದ್ದ

ಇಬ್ರಾಹಿಂಖಾನನು ರಾಮರಾಯನ ಮೇಲೆ ತನ್ನ ಪ್ರಭಾವ ಬೀರಲು ಸಮರ್ಥನಾಗಿದ್ದ ಇಷ್ಟೆಲ್ಲಾ ಹಗರಣಕ್ಕೆ ಕಾರಣವಾಗಿತ್ತು.

ಮಾರನೆಯದಿನ ರಾಮರಾಯನು ತನ್ನ ದೈನಂದಿನ ಕಾರ್ಯಗಳನ್ನು ತೀರಿಸಿಸಿಕೊಂಡು ಸಾಮ್ರಾಟ್ ಸದಾಶಿವರಾಯನನ್ನು ಮಾತನಾಡಿಸಿಕೊಂಡು ಹೋಗಲು ಬಂದಾಗ ಅಲ್ಲೂ ಮತ್ತೊಂದು ಕಹಿಪ್ರಸಂಗ ಅವನನ್ನು ಎದುರುಗೊಂಡಿತ್ತು.

ಸದಾಶಿವರಾಯನು ತಾನಾಗಿ ರಾಮರಾಯನನ್ನು ಎಂದೂ ಪ್ರಶ್ನಿಸದಿದ್ದವನು ಆ ದಿನ ರಾಮರಾಯನ ಮುಖ ನೋಡುತ್ತಲೇ,

"ಓ ರಾಜಭೂವವರಾಗಿ ನಾನು ನಿಮ್ಮನ್ನೇ ನೆನೆಯುತಿದ್ದೆ ! ಅಷ್ಟರಲ್ಲಿ ನೀವೇ ಬಂದಿರಿ! ನಿಮಗೆ ನೂರು ವರ್ಷ ಆಯುಸ್ಸು!" ಎಂದು ನಗುತ್ತಾ ರಾಮರಾಯನನ್ನು ಸ್ವಾಗತಿಸಿ, ಕುಳಿತುಕೊಳ್ಳಲು ಆಸನ ತೋರಿದ. ಈ ಮಾತು ಕೇಳಿ ರಾಮರಾಯನು ಚಕಿತನಾಗಿ ನಿಂತ.

"ಏಕೆ ಪ್ರಭು? ನನ್ನ ನೆನಪೇಕೆ ಬಂತು? ನನ್ನಿಂದ ಯಾವ ಕಾರ್ಯವಾಗಬೇಕಿತ್ತು. ಅಪ್ಪಣೆಕೊಡಿಸಬೇಕು!" ನಮ್ರನಾಗಿ ಕೇಳಿದ.

"ನಮ್ಮ ಸೇವೆಯಲಿದ್ದ ಅಂಬರ್‌ಖಾನನಂಥ ಸ್ವಾಮಿನಿಷ್ಠ ಸೇವಕನನ್ನು ನಿನ್ನೆ ಯಾರೋ ಕೊಲೆ ಮಾಡಿದರಂತೆ ಹೌದೆ?"

ಪ್ರಶ್ನೆ ಕೇಳಿ ರಾಮರಾಯನು ವಿಸ್ಮಯಗೊಂಡ. ಅಂಬರ್‌ಖಾನನು ಮಡಿದುದು ನಿನ್ನೆ. ಇಷ್ಟು ಬೇಗ ಈ ಸುದ್ದಿ ಅರಮನೆಯಲ್ಲಿದ್ದ ಸದಾಶಿವರಾಯನಿಗೆ ಹೇಗೆ ತಿಳಿಯಿತು? ಬಹುಶಃ ತಿರುಮಲ ವೆಂಕಟಾದ್ರಿಯರೇನಾದರೂ ಹೇಳಿರಬಹುದೆ? ಎಂದು ಆಲೋಚಿಸಿದ. ಹೇಗೆ ಇರಲಿ, ಸದಾಶಿವನಿಗೆ ನಡೆದ ಸಂಗತಿ ತಿಳಿದಿದೆ. ಅವನಿಂದ ಈ ಸಂಗತಿಯನ್ನು ಬಚ್ಚಿಡುವುದರಲ್ಲಿ ಅರ್ಥವಿಲ್ಲವೆಂದು, ನಡೆದುದನ್ನು ಹೇಳಿಬಿಡಲು ನಿಶ್ಚಯಿಸಿದ.

"ಹೌದು ಪ್ರಭು! ಈ ಸಂಗತಿಯನ್ನು ನಾನೇ ನಿಮಗೆ ತಿಳಿಸಬೇಕೆಂದು ಬಂದೆ. ಅಷ್ಟರಲ್ಲಿ ನೀವೇ ಕೇಳಿದಿರಿ!" ಎಂದ.

"ಅವನನ್ನು ಕೊಂದವರು ಯಾರು?"

"ತಮ್ಮ ಮೇಲೆ ಬೀಳಲು ಬಂದ ಅವನನ್ನು ಇಬ್ರಾಹಿಂಖಾನರು ಆತ್ಮರಕ್ಷಣೆಯ ಸಲುವಾಗಿ ಕೊಂದರೆಂದು ನಾನು ಕೇಳಿದ್ದೇನೆ!"

"ಇಬ್ರಾಹಿಂಖಾನರೆಂದರೆ ಆ ದಿನ ನಮ್ಮಲ್ಲಿಗೆ ಬಂದು ಆಶ್ರಯಬೇಡಿದರಲ್ಲ, ಆ ಗೋಲ್ಕಂಡದ ರಾಜಪುತ್ರರೋ?"

"ಹೌದು ಪ್ರಭು!"

"ವಿಜಯನಗರಕ್ಕೆ ಹೊಸಬರಾದ ಅವರ ಮೇಲೇಕೆ ಅಂಬರ್ ಖಾನರು ಕೈಮಾಡಲೆತ್ನಿಸಿದನು! ಅವರಿಬ್ಬರಿಗೂ ಪರಿಚಯವಿತ್ತೆ? ಆದರೂ ವೈರವಿತ್ತೆ?"

"ಇಲ್ಲ ಪ್ರಭು! ಅಂಬರ್ ಖಾನನು ದುರಂಹಕಾರ ಸ್ವಭಾವದವನು. ಇತ್ತೀಚಿಗೆ ಅವನು ಸ್ವಾಮಿದ್ರೋಹಿಯಾಗಿದ್ದ. ಅವನ ವಶದಲ್ಲಿದ್ದ ಜಹಗೀರಿಯನ್ನು ಅವನಿಂದ ತಪ್ಪಿಸಿ ನಾನು ಇಬ್ರಾಹಿಂಖಾನರಿಗೆ ಕೊಟ್ಟೆ. ಅವರಿಬ್ಬರಲ್ಲಿ ವೈಮನಸ್ಸು ಉಂಟಾಗಿ, ಹೊರಾಟ ನಡೆದು ಕಡೆಗೆ ಅಂಬರಖಾನನ ಮೃತ್ಯುವಿನಲ್ಲಿ ಇದು ಪರ್ಯವಸಾನವಾದುದು ವಿಷಾದದ ಸಂಗತಿ."

"ಇದರಲ್ಲಿ ಅಂಬರ್ ಖಾನನಿಗೆ ಅನ್ಯಾಯವಾಗಿದೆ ಎಂದು ಕೇಳಿದ್ದೇನೆ. ನೀವೇಕೆ ಅಂಬರ್ ಖಾನನ ಜಹಗೀರಿಯನ್ನು ಅವನ ಕೈತಪ್ಪಿಸಿದಿರಿ? ಅವನು ಮಾಡಿದ ಯಾವ ಸ್ವಾಮಿ ದ್ರೋಹ – ರಾಜದ್ರೋಹಗಳಿಗೆ ಅವನಿಗೆ ಈ ಶಿಕ್ಷೆ ವಿಧಿಸಿದಿರಿ? ನಾವು ತಿಳಿಯಬಹುದೆ.?"

ಈ ಪ್ರಶ್ನೆ ರಾಮರಾಯರನ್ನು ದಂಗುಬಡಿಸಿತು. ಅವನು ಇಕ್ಕಟ್ಟಿಗೆ ಸಿಕ್ಕಿದ.

ಅಂಬರ್ ಖಾನನ ದ್ರೋಹಕಾರ್ಯದ ಬಗ್ಗೆ ಇತರರಿಗೆ ಬಾಯಿಬಡಿದಂತೆ ಈಗ ಸಾಮ್ರಾಟ್ ಸದಾಶಿವರಾಯನಿಗೆ ಬಾಯಿಬಡಿಯುವಂತೆ ಇರಲಿಲ್ಲ. ಸದಾಶಿವರಾಯನು ಅಂಬರ್ ಖಾನನ ವೃತ್ತಾಂತವನ್ನು ಚೆನ್ನಾಗಿ ತಿಳಿದಿದ್ದನೆನ್ನಲು ಇಷ್ಟೇ ಸಾಕಾಗಿತ್ತು. ಈ ಪ್ರಸಂಗದಿಂದ ಜಾರಿಕೊಳ್ಳಲು ಮಾತನ್ನು ಮರೆಸಲೆಂಬಂತೆ ರಾಮರಾಯನು ಹೇಳಿದ :

"ಪ್ರಭು! ಅಂಬರ್ ಖಾನನಿಗೆ ಈ ಪ್ರಸಂಗದಲ್ಲಿ ಯಾವ ಅನ್ಯಾಯವೂ ಆಗಿಲ್ಲ ಎಲ್ಲವನ್ನೂ ನ್ಯಾಯಬದ್ಧವಾಗಿಯೇ ಮಾಡಲಾಗಿದೆ."

"ಇದನ್ನು ಅಂಬರ್ ಖಾನನು ಹೇಳಬೇಕಾಗಿತ್ತು. ಆದರೆ ದುರ್ದೈವದಿಂದ ಅವನು ತೀರಿಕೊಂಡಿದ್ದಾನೆ. ಅವನ ಹತ್ಯಾಕಾರಿಯನ್ನು ವಿಚಾರಣೆಗೆ ಗುರಿಪಡಿಸಿದರೆ ಅಂಬರ್ ಖಾನನಿಗೆ ಆಗಿರುವುದು ನ್ಯಾಯವೋ ಅನ್ಯಾಯವೋ ಹೊರಪಡುವುದು ಈ ಬಗ್ಗೆ ಬಹಿರಂಗ ವಿಚಾರಣೆ ನಡೆಯಲಿ ಎಂದು ನಮ್ಮ ಅಭಿಪ್ರಾಯ!" ಸದಾಶಿವರಾಯ ಸ್ಪಷ್ಟವಾಗಿ ಹೇಳಿದ.

"ಇಬ್ರಾಹಿಂಖಾನನು ನಮ್ಮ ಅತಿಥಿಗಳು. ನಮ್ಮ ಆಶ್ರಯಕ್ಕೆ ಬಂದ ಅವರನ್ನು ಹೇಗೆ ಅಪಮಾನ ಮಾಡುವುದು? ನಮಗೇ ಶೋಭಿಸುವುದಿಲ್ಲ. ಇದಕ್ಕಿಂತ ಹೆಚ್ಚಾಗಿ ನೀವು ಇಬ್ರಾಹಿಂಖಾನರನ್ನು ದಂಡಿಸಲೆತ್ನಿಸಿದರೆ ಇಲ್ಲದ ರಾಚಕೀಯಕ್ಕೆ ಅವಕಾಶಕೊಟ್ಟಂತಾಗುವುದು! ಅವರನ್ನು ವಿಚಾರಣೆಗೆ ಗುರಿಪಡಿಸುವುದು ಯಾವ ರೀತಿಯಿಂದಲೂ ಉಚಿತವಲ್ಲವೆಂದು ನನ್ನ ನಮ್ರ ಸಲಹೆ!"

"ನಿಮ್ಮ ಸಲಹೆಗೆ ನಾವು ಉಪಕೃತನಿದ್ದೇವೆ. ಆದರೆ ಧರ್ಮರಾಜ್ಯವಾದ ಇಲ್ಲಿ ಸಕಲರಿಗೂ ಸಮಾನ ನ್ಯಾಯದಾನ ದೊರೆಯಲೇಬೇಕು. ಅಂಬರ್ ಖಾನನು ಮಡಿದಿದ್ದರೇನಂತೆ! ಈ ಕೊಲೆಯ ವಿಚಾರಣೆ ನಡೆದು ನಿಷ್ಪಕ್ಷಪಾತ ನ್ಯಾಯ ತೀರ್ಮಾನ ಹೊರಬರಲಿ. ತಪ್ಪುಮಾಡಿದವರಿಗೆ ಶಿಕ್ಷೆಯಾಗುತ್ತದೆ. ಇಬ್ರಾಹಿಂಖಾನರು ತಪ್ಪಿತಸ್ಥರಲ್ಲದಿದ್ದರೆ ಈ ವಿಚಾರಣೆಗೆ ಅವರೇಕೆ ಹಿಂಜರಿಯಬೇಕು! ನಮ್ಮ ನ್ಯಾಯ ನಿಷ್ಠೆಯ ಬಗ್ಗೆ ಅವರಿಗೆ ನಮ್ಮ ವಿಷಯದಲ್ಲಿ ಹೆಚ್ಚು ಅಭಿಮಾನ ಉಂಟಾಗುವುದೆಂದು ನನ್ನ ಭಾವನೆ! ಆದುದರಿಂದ ನೀವು ಈ ವಿಚಾರಣೆಯನ್ನು ತ್ವರೆಗೊಳಿಸಿ ನನಗೆ ವರದಿಮಾಡಿ! ಇತರರಂತೆ ಇದರಲ್ಲಿ ತಪ್ಪಿತಸ್ಥರಾರೆಂದು ತಿಳಿಯಲು ನನಗೂ ಕುತೂಹಲವಿದೆ!" ಎಂದು ಹೇಳಿ ತನ್ನ ಮಾತು ಮುಗಿಯಿತೆಂಬಂತೆ ಅಲ್ಲಿಂದೆದ್ದ.

ಆದರೆ, ರಾಮರಾಯನಿಗೆ ತಾನು ಸದಾಶಿವರಾಯನಿಗೆ ಹೇಳುವುದು ಮುಗಿಯಿತೆಂದು ಅನಿಸಲಿಲ್ಲ. ಅವನು ಸದಾಶಿವನಿಗೆ ಹೇಳಬೇಕೆಂದಿದ್ದ ಸಂಗತಿಗಳು ಅನೇಕವಿದ್ದುವು. ಅವುಗಳಿಗೆ ಮಾತಿನ ರೂಪ ಕೊಡಲು ಸೂಕ್ತಸನ್ನಿವೇಶಕ್ಕಾಗಿ ಕಾಯುತ್ತಿದ್ದ. ಇಂದು ಸದಾಶಿವರಾಯನು ರಾಮರಾಯನು ಚಕಿತಗೊಳ್ಳುವಂತೆ ನಡೆದುಕೊಂಡಿದ್ದ. ಅವನು ನಿರೀಕ್ಷಿಸದೇ ಇದ್ದ ಪ್ರಶ್ನೆಗಳನ್ನು ಆಡಳಿತದ ಬಗ್ಗೆ, ರಾಜಕೀಯದ ಬಗ್ಗೆ ಕೇಳಿದ್ದ – ಆಡಳಿತದ ವಿಷಯದಲ್ಲಿ ತಾನು ರಾಮರಾಯನ ಪ್ರತಿಸ್ಪರ್ಧಿ ಎಂಬಂತೆ ನಡೆದುಕೊಂಡಿದ್ದ. ಇದನ್ನು ನೋಡಿದ ಮೇಲೆ ತನ್ನ ಮನಸ್ಸಿನಲ್ಲಿ ಬಹುಕಾಲದಿಂದ ಹೇಳಬೇಕೆಂದಿದ್ದ ವಿಷಯಗಳನ್ನು ಹೊರಗೆ ಹಾಕಲು ಇದೇ ಸೂಕ್ತ ಸಮಯವೆಂದು ಅವನಿಗೆ ತೋರಿತು.

ಇಂದು ಪ್ರಥಮಬಾರಿಗೆ ಸದಾಶಿವರಾಯನು ತಾನು ವಿಜಯನಗರದ ನಿಜವಾದ ಸಾಮ್ರಾಟನೆಂಬಂತೆ ವರ್ತಿಸಿದ್ದ. ರಾಮರಾಯನನ್ನು ತನ್ನ ಮಂತ್ರಿ ರಾಜಕೀಯದಲ್ಲಿ ಸಲಹೆಗಾರನೆಂಬಂತೆ ನಡಸಿಕೊಂಡಿದ್ದ. ಇದು ರಾಮರಾಯನಂತಹ ಆತ್ಮಗೌರವ ಉಳ್ಳ ಮಹತ್ವಾಕಾಂಕ್ಷಿಗೆ ನುಂಗಲಾಗದ ತುತ್ತಾಗಿತ್ತು.

ಇಂದಲ್ಲ, ನಾಳೆ ಇಂತಹ ಪ್ರಸಂಗಬರುವುದೆಂದು ರಾಮರಾಯನೂ ತಿಳಿದಿದ್ದನು. ಅದಕ್ಕಾಗಿ ಅವನು ಸಿದ್ಧವಾಗಿದ್ದನು. ಆದರೂ ಸದಾಶಿವರಾಯನು ಇಷ್ಟು ಬೇಗನೆ ತನ್ನ ಅಧಿಕಾರವನ್ನು ವಿರೋಧಿಸುವನೆಂದಾಗಲಿ, ತನ್ನ ಸಾಮ್ರಾಟ ಪದವಿಯನ್ನು ಸ್ಥಾಪಿಸಿಕೊಳ್ಳುವನೆಂದಾಗಲಿ ಅವನು ತಿಳಿದಿರಲಿಲ್ಲ. ಇಬ್ರಾಹಿಂಖಾನನ ಪ್ರಸಂಗದಲ್ಲಿ ಎಲ್ಲವೂ ಅನಿರೀಕ್ಷಿತವಾಗಿ ನಡೆದಂತೆ ಇದೂ ಅನಿರೀಕ್ಷಿತವಾಗಿ ರಾಮರಾಯನನ್ನು ಎದುರುಗೊಂಡಿತ್ತು.

ರಾಮರಾಯನ ಅಭಿಪ್ರಾಯದಲ್ಲಿ ಸದಾಶಿವರಾಯನು ಇನ್ನು ಏನೂ ಅರಿ

ಯದ ಮಗು. ಅವನಿಗೆ ಇಪ್ಪತ್ತು ನಾಲ್ಕುವರ್ಷವಾಗಿದ್ದರೂ ರಾಮರಾಯನ ದೃಷ್ಟಿಯಲ್ಲಿ ರಾಜ್ಯಾಡಳಿತವನ್ನು ವಹಿಸಿಕೊಳ್ಳಲು ಅಸಮರ್ಥನಾದ ತರುಣನೇ ಆಗಿದ್ದ. ಅಂತಲೇ ಅವನು ಬಾಲಕನಾಗಿದ್ದಾಗ ರಾಜ್ಯಪ್ರತಿನಿಧಿಯಾಗಿ ಸಮೇತ ನಾಗಿದ್ದ ರಾಮರಾಯನು ಅವನು ಪ್ರಾಪ್ತವಯಸ್ಕನಾದ ಮೇಲೂ ಇನ್ನೂ ರಾಜ ಪ್ರತಿನಿಧಿಯಾಗಿಯೇ ಮುಂದುವರೆಸಿದ್ದ. ಕಳೆದ ಹತ್ತು ವರ್ಷಗಳಿಂದ ಅನಭಿ ಷಿಕ್ತ ಸಾಮ್ರಾಟನಾಗಿ ಮೆರೆದಿದ್ದ ರಾಮರಾಯನಿಗೆ ಒಮ್ಮೆಲೇ ತಾನು ವಿಸ್ತರಿಸಿ ಬೆಳೆಸಿದ ಸಾಮ್ರಾಜ್ಯವನ್ನು, ಶತ್ರುಗಳಿಂದ ಅಬಾಧಿತವಾದ ಸಂಪದ್ಯುಕ್ತ ಸಾಮ್ರಾಜ್ಯವನ್ನು ಸದಾಶಿವನ ಕೈಗೆ ಒಪ್ಪಿಸಿ, ಅವನ ಕೈಕೆಳಗಿನ ಅಧಿಕಾರಿಯಾಗಿ ಕೆಲಸಮಾಡಲು ಇಷ್ಟವಿರಲಿಲ್ಲ. ಅವನ ಅಧಿಕಾರ ಲಾಲಸೆ ಈ ಹತ್ತುವರ್ಷ ಗಳಲ್ಲಿ ಹಿಂಗುವ ಬದಲು ಬೃಹದ್ವೃಕ್ಷವಾಗಿ ಬೆಳೆದಿತ್ತು. ತನ್ನ ಸಂತತವಾದ ಶ್ರಮದುಡಿಮೆಗಳಿಂದ ಒಂದು ವ್ಯವಸ್ಥೆಗೆ ಬಂದಿದ್ದ ಸಾಮ್ರಾಜ್ಯವನ್ನು ಸದಾಶಿವ ರಾಯನಿಗೆ ಸುಲಭವಾಗಿ ಒಪ್ಪಿಸಿಕೊಡುವುದು ಅವನಿಗೆ ಪ್ರಿಯವಾದ ಕಾರ್ಯ ವಾಗಿರಲಿಲ್ಲ. ಅಪಾರ ಹಣವ್ಯಯ, ಬಲಿದಾನಗಳಿಂದ ವಿಸ್ತರಿಸಿದ್ದ ಸಾಮ್ರಾಜ್ಯ ವನ್ನು ಇಷ್ಟು ಸುಲಭವಾಗಿ ಬಿಟ್ಟುಕೊಡುವುದಕ್ಕೆ ಅವನ ಪ್ರಲೋಭ ಒಪ್ಪಲಿಲ್ಲ. ವಿಜಯನಗರ ಸಿಂಹಾಸನ ತನ್ನದು – ಅದಕ್ಕೆ ತಾನೊಬ್ಬನೇ ಅಧಿಕಾರಿ ಎಂದು ತಿಳಿದಿದ್ದ ರಾಮರಾಯನಿಗೆ ನಿಜವಾದ ಹಕ್ಕುದಾರನಾದ ಸದಾಶಿವರಾಯನು ಹೆಚ್ಚುಕಾಲ ಆಡಳಿತ ವಹಿಸಿಕೊಳ್ಳಲು ಅಸಮರ್ಥನಾಗಿರುವುದು ಬೇಕಿತ್ತು. ಅವನು ಸದಾಶಿವರಾಯನಿಗೆ ರಾಜ್ಯದ ಆಗುಹೋಗುಗಳನ್ನು ತಿಳಿಸದೆ ಅವನನ್ನು ಅಜ್ಞಾನದ ಕೂಪದಲ್ಲಿ ಇರಿಸಿದ್ದರೂ – ಸದಾಶಿವರಾಯನು ತಮಗೆ ಬೇಕಾದ ಸಂಗತಿಗಳನ್ನು ಯಾರಿಂದಲೋ, ಹೇಗೋ ತಿಳಿದುಕೊಂಡು ರಾಮರಾಯನ ಹಂಚಿಕೆಯನ್ನು ವಿಫಲಗೊಳಿಸುತ್ತಿದ್ದ. ಇಂದು ಅಂತಹದೇ ಪ್ರಸಂಗ ಮತ್ತೆ ಬಂದಿತ್ತು. ಸದಾಶಿವರಾಯನಿಗೆ ಅಂಬರ್‌ಖಾನನ ಸಂಗತಿ ತಿಳಿದಿರಲಾರದೆಂದು ಬಗೆದಿದ್ದ ರಾಮರಾಯನನ್ನು ಸದಾಶಿವರಾಯನು ಬೆರಗುಗೊಳಿಸಿದ್ದ. ಇದು ವರೆಗೂ ಇದ್ದಂತೆ ಇನ್ನು ಮುಂದೆ ಸದಾಶಿವರಾಯನನ್ನು ಆಡಳಿತದ ಅಜ್ಞಾನದ ಕತ್ತಲೆಯಲ್ಲಿ ಇಡಲು ಸಾಧ್ಯವಿಲ್ಲವೆಂದು ರಾಮರಾಯನಿಗೆ ಸ್ಪಷ್ಟವಾಯಿತು. ಅಧಿಕಾರವನ್ನು ತನ್ನದಾಗಿ ಉಳಿಸಿಕೊಳ್ಳಲು ಕಡೇ ಪ್ರಯತ್ನವೆಂಬಂತೆ – ಬಹು ದಿನಗಳಿಂದ ಯೋಚಿಸಿದ್ದ ಭೇದೋಪಾಯದಲ್ಲಿ ತನ್ನ ಕಾರ್ಯವನ್ನು ಸಿದ್ಧಿಸಿ ಕೊಳ್ಳಲು ನೋಡಿದ.

ರಾಮರಾಯನು ತನ್ನನ್ನು ಬೀಳ್ಕೊಂಡು ಹೊರಡದೆ ಇನ್ನೂ ಅಲ್ಲೇ ಕುಳಿ ತಿರುವುದನ್ನು ಕಂಡ ಸದಾಶಿವರಾಯನು, ರಾಮರಾಯನು ತನ್ನೊಡನೆ ಏನನ್ನೋ

ಹೇಳಲು ಯೋಚಿಸುತ್ತಿರುವನೆಂದು ಬಗೆದು,

"ನೀವು ಏನೋ ಯೋಚಿಸುತ್ತಿರುವಂತೆ ಇದೆ. ನನ್ನ ಮಾತಿನಿಂದ ನಿಮಗೆ ಬೇಸರವಾಗಿದ್ದರೆ ಕ್ಷಮಿಸಿ!" ಎಂದು ಮಾತಿಗೆ ತಾನೇ ಪೀಠಿಕೆ ಹಾಕಿದ ಸದಾಶಿವರಾಯ.

ಆಗ ರಾಮರಾಯ ಗಂಭೀರವಾದ ಧ್ವನಿಯಲ್ಲಿ ಹೇಳಿದ.

"ಪ್ರಭುಗಳಲ್ಲಿ ನನ್ನದೊಂದು ಅರಿಕೆ ಇದೆ. ಅಪ್ಪಣೆ ಕೊಟ್ಟರೆ ನಿವೇದಿಸಿಕೊಳ್ಳುತ್ತೇನೆ."

"ಆಗಲಿ. ಅದೇನು ಸಂಗತಿ ನಿಸ್ಸಂಕೋಚವಾಗಿ ತಿಳಿಸಿ!"

"ಪ್ರಭು! ಇದುವರೆಗೆ ನಾನು ಹೇಳಿದುದಕ್ಕೆಲ್ಲ ಸಮ್ಮತಿಸುತ್ತಿದ್ದಿರಿ, ನನ್ನ ಮೇಲಿನ ಗೌರವದಿಂದಲೋ ಏನೋ ನನ್ನ ಸಲಹೆಗಳನ್ನು ಅಂಗೀಕರಿಸುತ್ತಿದ್ದಿರಿ. ಇದುವರೆಗೆ ನಮ್ಮ ನಿಮ್ಮಲ್ಲಿ ಯಾವುದರಲ್ಲೂ ಭಿನ್ನಾಭಿಪ್ರಾಯವಿರಲಿಲ್ಲ. ರಾಜ್ಯಾಡಳಿತವು ಸುಸೂತ್ರವಾಗಿ ನಡೆದಿತ್ತು. ಆದರೆ ಅದೇನು ಕಾರಣವೋ ಇತ್ತೀಚಿಗೆ ನಿಮಗೆ ನನ್ನಲ್ಲಿ ಸಂದೇಹ ಬಂದಿದೆ. ನನ್ನ ವಿರುದ್ಧ ನಿಮ್ಮ ಮನಸ್ಸನ್ನು ಯಾರೋ ಕೆಡಿಸುತ್ತಿದ್ದಾರೆ. ಆದುದರಿಂದ ನಾನು ಈ ಪ್ರಶ್ನೆಯನ್ನು ಕೇಳಬೇಕಾಗಿದೆ. ತಾವು ದಯವಿಟ್ಟು ಇದಕ್ಕೆ ಉತ್ತರ ಕೊಡಬೇಕು!"

"ಏನು ಹೇಳಿ?"

"ನಿಮಗೆ ನನ್ನಲ್ಲಿ ನಂಬಿಕೆ ಇದೆಯೆ?"

"ಎಂಥಹ ಪ್ರಶ್ನೆ! ನಿಮ್ಮಲ್ಲಿ ನನಗೆ ನಂಬಿಕೆ ಇಲ್ಲವೆ? ನಿಮ್ಮನ್ನು ನಂಬದಿದ್ದ ಮೇಲೆ ನಾನು ಇನ್ಯಾರನ್ನ ನಂಬಲಿ?"

"ಹಾಗಾದರೆ ನಾನು ಒಂದು ಮಾತನ್ನು ಹೇಳುತ್ತೇನೆ. ನಿಮಗೆ ನನ್ನಲ್ಲಿ ನಂಬಿಕೆ ಇದ್ದರೆ ನೀವು ರಾಜ್ಯಾಡಳಿತದ ಜಂಜಡವನ್ನು ನನಗೆ ಒಪ್ಪಿಸಿ ಇದುವರೆಗೆ ಇದ್ದಂತೆ ನಿಶ್ಚಿಂತೆಯಿಂದ ಇರಬೇಕು! ಆಡಳಿತದ ಭಾರವನ್ನು ಹೊರಲು ನಾನು ಕಂಕಣತೊಟ್ಟು ಸಿದ್ಧನಾಗಿರುವಾಗ ನೀವೇಕೆ ಇಲ್ಲದ ಕಾಷ್ಟ ವ್ಯಸನ ಹಚ್ಚಿಕೊಳ್ಳಬೇಕು?"

"ಹಾಗಾದರೆ ನಾನು ರಾಜ್ಯಾಡಳಿತದಲ್ಲಿ ಅನುಭವ ಪಡೆಯುವುದು ಬೇಡವೆ?"

"ಅನುಭವ ಪಡೆಯಬೇಕು ನಿಜ! ಎಷ್ಟು ಅನುಭವ ಪಡೆಯಬೇಕೋ ಅಷ್ಟನ್ನು ನಾನೇ ಕಲಿಸಿಕೊಡುತ್ತಿರುವೆನಲ್ಲ. ನೀವು ಅಷ್ಟರಿಂದ ತೃಪ್ತರಾಗಿರಿ! ಈಗ ನಿಮಗೆ ಯಾವುದಕ್ಕೆ ಕೊರತೆಯಾಗಿದೆ? ನೀವು ಇನ್ನೂ ಆಡುವ ಹುಡುಗರು. ನಿಮಗೇಕೆ ಬೇಕು ಈ ವಿಸ್ತಾರವಾದ ಸಾಮ್ರಾಜ್ಯದ ಚಿಂತೆ! ಇದನ್ನು ನೀವು

ಹೊರಲು ನಿರ್ಧರಿಸಿದಾಗ ನಿಮಗೆ ಇದನ್ನು ನಾನು ಸಂತೋಷದಿಂದ ಒಪ್ಪಿಸಿಕೊಡುತ್ತೇನೆ. ಅಲ್ಲಿಯತನಕ ನೀವು ಆಟಪಾಟವಿನೋದಗಳಲ್ಲಿ ಈ ವಯಸ್ಸಿನ ಮನರಂಜನೆಗಳಲ್ಲಿ ಮನಸ್ಸು ಕೊಟ್ಟು ಸುಖವಾಗಿರಬೇಕೆಂಬುದೇ ನನ್ನ ಇಚ್ಛೆ!"

"ನಾನಿನ್ನೂ ರಾಜ್ಯಸೂತ್ರಗಳನ್ನು ಹಿಡಿಯಲು ಅನನುಭವಿ. ದಿಟ. ಆದರೆ ನನಗೆ ವಯಸ್ಸು ಸಾಲದೆ? ಈಗ ನಾನು ರಾಜಕೀಯದಲ್ಲಿ ತರಪೇತು ತೆಗೆದುಕೊಳ್ಳದಿದ್ದರೆ ಸಾಮ್ರಾಜ್ಯದ ನೂರು ಸಮಸ್ಯೆಗಳಲ್ಲಿ ಅನುಭವ ಪಡೆದುಕೊಳ್ಳದೆ ಇದ್ದರೆ ಇವು ಕಡೆತನಕ ಹೊಸದಾಗಿಯೇ ಉಳಿಯುತ್ತವೆ. ಪ್ರಜೆಗಳು ನನ್ನಲ್ಲಿ ಇಟ್ಟಿರುವ ವಿಶ್ವಾಸಕ್ಕೆ ನಾನು ಅರ್ಹನಾಗುವುದು ಎಂದು? ಸಾಮ್ರಾಜ್ಯವನ್ನು ದಕ್ಷತೆಯಿಂದ ಆಳುವುದು ಎಂತು? ಆದುದರಿಂದ ತಾವು ನನ್ನ ಪ್ರಾರ್ಥನೆಯನ್ನು ನಡಸಿಕೊಡಬೇಕು. ನನಗೆ ರಾಜ್ಯಾಡಳಿತದಲ್ಲಿ ಹೆಚ್ಚಿನ ಅವಕಾಶ ಕೊಡಬೇಕು. ನೀವು ಹಿರಿಯರಾಗಿ ನಿಂತು, ನಾನು ತಪ್ಪಿದಾಗ ತಿದ್ದಿ ಬುದ್ಧಿ ಹೇಳಬೇಕು. ನೀವು ನನ್ನ ಆಚಾರ್ಯರಾಗಿ ನಿಂತು ನಿಮ್ಮ ರಾಜಕೀಯ ಗರಡಿಯಲ್ಲಿ ನನಗೆ ಶಿಕ್ಷಣ ಕೊಡಬೇಕು ನಿಮ್ಮ ಹೆಮ್ಮೆಯ ಶಿಷ್ಯನಾಗುವಂತೆ ತಯಾರಿಸಬೇಕು! ನನ್ನಿಂದ ಸಾಮ್ರಾಜ್ಯಕ್ಕೆ ಉತ್ಕೃಷ್ಟವಾದ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸಿಕೊಡಬೇಕು!" ಎಂದು ನಮ್ರವಾಗಿ ಪ್ರಾರ್ಥಿಸಿದ ಸದಾಶಿವರಾಯ.

"ಇದನ್ನು ನೀವು ಕೋರಿಕೆ ಎನ್ನಬಾರದು ಪ್ರಭು! ಅಪ್ಪಣೆ ಎನ್ನಬೇಕು. ನಿಮ್ಮ ಪ್ರಜಾವಾತ್ಸಲ್ಯವನ್ನು ಕಂಡು ನನಗೆ ಆಗಿರುವ ಸಂತೋಷ ಎಷ್ಟೆಂದು ಊಹಿಸಲಾರಿರಿ. ಇಂಥ ಶಿಷ್ಯ ದೊರೆತರೆ ಯಾವ ಗುರುವಿಗೆತಾನೇ ಸಂತೋಷವಾಗುವುದಿಲ್ಲ. ನಿಮ್ಮ ಕೋರಿಕೆಯನ್ನು ಸಂತೋಷದಿಂದಲೇ ನಡಸಿಕೊಡುತ್ತೇನೆ. ಈಗ ಅಂಬರ್ ಖಾನನ ಪ್ರಸಂಗದಲ್ಲಿ ನನ್ನ ಕಡೇ ಮಾತೊಂದಿದೆ. ಇದನ್ನು ಗಮನವಿಟ್ಟು ಆಲಿಸಬೇಕು! ನೀವು ಸಾಮ್ರಾಜ್ಯದಲ್ಲಿ ಯಾರಿಗೂ ಯಾವ ಬಗೆಯ ಅನ್ಯಾಯವೂ ನಡೆಯಬಾರದೆಂಬ ಧರ್ಮದೃಷ್ಟಿಯಿಂದ ಈ ವಿಚಾರಣೆಯೂ ನಡೆಯಬೇಕೆಂದು ಹೇಳಿದ್ದೀರಿ. ನಿಮಗೆ ನಾನು ಆಶ್ವಾಸನ ಕೊಡುತ್ತೇನೆ. ನನ್ನ ಮಾತನ್ನು ನಂಬಿ. ಈ ಪ್ರಕರಣದಲ್ಲಿ ಸಾಮ್ರಾಟರಿಂದ – ಪ್ರಭುತ್ವದಿಂದ ಯಾರಿಗೂ ಯಾವ ಬಗೆಯ ಅನ್ಯಾಯವೂ ನಡೆದಿಲ್ಲ!"

"ನೀವು ವಿಚಾರಣೆ ಬೇಡವೆಂದು ಒತ್ತಾಯಪಡಿಸುವುದಾದರೆ ನಿಮ್ಮ ಮಾತನ್ನು ನಾನು ಮೀರುವುದಿಲ್ಲ. ಒಟ್ಟಿನಲ್ಲಿ ನಮ್ಮಿಂದ ತಿಳಿದೋ ತಿಳಿಯದೆಯೋ ಯಾವುದೇ ಅನ್ಯಾಯ ನಡೆಯದೆ ಇದ್ದರೆ ಸರಿ!" ಎಂದ ನಿರಾಸಕ್ತನಾಗಿ ಸಾಮ್ರಾಟ್ ಸದಾಶಿವರಾಯ.

"ಪ್ರಭು ರಾಜ್ಯಾಡಳಿತವೆಂದರೆ ಇಂತಹವು ಎಷ್ಟೋ ನಡೆಯುತ್ತವೆ.

ಇವುಗಳಿಗೆಲ್ಲಾ ವಿಚಾರಣೆ ಮಾಡುತ್ತ ಕುಳಿತರೆ ರಾಜ್ಯಭಾರಮಾಡುವುದೇ ಕಠಿಣ ವಾಗುತ್ತದೆ. ಆದುದರಿಂದ ನೀವು ಈ ಬಗ್ಗೆ ಏನೂ ಯೋಚಿಸಬೇಡಿ. ನಿಮ್ಮ ಪಾಡಿಗೆ ನೀವು ನಿಶ್ಚಿಂತರಾಗಿರಿ! ಉಳಿದುದೆಲ್ಲವನ್ನೂ ನಾನು ನೋಡಿಕೊಳ್ಳು ತ್ತೇನೆ” ಎಂದು ಹೇಳಿ ರಾಮರಾಯನು ಅಲ್ಲಿಂದ ಹೊರಟ – ದಿಗ್ವಿಜಯ ಸಾಧಿ ಸಿದ ಹುರುಪಿನಲ್ಲಿ.

ನಿಜ ಹೇಳುವುದಾದರೆ ಅವನ ಪಾಲಿಗೆ ಇದೊಂದು ದಿಗ್ವಿಜಯವೇ ಆಗಿತ್ತು.

## ೮

ಸಾಮ್ರಾಟ್ ಸದಾಶಿವರಾಯನೊಡನೆ ಉಂಟಾಗಿದ್ದ ವೈಮನಸ್ಸು ತಾತ್ಕಾ ಲಿಕಕ್ಕೆ ಬಗೆಹರಿದುದು ರಾಮರಾಯನ ಪಾಲಿಗೆ ಒಂದು ದಿಗ್ವಿಜಯವಾದರೂ ಇದರಿಂದ ಶಾಂತಿ ಸಮಾಧಾನ, ಸುಖಸಂತೋಷಗಳು ಅವನಿಗೆ ಉಂಟಾಗಲಿಲ್ಲ. ಇದಕ್ಕೆ ಕಾರಣ ತನ್ನ ವಿಷಯದಲ್ಲಿ ಸದಾಶಿವರಾಯನ ತಲೆಯಲ್ಲಿ ಯಾರೋ ಶಂಕೆ, ಸಂಶಯಗಳ ವಿಷಬೀಜವನ್ನು ಬಿತ್ತಿದ್ದಾರೆ, ಎಂಬುದೇ ಆಗಿತ್ತು. ನೊದಲಿದ್ದಂತೆ ತನ್ನ ವಿಷಯದಲ್ಲಿ ನಂಬಿಕೆ, ಪ್ರೀತಿ ಗೌರವಗಳು ಇಲ್ಲವೆಂಬ ಸಂಗತಿ ಇದುವರೆಗೆ ಊಹೆಯಾಗಿದ್ದುದು ಇದೀಗ ಸ್ಪಷ್ಟವಾಗಿ ಪ್ರಕಟವಾಗಿತ್ತು. ಅತ್ತ ತನ್ನ ಸಹೋದರರಾದ ತಿರುಮಲ ವೆಂಕಟಾದ್ರಿಯರು ತನ್ನ ವಿಷಯದಲ್ಲಿ ಸಂಶಯ ವ್ಯಕ್ತಪಡಿಸಿದ್ದಂತೆ ಇತ್ತ ಸದಾಶಿವರಾಯನೂ ಅವನ ವಿಷಯದಲ್ಲಿ ಸಂಶಯವನ್ನು ವ್ಯಕ್ತಪಡಿಸಿದ್ದನು. ಅವನು ರಾಮರಾಯನ ನಿರಂಕುಶಾಧಿ ಕಾರಕ್ಕೆ ಅಂಕುಶವಾಗಲು ಹವಣಿಸಿದ್ದನು. ಇದನ್ನು ತಿಳಿದಾಗ ರಾಮರಾ ಯನ ಮನಸ್ಸಿನಲ್ಲಿ ಪ್ರಚಂಡ ಕ್ಷೋಭೆಯುಂಟಾಯಿತು. ಇದು ಅವನ ಮನ ಶ್ಶಾಂತಿಯನ್ನು ಕದಡಿತ್ತು. ಪರಸ್ಪರ ಉಂಟಾಗಿದ್ದ ಈ ಶಂಕೆಸಂಶಯಗಳಿಂದ ಯಾವ ಹಾಲಾಹಲ ಹುಟ್ಟುವುದೋ, ಈ ಹಾಲಾಹಲ ಎಷ್ಟು ಜನರನ್ನು ಬಲಿ ತೆಗೆದುಕೊಳ್ಳುವುದೋ ಎಂದು ಅವನು ಆತಂಕಗೊಂಡಿದ್ದ.

ಎಲ್ಲಕ್ಕಿಂತ ಅವನ ಚಿತ್ತಶಾಂತಿಯನ್ನು ಹೆಚ್ಚು ಕದಡಿದ ಸಂಗತಿ ಎಂದರೆ ತನ್ನ ವಿರುದ್ಧ ಸದಾಶಿವರಾಯನನ್ನು ಯಾರೋ ಎತ್ತಿಕಟ್ಟುತ್ತಿದ್ದಾರೆ ಎಂಬುದು. ಸದಾಶಿವರಾಯನು ತಾನು ಎಲ್ಲರಂತೆ ಸಾಮ್ರಾಟನಾಗಿ ಬದುಕಲಾಶಿಸಿದುದೇ ರಾಮರಾಯನ ಕಣ್ಣಿನಲ್ಲಿ ಮಹಾಪರಾಧವಾಗಿತ್ತು. ಅವನು ಸಾಮ್ರಾಟ್ ಕೃಷ್ಣದೇವರಾಯ, ಪ್ರೌಢದೇವರಾಯ, ಮಲ್ಲಿಕಾರ್ಜುನರಂತೆ ವಿಜಯನಗರದ

ಸಿಂಹಾಸನದಲ್ಲಿ ಆದರ್ಶ ಸಾಮ್ರಾಟನಾಗಿ ಮೆರೆಯಲು ಆಶಿಸಿದ್ದುದೇ ಅವನ ಮಹಾಪರಾಧವಾಗಿತ್ತು. ತಾರುಣ್ಯಕ್ಕೆ ಸಹಜವಾದ ಸ್ವತಂತ್ರಾಪೇಕ್ಷೆಯಾದುದೇ ಅವನ ತಪ್ಪಾಗಿತ್ತು. ಇದನ್ನು ಉದಯೋನ್ಮುಖ ರಾಜಪುತ್ರನ ಸಹಜ ಬಯಕೆಗಳೆಂದು ತಿಳಿಯದೇ ಸದಾಶಿವನ ತಲೆಯಲ್ಲಿ ಯಾರೋ ತನ್ನ ವಿರುದ್ಧ ವೈಮನಸ್ಸಿನ ಬೀಜ ಬಿತ್ತಿದ್ದಾರೆ ಎಂಬ ಕಲ್ಪನೆಯಿಂದ ರಾಮರಾಯನು ಗಾಳಿಯನ್ನು ಗುದ್ದಿ ಮೈಯನ್ನು ನೋಯಿಸಿಕೊಳ್ಳುವ ವ್ಯರ್ಥ ಸಾಹಸದಲ್ಲಿ ತೊಡಗಿದ್ದ.

ಸದಾಶಿವರಾಯನು ತನ್ನ ಪ್ರಭಾವ ವಲಯದಿಂದ ತಪ್ಪಿಸಿಕೊಂಡು ತಾನೇ ಸಾಮ್ರಾಟನಾಗಿ ಮೆರೆಯಲು ಆಶಿಸಿದ್ದ. ಇದಕ್ಕೆ ಏನೂ ಅರಿಯದ ಬಾಲಕನಂತಿದ್ದ ಸದಾಶಿವರಾಯನನ್ನು ಪ್ರಚೋದಿಸಿದವರು ಯಾರು? ಅವನಿಗೆ ಧೈರ್ಯ ಕೊಟ್ಟವರಾರು? ತನ್ನ ವಿರುದ್ಧ ಸಂಚುಮಾಡುವ ಆ ಹಿತಶತ್ರುಗಳು ಯಾರು? ಎಂದು ರಾಮರಾಯನು ಕಣ್ಣಿಗೆ ಕಾಣದಿದ್ದ ಆ ಅಜ್ಞಾತ ಶತ್ರುವಿನ ಮೇಲೆ ಕ್ರೋಧದಿಂದ ಹಲ್ಲು ಕಡಿದ. ಅವನ ಸಂಶಯದ ಪಕ್ಷಿ ಹಲವು ದಿಕ್ಕಿನಲ್ಲಿ ಹಾರಿತು. ಸದಾಶಿವರಾಯನಲ್ಲಿ ಸಲಿಗೆ ಇದ್ದ, ಸ್ನೇಹದಿಂದಿದ್ದ ಎಲ್ಲರ ಮೇಲೆ ಹರಿದಾಡಿತು. ತನ್ನ ಸಹೋದರರಾದ ತಿರುಮಲ ವೆಂಕಟಾದ್ರಿಯರು ಈ ದ್ರೋಹಿಗಳಿರಬಹುದೆ?....ತಿರುಮಲಾದೇವಿ, ಚಿನ್ನಾದೇವಿಯರು ತನ್ನ ವಿರುದ್ಧ ಸದಾಶಿವರಾಯನನ್ನು ಎತ್ತಿಕಟ್ಟಿರಬಹುದೆ?....

ಏಕೋ ಎಲ್ಲಕ್ಕಿಂತಲೂ ಅವನ ಸಂಶಯ ಮಹಾರಾಣಿ ತಿರುಮಲಾದೇವಿಯ ಮೇಲೆ ಹೆಚ್ಚು ಕೇಂದ್ರೀಕೃತವಾಯಿತು. ಇದಕ್ಕೆ ಪೂರಕವಾಗಿ ಸದಾಶಿವರಾಯನು ತಿರುಮಲಾದೇವಿಯ ಅಂತಃಪುರಕ್ಕೆ ಹೆಚ್ಚಾಗಿ ಹೋಗಿ ಬರುತ್ತಿದ್ದನು. ಅವನ ಹಾಗೂ ತಿರುಮಲಾದೇವಿಯ ತಾಯಿ ಮಕ್ಕಳ ಸಂಬಂಧವನ್ನು ರಾಮರಾಯನು ಹಾಸ್ಯ ಮಾಡಿದ್ದನು. ಆದರೆ ಕೆಲವೇ ವರ್ಷಗಳಲ್ಲಿ ಅವರ ಸಂಬಂಧ ತನ್ನ ವಿಷಯದಲ್ಲಿ ವಿಷಮಯವಾಗುವಷ್ಟು ಬೆಳೆಯುವುದೆಂದು ಅವನು ತಿಳಿದಿರಲಿಲ್ಲ. ಸದಾಶಿವರಾಯನ ಇತ್ತೀಚಿನ ವರ್ತನೆಗೆ ಅವಳೇ ಕಾರಣವೆಂದು ಹೇಗೋ ರಾಮರಾಯನು ತರ್ಕಿಸಿದನು. ಇದಕ್ಕೆ ತನ್ನ ಸಹೋದರರಾದ ತಿರುಮಲ ವೆಂಕಟಾದ್ರಿಯವರು ಪ್ರೋತ್ಸಾಹ ಕೊಡುತ್ತಿರಬಹುದೆಂದೂ ಅವನು ಊಹಿಸಿದನು. ತನ್ನ ವಿರುದ್ಧ ಹಿತಶತ್ರುಗಳ ಪಿತೂರಿಯೊಂದು ನಡೆದಿದೆ ಎಂದೂ ಭಾವಿಸಿದನು. ಅದು ಬೃಹದ್ ಸ್ವರೂಪ ತೆಗೆದುಕೊಳ್ಳುವ ಮೊದಲೇ ಮೊಳಕೆಯಲ್ಲೇ ಅದನ್ನು ಹೊಸೆದುಹಾಕಲು ನಿಶ್ಚಯಿಸಿದನು.

ಆದರೆ ಇದೆಲ್ಲವೂ ರಾಮರಾಯನ ಅಧಿಕಾರವ್ಯಾಮೋಹ, ಸ್ವಾರ್ಥಗಳು

ಹಡೆದ ಕಲ್ಪನೆಯ ಕೂಸಾಗಿತ್ತು. ತಿರುಮಲಾದೇವಿಯಾಗಲೀ, ಚಿನ್ನಾದೇವಿಯಾಗಲೀ ಸದಾಶಿವರಾಯನನ್ನು ರಾಮರಾಯನ ವಿರುದ್ಧ ಎತ್ತಿಕಟ್ಟುವ ಕುತ್ಸಿತ ಕಾರ್ಯದಲ್ಲಿ ತೊಡಗಿರಲಿಲ್ಲ. ಅದರಲ್ಲೂ ತಿರುಮಲಾದೇವಿಯ ಮೇಲಿನ ಸಂಶಯಕ್ಕೆ ಬುಡವಿರಲಿಲ್ಲ. ತಿರುಮಲಾದೇವಿಯು ತನ್ನ ಕಡೆಯ ದಿನಗಳಲ್ಲಿ ರಾಜಕೀಯದಿಂದ ದೂರವಿದ್ದುದು ಮಾತ್ರವಲ್ಲ, ಸಂಸಾರ ಜೀವನದಲ್ಲಿ ಜುಗುಪ್ಸೆ ಹೊಂದಿ ವಿರಾಗಿಣಿಯಂತೆ ಬದುಕುತ್ತಿದ್ದಳು. ಅವಳಿಗೆ ಯಾವುದೇ ಪ್ರಲೋಭ, ಸ್ವಾರ್ಥಗಳು ಇರಲಿಲ್ಲ. ಯಾವುದರಲ್ಲಿಯೂ ಅವಳಿಗೆ ಆಸಕ್ತಿ ಇರಲಿಲ್ಲ. ಜೀವನದ ಬಗ್ಗೆ ಒಂದು ಬಗೆಯ ನಿರಾಸಕ್ತಭಾವ ಬಂದುಹೋಗಿತ್ತು. ಮೇಲಾಗಿ ಅವಳು ರಾಮರಾಯನ ಅತ್ತೆಯಾಗಿದ್ದಳು. ಅವಳ ಮಗಳಾದ ತಿರುಮಲಾಂಬೆಯು ರಾಮರಾಯನ ಪಟ್ಟಮಹಿಷಿಯಾಗಿದ್ದಳೆಂದ ಮೇಲೆ ಅವಳು ತನ್ನ ಅಳಿಯನ ವಿರುದ್ಧ ಪಿತೂರಿ ಮಾಡುವಳೆ?

ಇನ್ನು ಚಿನ್ನಾದೇವಿ! ಆಕೆಗೂ ಸದಾಶಿವರಾಯನಿಗೂ ಹೇಳಿಕೊಳ್ಳುವಂತಹ ಸಲಿಗೆ ಇರಲಿಲ್ಲ. ರಾಜಕುಟುಂಬಕ್ಕೆ ಸೇರಿದ್ದು, ಮಾತೃಸ್ಥಾನದಲ್ಲಿದ್ದ ಆಕೆಯನ್ನು ಸದಾಶಿವರಾಯನು ಗೌರವದಿಂದ ನೋಡುತ್ತಿದ್ದುದೇನೋ ನಿಜ. ಆಗಾಗ್ಗೆ ಅವಳ ಕ್ಷೇಮ ಸಮಾಚಾರ ತಿಳಿದುಕೊಳ್ಳುತ್ತಿದ್ದುದೂ ಉಂಟು. ಅವರಿಬ್ಬರ ಸಂಬಂಧ ಇಷ್ಟರಲ್ಲಿಯೇ ಮುಗಿದುಹೋಗಿತ್ತು. ಚಿನ್ನಾದೇವಿಯ ಹಿಂದಣ ಚರಿತ್ರೆಯನ್ನು ತಿಳಿದಿದ್ದ ರಾಮರಾಯನಿಗೆ ಅವಳ ಬಗ್ಗೆ ಸಂಶಯವಿದ್ದೇ ಇತ್ತು. ಹಿಂದೆ ತನ್ನ ಅಳಿಯ ಮಗಳಾದ ತಿರುಮಲ–ವೆಂಗಡಾಂಬೆಯರಿಗೆ ವಿಜಯನಗರದ ಸಿಂಹಾಸನವನ್ನು ದಕ್ಕಿಸಿಕೊಡಲು ಅವಳು ಸ್ವಯಂ ಕೃಷ್ಣದೇವರಾಯನ ವಿರುದ್ಧ ಪಿತೂರಿಮಾಡಿದ್ದಳು. ಸ್ವಾರ್ಥ ಸ್ಥಾಪಿಸಿಕೊಳ್ಳುವ ಹುಚ್ಚಿನಲ್ಲಿ ಕೃಷ್ಣದೇವರಾಯನ ಬಾಳ್ವಿಗೆ ಅವಳು ಕುಠಾರಪ್ರಾಯಳಾಗಿದ್ದಳು. ಇಷ್ಟು ಸ್ವಾರ್ಥದ ಹೆಣ್ಣಾದ ಚಿನ್ನಾದೇವಿ ಇಂದು ಸುಮ್ಮನಿರುವಳೆ? ಅವಳು ಈಗಲೂ ತನ್ನ ಅಳಿಯನ ಪರವಾಗಿ, ಸದಾಶಿವರಾಯನನ್ನು ತನ್ನ ಮೇಲೆ ಎತ್ತಿ ಕಟ್ಟುತ್ತಿರುವಳೆಂದೇ ರಾಮರಾಯನು ಶಂಕಿಸಿದನು.

ಇದೇ ಸಂದರ್ಭದಲ್ಲಿ ರಾಮರಾಯನಿಗೆ ಚಿನ್ನಾದೇವಿಯಿಂದ ಕರೆ ಬಂದುದು ಅಂಜುತ್ತಿದ್ದವನ ಮೇಲೆ ಹಾವು ಎಸೆದಂತೆ ಆಯಿತು. ಹುತ್ತದ ಬಳಿ ಇದ್ದ ಹಗ್ಗವನ್ನೇ ಹಾವೆಂದು ಅಂಜಿದವನು ಸರ್ಪದ ಹೆಡೆಯ ಮೇಲೆ ಕಾಲಿಟ್ಟರೆ ಉಂಟಾಗುವ ಅನುಭವ ರಾಮರಾಯನಿಗೆ ಆಯಿತು. ತನ್ನನ್ನು ಕರೆಸಿಕೊಳ್ಳುವಂತಹ ಯಾವ ರಾಜಕಾರಣವೂ ಚಿನ್ನಾದೇವಿಗೆ ಇರಲಿಲ್ಲ. ಆದರೂ ಚಿನ್ನಾದೇವಿಯು ತನ್ನ ಅಂತಃಪುರದ ದಾಸಿಯ ಮೂಲಕ, ಯಾವುದೋ ಮಹತ್ವದ

ವಿಷಯದ ಬಗ್ಗೆ ಮಾತನಾಡಲು ಕೂಡಲೇ ಬಂದುಹೋಗಬೇಕೆಂದು ರಾಮ ರಾಯನಿಗೆ ತಿಳಿಸಿದ್ದಳು. ಮಹಾರಾಣಿಯಾಗಿದ್ದ ಆಕೆಯ ಮಾತನ್ನು ರಾಮ ರಾಯ ಪೂರ್ಣ ನಿರ್ಲಕ್ಷಿಸುವ ಹಾಗಿರಲಿಲ್ಲ. ಇಷ್ಟವಿಲ್ಲದಿದ್ದರೂ ಏನು ಸಂಗತಿಯೋ ತಿಳಿದುಬರಲು ಚಿನ್ನಾದೇವಿಯ ಅಂತಃಪುರಕ್ಕೆ ಹೋಗಬೇಕಾಯಿತು.

ಚಿನ್ನಾದೇವಿಯು ರಾಮರಾಯನನ್ನು ಉಚಿತರೀತಿಯಲ್ಲಿ ಸ್ವಾಗತಿಸಿ, ಕುಶಲ ಪ್ರಶ್ನೆಮಾಡಿ, ಕುಳಿತುಕೊಳ್ಳಲು ಆಸನ ತೋರಿಸಿ, ತಾನು ಕರೆಸಿಕೊಂಡ ವಿಷಯಕ್ಕೆ ನೇರಬಂದಳು.

" ನಿಮ್ಮನ್ನು ಒಂದು ಮಹತ್ವದ ಸುದ್ದಿಯ ಬಗ್ಗೆ ವಿಚಾರಿಸಲು ಕರೆಸಿಕೊಂಡೆ. ನಿಮಗೆ ತೊಂದರೆಯಾಗಿದ್ದರೆ ಕ್ಷಮಿಸಿ " ಎಂದು ಹೇಳಿ ಕ್ಷಣಕಾಲ ಮೌನವಾಗಿದ್ದು ಅನಂತರ ಪ್ರಶ್ನಿಸಿದಳು.

" ಕೆಲವು ದಿನಗಳ ಹಿಂದೆ, ನಡುಬೀದಿಯಲ್ಲಿ ಸ್ವಾಮಿನಿಷ್ಠ ಸೇವಕನಾದ ಅಂಬರ್‌ಖಾನನನ್ನು ಯಾರೋ ದುರುಳರು ಕೊಲೆಮಾಡಿದರಂತೆ ಹೌದೆ ?"

ಈ ಮಾತು ಕೇಳಿ ರಾಮರಾಯನು ಚಕಿತನಾದ. ಹಾಗಾದರೆ ಈ ಸಂಗತಿ ಚಿನ್ನಾದೇವಿಯ ಕಿವಿಗೂ ಬಿದ್ದಿದೆ ಎಂದಾಯಿತು .. !

" ಹೌದು, ಮಹಾರಾಣಿಯವರೇ."

" ಆ ಕೊಲೆಪಾತಕನಿಗೆ ನಮ್ಮ ಸೇವೆಯಲ್ಲಿದ್ದ, ಅಂಬರ್‌ಖಾನನನ್ನು ನಡುಬೀದಿಯಲ್ಲಿ, ನಡುಹಗಲಿನಲ್ಲಿ ಕೊಲ್ಲುವಷ್ಟು ಧೈರ್ಯ ಅದು ಹೇಗೆ ಬಂತು ? ಅವನನ್ನು ಬಂಧಿಸಿದ್ದೀರಾ ? ವಿಚಾರಣೆಗೆ ಗುರಿಪಡಿಸಿದ್ದೀರಾ ?"

" ಇಲ್ಲ ಮಹಾರಾಣಿ."

" ಏಕೆ, ಆ ದ್ರೋಹಿ ತಪ್ಪಿಸಿಕೊಂಡಿರುವನೆ !"

" ಬಹುಶಃ ಈ ಕೊಲೆ ಹೇಗೆ ನಡೆಯಿತೆಂದು ನಿಮಗೆ ತಿಳಿದಿರಲಾರದು. ಇದು ನಿಜವಾಗಿ ಕೊಲೆಯಲ್ಲ. ದುಷ್ಟನೊಬ್ಬನಿಗೆ ಆದ ಶಿಕ್ಷೆ. ದ್ರೋಹಿಯೊಬ್ಬನು ದೈವದ ಕೈಯಲ್ಲಿ ಅನುಭವಿಸಿದ ಪ್ರಾಯಶ್ಚಿತ್ತ !" ಎಂದು ಹೇಳಿ, ಅಂಬರ್‌ಖಾನನ ಮರಣದ ಎಲ್ಲ ವೃತ್ತಾಂತವನ್ನು ರಾಮರಾಯನು ಸವಿಸ್ತಾರವಾಗಿ ತಿಳಿಸಿದನು. ಈ ಬಗ್ಗೆ ತನ್ನ ಸಹೋದರರೊಡನೆ ನಡೆದಿದ್ದ ಮಾತುಕತೆಯಾಗಲೀ, ಸದಾಶಿವರಾಯನೊಡನೆ ನಡೆದ ಚರ್ಚೆಯಾಗಲೀ ಅವನು ಚಿನ್ನಾದೇವಿಗೆ ತಿಳಿಸಲಿಲ್ಲ.

" ಅಂಬರ್‌ಖಾನನ ಜಹಗೀರಿಯನ್ನು ಬಲಾತ್ಕಾರದಿಂದ ಕಿತ್ತುಕೊಂಡು ಇಬ್ರಾಹಿಂಖಾನರಿಗೆ ಕೊಟ್ಟುದರಿಂದ ಇಷ್ಟೆಲ್ಲ ಹಗರಣ ನಡೆಯಿತೆಂದು ಕೇಳಿದ್ದೇನೆ. ಇದರಲ್ಲಿ ಯಾವುದು ಸತ್ಯ, ಯಾವುದು ಸುಳ್ಳು ತಿಳಿಯದಾಗಿದೆ." —ಎಂದು ಚಿನ್ನಾದೇವಿ ಹೇಳಿದಳು.

ಮತ್ತೆ ಅದೇ ಪ್ರಶ್ನೆ ರಾಮರಾಯನನ್ನು ಎದುರುಗೊಂಡಿತ್ತು ! ಇದನ್ನೆಲ್ಲಾ ವಿವರವಾಗಿ ಚಿನ್ನಾದೇವಿಗೆ ಹೇಳಲು ರಾಮರಾಯನಿಗೆ ವ್ಯವಧಾನವಿರಲಿಲ್ಲ. ಅಂತಲೇ ಒರಟಾಗಿ ಹೇಳಿದ :

“ ಈ ಬಗ್ಗೆ ನಾನೆಲ್ಲ ವಿಚಾರ ಮಾಡಿದ್ದೇನೆ. ಈ ಪ್ರಸಂಗದಲ್ಲಿ ಯಾರಿಗೂ ಯಾವ ಅನ್ಯಾಯ ನಡೆದಿಲ್ಲವೆಂದು ನಿನ್ನೆ ಸಾಮ್ರಾಟರಿಗೂ ತಿಳಿಸಿದ್ದೇನೆ. ಇಲ್ಲಿಗೆ ಈ ಪ್ರಸಂಗ ಮುಗಿಯಿತು. ಅಂಬರ್‌ಖಾನನ ಕೊಲೆಯ ಸುದ್ದಿಯೊಂದು ಬಿಟ್ಟು ಬೇರೇನಾದರೂ ಕೇಳುವುದಿದ್ದರೆ ಕೇಳಿ ತಿಳಿಸುತ್ತೇನೆ. ನನಗೆ ವೇಳೆಯಾಯಿತು....” ಎಂದ.

“ ನಿಮ್ಮ ಅಮೂಲ್ಯ ವೇಳೆಯನ್ನು ವ್ಯರ್ಥಗೊಳಿಸುವುದು ನನಗೆ ಇಷ್ಟವಿಲ್ಲ. ಆದರೆ, ನನ್ನದೊಂದು ಮಾತಿದೆ. ಈ ಪ್ರಕರಣ ಇಲ್ಲಿಗೆ ಮುಗಿಯಿತೆಂದು ನೀವು ಹೇಳಿದಿರಿ. ಆದರೆ ತಿರುಮಲ ವೆಂಕಟಾದ್ರಿಯರು ಈಗಷ್ಟೇ ಇಲ್ಲಿಗೆ ಬಂದಿದ್ದರು. ಅವರು ಈ ಕೊಲೆಯ ಬಗ್ಗೆ ನಿಷ್ಪಕ್ಷಪಾತ ವಿಚಾರಣೆ ನಡೆದು ಹತ್ಯಾಕಾರಿಗಳಿಗೆ ದಂಡನೆಯಾಗಬೇಕೆಂದು ಆಸ್ಥಾನಿಕರೂ, ಪುರಪ್ರಮುಖರೂ ಒತ್ತಾಯ ಮಾಡುತ್ತಿದ್ದಾರೆಂದು ಹೇಳಿದರು. ಆಗಂತುಕನೊಬ್ಬನಿಂದ ರಾಜಧಾನಿಯಲ್ಲಿ ಕೊಲೆ ನಡೆದಿರುವುದರಿಂದ ಈ ಬಗ್ಗೆ ಜನ ಕ್ಷುಬ್ಧರಾಗಿದ್ದಾರಂತೆ. ನೀವು ಈ ಬಗ್ಗೆ ಕೂಡಲೇ ವಿಚಾರಣೆ ನಡಸಿ ತಪ್ಪಿತಸ್ಥರು ಯಾರೇ ಇರಲಿ, ಅವರಿಗೆ ಸೂಕ್ತ ದಂಡನೆಯನ್ನು ವಿಧಿಸುವುದು ಸಾಮ್ರಾಜ್ಯದ ಹಿತದೃಷ್ಟಿಯಿಂದ, ಜನತೆಯ ನೆಮ್ಮದಿಯ ದೃಷ್ಟಿಯಿಂದ ಒಳ್ಳೆಯದೆಂದು ನನ್ನ ಅಭಿಪ್ರಾಯ !”

“ ಇದರಲ್ಲಿ ಯಾರೂ ಯಾವ – ಅಪರಾಧ ಮಾಡಿಲ್ಲವೆಂದ ಮೇಲೆ ಅಪರಾಧಿಗೆ ಶಿಕ್ಷೆ ವಿಧಿಸುವ ಪ್ರಶ್ನೆಯೇ ಇಲ್ಲ. ಜನತೆ ಸುಮ್ಮನೆ ಪ್ರಕ್ಷುಬ್ಧಗೊಂಡಿದೆ. ಇದನ್ನೆಲ್ಲಾ ನೀವು ತಲೆಗೆ ಹಚ್ಚಿಕೊಳ್ಳಬಾರದು. ಜನರ ರೀತಿಯೇ ಹೀಗೆ !”

“ ಜನತೆಯ ಆಕಾಂಕ್ಷೆಯನ್ನು ನಾವು ಹೀಗೆ ನಿರ್ಲಕ್ಷಿಸುವುದು ಒಳ್ಳೆಯದಲ್ಲ. ವಿಚಾರಣೆಯ ಒತ್ತಾಯದ ಅವರ ಬೇಡಿಕೆಯನ್ನು ಪ್ರಭುತ್ವದವರು ತಳ್ಳಿಹಾಕುವಂತೆ ಇಲ್ಲ !”

“ ನ್ಯಾಯತೀರ್ಮಾನ ಪ್ರಭುತ್ವದವರ ಕರ್ತವ್ಯ. ಅದನ್ನು ಅವರು ಮಾಡಿದ್ದಾರೆ. ಪ್ರಭುತ್ವ ಈಗಾಗಲೇ ಒಂದು ನಿರ್ಣಯಕ್ಕೆ ಬಂದಿದೆ. ಇಲ್ಲಿಗೆ ಈ ವಿಷಯ ಮುಗಿದಿದೆ.”

“ ನೀವು ತಪ್ಪಿರುವುದು ಇಲ್ಲೇ. ನ್ಯಾಯನಿರ್ಣಯದಲ್ಲಿ – ನ್ಯಾಯ ಪರಿಪಾಲನೆಯಲ್ಲಿ ಪ್ರಭುತ್ವದವರಿಗೆ ಇರುವ ಪಾತ್ರದಷ್ಟೇ — ಅದಕ್ಕೂ ಹೆಚ್ಚಿನ ಪಾತ್ರ ಜನತೆಗೆ ಇದೆ. ನ್ಯಾಯತೀರ್ಮಾನದಲ್ಲಿ ತೀರ್ಪುಮಾಡಲು ನೆರವಾಗುವ

ಧರ್ಮಾವತಾರರು ಯಾರು? ಜನತೆಯಲ್ಲವೆ! ಅವರ ಬೇಡಿಕೆಯನ್ನು ಸ್ವಾರ್ಥ ಸಾಧನೆಗಾಗಿ ಯಾರೂ ನಿರ್ಲಕ್ಷಿಸುವಂತಿಲ್ಲ – ನಿರ್ಲಕ್ಷಿಸಬಾರದು! ಇದರಿಂದ ಪ್ರಭುತ್ವದಮೇಲೆ ಜನತೆಗಿರುವ ವಿಶ್ವಾಸವೇ ನಾಶವಾಗಬಹುದು! ಸಾಮ್ರಾಜ್ಯ ದಲ್ಲಿ ನಿರಂಕುಶಾಡಳಿತ, ದಬ್ಬಾಳಿಕೆ ಪ್ರಾರಂಭವಾಗಿದೆ ಎಂದು ಅವರು ತಿಳಿಯ ಬಾರದಷ್ಟೆ!"

"ಆಗಲಿ, ಈ ವಿಷಯದಲ್ಲಿ ನನ್ನ ನಿರ್ಧಾರವೇನೆಂದು ಆಲೋಚಿಸಿ ತಿಳಿ ಸುತ್ತೇನೆ" ಎಂದು ಹೇಳಿ ರಾಮರಾಯನು ಈ ಎಲ್ಲ ಮಾತು ತನಗೆ ಸೇರಲಿಲ್ಲ ವೆಂಬಂತೆ ಮುಖವನ್ನು ಕಹಿ ಮಾಡಿಕೊಂಡು ಎದ್ದನು. ಇದನ್ನು ಕಂಡ ಚಿನ್ನಾ ದೇವಿ ಮತ್ತೆ ಹೇಳಲು ನೋಡಿದಳು. ನಿರ್ವಾಹವಿಲ್ಲದೆ ರಾಮರಾಯನು ಅದನ್ನು ಕೇಳಿಕೊಳ್ಳಬೇಕಾಯಿತು.

"ನಿಮ್ಮ ಅಮೂಲ್ಯ ಸಮಯವನ್ನು ನಾನು ವ್ಯರ್ಥಗೊಳಿಸುತ್ತಿದ್ದರೆ ಕ್ಷಮೆ ಇರಲಿ. ನಿಮ್ಮಲ್ಲಿ ಇನ್ನೊಂದು ವಿಷಯವನ್ನು ನಾನು ಪ್ರಸ್ತಾಪಿಸಬೇಕಾ ಗಿದ್ದಿತು. ಅದೇನೆಂದರೆ ಸಾಮ್ರಾಟ್ ಸದಾಶಿವರಾಯರ ಸಂಗತಿ. ಈ ಮಾತು ಗಳನ್ನು ನಿಮ್ಮ ಮುಂದೆ ಈ ಮೊದಲೇ ತೆಗೆಯಬೇಕೆಂದಿದ್ದೆ. ಯೋಗ್ಯ ಸಮಯ ಬಂದಿರಲಿಲ್ಲ. ಈಗ ಹೇಗೂ ಬಂದಿದ್ದೀರಿ – ನನ್ನ ಕಹಿಮಾತುಗಳನ್ನೂ ಕೇಳಿ ದ್ದೀರಿ. ಈ ಮಾತುಗಳನ್ನೂ ಕೇಳಿಬಿಡಿ...."

"ಈಗ ಸಾಮ್ರಾಟರಿಗೆ ಇಪ್ಪತ್ತೈದು ತುಂಬುತ್ತಿದೆ. ರಾಜ್ಯಭಾರ ವಹಿಸಿ ಕೊಳ್ಳಲು ಪ್ರಾಪ್ತವಯಸ್ಸಾಗಿದೆ. ಅವರಿಗೆ ಸಾಮ್ರಾಜ್ಯದ ಆಡಳಿತ ಸೂತ್ರ ಗಳನ್ನು ಒಪ್ಪಿಸಿಕೊಟ್ಟು ಪ್ರಜೆಗಳ ಬಹುಕಾಲದ ಬಯಕೆಯನ್ನು ತಾವು ಈಡೇ ರಿಸಿ. ನಮ್ಮನ್ನೆಲ್ಲಾ ಸಂತೋಷಗೊಳಿಸಬೇಕೆಂದು ಪ್ರಾರ್ಥನೆ. ಈ ಬಗ್ಗೆ ಸದಾ ಶಿವರಾಯರು ನನ್ನೊಡನೆ ಅನೇಕ ಬಾರಿ ಬಿಚ್ಚುಮನಸ್ಸಿನಿಂದ ಹೇಳಿದ್ದಾರೆ. ರಾಜ್ಯಾಡಳಿತವನ್ನು ತಾವೇ ನಡಸಿಕೊಳ್ಳುವ ಆಶಯವನ್ನೂ ವ್ಯಕ್ತಪಡಿಸಿದ್ದಾರೆ. ನಿಮ್ಮೊಂದಿಗೆ ಈ ಪ್ರಸ್ತಾಪ ತೆಗೆದರೆ ನೀವು ತಪ್ಪು ತಿಳಿಯುವಿರೆಂಬ ಅಂಜಿಕೆ ಯಿಂದ ಈ ಸಂಗತಿಯನ್ನು ನಿಮಗೆ ತಿಳಿಸಲು ನನಗೆ ದೊಂಬಗಾಲು ಬಿದ್ದಿದ್ದಾರೆ. ಅಂತಲೇ ನಾನು ಈ ಮಾತನ್ನು ನಿಮ್ಮೊಂದಿಗೆ ತೆಗೆಯಬೇಕಾಯಿತು. ನಿಮ್ಮ ಮನಸ್ಸಿಗೆ ನೋವುಂಟಾಗಿದ್ದರೆ ಕ್ಷಮಿಸಿ...." ಎಂದಳು ಚಿನ್ನಾದೇವಿ.

"ಅವರದೇ ಆಗಿರುವ ಸಾಮ್ರಾಜ್ಯವನ್ನು ಅವರಿಗೇ ವಹಿಸಿಕೊಡಲು ನನ್ನ ದೇನೂ ಅಭ್ಯಂತರವಿಲ್ಲ." ಈ ಕೆಲಸವನ್ನು ನಾನು ಸಂತೋಷದಿಂದಲೇ ಮಾಡು ತ್ತೇನೆ. ಆದರೆ ರಾಜ್ಯಾಡಳಿತವನ್ನು ಹೊರಲು ಅವರಿನ್ನೂ ಸಣ್ಣವರು. ಇನ್ನೂ ನಾಲ್ಕುಕಾಲ ಯಾವ ಜವಾಬ್ದಾರಿಯಿಲ್ಲದೆ ಹುಡುಗರಂತೆ ಇರಬೇಕೆಂಬುದೇ

ನನ್ನ ಆಶಯ. ಅವರು ಪ್ರಾಪ್ತವಯಸ್ಕರಾದ ಮೇಲೆ – ಈ ಭಾರವನ್ನು ಹೊರಲು ಸಮರ್ಥರಾದ ಮೇಲೆ ರಾಜ್ಯಾಡಳಿತ ವಹಿಸಿಕೊಳ್ಳಲು ಸಾಮ್ರಾಜ್ಯದ ಸಾವಿರ ಕೋಟಲೆಗಳು, ನೂರಾರು ಸಮಸ್ಯೆಗಳು ಇವೆ. ಈಗಲೇ ಅವರಿಗೇಕೆ ಈ ಎಲ್ಲ ಭವಣೆ ಎಂದು ನಾನು ಈ ವಿಷಯವನ್ನು ಮುಂದಕ್ಕೆ ಹಾಕಿದ್ದೇನೆ.... ಇದರಲ್ಲಿ ನನ್ನ ಯಾವ ಸ್ವಾರ್ಥವೂ ಇಲ್ಲ" – ಎಂದ ರಾಮರಾಯ ಅರ್ಥಗರ್ಭಿತವಾಗಿ ನೋಡುತ್ತ.

"ರಾಜ್ಯಾಡಳಿತವೆಂದರೆ ಹೂವಿನ ಹಾಸಿಗೆಯಲ್ಲ ಎಂಬುದು ನಮಗೂ ತಿಳಿದಿದೆ. ಆದರೆ ಇಂದಲ್ಲ ನಾಳೆ ಇದರ ಜವಾಬ್ದಾರಿಯನ್ನು ಅವರು ಹೊಂದಲೇ ಬೇಕಲ್ಲ. ಈಗ ಅವುಗಳ ಪರಿಚಯವನ್ನು ಮಾಡಿಕೊಂಡರೆ ಮುಂದೆ ರಾಜ್ಯಾಡಳಿತದ ಹೊರೆ ಹೊರಲು ಹೆಚ್ಚು ಕಷ್ಟವಾಗಲಾರದೆಂದು ಸಾಮ್ರಾಟರ ಆಶಯ. ಒಂದು ರೀತಿಯಲ್ಲಿ ಅವರು ಹೇಳುವುದೂ ಸಮಂಜಸವಾಗಿದೆ.. ನಮ್ಮೆಲ್ಲರ ಅಭಿಪ್ರಾಯವೂ ಹಾಗೆಯೇ ಇದೆ. ಆದಷ್ಟು ಬೇಗ ಅವರಿಗೇ ಸಾಮ್ರಾಜ್ಯದ ಆಡಳಿತ ಸೂತ್ರವನ್ನು ವಹಿಸಿಕೊಡುವುದು ಒಳ್ಳೆಯದು. ಈ ಬಗ್ಗೆ ನಿಮ್ಮ ಸ್ಪಷ್ಟ ಅಭಿಪ್ರಾಯ ತಿಳಿಸಿ, ನಮಗೆ ಮಾರ್ಗದರ್ಶನ ಮಾಡಬೇಕು!"

"ನನ್ನ ಸ್ಪಷ್ಟ ಅಭಿಪ್ರಾಯ ಹೇಳುವುದಾದರೆ ಸಾಮ್ರಾಟರು ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ಸಾಮ್ರಾಜ್ಯಸೂತ್ರವನ್ನು ತಾವೇ ಕೈಗೆ ತೆಗೆದುಕೊಳ್ಳುವುದು ನನಗೆ ಇಷ್ಟವಿಲ್ಲ."

"ಏಕೆ?"

"ಸಾಮ್ರಾಜ್ಯಕ್ಕಿನ್ನೂ ಶತ್ರುಭೀತಿ ತಪ್ಪಿಲ್ಲ! ಸುತ್ತಲೂ ಹೊರಗಿನ ಶತ್ರುಗಳು ಅವಕಾಶ ಸಿಕ್ಕಿದರೆ ಸಾಮ್ರಾಜ್ಯವನ್ನು ಕಬಳಿಸಲು ಹೊಂಚುಹಾಕಿ ಕುಳಿತಿದ್ದಾರೆ. ಅಂತೆಯೇ ಹಿತಶತ್ರುಗಳು ಅನೇಕರು ಒಳಗಿಂದೊಳಗೇ ಸಾಮ್ರಾಜ್ಯದ ವಿರುದ್ಧ ಪಿತೂರಿ ನಡಸುತ್ತಿದ್ದಾರೆ. ಇಂತಹ ಸಮಯದಲ್ಲಿ ಆಡಳಿತದಲ್ಲಿ ಯಾವ ಬದಲಾವಣೆಯಾದರೂ ಇದರಿಂದ ಸಾಮ್ರಾಜ್ಯ ಭದ್ರತೆಗೆ ಕೆಡಕೇ ಆಗುತ್ತದೆ!"

"ಆಡಳಿತದಲ್ಲಿ ಬದಲಾವಣೆಯಾದ ಮಾತ್ರಕ್ಕೆ ವ್ಯಕ್ತಿಗಳು ಬದಲಾವಣೆಯಾಗುವುದಿಲ್ಲವಲ್ಲ. ಇದುವರೆಗೆ ರಾಜಪ್ರತಿನಿಧಿಗಳಾಗಿ ಸಾಮ್ರಾಜ್ಯದ ಆಡಳಿತ ಸೂತ್ರ ನಿರ್ವಹಿಸುತ್ತಿದ್ದ ನೀವೇ ಮಹಾಪ್ರಧಾನರಾಗಿ ಇದನ್ನು ನೋಡಿಕೊಳ್ಳುತ್ತೀರಿ. ಆಡಳಿತದ ವರ್ಗಾವಣೆ ಕೇವಲ ಹೆಸರಿನಲ್ಲಿ ಮಾತ್ರ ತಾನೆ? ನೀವು ವಿಜಯನಗರ ಸಾಮ್ರಾಜ್ಯದ ರಕ್ಷಾಮಣಿಯಂತ ಇರುವಾಗ ಸಾಮ್ರಾಜ್ಯಕ್ಕೆ ಯಾವ ಭಯವೂ ಇಲ್ಲ!"

"ನೀವು ಹೇಳುವ ಮಾತು ವಿಚಾರಾರ್ಹವಾಗಿದೆ. ನಾನು ರಾಜಪ್ರತಿನಿಧಿಯಾಗಿದ್ದ ಮಾತ್ರಕ್ಕೆ ಆಡಳಿತ ಸೂತ್ರ ತಮ್ಮ ಕೈಯಲ್ಲಿಲ್ಲ ಎಂದು ಪ್ರಭುಗಳೇಕೆ ತಿಳಿಯಬೇಕು? ಎಂದಿದ್ದರೂ ಅವರೇ ಸಾಮ್ರಾಟರು. ಈ ಸಾಮ್ರಾಜ್ಯ ಅವರದು. ನಾನು ಕೇವಲ ರಾಜಪ್ರತಿನಿಧಿ – ಅವರ ಅಂಕಿತದಲ್ಲೆ ಆಳುವ ಪ್ರಜಾಸೇವಕ! ಹೀಗಿದ್ದೂ ಪ್ರಭುಗಳೇಕೆ ನನ್ನಲ್ಲಿ ಸಂಶಯ ವ್ಯಕ್ತಪಡಿಸಿ ಆಡಳಿತ ಸೂತ್ರ ತಾವೇ ವಹಿಸಿಕೊಳ್ಳಲು ಚಡಪಡಿಸಬೇಕು ನನಗೆ ಯಾಕೋ ಇದೊಂದೂ ಅರ್ಥವಾಗುತ್ತಿಲ್ಲ!" ಬೇಸರದಲ್ಲಿ ಹೇಳಿದ ರಾಮರಾಯ.

"ನಿಮ್ಮ ಮಾತು ಯಥಾರ್ಥವಾದ್ದು. ಆದರೆ ನೀವು ಸಾಮ್ರಾಟರ ದೃಷ್ಟಿಯಲ್ಲೂ ವಿಚಾರಮಾಡಬೇಕಾಗಿದೆ. ಈಗ ಪ್ರಭುಗಳಿಗೆ ತಾರುಣ್ಯ. ಜಗತ್ತಿನಲ್ಲಿ ಇದೀಗತಾನೇ ಕಣ್ಣುಬಿಡುತ್ತಿದ್ದಾರೆ. ಈಗ ಅವರಿಗೆ ಹಿಂದಣ ಕೀರ್ತಿಶಾಲಿ ಸಾಮ್ರಾಟರಂತೆ ರಾಜ್ಯವಾಳುವ ಹೊಂಗನಸು ಉಂಟಾಗಿರುವುದು ಸಹಜ. ಈ ಸಮಯದಲ್ಲಿ ತಾವು ಕೇವಲ ಹೆಸರಿಗೆ ಸಾಮ್ರಾಟರು – ನಿಮ್ಮ ಕೈಬೊಂಬೆ ಎಂದು ತಿಳಿದರೆ ಅವರ ಜೀವನೋತ್ಸಾಹದ ಸೆಲೆ ಬತ್ತಿಹೋಗುವ ಸಂಭವವಿದೆ. ಇದರಿಂದ ನಿಮ್ಮ ಹಾಗೂ ಅವರ ಮೊದಲಿನ ಮಧುರ ಸಂಬಂಧ ಉಳಿಯದೇ ಹೋಗಬಹುದು. ನಿಮ್ಮಲ್ಲಿ ಪ್ರೀತಿ ಗೌರವಗಳು ಕಡಿಮೆಯಾಗಬಹುದು. ಹೀಗಾದರೆ ನೀವು ಯಾವ ಸದುದ್ದೇಶದಿಂದ ಅವರಿಗೆ ಮೊದಲೇ ರಾಜ್ಯಸೂತ್ರ ವಹಿಸಿಕೊಡಲಿಲ್ಲವೋ ಅವೇ ಮುಂದೆ ಅನರ್ಥಕಾರಿಯಾಗಬಹುದು. ಇದನ್ನು ತಪ್ಪಿಸುವ ಸಲುವಾಗಿ ನೀವು ಅವರಿಗೆ ರಾಜ್ಯಸೂತ್ರಗಳನ್ನು ವಹಿಸಿಕೊಡಬೇಕು. ಪ್ರಭುತ್ವ ಯಾವ ಹೆಸರಿನಲ್ಲಿ ನಡೆದರೇನು? ಅಧಿಕಾರ ಯಾರ ಕೈಯಲ್ಲಿದ್ದರೇನು? ನೀವು ಉಳಿಸಿಕೊಟ್ಟ ಸಾಮ್ರಾಜ್ಯವಿದು. ನೀವು ಬದುಕಿರುವ ತನಕ ಇದು ನಿಮ್ಮದೇ ಹೊರತು ಅನ್ಯರದಲ್ಲ. ಈಗ ನೀವು ಸಾಮ್ರಾಟರಿಗೆ ಆಡಳಿತ ಸೂತ್ರವನ್ನು ವಹಿಸಿಕೊಟ್ಟರೆ ಸಾಮ್ರಾಜ್ಯ ನಿಮ್ಮದಾಗಿರುವುದರ ಜತೆಗೆ ಸಾಮ್ರಾಟರ ಪ್ರೀತಿ ವಿಶ್ವಾಸಗಳೂ, ಆದರ ಗೌರವಗಳೂ ನಿಮ್ಮದಾಗುತ್ತವೆ. ನೀವು ಈ ಬಗ್ಗೆ ವಿಚಾರ ಮಾಡಬೇಕು!" ಎಂದನು.

ಇಲ್ಲಿಗೆ ಚಿನ್ನಾದೇವಿಯು ಹೇಳಬೇಕೆಂದಿದ್ದ ಮಾತು ಮುಗಿಯಿತು. ಮೊದಲಿನ ಸಂಗತಿಯಂತೆ ಇದೂ ರಾಮರಾಯನಿಗೆ ಅಪ್ರಿಯದ ಸಂಗತಿಯೇ. ಅವನಿಗೆ ಈಗ ಒಂದು ವಿಷಯ ಸ್ಪಷ್ಟವಾಯಿತು. ಚಿನ್ನಾದೇವಿಯೇ ಸದಾಶಿವ ರಾಯನನ್ನು ತನ್ನ ಮೇಲೆ ಎತ್ತಿಕಟ್ಟಿರುವ ವ್ಯಕ್ತಿ ಎಂಬುದು. ಈಗ ಅವಳ ಸ್ವಾರ್ಥವೇನೆಂಬುದು ಸ್ಪಷ್ಟವಾಗಿ ಗೋಚರಿಸಿತು. ಸದಾಶಿವರಾಯನು ಸಾಮ್ರಾಜ್ಯಸೂತ್ರ ವಹಿಸಿಕೊಂಡರೆ ತನ್ನ ಅಧಿಕಾರವನ್ನು ಕಸಿದುಕೊಂಡು,

ಅಳಿಯ ತಿರುಮಲನಿಗೆ ಕೊಡುವುದು ಸುಲಭವಾಗುತ್ತದೆ. ಈ ಸ್ವಾರ್ಥಸಾಧನೆಗಾಗಿ ಚಿನ್ನಾದೇವಿಯು ತನ್ನನ್ನು ಅಧಿಕಾರಚ್ಯುತನನ್ನಾಗಿ ಮಾಡಲು ಪಿತೂರಿ ನಡಸುತ್ತಿದ್ದಾಳೆ ಎಂದು ರಾಮರಾಯನು ಭಾವಿಸಿದ. ಅವಳ ಬಗ್ಗೆ ಇನ್ನು ಮುಂದೆ ತಾನು ಎಚ್ಚರದಿಂದ ಇರಬೇಕೆಂದು ನಿರ್ಧರಿಸಿದ.

ಇದೇ ಸಮಯದಲ್ಲಿ ರಾಮರಾಯನ ಚಿತ್ತಶಾಂತಿಯನ್ನು ಅಲ್ಲೋಲ ಕಲ್ಲೋಲ ಮಾಡುವಂತಹ ಇನ್ನೊಂದು ಪ್ರಸಂಗ ನಡೆಯಿತು. ಕೆಲವು ದಿನಗಳಿಂದ ಅನಾರೋಗ್ಯದಿಂದ ಇದ್ದ ಮಹಾರಾಣಿ ತಿರುಮಲಾದೇವಿಯು ಜ್ವರದಿಂದ ಹಾಸಿಗೆ ಹಿಡಿದಿದ್ದಳು. ಮೇಲಿಂದ ಮೇಲೆ ಪೂಜೆ, ನೇಮನಿಯಮ, ಜಪತಪಗಳಿಂದ ಮೈಯನ್ನು ದಣಿಸಿ ಸೊರಗಿದ್ದ ಆಕೆ ಒಮ್ಮೆಲೇ ಕಾಹಿಲೆ ಬಿದ್ದಿದ್ದಳು. ದಿನದಿನಕ್ಕೂ ಜ್ವರ ಹೆಚ್ಚಾಗುತ್ತಾ ಹೋಗಿತ್ತು. ರಾಜವೈದ್ಯರು ಮಾಡಿದ ಯಾವ ಔಷದ ಪಥ್ಯಗಳೂ ಪ್ರಯೋಜನವಾಗಲಿಲ್ಲ. ಮಗಳು ತಿರುಮಲಾಂಬೆ, ಮಗನಿಗಿಂತಲೂ ಅತಿಶಯವಾಗಿದ್ದ ಸದಾಶಿವರಾಯ ಇವರು ತಿರುಮಲಾದೇವಿಯ ಹಾಸಿಗೆಯನ್ನು ಬಿಟ್ಟು ಕದಲಲಿಲ್ಲ. ಎಲ್ಲರೂ ಈ ಬಾರಿ ಏನಾಗುವುದೋ ಎಂದು ಗಾಬರಿಗೊಂಡಿದ್ದರು. ತಿರುಮಲಾದೇವಿಯು ಸಾವು ಬದುಕುಗಳ ಹೋರಾಟದ ನಡುವೆ ಇರುವುದನ್ನು ಕೇಳಿ, ರಾಮರಾಯನು ಅವಳ ಕಾಹಿಲೆ ವಿಚಾರಿಸಿಕೊಂಡು ಹೋಗಲು ಬಂದನು.

ಆ ಸಮಯದಲ್ಲಿ ತಿರುಮಲಾದೇವಿಯ ಬಳಿ ಸದಾಶಿವರಾಯನನ್ನು ಬಿಟ್ಟು ಬೇರೆ ಯಾರೂ ಇರಲಿಲ್ಲ. ಉಳಿದ ದಾಸಿಯರು ತಮ್ಮ ತಮ್ಮ ಕೆಲಸದಲ್ಲಿ ತೊಡಗಿದ್ದರು. ಸದಾಶಿವರಾಯನು ತಿರುಮಲಾದೇವಿಯ ತಲೆಯ ಬಳಿ ಕುಳಿತುಕೊಂಡು ಕುಮಾರವ್ಯಾಸ ಭಾರತದ ವಿದುರಾತಿಥ್ಯದ ಭಾಗವನ್ನು ಓದುತ್ತಿದ್ದನು. ಅದನ್ನು ತನ್ಮಯದಲ್ಲಿ ಕೇಳುತ್ತಾ ತಿರುಮಲಾದೇವಿ ಮಲಗಿದ್ದಳು.

ರಾಮರಾಯನು ಬಂದವನೇ, ಬಳಿಯಲ್ಲಿದ್ದ ಆಸನದಲ್ಲಿ ಕುಳಿತುಕೊಳ್ಳುತ್ತ ತಿರುಮಲಾದೇವಿಯ ದೇಹಸ್ಥಿತಿಯನ್ನು ಕಳಕಳಿಯಿಂದ ವಿಚಾರಿಸಿಕೊಂಡನು. ಆಕೆಯ ಸ್ಥಿತಿಯನ್ನು ವರ್ಣಿಸುವಾಗ ಸದಾಶಿವರಾಯನಿಗೆ ಏಕೋ ಕಣ್ಣೀರು ಉಕ್ಕಿಬಂದಿತ್ತು. ಧ್ವನಿ ಗದ್ಗದಿತವಾಗಿತ್ತು. ಅವನನ್ನು ಸಮಾಧಾನಗೊಳಿಸುತ್ತಾ ರಾಮರಾಯ "ನೀವು ಚಿಂತಿಸುವ ಕಾರಣವಿಲ್ಲ. ಪಂಪಾಪತಿಯ ದಯದಿಂದ ಮಹಾರಾಣಿಯವರ ಕಾಹಿಲೆ ಗುಣವಾಗುತ್ತದೆ!" ಎಂದು ಹೇಳಿದ. ಈ ಮಾತು ಕೇಳಿ ತಿರುಮಲಾದೇವಿ ಎಚ್ಚತ್ತು "ಇಲ್ಲ, ನನ್ನ ಈ ಕಾಹಿಲೆ ಗುಣವಾಗುವ ಕಾಹಿಲೆಯಲ್ಲ. ನನ್ನ ಕಾಲವಾಯಿತು. ನನಗೆ ಕರೆ ಬಂದಿದೆ. ನಾನು ಹೋಗಲು ಸಿದ್ಧಳಾಗುತ್ತಿದ್ದೇನೆ....ಆದರೆ ಸಾಯುವ ಮುನ್ನ ನನ

ದೊಂದು ಬಯಕೆ ಇದೆ. ಅದನ್ನು ತೀರಿಸಿಕೊಡುತ್ತೀರಾ ?"

ಎಂದಳು ಸಣ್ಣ ದನಿಯಲ್ಲಿ.

"ಅದೇನೆಂದು ಅಪ್ಪಣೆ ಕೊಡಿಸಿ. ನನ್ನಿಂದ ಸಾಧ್ಯವಾಗುವುದಾದರೆ ಖಂಡಿತ ಈಡೇರಿಸಿಕೊಡುತ್ತೇನೆ!" ಎಂದ ರಾಮರಾಯ.

"ಹಾಗಾದರೆ ನನ್ನ ಮಾತನ್ನು ಗಮನವಿಟ್ಟು ಕೇಳಿ. ನೀವೂ ಮತ್ತು ಈ ಮೊಗು ಸದಾಶಿವರಾಯ ನನ್ನ ಭಾಗದ ಎರಡು ಕಣ್ಣುಗಳಂತೆ ಇದ್ದೀರಿ. ನಿಮ್ಮಲ್ಲಿ ಯಾರಿಗೆ ನೋವಾದರೂ ನನಗೆ ನೋವಾಗುತ್ತದೆ. ನಿಮ್ಮಲ್ಲಿ ಯಾರು ದೂರ ಸರಿದರೂ ನನಗೆ ವ್ಯಥೆಯಾಗುತ್ತದೆ. ನೀವಿಬ್ಬರೂ ಸಾಮ್ರಾಜ್ಯದ ಕಣ್ಮಣಿಗಳಾಗಿದ್ದೀರಿ. ನಿಮ್ಮಿಂದ ವಿಜಯನಗರ ಸಾಮ್ರಾಜ್ಯ! ನಿಮ್ಮ ಮೇಲೆ ಅದರ ಪ್ರಗತಿ ನಿಂತಿದೆ! ನೀವು ಎಂತಹ ಪ್ರಸಂಗ ಬಂದರೂ ಒಂದೇ ತಾಯಿಯ ಮಕ್ಕಳಂತೆ, ಸಹೋದರರಂತೆ ಇರಬೇಕೆಂಬುದೇ ನನ್ನ ಆಸೆ, ಹಾರೈಕೆ. ನೀವು ಇದುವರೆಗೆ ಅನ್ಯೋನ್ಯದಿಂದ ಇರುವುದನ್ನು ನೋಡಿ ನನಗೆ ತುಂಬಾ ಸಂತೋಷವಾಗಿದೆ. ಮುಂದೆಯೂ ಹೀಗೆಯೇ ಇರಬೇಕು....

"ಈ ಬಾರಿ ನಾನು ಈ ಕಾಯಿಲೆಯಿಂದ ಚೇತರಿಸಿಕೊಳ್ಳುವುದಿಲ್ಲ. ಅದು ನನಗೆ ಚೆನ್ನಾಗಿ ತಿಳಿದಿದೆ. ಅಂತಲೇ ನನ್ನದೊಂದು ಕಡೆಯಾಸೆ ಇದೆ ಅದನ್ನು ಈಡೇರಿಸಿಕೊಟ್ಟರೆ ನಾನು ಸಂತೋಷದಿಂದ ಕಣ್ಣು ಮುಚ್ಚಿಕೊಳ್ಳುತ್ತೇನೆ....

"ಈ ವಿಜಯನಗರದ ಪವಿತ್ರ ಸಿಂಹಾಸನವು ಇನ್ನು ತುಳುವಂಶಕ್ಕೆ ಇಲ್ಲವೆಂದು ಹೆದರಿದೆ. ಆ ಸಮಯದಲ್ಲಿ ನೀವು ಆ ರಾವಣಕುಂಭಕರ್ಣರನ್ನು ಸಂಹರಿಸಿ, ರಾಜ್ಯಲಕ್ಷ್ಮಿಯನ್ನು ಬಿಡಿಸಿ ಮತ್ತೆ ತುಳುವಂಶಕ್ಕೆ ಒಪ್ಪಿಸಿದಿರಿ. ನಿಮ್ಮ ಈ ಉಪಕಾರ ಅಲ್ಪವಲ್ಲ. ನಿಮ್ಮ ತ್ಯಾಗ ಕಡಮೆಯಲ್ಲ. ಈಗ ಇದಕ್ಕಿಂತ ತ್ಯಾಗ ನಿಮ್ಮಿಂದ ನಾನು ಬಯಸುತ್ತೇನೆ. ಅದೇನೆಂದರೆ ಸದಾಶಿವರಾಯನು ವಿಜಯನಗರದ ಸಿಂಹಾಸನದಲ್ಲಿ ನಿಜವಾದ ಸಾಮ್ರಾಟನಾಗಿ ಮೆರೆಯುವುದನ್ನು ನಾನು ನೋಡಬೇಕು. ನನ್ನ ಈ ಕಡೆಯ ಹಂಬಲವನ್ನು ನೀವು ನಡಸಿಕೊಡಬೇಕು!"

ಈ ಮಾತು ತಿರುಮಲಾದೇವಿಯ ಬಾಯಿಂದ ಬರುವುದೆಂದು ರಾಮರಾಯನು ನಿರೀಕ್ಷಿಸಿರಲಿಲ್ಲ. ಇತ್ತೀಚಿನ ದಿನಗಳಲ್ಲಿ ಅವನನ್ನು ಅಹೋರಾತ್ರಿ ಬಾಧಿಸುತ್ತಿದ್ದ ಪ್ರಶ್ನೆ ಇಂದು ಭೂತಾಕರವಾಗಿ ಅವನನ್ನು ಎದುರುಗೊಂಡಿತ್ತು—ಇದುವರೆಗೆ ಅದನ್ನು ನಿರ್ಲಕ್ಷಿಸಿದಂತೆ ಈಗ ನಿರ್ಲಕ್ಷಿಸುವಂತೆ ಇರಲಿಲ್ಲ. ತನ್ನ ಅತ್ತೆಯೂ ಸಾಮ್ರಾಜ್ಯದ ಹಿತೈಷಿಯೂ ಆದ ಮಹಾರಾಣಿ ತಿರುಮಲಾದೇವಿ ತನ್ನ ಅಂತಿಮ ಆಸೆಯಾಗಿ ಇದನ್ನು ಕೋರಿದಳು. ಚಣಕಾಲ ರಾಮರಾಯ

ನಿಗೆ ಏನು ಹೇಳಬೇಕೆಂಬುದು ತೋರಲಿಲ್ಲ. ಅವನು ಏನನ್ನೋ ಯೋಚಿಸುತ್ತಾ ಕುಳಿತ.

"ನನ್ನ ಈ ಕೋರಿಕೆ ನಿಮ್ಮ ಅನುಪಮ ತ್ಯಾಗದಿಂದ ಸಾಧ್ಯವೆಂದು ನನಗೂ ತಿಳಿದಿದೆ. ಇದನ್ನು ಈಡೇರಿಸಿಕೊಡಲು ನೀವಲ್ಲದೆ ಅನ್ಯರು ಸಮರ್ಥರಲ್ಲವೆಂದೂ ನನಗೆ ತಿಳಿದಿದೆ ಇದರಿಂದ ನಿಮಗೆ ಅನ್ಯಾಯವಾಗುತ್ತಿರಬಹುದು—ಆದರೆ ಸಾಮ್ರಾಜ್ಯದ ಜನತೆಗೆ ಇದರಿಂದ ಲಾಭವಿದೆ. ಅವರ ಬಹು ದಿನದ ಕನಸು ನನಸಾಗುತ್ತವೆ! ಕುಮಾರನು ಸಾಮ್ರಾಟನಾದುದನ್ನು ನೋಡಿ ನಾನು ನಿಶ್ಚಿಂತೆಯಿಂದ ಸಾಯಬೇಕೆಂದಿದ್ದೇನೆ. ನನ್ನ ಕೋರಿಕೆಯನ್ನ ನೀವು ಈಡೇರಿಸಿಕೊಡಲಾರಿರಾ?" ಎಂದು ತಿರುಮಲಾದೇವಿ ದೈನ್ಯವಾಗಿ ಪ್ರಾರ್ಥಿಸಿದಳು.

"ರಾಜ್ಯಾಡಳಿತದ ಹೊರೆಯನ್ನು ಹೊರಲು ಪ್ರಭುಗಳಿನ್ನೂ ಚಿಕ್ಕವರು. ಅವರು ವಯಸ್ಕರಾದಮೇಲೆ ನಾನೇ ಸಂತೋಷದಿಂದ ಒಪ್ಪಿಸಿಕೊಡುತ್ತೇನೆ!" ರಾಮರಾಯನು ತನ್ನ ಹಳೆಯ ರಾಗ ಹಾಡಿದ.

"ನೀವೇಕೆ ಹಾಗೆ ತಿಳಿಯಬೇಕು? ಗತಿಸಿದ—ನಿಮ್ಮ ಮಾವನವರು ಸಿಂಹಾಸನಕ್ಕೆ ಬಂದಾಗ ಸದಾಶಿವರಾಯರಿಗಿಂತ ಇನ್ನೂ ಚಿಕ್ಕವರಿದ್ದರು. ಆದರೆ ಅವರು ಮಹಾಸಾಮ್ರಾಟರೆಂದು ಕೀರ್ತಿ ಪಡೆಯಲಿಲ್ಲವೆ? ಇತಿಹಾಸದಲ್ಲಿ ಹಿಂದೆಂದೂ ಇಲ್ಲದಷ್ಟು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ ದಕ್ಷತೆಯಿಂದ ಆಳಲಿಲ್ಲವೇ? ಅಂತೆಯೇ ಸದಾಶಿವರಾಯರೂ ಮಹಾಸಾಮ್ರಾಟರಾಗಿ ಮೆರೆಯಬಲ್ಲರೆಂಬ ನಂಬಿಕೆ ನನಗೆ ಇದೆ. ಅವರು ಸಾಮ್ರಾಟರಾದರೇನಂತೆ. ಆಚಾರ್ಯರಾಗಿ ನೀವು ಇರುವಾಗ ಸಾಮ್ರಾಜ್ಯಕ್ಕೆ ಯಾವ ಹಾನಿಯೂ ಇಲ್ಲ!"

"ಇದು ಇಷ್ಟು ಸುಲಭವಾಗಿ ಬಗೆಹರಿಸುವ ಪ್ರಶ್ನೆಯಲ್ಲ. ಇದರಲ್ಲಿ ಅನೇಕ ತೊಡಕುಗಳಿವೆ. ಹೊರಗೆ, ಒಳಗೆ ಶತ್ರುಗಳು ನಮ್ಮ ಮೇಲೆ ಇನ್ನೂ ಕತ್ತಿ ಮಸೆಯುತ್ತಿದ್ದಾರೆ. ಪರಾಜಿತರಾದವರೆಲ್ಲರೂ ನಮ್ಮ ಮೇಲೆ ಸೇಡುತೀರಿಸಿಕೊಳ್ಳಲು ಹಾತೊರೆಯುತ್ತಿದ್ದಾರೆ. ಇಂತಹ ಪ್ರಸಂಗದಲ್ಲಿ ಆಡಳಿತದ ಬದಲಾವಣೆಯಾದರೆ ಇದರಿಂದ ಸಾಮ್ರಾಜ್ಯಕ್ಕೆ ಗಂಡಾಂತರ ಬರುವ ಸಂಭವ ಉಂಟು. ಸಾಮ್ರಾಟ್ ಕೃಷ್ಣದೇವರಾಯರು ತಮ್ಮ ಕಡೆಯ ದಿನಗಳಲ್ಲಿ ಆಡಳಿತವನ್ನು ಬದಲಾಯಿಸಲೆತ್ನಿಸಿ ಯಾವ ಗಂಡಾಂತರಕ್ಕೆ ಬಿದ್ದರೆಂಬುದನ್ನು ತಿಳಿದಮೇಲೂ ಇಂತಹ ಪ್ರಸಂಗವನ್ನು ಮತ್ತೆ ಮೇಲೆ ತಂದುಕೊಳ್ಳಲು ನನಗೆ ಇಷ್ಟವೂ ಇಲ್ಲ—ಇದಕ್ಕೆ ನಾನು ಸಿದ್ಧನೂ ಇಲ್ಲ!"

"ಅಂದಿನ ಪರಿಸ್ಥಿತಿ ಬೇರೆ, ಇಂದಿನ ಪರಿಸ್ಥಿತಿ ಬೇರೆ. ನೀವು ಮನಸ್ಸು ಮಾಡಿದರೆ, ಈ ಎಲ್ಲ ಭಯವನ್ನೂ ನಿವಾರಿಸಬಹುದು. ನೀವು ಇರುವ ತನಕ

ಸಾಮ್ರಾಜ್ಯಕ್ಕೆ ಯಾವ ಗಂಡಾಂತರವೂ ಇಲ್ಲವೆಂದು ನನಗೆ ನಂಬಿಕೆ ಇದೆ!"

"ನಿಮಗೆ ನನ್ನಲ್ಲಿ ನಂಬಿಕೆ ಇದ್ದರೆ ನನ್ನ ಈ ಪ್ರಾರ್ಥನೆಯನ್ನು ಈಡೇರಿಸಿ ಕೊಡಿ. ಪ್ರಭುಗಳಿಗೆ ಸಾಮ್ರಾಜ್ಯದ ಆಡಳಿತಸೂತ್ರವನ್ನು ಒಪ್ಪಿಸಿಕೊಡಲು ನಾನು ಸಿದ್ಧನಿದ್ದೇನೆ. ಆದರೆ ಇದು ಇಂದೇ ಆಗಬೇಕೆಂದು ಮಾತ್ರ ಹಠ ಹಿಡಿಯಬಾರದು. ಇನ್ನು ಕೊಂಚ ಕಾಲಾನಂತರದಲ್ಲಿ ಬಹಮನಿಸುಲ್ತಾನರಿಂದ ಸಾಮ್ರಾಜ್ಯಕ್ಕೆ ಯಾವ ಭಯವೂ ಇಲ್ಲವಾಗಿಸಿದಮೇಲೆ ನಾನು ಸಾಮ್ರಾಜ್ಯ ವನ್ನು ಅವರಿಗೆ ಒಪ್ಪಿಸಿ ವಿಶ್ರಾಂತಿಯನ್ನು ಪಡೆಯುತ್ತೇನೆ. ಅಲ್ಲಿಯವರೆಗೆ ನಾನು ರಾಜಪ್ರತಿನಿಧಿಯಾಗಿರಬೇಕೆಂದು ನನ್ನ ಇಚ್ಛೆ! ನಾನು ಇದುವರೆಗೆ ಸಾಮ್ರಾಜ್ಯಕ್ಕೆ ಕಿಂಚಿತ್ ಸೇವೆ ಸಲ್ಲಿಸಿರುವುದು ನಿಜವಾದರೆ ನನ್ನ ಮಾತನ್ನು ನಡಸಿಕೊಡಿ. ನನ್ನಲ್ಲಿ ನಿಮಗೆ ನಂಬಿಕೆ ಇದ್ದರೆ ಈ ಪ್ರಶ್ನೆಯನ್ನು ಮತ್ತೆ ಎತ್ತ ಬಾರದೆಂದು ನಿಮ್ಮಲ್ಲಿ ನನ್ನ ನಮ್ರವಿನಂತಿ. ಸಾಮ್ರಾಜ್ಯದ ಹಿತೈಷಿಗಳಾದ ನೀವುಗಳು ಇದುವರೆಗೆ ಸಾಮ್ರಾಜ್ಯದ ಸೇವೆ ಸಲ್ಲಿಸಲು ನನಗೆ ಅವಕಾಶಕೊಟ್ಟಂತೆ ಇದಕ್ಕೂ ಹೆಚ್ಚಿನ ಸೇವೆಗೆ ಅವಕಾಶ ಕಲ್ಪಿಸಿಕೊಡುವಿರೆಂದು ನಂಬಿದ್ದೇನೆ!" ಎಂದು ಹೇಳಿ ತಿರುಮಲಾದೇವಿ ಮತ್ತು ಸದಾಶಿವರಾಯ ಇವರ ಮುಖವನ್ನು ಅರ್ಥಗರ್ಭಿತವಾಗಿ ನೋಡಿ, ಅವರ ಉತ್ತರಕ್ಕೂ ಕಾಯದೆ ಅವರನ್ನು ಬೀಳ್ಕೊಂಡು ಅಲ್ಲಿಂದ ಹೊರಟುಹೋದನು.

ತಿರುಮಲಾದೇವಿ ರಾಮರಾಯನು ಹೊರಟುಹೋದಮೇಲೆ "ದೇವರೆ ನಿನ್ನಿಚ್ಛೆ ಏನಿದೆಯೋ ಬಲ್ಲವರಾರು? ಆದರೆ ಸಾಮ್ರಾಜ್ಯ ದುರಂತವನ್ನು ಮಾತ್ರ ತಪ್ಪಿಸು" ಎಂದು ಉದ್ಗಾರ ತೆಗೆದಳು.

## ೬

ರಾಮರಾಯನು ರತ್ನಕೂಟ ಅರಮನೆಯ ಚಂದ್ರಶಾಲೆಯಲ್ಲಿ ವೀಣಾ ವಾದನ ಕೇಳುತ್ತಾ ಕುಳಿತಿದ್ದನು. ಅವನ ಪ್ರೀತಿಯ ರಾಣಿಯಾದ ಮನ ಮೋಹಿನಿಯು ವೀಣೆಯನ್ನು ನುಡಿಸುತ್ತಿದ್ದಳು. ರಾಮರಾಯನಿಗೆ ವೀಣೆಯ ವಾದನ ಕೇಳುವುದೆಂದರೆ ತುಂಬ ಇಷ್ಟ. ಅವನು ವೀಣೆಯನ್ನು ಸ್ವಯಂ ನುಡಿಸ ಬಲ್ಲವನಾದ್ದುದು ಮಾತ್ರವಲ್ಲ, ತಂತ್ರಿವಾದ್ಯಗಳಲ್ಲಿ ಅಪೂರ್ವವಾದ ಪರಿಶ್ರಮ ವನ್ನು ಪಡೆದಿದ್ದನು. ತನ್ನ ರಾಜಕೀಯದ ನೂರು ಕೆಲಸಗಳಲ್ಲೂ ವೀಣೆಯನ್ನು ಕೇಳುವುದಕ್ಕೆ, ನುಡಿಸುವುದಕ್ಕೆ ಒಂದೆರಡು ತಾಸು ವೇಳೆಯನ್ನು ಹೇಗೋ ದೊರ ಕಿಸಿಕೊಳ್ಳುತ್ತಿದ್ದನು. ಹೀಗೆ ವೀಣೆ ಅವನ ನಿತ್ಯ ಜೀವನದ ಒಂದು ಭಾಗವೇ

ಆಗಿತ್ತು. ಅದರಲ್ಲೂ ಪ್ರೇಯಸಿ ಮನಮೋಹಿನಿಯು ವೀಣೆ ನುಡಿಸುವುದನ್ನು ಕೇಳಲು ರಾಮರಾಯನಿಗೆ ತುಂಬಾ ಪ್ರಿಯವಾಗಿತ್ತು. ಅವಳ ಸ್ವರ್ಗೀಯ ರೂಪ, ಸ್ವರ್ಗೀಯ ಅಮರ ಗಾಯನ ಇವುಗಳಲ್ಲಿ ತನ್ನನ್ನು ಮರುಳುಮಾಡಿರುವುದು ಯಾವುದೆಂಬುದು ರಾಮರಾಯನಿಗೆ ತಿಳಿಯದೆಹೋಗಿತ್ತು. ಒಮ್ಮೆ ಕಲಾವಿದೆ ಮನಮೋಹನೆ ಪ್ರಿಯವಾಗಿ ಕಂಡರೆ ಇನ್ನೊಮ್ಮೆ ರೂಪಸಿ ಮನಮೋಹನೆ ಆಕರ್ಶಕವಾಗಿ ತೋರುತ್ತಿದ್ದಳು. ಒಟ್ಟಿನಲ್ಲಿ ಮನಮೋಹನೆಯ ವೀಣಾವಾದನವನ್ನು ರಾಮರಾಯನು ಎಂದೂ ತಪ್ಪಿಸಿಕೊಳ್ಳುತ್ತಿರಲಿಲ್ಲ. ಆದರೆ ಇಂದು ಮನಮೋಹನೆ ರಾಯರಾಯನ ಪ್ರೀತಿಯ ಮೋಹನರಾಗದಲ್ಲಿ ವೀಣೆಯನ್ನು ನುಡಿಸುತ್ತಿದ್ದರೂ ರಾಮರಾಯನ ಲಕ್ಷವೆಲ್ಲಾ ಬೇರೆಲ್ಲೋ ಇತ್ತು. ಅವನ ದೇಹ ರತ್ನಕೂಟದ ಚಂದ್ರಶಾಲೆಯಲ್ಲಿ ಇದ್ದರೂ ಮನಸ್ಸುಮಾತ್ರ ಬೇರೆ ಏನನ್ನೋ ನೆನೆಯುತ್ತಿತ್ತು.

ರಾಮರಾಯನು ಪರ್ಯಂಕದ ಮೇಲೆ ಒರಗಿ ಇತ್ತೀಚಿನ ದಿನಗಳಲ್ಲಿ ತನಗೂ ತನ್ನ ತಮ್ಮಂದಿರಿಗೂ ಉಂಟಾಗಿದ್ದ ವೈಮನಸ್ಸನ್ನು ನೆನೆಯುತ್ತಿದ್ದ. ಅವನಿಗೆ ಚಿನ್ನಾದೇವಿ ತಿರುಮಲಾದೇವಿಯರು ತನ್ನನ್ನು ಪ್ರತಿಭಟಿಸಿದರೆಂದು ಚಿಂತೆ ಇರಲಿಲ್ಲ. ಸ್ವಯಂ ಸಾಮ್ರಾಟ ಸದಾಶಿವರಾಯನು ತನ್ನಲ್ಲಿ ಅಪನಂಬಿಕೆ ಇರಿಸಿದನೆಂದು ದುಃಖವಿರಲಿಲ್ಲ. ಆದರೆ ತಾನು ಯಾವ ತಮ್ಮಂದಿರನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ನೋಡಿಕೊಂಡು ಬಂದಿದ್ದನೋ, ಯಾರ ಅಭ್ಯುದಯದಸಲುವಾಗಿ ಇಷ್ಟೆಲ್ಲಾ ಸಾಹಸಗಳಲ್ಲಿ ತೊಡಗಿದ್ದನೋ ಆ ತಿರುಮಲ ವೆಂಕಟಾದ್ರಿಯರು ಯಾವುದೋ ಕ್ಷುಲ್ಲಕಕಾರಣಕ್ಕಾಗಿ ತನ್ನ ಬಗ್ಗೆ ವೈಷಮ್ಯ ತಳೆದಿದ್ದರು. ಯಾರು ತನ್ನ ವಿರುದ್ಧ ನಿಂತರೂ ತಮ್ಮಂದಿರು ತನಗೆ ಬೆಂಬಲಿಗರಾಗಿ ನಿಲ್ಲುವರೆಂದು ರಾಮರಾಯನು ನಿರೀಕ್ಷಿಸಿದ್ದನು. ಆದರೆ ಅವರು ರಾಮರಾಯನ ವಿರೋಧ ಪಕ್ಷಕ್ಕೆ ಸೇರಿದ್ದರು. ಇದು ಅವನಿಗೆ ಬಹಳ ವ್ಯಥೆಯನ್ನು ಉಂಟು ಮಾಡುವ ವಿಷಯವಾಗಿತ್ತು.

ರಾಮರಾಯನು ತನ್ನ ಸಹೋದರರನ್ನು ಭರತ ಲಕ್ಷ್ಮಣರೆಂದು ಹೇಳಿಕೊಳ್ಳುತ್ತಿದ್ದನು. ಭೀಮಾರ್ಜುನರಂತೆ ಅವರು ಯಾವುದೊಂದು ಕಾರ್ಯದಲ್ಲೂ ಅಣ್ಣನನ್ನು ಬಿಟ್ಟು ಕೆಲಸಮಾಡಿರಲಿಲ್ಲ. ಸಲಕಂ ತಿರುಮಲ ಸಹೋದರರು ರಾಹುಕೇತುಗಳಂತೆ ವಿಜಯನಗರದ ಚಂದ್ರನನ್ನು ನುಂಗಲೆತ್ನಿಸಿದಾಗ ಅದನ್ನು ತಪ್ಪಿಸುವುದರಲ್ಲಿ ಅವರ ಪಾತ್ರ ಮಹತ್ತರವಾಗಿತ್ತು. ಕಷ್ಟದ ದಿನಗಳು ಬಂದಾಗ ಬೆವತಿದ್ದ ಸಹೋದರರು ಈಗ ಸುಖದ ದಿನಗಳಲ್ಲಿ ಬೇರೆ ಹಿಡಿದಿದ್ದರು. ತಾನು ಪ್ರಬಲನಾದರೆ ತಾವೂ ಪ್ರಬಲರಾಗಬಹುದೆಂಬ ಸಂಗತಿ

ಯನ್ನು ಅವರು ಮರೆತು ಸದಾಶಿವರಾಯನ ಪಕ್ಷ ಕಟ್ಟಿದ್ದರು. ತನ್ನ ವಿರುದ್ಧ ಸ್ಪರ್ಧೆಗೆ ನಿಂತಿದ್ದ ಸದಾಶಿವರಾಯನಿಗೆ ಬೆಂಬಲ ಕೊಟ್ಟಿದ್ದರು. ತನ್ನನ್ನು ಆ ಸಹೋದರರು ತಪ್ಪು ತಿಳಿದುಕೊಂಡಿರುವರೆಂದು ರಾಮರಾಯನ ಮನಸ್ಸಿಗೆ ವ್ಯಾಕುಲವಾಯಿತು. ತಾನು ಅಧಿಕಾರವನ್ನು ಯಾರ ಅಭ್ಯುದಯದ ಸಲುವಾಗಿ ಕೈಯಲ್ಲಿ ಕೇಂದ್ರೀಕರಿಸಿಕೊಂಡು ತನ್ನ ಪ್ರಾಬಲ್ಯವನ್ನು ಸ್ಥಾಪಿಸಲು ಹೆಣಗುತ್ತಿದ್ದನೋ ಅವರೇ ತನ್ನನ್ನು ಸ್ಪರ್ಧಿಯೆಂದೂ, ಲೋಭಿ ಎಂದೂ ತಿಳಿದುದೂ ಅವನಿಗೆ ಬಹಳ ವ್ಯಥೆಯನ್ನುಂಟುಮಾಡಿತ್ತು. ಇಂದಲ್ಲ ನಾಳೆ ಅವರು ತಮ್ಮ ತಪ್ಪನ್ನು ಅರಿತುಕೊಳ್ಳುವರೆಂದು ರಾಮರಾಯನಿಗೆ ತಿಳಿದಿತ್ತು. ಆದಕ್ಕಾಗಿ ಪಶ್ಚಾತ್ತಾಪ ಪಡುವರಂದೂ ತಿಳಿದಿತ್ತು. ಆದರೂ ಸದ್ಯದ ಪರಿಸ್ಥಿತಿಯಲ್ಲಿ ತಾನು ಸ್ಪರ್ಧಿ, ಲೋಭಿಯಾಗಿರುವುದು ಅನಿವಾರ್ಯವಾಗಿತ್ತು. ಇದು ರಾಮರಾಯನಿಗೆ ಸಹಿಸದಾಗಿತ್ತು. ಅವನಿಗೆ ತನ್ನ ತಮ್ಮಂದಿರನ್ನು ತನ್ನ ಕಡೆಗೆ ಹೇಗೆ ಒಲಿಸಿಕೊಳ್ಳಬೇಕೆಂದು ತಿಳಿಯದೆ ಮನಸ್ಸು ವಿಹ್ವಲಗೊಂಡಿತ್ತು. ಇಂದು ವೀಣಾವಾದನವನ್ನು ಕೇಳುತ್ತಾ ಕೇಳುತ್ತಾ ಇದೇ ಸಂಗತಿಯಲ್ಲಿ ಮೈಮರೆತಿದ್ದ. ಕಡೆಗೆ ಮನಮೋಹಿನಿಯೇ ಅವನನ್ನು ಎಚ್ಚರಿಸಬೇಕಾಯಿತು.

"ಪ್ರಭು! ತಮ್ಮನ್ನು ಕಾಣಲು ಯಾರೋ ಚಾರರು ಬಂದು ಹೊರಗೆ ಕಾಯುತ್ತಿದ್ದಾರೆ. ಅವರು ಯಾವುದೋ ಮಹತ್ವದ ಪತ್ರ ತಂದಿದ್ದಾರಂತೆ. ಅಪ್ಪಣೆಯಾದರೆ ಒಳಗೆ ಬರಮಾಡುತ್ತೇನೆ." ಎಂದಳು.

"ಎಲ್ಲಿ ಅವರು! ಕೂಡಲೇ ಬರಮಾಡು!" ರಾಮರಾಯ ಸ್ವಪ್ನರಾಜ್ಯದಿಂದ ಎಚ್ಚತ್ತು ನುಡಿದ.

ರಾಜಸೇವಕರು ಆ ಚಾರರೀರ್ವರನ್ನು ಒಳಗೆ ಕರೆತಂದು, ಸಮ್ಮುಖದಲ್ಲಿ ನಿಲ್ಲಿಸಿದರು. ಅವರು ರಾಮರಾಯನಿಗೆ ನಮಸ್ಕಾರಮಾಡಿದರು.

"ಏನು ಸಮಾಚಾರ ಬಿಕ್ಕೋಜಿ!" ಎಂದು ಕೇಳಿದ ರಾಮರಾಯ.

"ಪ್ರಭು, ತಮಗೆ ಬಿದರೆಯ ಬರೀದ್‌ಷಹರು ಒಂದು ಪತ್ರ ಕೊಟ್ಟಿದ್ದಾರೆ! ಪರಾಂಬರಿಸಬೇಕು!" ಎಂದು ಹೇಳಿ ಅವನು ಒಂದು ಪತ್ರವನ್ನು ರಾಮರಾಯನ ಕೈಗೆ ಇತ್ತ.

ಅದನ್ನು ತೆಗೆದುಕೊಳ್ಳುತ್ತಾ "ಒಳ್ಳೆಯದು! ಇವರು ಯಾರೋ ಗೊತ್ತಾಗಲಿಲ್ಲವಲ್ಲ?" ಎಂದ.

"ಇವರು ಗೋಲ್ಕಂಡದಿಂದ ಬಂದಿರುವ ರಾಯಸದವರು ಪ್ರಭು! ಇವರು ಗೋಲ್ಕಂಡದಿಂದ ತಮ್ಮ ಒಡೆಯರಿಗೆ ಯಾವುದೋ ಮಹತ್ವದ ಪತ್ರ ತಂದಿದ್ದಾರಂತೆ ನನಗೆ ದಾರಿಯಲ್ಲಿ ಜತೆಗೆ ಸಿಕ್ಕಿದ್ದರು. ತಮ್ಮ ಭೇಟಿಗೆ ಕರೆತಂದೆ!"

"ಎಲ್ಲಿ ಆ ಪತ್ರ? ನಾನು ನೋಡಬಹುದಷ್ಟೆ!"

"ಖಂಡಿತವಾಗಿ ಹುಜೂರ್! ಅದನ್ನು ತಮಗೇ ಬರೆಯಲಾಗಿದೆ!" ಎಂದು ಹೇಳಿ ಅವನು ತನ್ನ ಬಳಿಯಲ್ಲಿದ್ದ ಲಕ್ಕೋಟೆಯನ್ನು ರಾಮರಾಯನ ಕೈಗೆ ಕೊಟ್ಟನು. ರಾಮರಾಯನು ಆ ಎರಡು ಪತ್ರಗಳನ್ನು ಓದಿಕೊಂಡ.

ಮೊದಲನೆಯ ಪತ್ರದಲ್ಲಿ ಅವನಿಗೆ ಪ್ರಿಯವಾದ ಸಂಗತಿ ಇತ್ತು.

ರಾಮರಾಯನು ಬಿದರೆಯ ಬರೀದ್‌ಷಹನಿಗೆ ಅವನು ಇಬ್ರಾಹಿಂಖಾನನ ಆಸ್ತಿಯನ್ನು ಮೋಸದಿಂದ ಸ್ವಾಧೀನಕ್ಕೆ ತೆಗೆದುಕೊಂಡ ಬಗ್ಗೆ ತನ್ನ ಅಸಮಾಧಾನ ವನ್ನು ವ್ಯಕ್ತಪಡಿಸಿ, ಅಂತಹ ವಿಶ್ವಾಸದ್ರೋಹ ಅವನಂತಹ ಸುಲ್ತಾನನಿಗೆ ಶೋಭಿಸುವುದಿಲ್ಲವೆಂದೂ, ಕೂಡಲೇ ಆಗಿರುವ ತಪ್ಪಿಗೆ ಕ್ಷಮಾಪಣೆ ಕೇಳಿ, ಕಿತ್ತು ಕೊಂಡಿದ್ದ ಸಕಲ ವಸ್ತುಗಳನ್ನೂ ಹಿಂದಿರುಗಿಸಲು. ಬೆದರಿಕೆ ಹಾಕಿ ಬರೆದಿದ್ದ ಪತ್ರಕ್ಕೆ ಬಂದಿದ್ದ ಉತ್ತರವಾಗಿತ್ತು. ಈ ಪತ್ರದಲ್ಲಿ ಬರೀದ್‌ಷಹನು ತನ್ನ ಕೃತ್ಯಕ್ಕಾಗಿ ವಿಷಾದಿಸಿ, ತನಗೆ ಮಿತ್ರದ್ರೋಹ ಮಾಡುವ ಯಾವ ಆಲೋಚನೆ ಯಿರಲಿಲ್ಲವೆಂದೂ, ತನ್ನಲ್ಲಿ ಆಶ್ರಯಪಡೆದಿದ್ದ ಇಬ್ರಾಹಿಂಖಾನರಿಗೆ ತನ್ನ ಬಗ್ಗೆ ಸಂಶಯ ಉಂಟಾಗಿ ತಮ್ಮ ಎಲ್ಲ ವಸ್ತುಗಳನ್ನೂ ತನ್ನಲ್ಲೇ ಬಿಟ್ಟು ವಿಜಯನಗ ರಕ್ಕೆ ಬಂದಿರುವರೆಂದೂ, ಈಗಲೂ ಅವರ ವಸ್ತುಗಳನ್ನು ಅವರು ಯಾವಾಗ ಬೇಕಾದರೂ ಬಂದು ಪಡೆಯಬಹುದೆಂದೂ, ತಾನು ಇನ್ನೂ ಅವರ ವಿಶ್ವಾಸದ ಮಿತ್ರನಾಗಿಯೇ ಇರುವುದಾಗಿಯೂ ಪತ್ರದಲ್ಲಿ ತಿಳಿಸಿದ್ದನು.

ರಾಮರಾಯನ ಬೆದರಿಕೆಯ ಪತ್ರ ನಿರೀಕ್ಷಿತಫಲವನ್ನೇ ಕೊಟ್ಟಿತ್ತು. ಇಬ್ರಾಹಿಂಖಾನನಿಗೆ ಕೊಟ್ಟಿದ್ದ ಒಂದು ವಚನ ಪಾಲಿಸಿದಂತೆ ಆಗಿತ್ತು. ಇದ ರಿಂದ ರಾಮರಾಯನಿಗೆ ಒಂದು ಬಗೆಯ ಸಮಾಧಾನ ಉಂಟಾಯಿತು. ಅವನು ಎರಡನೆಯ ಪತ್ರಕ್ಕೆ ತಿರುಗಿದ.

ಅದು ರಾಮರಾಯ ಹಾಗೂ ಇಬ್ರಾಹಿಂಖಾನನಿಗೆ ಸಂತೋಷದ ಸುದ್ದಿ ಯೊಂದನ್ನು ತಂದಿತ್ತು. ಆ ಪತ್ರದಲ್ಲಿ ಮುಸ್ತಫಖಾನನೆಂಬುವನು ಗೋಲ್ಕಂಡದ ಇತ್ತೀಚಿನ ವಿದ್ಯಮಾನಗಳನ್ನು ತಿಳಿಸಿ ಬರೆದಿದ್ದ.

ಇದುವರೆಗೆ ಹಾಸಿಗೆ ಹಿಡಿದು ತನ್ನ ಹುಚ್ಚು ಆಜ್ಞೆಗಳಿಂದ ಎಲ್ಲರಿಗೂ ಕಿರುಕುಳ ಕೊಡುತ್ತಿದ್ದ ಗೋಲ್ಕಂಡದ ಜಂಷದ್ ಕುತುಬ್‌ಷಹನು ತೀರಿ ಕೊಂಡಿದ್ದನು. ಅವನ ವಜೀರರು ಮತ್ತಿತರ ಆಸ್ಥಾನಿಕರು ಸುಲ್ತಾನನ ಆರೆಂಟು ತಿಂಗಳ ಮಗು ಸುಭಾನಕೂಲಿ ಎಂಬುವನನ್ನು ಸಿಂಹಾಸನದ ಮೇಲೆ ಕೂಡಿ ಸಿದ್ದರು. ಇವನ ಪರ ಸೈದ್‌ಖಾನ್ ಆನಿಉಲ್ ಮುಲ್ಕನೆಂಬುವನು ರಾಜ ಪ್ರತಿನಿಧಿಯಾಗಿದ್ದನು. ಪ್ರಧಾನಿಯಾಗಿ ಮುಸ್ತಫಖಾನನೆಂಬ ಇಬ್ರಾಹಿಂ

ಖಾನನ ಮಿತ್ರನು ಕೆಲಸ ಮಾಡುತ್ತಿದ್ದನು. ಅವನು ಹೇಗಾದರೂ ಮಾಡಿ ತನ್ನ ಮಿತ್ರ ಇಬ್ರಾಹಿಂಖಾನನಿಗೆ ಗೋಲ್ಕಂಡದ ಸಿಂಹಾಸನವನ್ನು ದೊರಕಿಸಿ ಕೊಡಲು ಆತುರನಾಗಿದ್ದನು. ಸಿಂಹಾಸನದಲ್ಲಿ ಆರೆಂಟುತಿಂಗಳ ಕೂಸು ಇದ್ದು, ಅಧಿಕಾರವೆಲ್ಲವೂ ವಿರೋಧಪಕ್ಷದ ಸೈದ್‌ಖಾನನ ಕೈಯಲ್ಲಿತ್ತು. ಈಗ ರಾಮರಾಯನ ನೆರವಿನೊಂದಿಗೆ ಇಬ್ರಾಹಿಂಖಾನನು ಸಾಕಷ್ಟು ಸೈನ್ಯಸಮೇತ ಗೋಲ್ಕಂಡಕ್ಕೆ ಬಂದರೆ ಅವನಿಗೆ ಸರಾಗವಾಗಿ ಗೋಲ್ಕಂಡದ ಸುಲ್ತಾನಗಿರಿಯನ್ನು ದೊರಕಿಸಿಕೊಡುವುದಾಗಿ ಮುಸ್ತಫಖಾನನು ಆ ಪತ್ರದಲ್ಲಿ ತಿಳಿಸಿದ್ದನು.

ಆ ಪತ್ರ ಓದಿಕೊಂಡು ರಾಮರಾಯನಿಗೆ, ತನ್ನ ಗೆಳೆಯನ ಅದೃಷ್ಟದ ಬಾಗಿಲು ತೆರೆಯಿತು, ಇದು ತಾನು ಅವನಿಗೆ ಆಶ್ರಯಕೊಟ್ಟ ಗಳಿಗೆಯ ಫಲ ಎಂದು ಸಂತೋಷ ಉಂಟಾಯಿತು. ಈ ಸುದ್ದಿಯನ್ನು ತಂದ ಚಾರರನ್ನು ಗೌರವಿಸಿ, ಈ ಸಂತೋಷದ ಸುದ್ದಿಗಳೆರಡನ್ನು ತಿಳಿಸಲು ಕೂಡಲೇ ಇಬ್ರಾಹಿಂಖಾನನನ್ನು ತನ್ನ ಬಳಿಗೆ ಕರೆತರಲು ದೂತರನ್ನು ಅಟ್ಟಿದನು.

ತನ್ನನ್ನು ರಾಮರಾಯನು ಆತುರದಲ್ಲಿ ಕರೆಸಿಕೊಂಡುದನ್ನು ಕಂಡು ಇಬ್ರಾಹಿಂಖಾನನಿಗೆ ಗಾಬರಿಯಾಯಿತು. ಅಂಬರ್‌ಖಾನನ ಕೊಲೆಯ ಬಗ್ಗೆ ತನ್ನನ್ನು ವಿಚಾರಣೆಗೆ ಗುರಿಪಡಿಸಲು ಕರೆಸಿಕೊಂಡಿರಬೇಕೆಂದು ಅವನು ಹೆದರುತ್ತಲೇ ಬಂದು ರಾಮರಾಯನಿಗೆ ಪದ್ಧತಿಯಂತೆ ಕುರ್ನಿಸಾತು ಮಾಡಿದನು. ರಾಮರಾಯನು ಅವನನ್ನು ಉಚಿತರೀತಿಯಲ್ಲಿ ಬರಮಾಡಿಕೊಂಡು ಕುಳಿತುಕೊಳ್ಳಲು ಆಸನ ತೋರಿ, ಅನಂತರ ನಗುತ್ತ ಪ್ರಶ್ನಿಸಿದ :

"ಇಬ್ರಾಹಿಂಖಾನರೇ, ನಿಮ್ಮನ್ನು ನಾನು ಗೋಲ್ಕಂಡದ ಸುಲ್ತಾನನನ್ನಾಗಿ ಮಾಡಿದರೆ ನೀವು ನನಗೆ ಏನು ಕೊಡುತ್ತೀರಿ!"

"ನೀವು ಏನು ಕೇಳಿದರೂ ಕೊಡುತ್ತೇನೆ ಖಾವಂದ್! ನನ್ನ ಪ್ರಾಣವನ್ನಾದರೂ ಕೊಡಬಲ್ಲೆ !"

"ನನಗೆ ನಿಮ್ಮ ವಿಶ್ವಾಸವೊಂದು ಸಾಕು!" ಎಂದ ರಾಮರಾಯ ನಗುತ್ತಾ.

"ಅದು ಎಂದೋ ನಿಮ್ಮದಾಗಿದೆ! ಹೊಸದಾಗಿ ಕೊಡಲು ನನ್ನಲ್ಲಿ ಏನೂ ಇಲ್ಲ. ನಾನು ಗರೀಬನಾಗಿದ್ದೇನೆ ಹುಜೂರ್!"

"ನೀವು ಸುಲ್ತಾನರಾದಮೇಲೆ ಗರೀಬರು ಹೇಗೆ ಆಗುತ್ತೀರಿ. ಇನ್ನು ಮೇಲೆ ನೀವು ನನ್ನ ಸಮಾನಸ್ಕಂಧರು – ನನ್ನಂತೆಯೇ ಸ್ವತಂತ್ರ ಸುಲ್ತಾನರು. ತಿಳಿಯಿತೆ ?"

"ಈ ಗರೀಬನನ್ನು ನೀವು ಎಂದೋ ಸುಲ್ತಾನಪದವಿಗೇರಿಸಿದ್ದೀರಿ. ಈಗ

ಹೊಸದಾಗಿ ಸುಲ್ತಾನನಾಗಬೇಕಾಗಿಲ್ಲ. ಆದರೂ ನಿಮ್ಮ ಔದಾರ್ಯದ ಮುಂದೆ ನಾನು ಎಷ್ಟೇ ದೊಡ್ಡವನಾದರೂ – ಗರೀಬನೇ."

"ಇನ್ನುಮುಂದೆ ನೀವು ನಮ್ಮ ವಿಶ್ವಾಸಕ್ಕೆ ಪಾತ್ರರಾದ ಗೋಲ್ಕಂಡದ ಸುಲ್ತಾನ ಇಬ್ರಾಹಿಂ ಕುತುಬ್‌ಷಹರು, ತಿಳಿಯಿತೇ!"

"ಪ್ರಭುಗಳು ನನ್ನನ್ನು ಹಾಸ್ಯಮಾಡುತ್ತಿರುವಂತೆ ಇದೆ!"

"ಇದು ಹಾಸ್ಯವಲ್ಲ ಇಬ್ರಾಹಿಂಖಾನರೇ! ಸತ್ಯಸಂಗತಿ! ಈ ಪತ್ರವನ್ನು ನೋಡಿ! ನನ್ನ ಮಾತು ನಿಜವೋ ಸುಳ್ಳೋ ನಿಮಗೇ ತಿಳಿಯುತ್ತದೆ!" ಎಂದು ಹೇಳಿ ಅವನಿಗೆ ಮುಸ್ತಫಖಾನನು ಬರೆದಿದ್ದ ಪತ್ರವನ್ನು ಕೊಟ್ಟನು.

ಅದನ್ನು ಓದಿಕೊಂಡು ಇಬ್ರಾಹಿಂಖಾನನ ಮುಖ ಅರಳಿತು. ಅವನು ತನ್ನ ಕಣ್ಣನ್ನು ತಾನೇ ನಂಬಲಿಲ್ಲ. ಎಲ್ಲವೂ ಮಂತ್ರದಂಡದಲ್ಲಿ ನಡೆದಂತೆ ನಡೆದಿತ್ತು! ಯಾವುದನ್ನು ಅವನು ಈ ಜನ್ಮದಲ್ಲಿ ಅಸಾಧ್ಯವೆಂದು ತಿಳಿದಿದ್ದನೋ ಅದು ಸಾಧ್ಯವಾಗಿತ್ತು. ಅವನು ರಾಮರಾಯನು ಹೇಳಿದ್ದಂತೆ ಗರೀಬನಾಗಿ ಮಲಗಿದ್ದವನು ಬೆಳಗಾಗುವುದರೊಳಗೆ ಸುಲ್ತಾನನಾಗಿ ಮಾರ್ಪಟ್ಟಿದ್ದನು! ಇದು ರಾಮರಾಯನಿಗೆ ಉಂಟಾಗಿದ್ದ ನೋಜಿಗದಷ್ಟೇ ಅವನಿಗೂ ಉಂಟಾಗಿತ್ತು.

ಆ ಪತ್ರದಲ್ಲಿ ಬರೆದಿದ್ದ ಒಂದು ಮಾತು ಅವನಿಗೆ ಈ ಆಸೆಗೆ ಕಾರಣವಾಗಿತ್ತು : "ಇಲ್ಲಿನ ಮಿತ್ರರೆಲ್ಲರೂ ನಿಮಗೇ ಸಿಂಹಾಸನವನ್ನು ದೊರಕಿಸಿ ಕೊಡಲು ತಾವಾಗಿ ಮುಂದೆ ಬಂದಿದ್ದಾರೆ. ನೀವು ಕೂಡಲೇ ಸೈನ್ಯಸಮೇತ ತಡಮಾಡದೆ ಹೊರಟುಬರುವುದು. ನೀವು ರಾಜಧಾನಿಯನ್ನು ಸಮೀಪಿಸುತ್ತಿರುವಂತೆ, ನಿಮ್ಮನ್ನು ಎದುರುಗೊಳ್ಳುತ್ತೇವೆ. ಇಂದಿನಿಂದ ನೀವು ಗೋಲ್ಕಂಡದ ಸುಲ್ತಾನರು – ಇಬ್ರಾಹಿಂ ಕುತುಬ್‌ಷಹರೆಂದು ತಿಳಿಯಿರಿ!"

"ಈಗ ಏನು ಹೇಳುತ್ತೀರಿ! ನನ್ನ ಮಾತಿನಲ್ಲಿ ಈಗಲಾದರೂ ನಿಮಗೆ ನಂಬಿಕೆ ಹುಟ್ಟಿತೋ ಇಲ್ಲವೋ!" ರಾಮರಾಯ ನಗುತ್ತಾ ಹೇಳಿದ.

"ಅಲ್ಲಾನೇ ನಿಮ್ಮ ರೂಪದಲ್ಲಿ ಬಂದು ನನ್ನನ್ನು ಉದ್ಧರಿಸಿದ್ದಾನೆ" ಎಂದ.

"ನಾನು ನಿಮಗೆ ಕೇವಲ ಪದವಿ ದೊರಕಿಸಿಕೊಡಲು ಹವಣಿಸಿದ್ದೆ! ಆದರೆ ನಿಮ್ಮ ಪಾಲಿಗೆ ಸುಲ್ತಾನ ಪದವಿಯೇ ಅನಾಯಾಸವಾಗಿ ದೊರಕಿದೆ. ನೀವೇ ಭಾಗ್ಯಶಾಲಿಗಳು. ನೀವು ಇಲ್ಲಿಗೆ ಕಾಲಿಟ್ಟ ಗಳಿಗೆ ಒಳ್ಳೆಯದು. ಅಂತಲೇ ಇಷ್ಟೆಲ್ಲಾ ಒಳ್ಳೆಯದಾಗಿದೆ!"

"ನೀವು ನನಗೆ ಆಶ್ರಯಕೊಟ್ಟ ಗಳಿಗೆಯ ಫಲ ಇದು. ಅಂದು ನೀವು

ನನ್ನನ್ನು ಕೈಹಿಡಿದು ಎತ್ತಿದ್ದರೆ ನಾನು ಇಂದು ಹೀಗೆ ಇರುತ್ತಿದ್ದೆನೆ? ಎಲ್ಲವೂ ನಿಮ್ಮ ಹಾರೈಕೆ!"

"ನೀವು ಯಾವಾಗ ಗೋಲ್ಕಂಡಕ್ಕೆ ಹೋಗುತ್ತೀರಿ?"

"ನೀವು ಯಾವಾಗ ಕಳುಹಿಸಿಕೊಟ್ಟರೆ ಆಗ?"

"ನಿಮ್ಮ ಗೆಳೆಯ ಮುಸ್ತಫಖಾನರು ಹೇಗೆ? ನಂಬುವಂತಹ ವ್ಯಕ್ತಿಯೆ?"

"ಅವರು ನನ್ನ ನಂಬಿಕೆಯ ಮಿತ್ರರಲ್ಲಿ ಒಬ್ಬರು. ನನಗಾಗಿ ಅವರು ಪ್ರಾಣ ಬೇಕಾದರೂ ಕೊಡಬಲ್ಲರು. ಅವರು ಬರೆದಿರುವ ಮಾತೆಲ್ಲ ಅಕ್ಷರಶಃ ನಿಜ. ನಾನು ಕೂಡಲೇ ಅಲ್ಲಿಗೆ ಹೊರಡುವುದು ಒಳಿಯದು. ನಿಧಾನ ಮಾಡಿದರೆ ಪರಿಸ್ಥಿತಿ ಹದಗೆಡಬಹುದು. ಇಂದಿದ್ದ ಸದವಕಾಶ ನಾಳೆ ತಪ್ಪಿಹೋಗಬಹುದು! ಈಗ ರಾಜಪ್ರತಿನಿಧಿಯಾಗಿರುವ ಉನಿಲ್‌ಮುಲ್ಕರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ಮೊದಲೇ ನಾವು ನಮ್ಮ ಕಾರ್ಯ ಸಿದ್ಧಿಸಬೇಕಾಗಿದೆ."

"ಹಾಗಾದರೆ ನೀವು ಇಂದೇ ಹೊರಡುವುದು ಒಳ್ಳೆಯದು!"

"ಹಾಗಾದರೆ ನೀವೂ ನನ್ನ ಜತೆಯಲ್ಲಿ ಬರಬೇಕು!"

"ಏಕೆ?"

"ನೀವಿಲ್ಲದೆ ನಾನು ಗೋಲ್ಕಂಡಕ್ಕೆ ಹೋಗುವುದಿಲ್ಲ. ನೀವು ನನ್ನ ಭಾಗದ ದೇವರಾಗಿದ್ದೀರಿ. ನಿಮ್ಮನ್ನು ಬಿಟ್ಟು ನಾನು ಎಲ್ಲಿಗೂ ಕದಲುವುದಿಲ್ಲ"

"ಸ್ವರ್ಗಕ್ಕೂ?" ಈ ಮಾತು ಕೇಳಿ ಅವನ ಮುಖದಲ್ಲಿ ಮುಗುಳುನಗೆ ತೇಲಿತು.

"ಈಗ ಆ ಮಾತು ಹಾಗಿರಲಿ. ನಿಮಗೆ ಇನ್ನೊಂದು ಒಳ್ಳೆಯ ಸುದ್ದಿ ಕಾದಿದೆ. ಬಿದರೆಯ ಸುಲ್ತಾನರು ಪತ್ರ ಬರೆದು ನಡೆದ ಸಂಗತಿಗೆಲ್ಲಾ ವಿಷಾದ ವ್ಯಕ್ತಪಡಿಸಿದ್ದಾರೆ. ಅವರು ನಿಮ್ಮಿಂದ ಕೊಂಡಿರುವ ಎಲ್ಲ ವಸ್ತುಗಳನ್ನು ನಿಮಗೆ ಹಿಂದಿರುಗಿಸಲು ಒಪ್ಪಿಕೊಂಡಿದ್ದಾರೆ; ಇವುಗಳನ್ನು ನೀವು ಯಾವಾಗ ಬೇಕಾದರೂ ತೆಗೆದುಕೊಳ್ಳಬಹುದಂತೆ!"

ಆ ಪತ್ರವನ್ನು ಓದಿಕೊಂಡು "ನಿಮ್ಮ ಸಹಾಯಕ್ಕೆ ಪ್ರತಿಫಲವಾಗಿ ನಾನು ಏನುತಾನೆ ಮಾಡಬಲ್ಲೆ?" ಎಂದ ಇಬ್ರಾಹಿಂಖಾನ್.

"ನೀವು ಕಡೆತನಕ ವಿಜಯನಗರದ ಮಿತ್ರರಾಗಿದ್ದರೆ ನಿಮ್ಮ ಋಣ ತೀರಿದಂತೆ ಆಯಿತು!"

"ಅದು ನೀವು ಹೇಳದಿದ್ದರೂ ನನ್ನ ಕರ್ತವ್ಯ. ಇಲ್ಲದಿದ್ದರೆ ಅಲ್ಲಾ ಮೆಚ್ಚುವನೇ?" ಎಂದು ಹೇಳಿ ರಾಮರಾಯನಿಂದ ಬೀಳ್ಕೊಂಡು ಹೊರಟ ಇಬ್ರಾಹಿಂಖಾನ್.

ಸದ್ಯಕ್ಕೆ ಇಬ್ರಾಹಿಂಖಾನನು ಬಿದರೆಯಲ್ಲಿದ್ದ ತನ್ನ ಸೈನಿಕರನ್ನು ಕರೆದು ಕೊಂಡು ಗೋಲ್ಕಂಡದ ಕಡೆಗೆ ಹೋಗಬೇಕೆಂದೂ, ಗೋಲ್ಕಂಡವನ್ನು ಸಮೀಪಿ ಸುವುದರೊಳಗೆ ವಿಜಯನಗರದ ಸೈನ್ಯದೊಡನೆ ತಾನು ಬಂದು ಕೂಡುವುದಾಗಿ ರಾಮರಾಯನು ಆಶ್ವಾಸವಿತ್ತನು.

ರಾಮರಾಯನು ಭುವನವಿಜಯಕ್ಕೆ ಬಂದು ಸದಾಶಿವರಾಯನಿಗೆ ಎಲ್ಲ ಸಂಗತಿಯನ್ನೂ ವಿವರವಾಗಿ ಹೇಳಿದನು!

" ಈಗ ಗೋಲ್ಕಂಡದ ಸುಲ್ತಾನರಾಗಿರುವ ಸೂಭಾನಕೂಲಿಖಾನರ ವಿರುದ್ಧ ಇಬ್ರಾಹಿಂಖಾನರಿಗೆ ಸೈನ್ಯ ಸಹಾಯ ಮಾಡಲು ಅಂತಹ ಪ್ರಸಂಗವೇನು ಬಂದಿದೆ ಭೂವರರೇ !" ಎಂದು ಸದಾಶಿವರಾಯನು ಪ್ರಶ್ನಿಸಿದ.

" ನಾನು ಅವರಿಗೆ ನೆರವೀಯುವುದಾಗಿ ಆಶ್ವಾಸನವಿತ್ತಿದ್ದೇನೆ !"

" ನ್ಯಾಯವಾದ ಹಕ್ಕುದಾರರು ಸಿಂಹಾಸನದಲ್ಲಿ ಇರುವಾಗ ಇಬ್ರಾಹಿಂ ಖಾನರಿಗೆ ನಾವು ಸಹಾಯಮಾಡುವುದು ಯಾವ ನ್ಯಾಯ ?"

" ಇದು ನ್ಯಾಯಾನ್ಯಾಯದ ಪ್ರಶ್ನೆಯಲ್ಲ ಪ್ರಭು ! ರಾಜಕೀಯ ಮುತ್ಸದ್ದಿ ತನದ ಪ್ರಶ್ನೆ ! ಈಗ ನಾವು ಇಬ್ರಾಹಿಂಖಾನರನ್ನು ಸುಲ್ತಾನರನ್ನಾಗಿ ಮಾಡಿದರೆ ಅವರು ಕಡೆತನಕ ನಮ್ಮ ಮಿತ್ರರಾಗಿರುತ್ತಾರೆ. ಅವರ ಸ್ನೇಹ ಎಷ್ಟು ಅಮೂಲ್ಯ ವೆಂಬುದನ್ನು ನೀವು ಬಹುಶಃ ಅರಿಯಲಾರಿರಿ !"

" ಈಗಿರುವ ಸಲ್ತಾನರೂ ನಮ್ಮೊಂದಿಗೆ ಸ್ನೇಹದಿಂದಲೇ ಇದ್ದಾರೆ."

" ಈಗ ಸಿಂಹಾಸನದ ಮೇಲೆ ಇರುವ ಸುಲ್ತಾನ ಕೇವಲ ಏಳೆಂಟು ತಿಂಗಳ ಮಗು. ಆಡಳಿತವೆಲ್ಲ ರಾಜಪ್ರತಿನಿಧಿ ಉನಿಲ್‌ಮುಲ್ಕರ ಕೈಯಲ್ಲಿದೆ. ಇವರು ದುರ್ಬಲರಾಗಿದ್ದಾರೆ. ಇಂದಲ್ಲ ನಾಳೆ ಸಿಂಹಾಸನ ಇಬ್ರಾಹಿಂಖಾನ ರದಾಗುವುದು।ಖಂಡಿತ. ಅವರಿಗೆ ಆಸ್ಥಾನದ ಅನೇಕ ವಜೀರರೂ, ಸೈನಿಕ ಮುಖಂಡರೂ ಬೆಂಬಲವಾಗಿದ್ದಾರೆ. ಸ್ವಯಂ ಪ್ರಧಾನ ಮಂತ್ರಿ ಮುಸ್ತಫಖಾನರು ಅಂತರಂಗದಲ್ಲಿ ಅವರ ಸ್ನೇಹಿತರಾಗಿದ್ದಾರೆ. ಎಂದಮೇಲೆ ಇಬ್ರಾಹಿಂಖಾನರು ಸಿಂಹಾಸನಕ್ಕೆ ಬರಲು ನಾವು ಈಗ ನೆರವಾದರೆ ಅವರು ಕಡೆತನಕ ನಮಗೆ ಮಿತ್ರ ರಾಗುವುದು ಮಾತ್ರವಲ್ಲ, ಕೃತಜ್ಞರಾಗಿರುತ್ತಾರೆ !"

" ಗೋಲ್ಕಂಡದ ಸಿಂಹಾಸನದ ಬಗ್ಗೆ ನಡೆದಿರುವ ಅಂತಃಕಲಹಗಳಲ್ಲಿ ಪರಕೀಯರಾದ ನಾವು ಕೈಹಾಕುವುದು ಒಳ್ಳೆಯದಲ್ಲವೆಂದು, ನನ್ನ ಅಭಿ ಪ್ರಾಯ."

" ವಿಜಯನಗರವನ್ನು ದಕ್ಷಿಣಾಪಥದಲ್ಲಿ ಅತ್ಯಂತ ಪ್ರಭಾವಶಾಲಿ ರಾಷ್ಟ್ರ ವಾಗಿ ಮಾಡಬೇಕಾದರೆ ನಾವು ಇಂತಹ ಸಂದರ್ಭಗಳನ್ನು ಸದುಪಯೋಗಪಡಿಸಿ

ಕೊಳ್ಳಬೇಕು! ಇದು ನನ್ನ ಅಭಿಪ್ರಾಯದಲ್ಲಿ ಶ್ರೇಷ್ಠ ರಾಜಕೀಯ ನೀತಿಯಾಗಿದೆ!"

"ಇದರಿಂದ ನಮಗೆ ಅಪಖ್ಯಾತಿ ಬರಬಹುದು!"

"ರಾಷ್ಟ್ರದ ಹಿತದೃಷ್ಟಿಯಿಂದಲೂ, ಪರಕೀಯರ ಅಂತಃಕಲಹ ವೈಷಮ್ಯಗಳಲ್ಲಿ ಕೈಹಾಕುವುದರಿಂದ ಇಂದಲ್ಲ ನಾಳೆ ಇದರ ದುಷ್ಪರಿಣಾಮಗಳನ್ನು ನಾವು ಅನುಭವಿಸಬೇಕಾಗಿ ಬರಬಹುದು. ಅಲ್ಲದೆ ಧರ್ಮರಾಜ್ಯದ ಘನತೆ ಗೌರವಗಳಿಗೆ ಈ ಕುಟಿಲನೀತಿಯು ತಕ್ಕದ್ದಲ್ಲ!"

"ಇದು ತಕ್ಕುದು ಹೌದೋ ಅಲ್ಲವೋ ನನಗೆ ತಿಳಿಯದು. ಈಗ ಇಬ್ರಾಹಿಂಖಾನರಿಗೆ ಸೈನ್ಯದ ನೆರವು ಕೊಡಬೇಕಾಗಿದೆ. ಈ ಬಗ್ಗೆ ನಾನು ವಚನವನ್ನಿತ್ತಿದ್ದೇನೆ. ಇದನ್ನು ಪಾಲಿಸುವುದು ನಮ್ಮ ಘನತೆ ಗೌರವಗಳಿಗೆ ತಕ್ಕುದೆಂದು ಮಾತ್ರ ನಾನು ತಿಳಿದಿದ್ದೇನೆ!"

"ನೀವು ಅವರಿಗೆ ವಾಗ್ದಾನಮಾಡುವ ಮೊದಲು ನನ್ನನ್ನು ಒಂದು ಮಾತು ಕೇಳಿದ್ದರೆ ಒಳಿತಾಗುತ್ತಿತ್ತು!"

"ನೀವು ನಮ್ಮ ಸಲಹೆಗೆ ಒಪ್ಪುವಿರೆಂದು ನಾನು ತಿಳಿದಿದ್ದೆ. ಇದುವರೆಗೆ ನಡೆದಿದ್ದ ಎಲ್ಲ ದಂಡಯಾತ್ರೆಗಳನ್ನೂ ನೀವು ಒಪ್ಪಿದಂತೆ ಇದನ್ನೂ ಒಪ್ಪುವಿರೆಂದು ನಾನು ತಿಳಿದಿದ್ದೆ. ಏಕೆಂದರೆ ಈ ಸಂಧಿವಿಗ್ರಹಗಳ ಅನುಭವ ನಿಮಗೆ ಇಲ್ಲ. ನೀವು ನನ್ನ ಸಲಹೆಯಂತೆ ಯುದ್ಧ ಇಲ್ಲವೇ ಶಾಂತಿಘೋಷಣೆ ಮಾಡುತ್ತಿದ್ದಿರಿ. ಆದರೆ ಇತ್ತೀಚಿನ ದಿನಗಳಲ್ಲಿ ಮಾತ್ರ ನಿಮಗೆ ನನ್ನ ಮಾತಿನಲ್ಲಿ ಏಕೋ ಗೌರವವಿಲ್ಲವಾಗಿದೆ. ನನ್ನ ಸಲಹೆಗಳಲ್ಲಿ ನಂಬಿಕೆ ಇಲ್ಲವಾಗಿದೆ. ಇದು ನಿಜವಾದ ಸಂಗತಿ!" ಎಂದು ಹೇಳಿದ ಬೇಸರದ ಧ್ವನಿಯಲ್ಲಿ.

"ನಿಮ್ಮ ವಿಷಯದಲ್ಲಿ ನನಗೆ ಮೊದಲಿನ ಗೌರವವೇ ಇಂದೂ ಇದೆ. ನಿಮ್ಮ ಮಾತಿನಲ್ಲಿ–ಸಲಹೆಗಳಲ್ಲಿ ನನಗೆ ಮೊದಲಿದ್ದ ವಿಶ್ವಾಸಗಳೇ ಇವೆ. ಇಲ್ಲವೆಂದು ನೀವು ಏಕೆ ತಿಳಿಯಬೇಕೋ ನಾನರಿಯೆ. ಒಂದು ಮಾತು ನಿಜ. ಇತ್ತೀಚಿನ ದಿನಗಳಲ್ಲಿ ನಾನು ಎಲ್ಲವನ್ನೂ ವಿಚಾರಿಸಿ ಒಪ್ಪಿಗೆ ಕೊಡುತ್ತಿದ್ದೇನೆ. ಇದರಿಂದ ಒಬ್ಬರ ಬದಲು ಇಬ್ಬರು ಆಲೋಚಿಸಿದಂತೆ ಆಗುವುದೆಂದು. ಈಗ ಇಬ್ರಾಹಿಂಖಾನರಿಗೆ ನಾವು ಇರಲು ಆಶ್ರಯ ಕೊಟ್ಟೆವು. ಅದರ ಪರಿಣಾಮ ನಮ್ಮ ಸ್ವಾಮಿನಿಷ್ಠ ಸೇವಕನೊಬ್ಬನ ಬಲಿದಾನ ನಡೆಯಿತು. ಇಂತಹ ಕೃತಘ್ನರಿಗೆ ನಾವು ನೆರವೀಯುವುದರಿಂದ ಯಾವ ಪ್ರಯೋಜನವೂ ಇಲ್ಲ! ಇವರಿಗೆ ನೆರವೀಯುವುದೂ ಹಾವಿಗೆ ಹಾಲೆರೆಯುವುದೂ ಒಂದೇ."

"ನೀವೇಕೆ ಇಬ್ರಾಹಿಂಖಾನರ ಬಗ್ಗೆ ಹೀಗೆ ತಿಳಿಯಬೇಕು? ಅವರು,

ವೀರರು, ಸಂಭಾವಿತರು. ಮೇಲಾಗಿ ಕೃತಜ್ಞರು, ಸ್ನೇಹಪರರು. ಇವರಿಗೆ ಇಂದು ನೆರವಾದರೆ ನಾಳೆ ನಾವು ತೊಂದರೆಯಲ್ಲಿರುವಾಗ ಅವರು ನಮಗೆ ನೆರವಾಗುತ್ತಾರೆ.

" ವಿಜಯನಗರದ ಏಳಿಗೆಯನ್ನು ಕಂಡು ಕರುಬುವ ಬಹಮನಿ ಸುಲ್ತಾನರು ಆಪತ್ಕಾಲದಲ್ಲಿ ವಿಜಯನಗರಕ್ಕೆ ನೆರವಾಗುವರೆ? ಇದುವರೆಗಿನ ಇತಿಹಾಸದಲ್ಲಿ ಇಂತಹ ಒಂದು ಪ್ರಸಂಗ ವರದಿಯಾಗಿರುವುದೂ ನನ್ನ ಕಣ್ಣಿಗೆ ಬಿದ್ದಿಲ್ಲ. ಆದರಿಂದ ನಾವು ಕೃತಜ್ಞತೆಯನ್ನು ನಿರೀಕ್ಷಿಸುವುದು ಹಾವಿನಿಂದ ಕೃತಜ್ಞತೆಯನ್ನು ನಿರೀಕ್ಷಿಸುವಂತೆಯೇ ಸರಿ! "

"ನೀವು ಪೂರ್ವಾಭಿಪ್ರಾಯದಿಂದ ವಿಚಾರ ಮಾಡುತ್ತಿರುವುದರಿಂದ ನಿಮಗೆ ಅವರ ವಿಷಯದಲ್ಲಿ ಅಪನಂಬಿಕೆಯುಂಟಾಗಿದೆ. ವೈಯುಕ್ತಿಕ ಇಷ್ಟ ಅನಿಷ್ಟಗಳನ್ನು ಬದಿಗಿರಿಸಿ ವಿಚಾರಮಾಡುವುದಾದರೆ, ಇಬ್ರಾಹಿಂಖಾನರಿಗೆ ನಾವು ನೆರವೀಯುವುದರಿಂದ ನಮಗೆ ಹಾನಿಗಿಂತಲೂ ಲಾಭವೇ ಇದೆ. ಮೇಲಾಗಿ ಹಿಂದೂ ಮುಸ್ಲಿಮ ಸಖ್ಯ ಇದರಿಂದ ಉಂಟಾಗಲು ಅವಕಾಶವಾಗುತ್ತದೆ. ಹಿಂದೂ ಮಹಮದೀಯರ ವೈಷಮ್ಯವನ್ನು ಪರಿಹರಿಸಿ ಎರಡು ಜನಾಂಗಗಳಲ್ಲಿ ನಿರ್ಮಲ ಪ್ರೀತಿ ವಿಶ್ವಾಸಗಳನ್ನು ಉಂಟುಮಾಡಿ ಹಿಂದೂ ಮುಸ್ಲಿಂ ಸಖ್ಯ ಸಾಮರಸ್ಯಗಳನ್ನು ಸಾಧಿಸಬೇಕೆಂದಿದ್ದೇನೆ!"

" ನಿಮ್ಮ ಆದರ್ಶ ಕೇವಲ ಈಡೇರದ ಗಗನ ಕುಸುಮವೆಂದು ನಾನು ವಿಷಾದದಿಂದ ಹೇಳಬೇಕಾಗಿದೆ. ನಾವು ಮಹಮದೀಯರೊಡನೆ ಸ್ನೇಹದಿಂದ ನಡೆದುಕೊಳ್ಳಬಹುದು; ಆದರೆ ಅವರಿಂದ ಕೃತಜ್ಞತೆಯನ್ನು ನಿರೀಕ್ಷಿಸುವುದು ಮಾತ್ರ ಬೇಡ!"

" ಹಾಗಾದರೆ ಗೋಲ್ಕಂಡದ ಸುಲ್ತಾನರಿಗೆ ಸೈನ್ಯವನ್ನು ಕಳುಹಿಸಿ, ಸ್ನೇಹದಿಂದ ನಡೆದುಕೊಳ್ಳಲು ನಿಮ್ಮ ಒಪ್ಪಿಗೆ ದೊರೆಯಿತೆಂದು ನಾನು ತಿಳಿಯಲೆ?"

" ನನ್ನ ವೈಯುಕ್ತಿಕ ಅಭಿಪ್ರಾಯವೇನೆಂದು ಈ ಮೊದಲೇ ತಿಳಿಸಿದ್ದೇನೆ. ಅನ್ಯಾಯದಿಂದ ಸಿಂಹಾಸನವನ್ನು ಆಕ್ರಮಿಸಲೆಳೆಸುವ ಇಬ್ರಾಹಿಂಖಾನರಿಗೆ ನಾನು ಸಾಮ್ರಾಟನಾಗಿ ಬೆಂಬಲ ಕೊಡಲಾರೆ!"

" ನಿಮ್ಮ ವೈಯುಕ್ತಿಕ ಆಸೆ ಅಭೀಪ್ಸೆಗಳು ಏನೇ ಇರಲಿ. ರಾಷ್ಟ್ರದ ಹಿತದೃಷ್ಟಿಯಿಂದ ಈಗ ನಾವು ಗೋಲ್ಕಂಡದ ಇಬ್ರಾಹಿಂಖಾನರಿಗೆ ನೆರವೀಯಲೇಬೇಕಾಗಿದೆ. ಇದಕ್ಕೆ ನೀವು ಸಮ್ಮತಿಸಲೇಬೇಕು!"

" ನನ್ನ ಅಂತಃಸಾಕ್ಷಿ ಒಪ್ಪದ ಕೆಲಸವನ್ನು ನಾನು ಮಾಡುವುದಿಲ್ಲ!" ಸದಾಶಿವರಾಯನು ಸ್ಪಷ್ಟವಾಗಿ ಹೇಳಿದ.

"ರಾಷ್ಟ್ರದ ಹಿತದ ಸಲುವಾಗಿ ಮಾಡಲೇಬೇಕಾಗುತ್ತದೆ!"

—ಅಷ್ಟೇ ನಿಷ್ಠುರದಿಂದ ರಾಮರಾಯನು ಹೇಳಿದ.

"ನೀವು ನನ್ನಿಂದ ಬಲಾತ್ಕಾರದಲ್ಲಿ ಒಪ್ಪಿಗೆ ದೊರಕಿಸಿಕೊಳ್ಳಲಾರಿರಿ: ನಾನೂ ನಿಮ್ಮಂತೆ ವಿಚಾರಶೀಲನಾದ ಮನುಷ್ಯ. ನನ್ನ ಮನಸ್ಸಿಗೆ ಒಪ್ಪಿಗೆಯಾಗದ ಯಾವ ಕೆಲಸವನ್ನೂ ನಾನು ಮಾಡಲಾರೆ. ಈ ದೇಹ ಬಿದ್ದು ಹೋದರೂ ಸರಿ, ಯಾವುದನ್ನು ನಾನು ಅನ್ಯಾಯ ಅಧರ್ಮವೆಂದು ತಿಳಿದಿರುವೆನೋ ಅದಕ್ಕೆ ಬೆಂಬಲ ಕೊಡಲಾರೆ!"

"ಈ ಮಾತು ಖಂಡಿತವೆ?" ಗಡಸು ಧ್ವನಿಯಲ್ಲಿ ಪ್ರಶ್ನಿಸಿದ ರಾಮರಾಯ.

"ಅಕ್ಷರಶಃ ಖಂಡಿತ!" ಅಷ್ಟೇ ಗಡುಸಾಗಿ ಉತ್ತರಿಸಿದ.

"ಇದು ದುಡುಕುವ ಪ್ರಸಂಗವಲ್ಲ. ಮುಂದೆ ಇದರ ಪರಿಣಾಮವೇನಾಗಬಹುದೆಂದು ವಿಚಾರಮಾಡಿ ಯಾವ ನಿರ್ಧಾರವನ್ನೂ ಕೈಗೊಳ್ಳಿ!"

"ನಾನು ಎಲ್ಲವನ್ನೂ ಚೆನ್ನಾಗಿಯೇ ಆಲೋಚಿಸಿ ನಿರ್ಧರಿಸಿದ್ದೇನೆ. ನಾನು ಸಾಮ್ರಾಟನಾದ ಮಾತ್ರಕ್ಕೆ ನನಗೆ ಸ್ವಂತ ಅಭಿಪ್ರಾಯ, ವಿಚಾರಗಳು ಇರಬಾರದೆ? ನಾನು ಕಡೆತನಕ ನಿಮ್ಮ ಕೈಬೊಂಬೆಯಾಗಿ, ಉಳಿಯಬೇಕೆ?" ಕೆರಳಿ ಕೇಳಿದ ಸದಾಶಿವರಾಯ. ಅಸಹನೆಯಿಂದ ಅವನ ಧ್ವನಿ ನಡುಗುತ್ತಿತ್ತು.

"ನಿಮ್ಮನ್ನು ಸಾಮ್ರಾಟ ಪದವಿಗೇರಿಸಿದವನು ನಾನು! ನೀವು ನನ್ನ ಇಚ್ಛೆಯಂತೆ ನಡೆದುಕೊಳ್ಳಬೇಕು." ರಾಮರಾಯನು ಗುಡುಗಿದನು. ಇದರಿಂದ ಸದಾಶಿವರಾಯನು ವಿಚಲಿತನಾಗದೆ ಉತ್ತರ ಕೊಟ್ಟ.

"ಸಿಂಹಾಸನವನ್ನು ನೀವು ದೊರಕಿಸಿಕೊಟ್ಟದ್ದೀರಿ ನಿಜ! ಅಂದಮಾತ್ರಕ್ಕೆ ಈ ಸಾಮ್ರಾಜ್ಯ ನಿಮ್ಮದಾಗಲು ಸಾಧ್ಯವಿಲ್ಲ. ಸಿಂಹಾಸನದಲ್ಲಿ ಕುಳಿತು ಸಾಮ್ರಾಟನಾಗಿರುವ ನನ್ನದು ಈ ಸಾಮ್ರಾಜ್ಯ—ಈ ವಿಜಯನಗರ ಸಾಮ್ರಾಜ್ಯ! ಪ್ರಜೆಗಳ ಹಿತರಕ್ಷಣೆ ನನಗೆ ಸೇರಿದೆ! ನೀವು ಏನಿದ್ದರೂ ರಾಜಪ್ರತಿನಿಧಿಗಳು! ನನ್ನ ಆಜ್ಞಾರಾಧಕರು. ನನಗೆ ಆಜ್ಞೆಮಾಡುವ ಅಧಿಕಾರ ನಿಮಗಿಲ್ಲ! ನಾನು ಸ್ವತಂತ್ರ ಸಾಮ್ರಾಟ; ನನ್ನ ಮೇಲೆ ಅಧಿಕಾರ ನಡಸುವ ವ್ಯಕ್ತಿ ನೀವಲ್ಲ—ಸಾಮ್ರಾಜ್ಯದ ಜನತೆ! ಜನತಾ ರೂಪದಲ್ಲಿರುವ ಜನಾರ್ದನ ಮಾತ್ರ. ನಾನು ನನ್ನ ಅಂತರಾತ್ಮನಿಗಲ್ಲದೆ ಅನ್ಯರ ಇಚ್ಛೆಗೆ ಈ ಗಳಿಗೆಯಿಂದ ತಲೆ ಬಾಗುವುದಿಲ್ಲ. ಈ ಮಾತು ಖಂಡಿತ. ನಾನು ಇದುವರೆಗೆ ಸಹಿಸಿಕೊಂಡಿದ್ದಂತೆ ನಿಮ್ಮ ದಬ್ಬಾಳಿಕೆ, ನಿರಂಕುಶ ಆಡಳಿತವನ್ನು ಇನ್ನುಮುಂದೆ ಸಹಿಸುವುದಿಲ್ಲ—

"ನಾನು ನಿಮ್ಮ ಸಹಾಯವನ್ನು ಉಪಕಾರವನ್ನು ಸ್ಮರಿಸಿ, ಕೃತಜ್ಞತೆಗೆ ಕಟ್ಟುಬಿದ್ದು ನಿಮಗೆ ಎದುರು ಹೇಳಿರಲಿಲ್ಲ. ವಿರುದ್ಧ ನಿಂತಿರಲಿಲ್ಲ. ನನ್ನ

ಒಳ್ಳೆಯತನವನ್ನು ನೀವು ದುರುಪಯೋಗಪಡಿಸಿಕೊಂಡು, ನನ್ನನ್ನು ನಿಮ್ಮ ಆಜ್ಞಾನುವರ್ತಿ ಪಾದಸೇವಕನೆಂಬಂತೆ ನಡಸಿಕೊಳ್ಳುತ್ತಿದ್ದೀರಿ. ಇದನ್ನು ಇದುವರೆಗೆ ಸಹಿಸಿಕೊಂಡಂತೆ ಇನ್ನುಮುಂದೆ ಸಹಿಸಿಕೊಳ್ಳಲು ಸಾಧ್ಯವಿಲ್ಲ. ಈ ಮಾತು ಖಂಡಿತ. ನನಗೂ ಆತ್ಮಗೌರವವಿದೆ. ಆತ್ಮಾಭಿಮಾನವಿದೆ. ನನ್ನದೆನ್ನುವ ಸ್ವಂತ ವಿಚಾರಗಳಿವೆ. ನೀವು ತಿಳಿದಿರುವಂತೆ ನಾನು ಏನೂ ಅರಿಯದ ಬಾಲಕನಲ್ಲ. ನನ್ನ ಜವಾಬ್ದಾರಿ ಕರ್ತವ್ಯವೇನೆಂಬುದು ತಿಳಿದಿದೆ. ನಿಮ್ಮ ಇಚ್ಛೆಗೆ ಅನುಗುಣವಾಗಿ ನಾನು ತಾಳ ತಟ್ಟಲಾರೆ. ನನ್ನ ಅಂತರಾತ್ಮ ನಿರ್ದಿಷ್ಟವಾದ ದಾರಿಯಲ್ಲಿ ಮಾತ್ರ ನಾನು ನಡೆಯುವವನು !....

"ನಿಮ್ಮ ಇಚ್ಛೆಯಂತೆ ನಾನು ಯಾವ ಅಹಿತವಾದ ಕಾರ್ಯವನ್ನೂ ಅನುಮೋದಿಸಲಾರೆ. ಅನ್ಯಾಯ, ಅಧರ್ಮಗಳಿಗೆ ಬೆಂಬಲ ಕೊಡಲಾರೆ. ನಮ್ಮ ಈ ಪವಿತ್ರ ಸಿಂಹಾಸನ ನನ್ನ ಧರ್ಮನಿಷ್ಠೆಯಮೇಲೆ ನಿಂತಿದೆ. ತಿಳಿದೂ ತಿಳಿದೂ ನಾನು ಅಧರ್ಮಪ್ರವರ್ತಕನಾಗಲಾರೆ. ನಾನು ಅಧರ್ಮಪ್ರವರ್ತಕನಾದರೆ ನಾನಾಗಿ ಸಾಮ್ರಾಜ್ಯವನ್ನು ಗಂಡಾಂತರಕ್ಕೆ ನೂಕಿದಂತೆ. ಸಾಮ್ರಾಜ್ಯ ದುರಂತಕ್ಕೆ ಸೂತ್ರಧಾರನಾದಂತೆ. ನನ್ನ ಮಾತಿನಿಂದ ನಿಮಗೆ ಅಸಮಾಧಾನವಾಗಬಹುದು, ಸಿಟ್ಟು ಬರಬಹುದು ಆದರೆ ನಿಮ್ಮನ್ನು ಸಮಾಧಾನಗೊಳಿಸಲು ಸತ್ಯದ ಮುಖಕ್ಕೆ ಮಸಿ ಬಳೆಯಲಾರೆ. ಪ್ರಜೆಗಳ ಹಿತವನ್ನು ಮರೆಯಲಾರೆ. ನನಗೆ ನಿಮಗಿಂತಲೂ ಜನತಾ ರೂಪದ ಜನಾರ್ದನನು ಪೂಜ್ಯನು. ನಾನು ಸತ್ಯಾರಾಧಕನೇ ಹೊರತು ಅಸತ್ಯಪೋಷಕನಲ್ಲ.....ರಾಜ್ಯಕೋಶಗಳು ನನ್ನ ಕೈಬಿಟ್ಟರೂ ಸರಿ, ನಾನೆಂದಿಗೂ ಅಧರ್ಮ ಸಂಚಾಲಕನಾಗಲಾರೆ ! ಅನೃತವನ್ನು ನುಡಿಯಲಾರೆ! ಅನ್ಯಾಯವನ್ನೆಸಗಲಾರೆ! ನಿಮ್ಮ ಆಜ್ಞೆಯಂತೆ ನಡೆಯುವ ಯಂತ್ರವಾಗಲಾರೆ! ವಿಚಾರಶೂನ್ಯ ಪಶುವಾಗಲಾರೆ. ನನಗೆ ಮಾನವನಾಗಿ ಬದುಕುವುದು ಬೇಕಾಗಿದೆ. ಸ್ವತಂತ್ರ್ಯವಿಲ್ಲದ ಸಾಮ್ರಾಟನಾಗುವುದಕ್ಕಿಂತ ವಿಚಾರ ಸ್ವತಂತ್ರ್ಯವುಳ್ಳ ಭಿಕಾರಿಯಾಗುವುದು ಮೇಲು. ಅಧರ್ಮ ಸಂಚಾಲಕನಾಗುವುದಕ್ಕಿಂತಲೂ, ಈ ಸಾಮ್ರಾಟ ಪದವಿಯನ್ನು ತೊರೆಯುವುದು ಲೇಸು. ನೀವು ನಿಮ್ಮ ನಿಮ್ಮ ಅಧರ್ಮ ಕಾರ್ಯಗಳಿಗೆ ಬೇರೊಂದು ಬಲಿಪಶುವನ್ನು ನೋಡಿಕೊಳ್ಳಿ. ನನಗಂತೂ ನಿಮ್ಮ ಕೈಬೊಂಬೆಯಾಗಿದ್ದುದು ಸಾಕಾಗಿದೆ !" ಎಂದು ಗುಡುಗಿ ಗರ್ಜಿಸಿದ. ಸದಾಶಿವರಾಯ ಅನ್ಯಾಯವನ್ನು ಎದುರಿಸುವ ದಿಟ್ಟತನದಲ್ಲಿ, ಆಡಿನಂತೆ ಇದ್ದವನು ಈಗ ಸಿಂಹವಾಗಿದ್ದನು. ಅವನ ಸಹನೆಗೂ ಕೊನೆಬಂದಿತ್ತು.

ರಾಮರಾಯನು ಎಲ್ಲವನ್ನೂ ಕೇಳಿ ದಂಗುಬಡಿದು ನಿಂತನು. ಅವನು

ಸದಾಶಿವರಾಯನನ್ನು ತೀಕ್ಷ್ಣವಾಗಿ ಆಪಾದಮಸ್ತಕ ನೋಡಿ ಏನನ್ನೋ ನಿರ್ಧರಿಸಿ ಅಲ್ಲಿಂದ ಬಿರುಗಾಳಿಯ ವೇಗದಲ್ಲಿ ಹೊರಟುಹೋದನು.

ಇದರ ಪರಿಣಾಮ ಏನಾದೀತೆಂದು ಸದಾಶಿವರಾಯನು ಊಹಿಸುವ ಮೊದಲೇ ಮುಕುಂದನಾಯಕನು ನಾಲ್ವರು ಶಸ್ತ್ರಸಜ್ಜಿತ ಸೈನಿಕರೊಡನೆ ಬಂದು ಸದಾಶಿವರಾಯನ ಮುಂದೆ ನಿಂತನು.

"ಪ್ರಭುಗಳ ಆಜ್ಞೆಯಾಗಿದೆ. ತಮ್ಮನ್ನು ಬಂಧಿಸಿ ರತ್ನಕೂಟ ಅರಮನೆಗೆ ಕರೆದೊಯ್ಯಬೇಕಾಗಿದೆ!" ಎಂದು ಗಂಭೀರವಾಗಿ ಹೇಳಿದ ಮುಕುಂದನಾಯಕ"

"ನನಗೆ ಆಜ್ಞೆ ಮಾಡುವ ಪ್ರಭುಗಳು ಯಾರು?" ಸದಾಶಿವರಾಯ ಗರ್ಜಿಸಿದ.

"ಸ್ವಯಂ ಅಳಿಯ ರಾಮಭೂಪಾಲರು?"

"ಅವರು ನಮ್ಮ ರಾಜಪ್ರತಿನಿಧಿಗಳು—ನಮ್ಮ ಸೇವಕರು! ಅವರಿಗೆ ನನಗೆ ಆಜ್ಞೆ ಮಾಡುವ ಅಧಿಕಾರವಿಲ್ಲ!"

"ಇದೊಂದೂ ನಮಗೆ ತಿಳಿಯದು ಪ್ರಭು! ನಾವು ಅವರ ಪಾದ ಸೇವಕರು ಮಾತ್ರ. ಅವರ ಆಜ್ಞಾರಾಧಕರು!"

"ನನ್ನನ್ನು ಮುಟ್ಟಲು ಬಂದರೆ ಜೋಕೆ? ನಿಮ್ಮ ಪ್ರಾಣದ ಮೇಲೆ ಆಸೆ ಇಲ್ಲದಿದ್ದರೆ ಮಾತ್ರ ಹತ್ತಿರ ಬನ್ನಿ! ಸದಾಶಿವರಾಯನು ಕೈಗೆ ಕತ್ತಿ ತೆಗೆದುಕೊಂಡನು. ಆದರೆ ಅವನಿಗೆ ಈ ಕತ್ತಿಯನ್ನು ಉಪಯೋಗಿಸುವ ಅವಕಾಶವೇ ಬರಲಿಲ್ಲ. ಅಲ್ಲಿಗೆ ಅದೇ ಹೊತ್ತಿಗೆ ಆಗಮಿಸಿದ ತಿರುಮಲ ವೆಂಕಟಾದ್ರಿಯರು ಥಂಗನೆ ಸದಾಶಿವನ ರಕ್ಷಣೆಗಾಗಿ ಕತ್ತಿ ಹಿರಿದು ಧಾವಿಸಿ ಬಂದರು.

"ಪ್ರಭುಗಳನ್ನು ಮುಟ್ಟಿದರೆ ಜೋಕೆ!" ಎಂದು ಅವರು ಗದ್ದರಿಸಿದರು.

ಅನಂತರ ಮುಕುಂದನಾಯಕನ ಮುಖ ನೋಡಿ,

"ಮುಕುಂದನಾಯಕರೇ, ನೀವು ಸಾಮ್ರಾಟರ ಉಪ್ಪುತಿಂದು ಇಂತಹ ಹೇಯ ಕಾರ್ಯಕ್ಕೆ ಪ್ರವರ್ತಕರಾಗುವಿರೆಂದು ನಾನು ಭಾವಿಸಿರಲಿಲ್ಲ." ಎಂದು ತೀಕ್ಷ್ಣವಾಗಿ ತಿರಸ್ಕಾರದಿಂದ ನೋಡಿದ ವೆಂಕಟಾದ್ರಿ ತಿರುಮಲ.

"ತಿರುಮಲರಾಯರೇ! ಈ ಕಾರ್ಯ ನನಗೂ ಪ್ರಿಯವಿಲ್ಲ. ಆದರೆ ನಾನು ರಾಮಭೂಪಾಲರ ಪಾದಸೇವಕ! ಅವರು ಅನ್ನ ಕೊಟ್ಟು ಸಲಹಿದ ಧಣಿ. ಅವರ ಅನ್ನದ ಋಣ ತೀರಿಸಲು ನಾನು ಯಾವ ಕಾರ್ಯಕ್ಕೂ ಹಿಂಜರಿಯುವುದಿಲ್ಲ. ಇದರಲ್ಲಿ ನ್ಯಾಯಾನ್ಯಾಯದ ಪ್ರಶ್ನೆ, ಪಾಪ ಪುಣ್ಯಗಳ ಸಮಸ್ಯೆ ನನ್ನನ್ನು ಬಾಧಿಸುವುದಿಲ್ಲ. ನನ್ನ ಮುಂದೆ ಇರುವುದು ನನ್ನಕರ್ತವ್ಯಮೂರ್ತಿ; ನಾನು ರಾಮರಾಯರ ಆಜ್ಞಾರಾಧಕ, ಸ್ವಾಮಿನಿಷ್ಠ ಸೇವಕ. ಇದರ ಹೊರತು ನನಗೆ ಏನೂ ತಿಳಿಯದು!"

" ಹಾಗಾದರೆ ನೀವು ಪ್ರಭುಗಳನ್ನು ಮುಟ್ಟುವ ಮುನ್ನ ನನ್ನನ್ನು ಯಮ ಸದನಕ್ಕೆ ಅಟ್ಟಿ ಈ ಕಾರ್ಯ ಮಾಡಬೇಕಾಗಿದೆ! ನಾನು ಬದುಕಿರುವತನಕ ಈ ಹೇಯ ಕಾರ್ಯನಡೆಯಲು ಬಿಡುವುದಿಲ್ಲ. ಪ್ರಭುಗಳನ್ನು ಬಂದಿಸುವಂತಹ ಯಾವ ಅಪರಾಧ ಅವರಿಂದ ನಡೆದಿದೆ ?- ಅವರನ್ನೇಕೆ ಬಂಧಿಸಲು ಬಂದಿದ್ದೀರಿ ತಿಳಿಯಬಹುದೆ ?"

" ಇವುಗಳೊಂದೂ ನನಗೆ ತಿಳಿಯದು. ಇದನ್ನು ತಿಳಿಯುವ ಸಾಹಸಕ್ಕೂ ನಾನು ಹೋಗಿಲ್ಲ. . ಪ್ರಭುಗಳಾದ ರಾಮಭೂಪಾಲರ ಆಜ್ಞೆಯನ್ನು ಕಾರ್ಯಗತ ಗೊಳಿಸುವುದಷ್ಟೇ ನನ್ನ ಕೆಲಸ. ಈ ಬಗ್ಗೆ ವಿವರಗಳನ್ನು ತಿಳಿಯಬೇಕಾದರೆ ನೀವು ರಾಮಭೂಪಾಲರನ್ನೇ ಕೇಳಬೇಕು !"

"ಹಾಗಾದರೆ ಸಾಮ್ರಾಟರ ಅಪರಾಧ ವೇನೆಂದು ತಿಳಿಯುವ ತನಕ ನೀವು ಪ್ರಭುಗಳನ್ನು ಬಂಧಿಸಬಾರದು! ನೀವು ನಮ್ಮ ವಿಶ್ವಾಸದ ಮಿತ್ರರಾಗಿರುವುದ ರಿಂದ ನಮ್ಮ ಈ ಕೋರಿಕೆಯನ್ನು ನಡಸಿಕೊಡಿ. ನಾವು ರಾಮರಾಯರನ್ನು ಕಂಡುಬರುವವರೆಗಾದರೂ ಪ್ರಭುಗಳನ್ನು ಬಂಧಿಸಬೇಡಿ!"

"ಅಂತೆಯೇ ಆಗಲಿ. ಪ್ರಭುಗಳು ಇಲ್ಲಿಂದ ತಪ್ಪಿಸಿಕೊಂಡು ಹೋಗುವ ಪ್ರಯತ್ನ ಮಾಡದೆ ಇದ್ದರೆ ಅವರನ್ನು ಬಂಧಿಸುವುದಿಲ್ಲ." ಎಂದು ಮುಕುಂದ ನಾಯಕ ತಿರುಮಲ ವೆಂಕಟಾದ್ರಿಗಳಿಗೆ ಆಶ್ವಾಸನೆಯಿತ್ತ.

ತಿರುಮಲ ವೆಂಕಟಾದ್ರಿಯರು ರಾಮರಾಯನೊಡನೆ ಈ ಬಗ್ಗೆ ಚರ್ಚಿಸಿ ಸದಾಶಿವರಾಯನನ್ನು ಬಂಧಮುಕ್ತಗೊಳಿಸುವ ಆಸೆಯಿಂದ ಲಗುಬಗೆಯಲ್ಲಿ ರತ್ನಕೂಟಕ್ಕೆ ಬಂದರು.

ಸುದ್ದಿ ಕೊಡದೆ ಒಮ್ಮೆಲೇ ಕಾಣಿಸಿಕೊಂಡ ಸಹೋದರರನ್ನು ನೋಡಿ ರಾಮರಾಯನಿಗೆ ಅಚ್ಚರಿಯಾಯಿತು.

" ಏನು ಸಂಗತಿ?" ಎಂದು ವಿಚಾರಿಸಿದ. ಅವರ ಮುಖದಲ್ಲಿದ್ದ ಉದ್ವೇಗವನ್ನು ಕಂಡು.

" ನಿಮ್ಮೊಡನೆ ಒಂದು ಮಹತ್ವದ ಸಂಗತಿಮಾತಾಡ ಬೇಕಾಗಿದೆ!" ಅವರು ನಿಂತು ಕೊಂಡೇ ಹೇಳಿದರು.

"ಏನದು?"

" ನೀವು ಸದಾಶಿವರಾಯರನ್ನ ಬಂಧಿಸಲು ಆಜ್ಞೆಮಾಡಿರುವುದರ ಕಾರಣ ತಿಳಿಯಬೇಕಾಗಿದೆ ! ಅವರು ಯಾವ ತಪ್ಪು ಮಾಡಿದರೆಂದು ಈ ಶಿಕ್ಷೆ ವಿಧಿಸುತ್ತಿದ್ದೀರಿ ? ಅವರು ನಿಮಗೆ ಮಾಡಿದ ಯಾವ ಅಪಚಾರಕ್ಕೆ ಅವರಿಗೆ ಈ ಅಪಮಾನ ಬಗೆಯುತ್ತಿದ್ದೀರಿ ತಿಳಿಯಬಹುದೆ?" ಕೆರಳಿ ಕೇಳಿದ ತಿರುಮಲ.

“ ಸಾಮ್ರಾಟರು ನನ್ನ ಸಲಹೆಗಳನ್ನು ತಿರಸ್ಕರಿಸಿ, ನನಗೆ ಅಪಮಾನ ಮಾಡಿದರು !”

“ ನಿಮ್ಮ ಸಲಹೆಗಳನ್ನು ಏಕೆ ಧಿಕ್ಕರಿಸಿದರು ? ಏನು ಸಂಗತಿ ವಿವರವಾಗಿ ಹೇಳಬಾರದೆ ?” ವೆಂಕಟಾದ್ರಿ ಕೇಳಿದ.

ರಾಮರಾಯನು ಎಲ್ಲ ಸಂಗತಿಯನ್ನು ಕೆಲವೇ ಮಾತುಗಳಲ್ಲಿ ವಿವರಿಸಿ “ ಸಾಮ್ರಾಟರು ನನಗೆ ಅಪಚಾರ ಮಾಡಿದರು! ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿದರು. ನಿರ್ವಾಹವಿಲ್ಲದೆ ಸಾಮ್ರಾಜ್ಯದ ದೃಷ್ಟಿಯಿಂದ ಅವರನ್ನು ಬಂಧಿಸಲು ಆಜ್ಞೆಮಾಡಬೇಕಾಯಿತು. ಬಂಧಿಸಿದರೂ ಅವರನ್ನು ರತ್ನಕೂಟದಲ್ಲಿ ನಿರ್ಬಂಧದಲ್ಲಿ ಇಡಲಾಗುವುದೇ ಹೊರತು ಅವರಿಗೆ ಯಾವ ತೊಂದರೆಯನ್ನೂ ಮಾಡುವುದಿಲ್ಲ. ಅವರಿಗೆ ವ್ಯಕ್ತಿಸ್ವಾತಂತ್ರ್ಯ ಉಳಿದು ಉಳಿದೆಲ್ಲ ಅನುಕೂಲಗಳನ್ನು ಕಲ್ಪಿಸಿಕೊಡಲಾಗುವುದು. ಈ ಬಗ್ಗೆ ನೀವು ಯಾವುದಕ್ಕೂ ಚಿಂತಿಸುವ ಕಾರಣವಿಲ್ಲ. ಅವರನ್ನು ನಿರ್ಬಂಧದಲ್ಲಿ ಇರಿಸಿದರೂ ಸಾಮ್ರಾಟರ ಘನತೆ ಗೌರವಗಳಿಗೆ ಚ್ಯುತಿ ಬರದ ರೀತಿಯಲ್ಲಿ ನೋಡಿಕೊಳ್ಳಲಾಗುವುದು ಈ ಬಗ್ಗೆ ನಿಮಗೆ ಆಶ್ವಾಸನವೀಯಬಲ್ಲೆ !”

“ ನಾವು ಇದನ್ನು ಬೇಡಲು ಬರಲಿಲ್ಲ. ಸಾಮ್ರಾಟರನ್ನು ಬಂಧಿಸಿ, ಅವರಿಗೆ ಅಪಮಾನವನ್ನು ಮಾಡಬಾರದೆಂದು ಹೇಳಲು ಬಂದೆವು !”

“ ಹಾಗೋ ಸಂಗತಿ !”

“ ಹೌದು. ಸಾಮ್ರಾಟರನ್ನು – ಯಾರನ್ನು ಜನತೆ ದೈವಾಂಶ ಸಂಭೂತವೆಂದು ಪೂಜಿಸುವುದೋ ಆ ಸಾಮ್ರಾಟರನ್ನು ಹೀಗೆ ಅಪಮಾನ ಮಾಡಿದರೆ ಇದರಿಂದ ಒಳ್ಳೆಯದಾಗುವುದಿಲ್ಲ. ಅಲ್ಲದೆ ಸಾಮ್ರಾಟರನ್ನು ಆಜ್ಞೆ ಮಾಡುವ ಹಕ್ಕು ಪ್ರಜೆಗಳಿಗಲ್ಲದೆ ಮತ್ತೆ ಯಾರಿಗೂ ಇಲ್ಲ. ನೀವು ಸಾಮ್ರಾಟರನ್ನು ಬಂಧಿಸಲೆಳಸಿ ತಪ್ಪು ಮಾಡಿದ್ದೀರಿ; ದುಡುಕಿದ್ದೀರಿ ! ಈಗಲೂ ಕಾಲ ಮಿಂಚಿಲ್ಲ. ನಿಮ್ಮ ಈ ಆಜ್ಞೆಯನ್ನು ಹಿಂತೆಗೆದುಕೊಂಡು ನಿಮ್ಮ ಸತ್ಕೀರ್ತಿಗೆ ಬಳಿಯುತ್ತಿರುವ ಈ ಕಳಂಕವನ್ನು ಅಳಿಸಿಕೊಳ್ಳಿ.”

“ ಇದೊಂದು ಮಾತ್ರ ಸಾಧ್ಯವಿಲ್ಲ !”

“ ಏಕೆ ?”

“ ಇದು ನಾನು ಸಂಪಾದಿಸಿದ ಸಾಮ್ರಾಜ್ಯ ! ಅವರನ್ನು ಸಾಮ್ರಾಟರನ್ನಾಗಿ ನೇಮಿಸಿದವನು ನಾನು ! ಅವರು ನನ್ನ ಆಜ್ಞಾರಾಧಕರು. ನನ್ನನ್ನು ಕೀಳಾಗಿ ನಡಸಿಕೊಂಡು ನನಗೆ ಅಪಮಾನವಾದರೆ ನಾನು ಸಹಿಸಲಾರೆ. ಅವರನ್ನು ಬಂಧನದಲ್ಲಿ ಇಡದಿದ್ದರೆ ಸಾಮ್ರಾಜ್ಯಕ್ಕೆ ಗಂಡಾಂತರ ತಪ್ಪಿದ್ದಲ್ಲ. ರಾಜ್ಯದ

ಹಿತದೃಷ್ಟಿಯಿಂದಲಾದರೂ ಈ ಕಾರ್ಯ ಅನಿವಾರ್ಯ!"

"ನೀವೊಬ್ಬರು ಸಂಪಾದಿಸಿದ ಸಾಮ್ರಾಜ್ಯವಲ್ಲ ಇದು. ಇದರಲ್ಲಿ ನಾವೆಲ್ಲರೂ ಭಾಗಿಯಾಗಿದ್ದೇವೆ. ನಮ್ಮಂತಹ ಸಹಸ್ರಾರು ಸ್ವಾಮಿನಿಷ್ಠ ಸೇವಕರು ಇದಕ್ಕಾಗಿ ದುಡಿದಿದ್ದಾರೆ. ಆತ್ಮಾರ್ಪಣೆ ಮಾಡಿದ್ದಾರೆ. ಅವರದು ಈ ಸಾಮ್ರಾಜ್ಯ!" ಎಂದು ಒರಟಾಗಿ ಹೇಳಿದ ತಿರುಮಲ.

"ನಾನು ನಿಮ್ಮನ್ನು ಚರ್ಚೆಗೆಕರೆಸಲಿಲ್ಲ!" ರಾಮರಾಯ ತಿರಸ್ಕಾರದಿಂದ ನೋಡುತ್ತಾ ಹೇಳಿದ.

"ನಾವು ಚರ್ಚಿಸಲೆಂದೇ ಬಂದಿದ್ದೇವೆ. ಪ್ರಭುಗಳ ವಿರುದ್ಧ ಇಂತಹ ಅನ್ಯಾಯ ಅಪಚಾರಗಳನ್ನು ನಾವು ಸಹಿಸುವುದಿಲ್ಲ! ನೀವು ಸಾಮ್ರಾಟರ ಮೇಲೆ ಕೈಮಾಡುವುದಾದರೆ ಮೊದಲು ನಮ್ಮನ್ನು ನಿವಾರಿಸಿ ಅನಂತರ ಈ ಹೇಯಕಾರ್ಯಕ್ಕೆ ಕೈಹಾಕಬೇಕು. ನಾವು ಬದುಕಿರುವತನಕ ಇಂತಹ ಕಾರ್ಯವನ್ನು ವಿರೋಧಿಸದೆ ಬಿಡುವುದಿಲ್ಲ!"

"ಹಾಗಾದರೆ ಆ ತಲೆತಿರುಕ ಸಾಮ್ರಾಟನಂತೆ ನೀವೂ ನನಗೆ ಎದುರು ನಿಲ್ಲುವಿರಾ?"

"ಹೌದು!"

"ದುಡುಕಬೇಡಿ! ವಿಚಾರ ಮಾಡಿ."

"ಈಗ ದುಡುಕುತ್ತಿರುವವರು ನೀವೇ ಹೊರತು ನಾವಲ್ಲ!"

"ಹಾಗಾದರೆ ನೀವು ಕೃತಘ್ನರು! ದ್ರೋಹಿಗಳು!"

"ನಾವು ದ್ರೋಹಿಗಳಾದರೆ ನೀವೂ ದ್ರೋಹಿಗಳು!"

"ನನ್ನನ್ನು ನಿಂದಿಸುವ ನಾಲಗೆ ಕತ್ತರಿಸಿ ಬಿದ್ದೀತು ಜೋಕೆ!"

"ಇದಕ್ಕೆಲ್ಲಾ ನಾವು ಹೆದರುವವರಲ್ಲ!"

"ಹಾಗಾದರೆ ನಿಮಗೂ ಸಾಮ್ರಾಟರಿಗೆ ಆದ ಗತಿಯೇ ಆಗಬೇಕೆಂದು ಕಾಣುತ್ತದೆ!"

"ಸಾಮ್ರಾಟರನ್ನು ಹೆದರಿಸಿದಂತೆ ನಮ್ಮನ್ನು ನೀವು ಹೆದರಿಸಲು ನೋಡುತ್ತಿದ್ದೀರಿ. ಇದಕ್ಕೆಲ್ಲಾ ನಾವು ಸೂತ್ರ ಹಾಕುವುದಿಲ್ಲ! ಈ ದೇಹ ಬಿದ್ದು ಹೋಗುವುದಾದರೆ ಸಾಮ್ರಾಜ್ಯಸೇವೆಯಲ್ಲಿ ಅನ್ಯಾಯದ ವಿರುದ್ಧ ನಡೆಯುವ ಹೋರಾಟದಲ್ಲಿ ಬಿದ್ದು ಹೋಗಲಿ!" ಎಂದು ಹೇಳಿ ತಿರುಮಲ ಕತ್ತಿಯನ್ನು ಒರೆಯಿಂದ ಹೊರಗೆಳೆದ.

ಏಕೋ ಎಲ್ಲವೂ ವಿಕೋಪಕ್ಕೆ ಹೋಯಿತೆಂದು ರಾಮರಾಯನಿಗೆ ಅನಿಸಿತು. ಈಗ ದುಡುಕಿದರೆ ಇದರಿಂದ ತನ್ನ ಯಾವ ಹಂಚಿಕೆಯೂ ಈಡೇರುವು

ದಿಲ್ಲವೆಂದು ಅನಿಸಿತು. ಉಪಾಯವಾಗಿ ತನ್ನ ಕಾರ್ಯ ಸಾಧಿಸಿಕೊಳ್ಳಬೇಕೆಂದು ನಿರ್ಧರಿಸಿ ಅವನು ಸಹೋದರರನ್ನು ಸಮಾಧಾನಗೊಳಿಸುತ್ತ,

"ನೀವು ಒಂದು ಅಲ್ಪ ಸಂಗತಿಗಾಗಿ ಇಷ್ಟು ಮೂರ್ಖರಾಗುವಿರೆಂದು ನಾನು ತಿಳಿದಿರಲಿಲ್ಲ! ಇದನ್ನೆಲ್ಲಾ ನಾನು ಯಾರ ಸಲುವಾಗಿ ಮಾಡುತ್ತಿರುವೆನೆಂಬುದನ್ನು ತಿಳಿಯದಷ್ಟು ಮಂದಮತಿಗಳು ನೀವಾಗುವಿರೆಂದು ನಾನು ಭಾವಿಸಿರಲಿಲ್ಲ. ಈಗ ನಿಮಗೆ ನನ್ನಿಂದ ಆಗಬೇಕಾದುದಾದರೂ ಏನು? ಅದನ್ನಾದರೂ ಸ್ಪಷ್ಟವಾಗಿ ಹೇಳಿ!"

"ಸಾಮ್ರಾಟರನ್ನು ಬಂಧಿಸಬಾರದು!"

"ಇಷ್ಟೇ ತಾನೇ? ನಿಮ್ಮ ಇಚ್ಛೆಯಂತೆಯೇ ಆಗಲಿ! ಈಗ ವಿಷಗಳಿಗೆ. ನಾನು ಒಳ್ಳೆಯದನ್ನು ಮಾಡಲು ಹೊರಟರೂ ನೀವು ತಪ್ಪಾಗಿ ತಿಳಿಯುತ್ತೀರಿ! ನೀವು ಶಾಂತರಾದ ಮೇಲೆ ನಾನು ನಿಮ್ಮನ್ನು ಬಂದು ನೋಡುತ್ತೇನೆ!" ಎಂದು ಹೇಳಿ ಅಲ್ಲಿಂದ ಎದ್ದು ಹೊರಟ. ತಿರುಮಲ ವೆಂಕಟಾದ್ರಿಯರು ತಮ್ಮ ಆಶಯ ಈಡೇರಿದ ಸಂತೋಷದಲ್ಲಿ ಭುವನವಿಜಯಕ್ಕೆ ಧಾವಿಸಿ ಬಂದರು!

ಆದರೆ ಅವರು ಭುವನವಿಜಯಕ್ಕೆ ಬಂದಾಗ ಸದಾಶಿವರಾಯನು ಅಲ್ಲಿ ಕಾಣಲಿಲ್ಲ. ರಾಮರಾಯನು ಉಪಾಯದಲ್ಲಿ ತಮ್ಮಂದಿರಿಂದ ಬಂದಿದ್ದ ಅಪಾಯವನ್ನು ತಪ್ಪಿಸಿಕೊಳ್ಳಲು ಹಾಗೆ ಹೇಳಿದ್ದನೇ ಹೊರತು ಸದಾಶಿವರಾಯನನ್ನು ಬಿಡುಗಡೆಮಾಡುವ ಇಷ್ಟ ಅವನಿಗೆ ಇರಲಿಲ್ಲ. ಇಷ್ಟೆಲ್ಲಾ ಹಗರಣವಾದ ಮೇಲೂ ಸಾಮ್ರಾಟರನ್ನು ಸ್ವತಂತ್ರರಾಗಿ ಉಳಿಸಿದರೆ ತನಗೆ ಅಪಾಯ ತಪ್ಪಿದ್ದಲ್ಲವೆಂದು ಅವನು ಅರಿತಿದ್ದ – ತಿರುಮಲ ವೆಂಕಟಾದ್ರಿಯ ಬೆನ್ನಿಗೆ ಬೇರೆ ಮಾರ್ಗದಲ್ಲಿ ಬೇರೊಬ್ಬ ದೂತನನ್ನು ಕಳುಹಿಸಿ, ಕೂಡಲೇ ಸದಾಶಿವರಾಯನನ್ನು ಬಂಧಿಸಿ ಯಾವ ಗದ್ದಲಕ್ಕೆ ಅವಕಾಶ ಕೊಡವೆ, ಗುಪ್ತರೀತಿಯಾಗಿ ರತ್ನಕೂಟಕ್ಕೆ ಕರೆತರಬೇಕೆಂದು ಮುಕುಂದನಾಯಕನಿಗೆ ಆಜ್ಞೆ ಮಾಡಿದ. ಭುವನವಿಜಯಕ್ಕೆ ತಿರುಮಲ ವೆಂಕಟಾದ್ರಿಯರು ಬರುವ ಮುನ್ನವೇ ರಾಮರಾಯನು ತನ್ನ ಕಾರ್ಯವನ್ನು ಜಾಣ್ಮೆಯಿಂದ ಸಾಧಿಸಿಕೊಂಡಿದ್ದ.

ಇದನ್ನು ಸೇವಕರ ಮೂಲಕ ತಿಳಿದಾಗ ರಾಮರಾಯನು ತಮ್ಮನ್ನು ವಂಚಿಸಿದನೆಂಬುದು ಆ ಸಹೋದರರಿಗೆ ಅರಿವಾಯಿತು. ಅವರಿಗೆ ಭಯಂಕರ ಸಿಟ್ಟು ಬಂತು. ಅವರು ರತ್ನಕೂಟಕ್ಕೆ ಬಂದಾಗ ಅಲ್ಲಿ ಕಾದಿದ್ದುದು ರಾಮರಾಯನಲ್ಲ! ರಾಮರಾಯನ ಆಜ್ಞೆಯಂತೆ ಈ ಸಹೋದರರನ್ನು ಬಂಧಿಸಲು ಕಾದಿದ್ದ ಮುಕುಂದನಾಯಕನ ಅನುಚರರು. ರತ್ನಕೂಟಕ್ಕೆ ತಿರುಮಲ ವೆಂಕಟಾದ್ರಿಯರು ಬರುತ್ತಿದ್ದಂತೆ ಅಲ್ಲಿದ್ದ ಪಹರೆ ಸೈನಿಕರು ಆ ಸಹೋದರರ ಮೇಲೆ ಬಿದ್ದು

ನಿಮಿಷಾರ್ಧದಲ್ಲಿ ಅವರನ್ನು ನಿಶ್ಶಸ್ತ್ರಗೊಳಿಸಿ, ಬಂಧಿಸಿ ರತ್ನಕೂಟದ ನೆಲಮಾಳಿಗೆಯಲ್ಲಿದ್ದ ಸೆರಮನೆಯಲ್ಲಿಟ್ಟರು.

ಈ ವಾರ್ತೆಯನ್ನು ಎಷ್ಟೇ ಗೋಪ್ಯವಾಗಿರಿಸಿದರೂ ಕಾಳ್ಗಿಚ್ಚಿನಂತೆ ಅರಮನೆಯಲೆಲ್ಲಾ ಹಬ್ಬಿತು. ಜೀರ್ಣವಾಗಿ ಹಾಸಿಗೆ ಹಿಡಿದಿದ್ದ ತಿರುಮಲಾದೇವಿ ಇದನ್ನು ಕೇಳಿ "ದೇವರೇ! ಸಾಮ್ರಾಜ್ಯಕ್ಕೆ ಇನ್ನು ಯಾವ ವಿಪತ್ತು ಕಾದಿದೆಯೋ ಅದನೆಲ್ಲಾ ನೋಡಲು ನಾನು ಬದುಕಿರಬಾರದು!" ಎಂದು ಹೇಳಿ ಕಣ್ಣುಮುಚ್ಚಿ ಮಲಗಿದವಳು ಮೇಲೇಳಲಿಲ್ಲ. ದುರ್ಬಲ ಮನಸ್ಸಿನ ತಿರುಮಲಾದೇವಿಗೆ ಈ ವಾರ್ತೆ ಸಹಿಸಲಾಗದ ಘೆಟ್ಟಾಗಿತ್ತು. ಅವಳು ಮುಂದಾಗುವ ಸಾಮ್ರಾಜ್ಯದುರಂತವನ್ನು ನೋಡಲಾರದೆ ಇಹಲೋಕ ತ್ಯಾಗ ಮಾಡಿದ್ದಳು.

## ೧೦

ರಾಮರಾಯನು ಯಾವುದು ನಡೆಯಬಾರದೆಂದು ಆಶಿಸಿದ್ದನೋ ಅದೇ ನಡೆದಿತ್ತು. ಅವನಿಗೆ ತನ್ನ ತಮ್ಮಂದಿರನ್ನು ಇದಿರುಹಾಕಿಕೊಳ್ಳುವುದು ಇಷ್ಟವಿರಲಿಲ್ಲ. ಸಾಮ್ರಾಟ್ ಸದಾಶಿವರಾಯನೊಡನೆ ವೈಮನಸ್ಸು ಕಟ್ಟಿಕೊಳ್ಳುವುದು ಬೇಕಿರಲಿಲ್ಲ. ಆದರೆ ಇವುಗಳು ನಡೆದಿದ್ದುವು. ಅಷ್ಟೇ ಅಲ್ಲ, ಚಿನ್ನಾದೇವಿ ತನ್ನ ವಿರುದ್ಧ ಪೂರ್ವಾಭಿಪ್ರಾಯ ತಳೆಯುವಂತೆ ಆಗಿತ್ತು. ಎಲ್ಲಕ್ಕಿಂತ ಘೋರವಾದ ಪರಿಣಾಮವೆಂದರೆ ತಿರುಮಲಾದೇವಿಯ ಸಾವು. ಆಕೆ ರಾಮರಾಯನ ವಿಷಯದಲ್ಲಿ ಅಸಮಧಾನ ಹೊಂದಿ ತೀರಿಕೊಂಡಿದ್ದಳು.

ರಾಮರಾಯನು ಬಯಸಿದುದು ಒಂದು, ಆದುದು ಮತ್ತೊಂದು ತಮ್ಮಂದಿರೊಡನೆ ಆತ್ಮೀಯವಾಗಿ ಮಾತನಾಡಿ ತನ್ನ ನಿಲುವನ್ನು ಅವರಿಗೆ ತಿಳಿಸಿಕೊಟ್ಟು ಅವರ ಮನಸ್ಸಿನ ಪರಿವರ್ತನೆಮಾಡಿಕೊಳ್ಳಬೇಕೆಂದು ಅವನು ಬಯಸಿದ್ದ. ಆದರೆ ಅವರನ್ನೂ ಸೆರೆಹಿಡಿಯುವ ಪ್ರಸಂಗ ಬಂದಿತ್ತು. ಇದರಿಂದ ಸಹೋದರರ ನಡುವೆ ಇದುವರೆಗೆ ಇದ್ದ ಎಲ್ಲ ಪ್ರೀತಿವಿಶ್ವಾಸಗಳು ಸುಟ್ಟುಹೋಗಿ ದ್ವೇಷದ ಜ್ವಾಲೆ ಪ್ರಜ್ವಲಿಸುವಂತೆ ಆಗಿತ್ತು.

ರಾಮರಾಯನು ಸಹೋದರರ ವಿಷಯದಲ್ಲಿ ಅನೇಕ ಸ್ವಪ್ನಮಂದಿರಗಳನ್ನು ಕಟ್ಟಿದ್ದನು. ಎಂತಹ ಪ್ರಸಂಗದಲ್ಲೂ ತಾವು ಬೇರ್ಪಡುವುದಿಲ್ಲವೆಂದು ಭಾವಿಸಿದ್ದನು. ಅವರನ್ನು ಭರತಲಕ್ಷ್ಮಣರೆಂದೂ, ಭೀಮಾರ್ಜುನರೆಂದೂ ಹೆಮ್ಮೆಯಿಂದ ಕರೆಯುತ್ತಿದ್ದನು. ಅವರ ನೆರವು ಸಹಕಾರಗಳಿಂದ ತನ್ನ ಆದರ್ಶಗಳನ್ನು ಕಾರ್ಯಗತಗೊಳಿಸಿಕೊಳ್ಳಬೇಕೆಂದು ನಿಶ್ಚಯಿಸಿದ್ದನು. ವಿಜಯ

ನಗರ ಸಾಮ್ರಾಜ್ಯವು ಭದ್ರವಾದ ಬುನಾದಿಯ ಮೇಲೆ ನಿಲ್ಲಲು ಆ ಸಹೋದರರ ನೆರವು ಅತ್ಯಗತ್ಯವಾಗಿತ್ತು.

ಸಾಮ್ರಾಜ್ಯವನ್ನು ವಿಸ್ತರಿಸುವುದಷ್ಟೇ ಅದನ್ನು ಸುಭದ್ರವಾದ ಆಡಳಿತ ವ್ಯವಸ್ಥೆಗೊಳಪಡಿಸಿ ನಿಲ್ಲಿಸುವುದು ಕಠಿಣವಾದ ಕಾರ್ಯವೆಂದು ಅವನು ಅರಿತಿದ್ದನು. ಈ ಕಠಿಣ ಕಾರ್ಯದಲ್ಲಿ ಸ್ವಾಮಿನಿಷ್ಠರೂ, ಆಡಳಿತ ಕುಶಲರೂ, ನಂಬಿಕೆಗೆ ಪಾತ್ರರೂ ಅಧಿಕ ಸಂಖ್ಯೆಯಲ್ಲಿ ಬೇಕಾಗಿತ್ತು. ಸಾಮ್ರಾಜ್ಯದ ಹಿರಿಯ ಅಧಿಕಾರಿಗಳಿಗೆಲ್ಲಾ ರಾಮರಾಯನು ತನ್ನವರನ್ನೇ, ತನ್ನ ನಂಬಿಕೆಗೆ ಪಾತ್ರರಾದವರನ್ನೇ ನೇಮಿಸಿದ್ದ. ತನ್ನವರೇ ಆದ ತಿರುಮಲ, ವೆಂಕಟಾದ್ರಿ, ವಿಠಲ, ಕೊಂಡರಾಜ, ರಂಗಪತಿರಾಜಯ, ಮದ್ರಾಜುನಾಗಪ್ಪದೇವ ಮುಂತಾದ ಬಂಧುಗಳನ್ನೂ, ವಿಶ್ವನಾಥನಾಯಕ, ಇಕ್ಕೇರಿ ಸದಾಶಿವನಾಯಕ, ಮುಕುಂದನಾಯಕ ಮುಂತಾದ ಸ್ವಾಮಿನಿಷ್ಠ ಸೇವಕರನ್ನೂ ಮಾಂಡಲೀಕರನ್ನಾಗಿಯೂ ದಂಡನಾಯಕರನ್ನಾಗಿಯೂ ನೇಮಿಸಿದ್ದ. ಸಾಮ್ರಾಜ್ಯದಲ್ಲಿ ಒಕ್ಕೂಟವನ್ನೂ, ಭದ್ರತೆಯನ್ನೂ ನೆಲೆಗೊಳಿಸಿದ್ದ. ಈಗ ಈ ಸ್ವಾಮಿನಿಷ್ಠಸೇವಕರ ಶಿರೋಮಣಿಗಳಂತಿದ್ದ ತಿರುಮಲ, ವೆಂಕಟಾದ್ರಿಯರು ರಾಮರಾಯನಿಗೆ ವಿರೋಧವಾಗಿ ನಿಂತಿದ್ದರು. ಇವರ ಉದಾಹರಣೆಯನ್ನು ಇತರ ಸ್ವಾಮಿನಿಷ್ಠಸೇವಕರು ಅನುಸರಿಸಿದರೆ ವಿಜಯನಗರ ಸಾಮ್ರಾಜ್ಯ ಛಿದ್ರಛಿದ್ರವಾಗಿ ಒಡೆಯಲು ಬಹುಕಾಲ ಬೇಕಿರಲಿಲ್ಲ. ತನ್ನ ಸಹೋದರರು ತಿಳಿಯದೆ ಸಾಮ್ರಾಜ್ಯವನ್ನು ಎಂತಹ ಗಂಡಾಂತರಕ್ಕೆ ನೂಕಿದ್ದಾರೆ ಎಂಬುದು ಅವನಿಗೆ ಎಲ್ಲಕಿಂತ ಹೆಚ್ಚಿಗೆ ವ್ಯಥೆಗೆ ಕಾರಣವಾಗಿತ್ತು.

ಈಗಲೂ ತಮ್ಮಂದಿರನ್ನು ಕಂಡು ಅವರಿಗೆ ಬುದ್ಧಿಹೇಳಿ ಅವರ ವಿರೋಧವನ್ನು ಕಳೆದು ಅವರ ಮನವೊಲಿಸಿಕೊಳ್ಳಬಹುದೆಂಬ ದೂರದ ಆಸೆಯಿಂದ ರಾಮರಾಯನು ಸೆರೆಯಲ್ಲಿದ್ದ ತಮ್ಮಂದಿರನ್ನು ಬಿಡುಗಡೆಮಾಡಿ, ಅವರನ್ನು ಬಳಿಗೆ ಕರೆಸಿಕೊಂಡು ಅವರ ವರ್ತನೆಯಿಂದ ತಾನೆಷ್ಟು ನೊಂದಿರುವನೆಂಬುದನ್ನು ಮನಕರಗುವಂತೆ ಹೇಳಿದನು.

"ನಾನು ನಿಮ್ಮ ವಿಷಯದಲ್ಲಿ ಅನೇಕ ಸ್ವಪ್ನ ಮಂದಿರಗಳನ್ನು ಕಟ್ಟಿದ್ದೆ. ನಿಮ್ಮ ಬೆಂಬಲದಿಂದ ಅಖಂಡ ಹಿಂದೂಸಾಮ್ರಾಜ್ಯದ ಕನಸು ಕಟ್ಟಿದ್ದೆ. ವಿಜಯನಗರ ಸಾಮ್ರಾಜ್ಯವನ್ನು ಭೂಮಂಡಲೈಕ ಚಕ್ರಾಧಿಪತ್ಯವಾಗಿಮಾಡಿ ಹಿಂದೂಧರ್ಮಸಂಸ್ಕೃತಿ, ನಾಗರಿಕತೆಗಳ ರಕ್ಷಾಮಣಿಯಾಗಿಮಾಡುವ ಮಹದಾಶೆಯನ್ನು ತಳೆದಿದ್ದೆ. ಈ ಎಲ್ಲ ಬೃಹದ್ ಯೋಜನೆಗಳ ಸಾಧನೆಯಲ್ಲಿ ನೀವು ನನ್ನೊಂದಿಗೆ ಸಹಕರಿಸುವಿರೆಂದು ನಂಬಿದ್ದೆ. ನಿಮ್ಮ ವಿರೋಧದಿಂದ ನನಗೆ ಉಂಟಾಗಿರುವ ನೋವು ಊಹಿಸಲಾರಿರಿ! ಈಗಲೂ ಕಾರ್ಯ ಮಿಂಚಿಲ್ಲ. ನಿಮ

ವರ್ತನೆಗೆ ನೀವು ಪಶ್ಚಾತ್ತಾಪಪಡುವುದಾದರೆ ನಿಮ್ಮನ್ನು ಕ್ಷಮಿಸಲು ಸಿದ್ಧನಾಗಿದ್ದೇನೆ. ಹಿಂದೆ ನಡೆದುದನ್ನೆಲ್ಲಾ ದುಸ್ವಪ್ನವೆಂದು ಮರೆತುಬಿಡಲು ಸಿದ್ಧನಾಗಿದ್ದೇನೆ!" ಎಂದು ಹೇಳಿದ.

ಈ ಮಾತು ಆ ಸಹೋದರರ ಮನಸ್ಸಿನ ಮೇಲೆ ನಿರೀಕ್ಷಿಸಿದ ಪರಿಣಾಮ ಮಾಡದೇ ಹೋಗಲಿಲ್ಲ. ತಿರುಮಲ ವೆಂಕಟಾದ್ರಿಯರಿಬ್ಬರೂ ರಾಮರಾಯನ ಕಾಲುಗಳ ಮೇಲೆ ಬಿದ್ದು,

"ಅಣ್ಣಾ ಜಿ! ನಾವು ದುಡುಕಿದ್ದೇವೆ. ಪಿತೃಸಮಾನವಾಗಿದ್ದ ನಿಮಗೆ ದ್ರೋಹ ಬಗೆದಿದ್ದೇವೆ. ನಮ್ಮ ತಪ್ಪುಗಳನ್ನು ಕ್ಷಮಿಸಿ, ನಮ್ಮನ್ನು ಉದ್ಧರಿಸಬೇಕು!" ಎಂದು ಪಶ್ಚಾತ್ತಾಪದಿಂದ ಬಡಬಡಿಸಿದರು.

ರಾಮರಾಯನಿಗೆ ಈ ಮಾತು ಕೇಳಿ ಹಾಲು ಕುಡಿದಷ್ಟು ಸಂತೋಷವಾಯಿತು. ಕಡೆಗೂ ತನ್ನ ತಮ್ಮಂದಿರು ತನ್ನನ್ನು ಅರ್ಥಮಾಡಿಕೊಂಡರಲ್ಲಾ ಎಂದು ಸಂತೋಷಾತಿರೇಕದಲ್ಲಿ ಆನಂದಬಾಷ್ಪ ಸುರಿಸುತ್ತಾ, ಅವರಿಬ್ಬರನ್ನು ಮೇಲೆತ್ತಿ ಅವರನ್ನು ಸ್ನೇಹದಿಂದ ಮೈತಡವಿ, ಅವರ ಎಲ್ಲ ಅಪರಾಧಗಳನ್ನೂ ಮರೆತಿರುವುದಾಗಿ ಹೇಳಿದನು. ಇದನ್ನು ಕೃತಿಯಲ್ಲಿ ತೋರಲೆಂಬಂತೆ ಅವರ ಕೈಲಿ ವಿಜಯನಗರ ಸೈನ್ಯವನ್ನು ಕೊಟ್ಟು ಇಬ್ರಾಹಿಂಖಾನನಿಗೆ ಕೊಟ್ಟಿದ್ದ ವಚನದಂತೆ ಅವನು ಕಳುಹಿಸಿಕೊಟ್ಟನು.

ತಿರುಮಲ ವೆಂಕಟಾದ್ರಿಯರು ಸಂತೋಷದಲ್ಲೇ ಸೈನ್ಯ ಸಮೇತ ಹೊರಟರು. ಎಲ್ಲವೂ ಅವರ ಹಂಚಿಕೆಯಂತೆ ನಡೆದಿತ್ತು. ಅವರು ವಿಜಯನಗರದ ಗಡಿಯನ್ನು ದಾಟುತ್ತಲೇ ನೇರ ಗೋಲ್ಕಂಡಕ್ಕೆ ಹೋಗುವ ಬದಲು, ಬೇರೆ ದಾರಿ ಹಿಡಿದು ಆದವಾನಿಗೆ ಬಂದು ಅಲ್ಲಿ ಸೈನ್ಯಸಮೇತ ಬೀಡುಬಿಟ್ಟರು. ಅಲ್ಲಿನ ಕೋಟೆಯೊಳಗೆ ಸೇರಿಕೊಂಡು ಅದನ್ನು ಭದ್ರಪಡಿಸಿ ರಾಮರಾಯನಿಗೆ ಪತ್ರ ಬರೆದು ಅವನ ನಿರಂಕುಶಾಡಳಿತದ ದಬ್ಬಾಳಿಕೆಯನ್ನು ಎದುರಿಸಲು ತಾವು ದಂಗೆ ಎದ್ದಿರುವುದಾಗಿ ತಿಳಿಸಿದರು. ಈಗ ತಾವು ಸ್ವತಂತ್ರರೆಂದೂ, ರಾಮರಾಯನನ್ನು ಅಧಿಕಾರಚ್ಯುತನನ್ನಾಗಿ ಮಾಡಿ, ಸಿಂಹಾಸನದಲ್ಲಿ ಮತ್ತೆ ಸದಾಶಿವರಾಯನನ್ನು ಕೂಡಿಸುವುದು ತಮ್ಮ ವಿದ್ರೋಹದ ಗುರಿ ಎಂದೂ ಸಾರಿಹೇಳಿದ್ದರು. ಅದರಂತೆ ಆದವಾನಿ ಪ್ರಾಂತ್ಯವನ್ನೆಲ್ಲಾ ಆಕ್ರಮಿಸಿ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಅಕ್ಕಪಕ್ಕದ ಮಾಂಡಲೀಕರನ್ನೂ, ಸಾಮಂತರನ್ನೂ ರಾಮರಾಯನ ಎದುರು ಎತ್ತಿಕಟ್ಟಲು ತೊಡಗಿದರು.

ಈಗ ಅವರ ಬಳಿ ಸಾಕಷ್ಟು ಶಕ್ತವಾದ ಸೈನ್ಯವಿದ್ದುದಲ್ಲದೆ, ಆದವಾನಿ ಅವರದಾಗಿತ್ತು. ರಾಮರಾಯನ ವಿಷಯದಲ್ಲಿ ಮನಸ್ಸು ಕೆಡಿಸಿಕೊಂಡಿದ್ದ ಅನೇಕ

ಮಾಂಡಲೀಕರು ಅವನಿಗೆ ನೆರವಾಗಲು ಮುಂದೆ ಬಂದರು. ಕೆಲವರು ಸೈನ್ಯವನ್ನೂ ಮತ್ತೆ ಕೆಲವರು ಹಣವನ್ನೂ ಕಳುಹಿಸಿಕೊಟ್ಟರು. ಹೀಗೆ ಎಲ್ಲೆಲ್ಲೂ ಈ ವಿದ್ರೋಹಕ್ಕೆ ಸ್ವಾಗತವೇ ದೊರೆಯಿತು. ಈ ಸುದ್ದಿ ಮಿಂಚಿನವೇಗದಲ್ಲಿ ಬಂದು ರಾಮರಾಯನನ್ನು ಮುಟ್ಟಿತು. ತಮ್ಮಂದಿರು ತನ್ನನ್ನು ಹೀಗೆ ಮೋಸಗೊಳಿಸಬಹದೆಂದು ರಾಮರಾಯನು ಊಹಿಸಿರಲಿಲ್ಲ. ತಾನು ಅವರನ್ನು ಸವಿಮಾತಿನಿಂದ ವಂಚಿಸಿದಂತೆ ಅವರೂ ಅದೇ ರೀತಿಯಲ್ಲಿ ವಂಚಿಸಿ, ತಮ್ಮ ಕಾರ್ಯ ಸಾಧಿಸಿಕೊಂಡರೆಂದು ತಿಳಿದಾಗ ಅವರ ಮೇಲೆ ಭಯಂಕರ ಕೋಪ ಬಂದಿತು. ಅವರ ವಿದ್ರೋಹವನ್ನು ಮೊಳಕೆಯಲ್ಲಿ ಹೊಸೆಯಲು ನಿರ್ಧರಿಸಿ ಸದಾಶಿವನಾಯಕನ ಕೈಲಿ ದೊಡ್ಡ ಸೈನ್ಯವೊಂದನ್ನು ಕೊಟ್ಟು ಕಳುಹಿಸಿದನು. ಮತ್ತೊಂದು ಸೈನ್ಯದೊಡನೆ ತಾನು ಇಬ್ರಾಹಿಂಖಾನನಿಗೆ ಕೊಟ್ಟಿದ್ದ ವಚನವನ್ನು ಉಳಿಸಿಕೊಳ್ಳಲು ಗೋಲ್ಕಂಡಕ್ಕೆ ಹೊರಟನು.

ಗೋಲ್ಕಂಡದ ಬಳಿ ಇಬ್ರಾಹಿಂಖಾನನು ರಾಮರಾಯನಿಗಾಗಿ ಎದುರು ನೋಡುತ್ತಿದ್ದನು. ರಾಮರಾಯನ ನೆರವಿಲ್ಲದೆ ಅವನು ಗೋಲ್ಕಂಡದ ಮೇಲೆ ದಾಳಿ ಇಡುವಂತೆ ಇರಲಿಲ್ಲ. ಕೋಟೆಯ ಬಳಿಗೆ ಮುಸ್ತಫಖಾನನು ಸುಬಾನ್ ಕೂಲಿಯನ್ನು ಸಿಂಹಾಸನದಿಂದ ಉರುಳಿಸಿ, ಉನಿಲ್‌ಮುಲ್ಕನನ್ನು ಸೆರೆಹಿಡಿದು ಇಬ್ರಾಹಿಂಖಾನನ ಮಾರ್ಗವನ್ನು ನಿಷ್ಕಂಟಕಗೊಳಿಸಲು ಮಾಡಬೇಕಾದ ಪಿತೂರಿಯ ಸಿದ್ಧತೆ ಮುಗಿದಿತ್ತು. ವಿಜಯನಗರದ ಸೈನ್ಯದೊಂದಿಗೆ ಅವರು ಗೋಲ್ಕಂಡದ ಮೇಲೆ ದಾಳಿ ಇಟ್ಟ ಸಮಯದಲ್ಲಿ ಕೋಟೆಯ ಬಾಗಿಲನ್ನು ತೆರೆದು ಇಬ್ರಾಹಿಂಖಾನನನ್ನು ಸುಲ್ತಾನನನ್ನಾಗಿ ಸ್ವಾಗತಿಸಲು ಮುಸ್ತಫಖಾನನು ಸಂಚುಮಾಡಿದನು. ಅವನು ರಾಮರಾಯನಿಗಾಗಿ ಕಾದಿದ್ದನು. ಆದರೆ ವಿಜಯನಗರದಲ್ಲಿ ಇಷ್ಟೆಲ್ಲ, ಅನಿರೀಕ್ಷಿತ ಘಟನೆಗಳು ನಡೆದಿದ್ದುದರಿಂದ ರಾಮರಾಯನು ಸೈನ್ಯಸಮೇತ ಬರುವುದು ನಿಧಾನವಾಯಿತು.

ಗೋಲ್ಕಂಡದ ಮುತ್ತಿಗೆ ಆರಂಭವಾದೊಡನೆ ಉನಿಲ್‌ಮುಲ್ಕನು ಸೈನಿಕರ ಸಂಚಿಗೆ ಸಿಕ್ಕಿ ಸೆರೆಯಾಳಾದನು. ಬಾಲರಾಜ ಸುಬಾನ್‌ಕೂಲಿಯನ್ನು ಯಾರೋ ಕೊಲೆಪಾತಕರು ಕೊಲೆಮಾಡಿಬಿಟ್ಟರು. ಕೋಟೆಯು ಯುದ್ಧವಿಲ್ಲದೆಯೇ ಇಬ್ರಾಹಿಂಖಾನನ ವಶವಾಯಿತು. ಸೈನಿಕರು ಅವನನ್ನು ಜಯಕಾರಗಳಿಂದ ಸ್ವಾಗತಿಸಿ ಸಿಂಹಾಸನದ ಮೇಲೆ ಕೂಡಿಸಿ, ಅವನನ್ನು ಸುಲ್ತಾನನನ್ನಾಗಿ ಮಾಡಿದರು. ಇಬ್ರಾಹಿಂಖಾನನು ಇಬ್ರಾಹಿಂ ಕುತುಬ್‌ಷಹನಾದನು.

ನೂತನ ಸುಲ್ತಾನನು ಅಧಿಕಾರ ಪ್ರಾಪ್ತವಾದ ತರುಣದಲ್ಲಿ ತನ್ನ ಯಶ

ಸ್ಸಿಗೆ ಕಾರಣರಾದ ಎಲ್ಲ ಮಿತ್ರರಿಗೆ ಒಂದು ಭಾರಿ ಔತಣವನ್ನು ಕೊಟ್ಟನು. ಇದರಲ್ಲಿ ರಾಮರಾಯ, ಮುಸ್ತಫಖಾನ ಮುಂತಾದ ಹಿತೈಷಿಗಳು ಭಾಗವಹಿಸಿದ್ದರು. ಒಂದು ಕಡೆ ಪಾನಕೂಟ ಇನ್ನೊಂದು ಕಡೆ ನೃತ್ಯ, ಮತ್ತೊಂದು ಕಡೆ ಸಂಗೀತ. ಹೀಗೆ ಅದು ಗೋಲ್ಕೊಂಡದ ಕಲಾವಿದರ ಅಪೂರ್ವ ತ್ರಿವೇಣಿ ಸಂಗಮವಾಗಿತ್ತು. ಅಂದಿನ ಸಂತೋಷಕೂಟದಲ್ಲಿ ರಾಮರಾಯನು ಪಾಲುಗೊಂಡು, ಗೆಳೆಯರ ಸಂತೋಷದಲ್ಲಿ ಬೆರೆತಿದ್ದರೂ ಅವನು ಮಾತ್ರ ಅನ್ಯಮನಸ್ಕನಾಗಿದ್ದನು. ಇದನ್ನು ಅರಿತ ಇಬ್ರಾಹಿಂಖಾನನು ರಾಮರಾಯನ ಬಳಿಗೆ ಬಂದು ಅವನ ವಿಮನಸ್ಕತೆಯ ಕಾರಣವನ್ನು ಕೇಳಿಕೊಂಡನು.

"ಪ್ರಭುಗಳು ಏನನ್ನೋ ಕುರಿತು ಚಿಂತಿಸುತ್ತಿದ್ದಂತೆ ಇದೆ. ಅದೇನೆಂದು ತಿಳಿಸಿದರೆ ಅದನ್ನು ನಿವಾರಿಸಲು ನನ್ನಿಂದಾದ ಪ್ರಯತ್ನ ಮಾಡುತ್ತೇನೆ!"

"ಅಂತಹ ಯಾವ ಚಿಂತೆಯೂ ನನಗೆ ಇಲ್ಲ ಇಬ್ರಾಹಿಂಖಾನರೇ!" ಎಂದ ಕೃತಕ ಸಮಾಧಾನವನ್ನು ತರಲೆತ್ನಿಸುತ್ತ.

"ನೀವು ಈ ದ್ರಾಕ್ಷಾರಸವನ್ನ ಸೇವಿಸಲೇ ಇಲ್ಲ! ಈ ದ್ರಾಕ್ಷಾರಸವನ್ನು ಇಂದಿನ ಪಾನಕೂಟಕ್ಕೆಂದೇ ತರಿಸಲಾಗಿದೆ. ಇದು ಇನ್ನೂರುವರ್ಷಗಳಷ್ಟು ಹಳೆಯದಂತೆ. ಫ್ರಾನ್ಸ್ ದೇಶದ ಯಾವುದೋ ಹಳ್ಳಿಯಿಂದ, ಪೋರ್ಚುಗೀಸ್ ವ್ಯಾಪಾರಿಗಳು ಮೂಲಕ ತರಿಸಿದ್ದುದು! ಇದರ ಸವಿಯನ್ನು ನೋಡಲೇ ಇಲ್ಲ!" ಎಂದು ಇಬ್ರಾಹಿಂಖಾನನು ರಾಮರಾಯನ ಸುವರ್ಣಪಾತ್ರೆಯಲ್ಲಿ ಕೊಂಚ ಮಧುವನ್ನು ತುಂಬಿದನು. ರಾಮರಾಯನು ಒಂದು ಗುಟುಕು ಕುಡಿದು "ಹೌದು ಉತ್ತಮವಾಗಿದೆ!" ಎಂದು ಹೇಳಿ ಮೊದಲಿನಂತೆ ಮೌನಧರಿಸಿದನು.

"ಈ ಹಣ್ಣುಗಳನ್ನು ನೀವು ರುಚಿನೋಡಲೇ ಇಲ್ಲ ಈ ಸೇಬು ಕಾಶ್ಮೀರದ್ದು. ಅಲ್ಲಿಂದಲೇ ತರಿಸಲಾಗಿದೆ. ಈ ಸೀಬೆ – ಅಹಮದಾಬಾದಿನದು. ಈ ಕಿತ್ತಳೆ ನೀಲಗಿರಿಯದು. ಇದು ಕಾಬೂಲ ದ್ರಾಕ್ಷಿ. ಇದು ಕಾಂದಹಾರಿನ ಕಲ್ಲಂಗಡಿ. ಇದು ಅರಬ್ಬೀ ದೇಶದ ಖರ್ಜೂರ" ಎಂದು ಒಂದೊಂದೇ ಹಣ್ಣನ್ನು ಸುವರ್ಣ ಪಾತ್ರೆಯಿಂದ ರಾಮರಾಯನ ಮುಂದೆ ಇಟ್ಟನು.

ರಾಮರಾಯನು ಅವುಗಳಲ್ಲಿ ಒಂದೆರಡು ಹಣ್ಣುಗಳನ್ನು ರುಚಿನೋಡಿ ಉಳಿದವನ್ನು ಹಾಗೇ ಇಟ್ಟನು.

"ನಿಮಗೆ ಹಣ್ಣುಗಳು ಬೇಸರವಾದರೆ ಬನ್ನಿ, ಸಂಗೀತವನ್ನಾದರೂ ಕೇಳಿ! ನಿಮಗೆ ಉತ್ತರಾದಿ ಸಂಗೀತ ಹಿಡಿಸುವುದೋ ಇಲ್ಲವೋ ತಿಳಿಯದು. ಆದರೆ ನಮ್ಮ ರೋಶನಬೇಗಂ ಸಂಗೀತವೆಂದರ ದಿಲ್ಲಿ ಸುಲ್ತಾನರೂ ಬಾಯಿ ಬಿಡುತ್ತಾರಂತೆ. ಖ್ಯಾಲಗಳನ್ನ ಅವಳ ಬಾಯಿಂದ ಕೇಳಬೇಕು. ಹಿಂದೂಸ್ತಾನಿ ಸಂಗೀತ

ದಲ್ಲಿ ನಮ್ಮ ಬೇಗಂ ಅಸಾಧಾರಣ ಪಂಡಿತೆ. ಅವಳ ರಾಗಾಲಾಪನೆ ನೀವು ಕೇಳಿದರೆ ಮೂರು ದಿನ ಊಟ ತಿಂಡಿಗಳನ್ನ ಬಿಟ್ಟು ಕೇಳುತ್ತೀರಿ! ಇವಳನ್ನ ಆಸ್ಥಾನದ ನಾಯಕಿಯನ್ನಾಗಿ ಮಾಡಿಕೊಳ್ಳಲು ಬಹಮನಿ ಸುಲ್ತಾನರಲ್ಲಿ ಹಿಂದೆ ಯುದ್ಧಗಳೇ ನಡೆದುವಂತೆ. ಆಕೆಯ ತವರು ಮನೆ ಗೋಲ್ಕಂಡವಾಗಿರುವುದರಿಂದ ಅವಳು ಇಲ್ಲೇ ನಿಂತಿದ್ದಾಳೆ. ಇದು ನಮ್ಮ ಸೌಭಾಗ್ಯ."

ರಾಮರಾಯನಿಗೆ ರೋಶನ ಬೇಗಮಳ ಸಂಗೀತವು ಬೇರೆ ಸಮಯದಲ್ಲಿ ಆಗಿದ್ದರೆ ಪ್ರಿಯವಾಗುತ್ತಿತ್ತೋ ಏನೋ. ಸದ್ಯದ ಮನಸ್ಸಿನ ಸ್ಥಿತಿಯಲ್ಲಿ ಅವನಿಗೆ ಸಂಗೀತವು ಕಿರಕುಳವೇ ಆಯಿತು. ಅವನು ಕೇಳುತ್ತ ಕೇಳುತ್ತ – ಬೇರೆಡೆಗೆ ಹೊರಳಿದ್ದನು. ರಾಮರಾಯನು ಸಂಗೀತ ಪ್ರೇಮಿ ಎಂದು ತಿಳಿದಿದ್ದ ಇಬ್ರಾಹಿಂಖಾನನಿಗೆ ನಿಜಕ್ಕೂ ಸೋಜಿಗವಾಯಿತು. ಅವನು ರಾಮರಾಯನನ್ನು ಹಿಂಬಾಲಿಸಿ, ನರ್ತನ ನಡೆಯುತ್ತಿದ್ದ ಕಡೆಗೆ ಬಂದನು.

" ಇವಳು ಮೆಹರ್‌ಜಾನಳೆಂಬ ರಾಜನರ್ತಕಿ. ಕಥಕನೃತ್ಯದಲ್ಲಿ ಅಸಾಧಾರಣ ಪಾಂಡಿತ್ಯ ಪಡೆದಿದ್ದಾಳೆ! ಇವಳು ಕುಣಿಯುವುದನ್ನು ನೋಡಲು ರಾಜಮಹಾರಾಜರು ಹಾತೊರೆಯುತ್ತಿದ್ದಾರೆ. ನಮ್ಮ ಅದೃಷ್ಟದಿಂದ ಇವಳು ನಮ್ಮ ಆಸ್ಥಾನವನ್ನು ಬಿಟ್ಟು ಬೇರೆಲ್ಲಿಗೂ ಹೋಗಿಲ್ಲ. ಈಕೆಗೆ ದಕ್ಷಿಣಾದಿ ನೃತ್ಯವೂ ಭರತನಾಟ್ಯವೂ ಚೆನ್ನಾಗಿ ಬರುತ್ತದೆ. ಇವಳು ದಕ್ಷಿಣದಲ್ಲಿ ನಾಲ್ಕಾರು ವರ್ಷವಿದ್ದು ಅವುಗಳನ್ನು ಗುರುಗಳಿಂದ ಕಲಿತಿದ್ದಾಳೆ!" ಎಂದು ಹೇಳಿದ. ಇಬ್ರಾಹಿಂಖಾನನ ಇಚ್ಛೆಯಂತೆ ಅವಳು ಭರತನಾಟ್ಯದ ನರ್ತನವೊಂದನ್ನೂ ಅಭಿನಯಿಸಿದಳು.

ಆರಂಭದಲ್ಲಿ ಇದು ರಾಮರಾಯನಿಗೆ ಪ್ರಿಯವಾದಂತೆ ಕಂಡರೂ ಮುಂದೆ ಏಕೋ ಬೇಸರವಾಯಿತು.

" ಸುಲ್ತಾನರೇ, ನನ್ನನ್ನು ನೀವು ತಪ್ಪುತಿಳಿಯದಿದ್ದರೆ ಒಂದು ಕೋರಿಕೆ. ನನಗೆ ಇಂದು ಈ ಮನರಂಜನೆಗಳೊಂದೂ ಬೇಡವಾಗಿದೆ. ನನ್ನ ಪಾಲಿಗೆ ನಾನು ಎಲ್ಲಾದರೂ ಏಕಾಂತ ಸ್ಥಳದಲ್ಲಿ ಇರಬೇಕೆಂದೆನಿಸುತ್ತದೆ. ನಿಮಗೆ ಬೇಸರವಿಲ್ಲದಿದ್ದರೆ ನಾನು ನನ್ನ ಬಿಡಾರಕ್ಕೆ ಹಿಂದಿರುಗುತ್ತೇನೆ!"

" ಏಕೆ ಪ್ರಭು! ಇಂದು ನಿಮಗೆ ಇಷ್ಟು ಬೇಸರ? ಸಂಗೀತ ನರ್ತನಗಳೂ ಬೇಸರವಾಗುವಂತಹ ಅದಾವ ಚಿಂತೆ ತಲೆಯನ್ನು ತುಂಬಿದೆ? ಅದೇನೆಂದು ನೀವು ಅಪ್ಪಣೆ ಕೊಡಿಸದಿದ್ದರೆ ನಾನು ನಿಮ್ಮನ್ನು ಬಿಟ್ಟು ಕದಲುವುದೇ ಇಲ್ಲ."

" ನನಗೆ ಯಾವ ಚಿಂತೆಯೂ ಇಲ್ಲ. ಯಾಕೋ ಮನಸ್ಸುಗಳಿಗೆ ಒಂದು ಬಗೆಯ ಮಂಕು ಕವಿದಿದೆ ಅಷ್ಟೇ!"

"ನನ್ನಿಂದ ನಿಮಗೆ ಏನಾದರೂ ಅಪಚಾರವಾಗಿದ್ದರೆ ದಯವಿಟ್ಟು ಕ್ಷಮಿಸಿ!"

"ಛೀ ನಿಮ್ಮಿಂದ ಯಾವ ಅಪಚಾರವೂ ನಡೆದಿಲ್ಲ. ನೀವು ನಮ್ಮ ಮಿತ್ರರು. ನಮ್ಮ ಸಲುವಾಗಿ ಇಷ್ಟೆಲ್ಲ ತೊಂದರೆ ತೆಗೆದುಕೊಂಡಿದ್ದೀರಿ. ಇದಕ್ಕಾಗಿ ನಾನು ನಿಮಗೆ ಕೃತಜ್ಞನಾಗಿರಬೇಕು!"

"ಹಾಗಾದರೆ ನೀವೇಕೆ ಇಂದು ಒಂದು ತರಹ ಇದ್ದೀರಿ! ನಿಮಗೆ ಪ್ರಾಣ ಪ್ರಿಯವಾಗಿದ್ದ ಸಂಗೀತ ನರ್ತನಗಳೇಕೆ ಇಂದು ನಿಮಗೆ ಬೇಸರವಾಗಿವೆ? ನಿಮ್ಮಲ್ಲಿ ಎಂದಿನ ಉತ್ಸಾಹ ಇಂದು ಕಾಣುತ್ತಿಲ್ಲ. ಯಾವುದೋ ಚಿಂತೆ ನಿಮ್ಮನ್ನ ಕೊರೆಯುತ್ತಿದೆ. ಈ ಮಾತಂತೂ ಖಂಡಿತ. ನನ್ನನ್ನ ನೀವು ಮೋಸಗೊಳಿಸಲಾರಿರಿ! ಇರುವ ವಿಷಯವನ್ನು ನನ್ನಲ್ಲಿ ಮರೆಮಾಚದೆ ತಿಳಿಸಬೇಕು!" ಎಂದು ಆತ್ಮೀಯವಾಗಿ ಹೇಳಿದ ಇಬ್ರಾಹಿಂಖಾನ್.

"ಇದು ಕೇವಲ ನನ್ನ ಗೃಹಕೃತ್ಯದ ಸಂಗತಿ! ನನ್ನ ಕಾಷ್ಟಾವ್ಯಸನಗಳನ್ನೇಕೆ ನಿಮಗೆ ಹೊರಿಸಬೇಕು!" ಎಂದು ವಿಷಣ್ಣನಾಗಿ ನಕ್ಕ ರಾಮರಾಯ.

"ನೀವು ಹೀಗೆ ತಿಳಿಯಬಾರದು. ನಾನು ಇದಕ್ಕೂ ನೂರ್ಮಡಿ ಚಿಂತೆಯನ್ನು ತಲೆಯಲ್ಲಿ ತುಂಬಿಕೊಂಡು ನಿಮ್ಮ ಬಳಿಗೆ ಆಶ್ರಯಕ್ಕೆ ಬಂದಿದ್ದೆ. ಅದನ್ನು ನೀವು ನಿವಾರಿಸಿದಿರಿ! ಇದನ್ನು ನಾನು ಮರೆಯಬಲ್ಲೆನೆ? ನಾನು ಇಂದು ಸುಲ್ತಾನನಾಗಿದ್ದರೆ ಅದು ನಿಮ್ಮ ನೆರವಿನಿಂದ. ನಿಮ್ಮಿಂದ ನನಗೆ ಆಗಿರುವ ಸಹಾಯಕ್ಕೆ ಪ್ರತಿಯಾಗಿ ನಾನು ಕಿಂಚಿತ್ ಸಹಾಯ ಮಾಡಬಲ್ಲವನಾದರೆ ನಾನು ನಿಜವಾಗಿಯೂ ಭಾಗ್ಯಶಾಲಿ! ನೀವು ನನ್ನೊಂದಿಗೆ ಯಾವ ಸಂಗತಿಯನ್ನೂ ಬಚ್ಚಿಡಬಾರದು. ನಾನು ನಿಮ್ಮ ವಿಶ್ವಾಸಕ್ಕೆ ಪಾತ್ರನಾದ ಗೆಳೆಯನಾಗಿದ್ದರೆ ನಿಮ್ಮ ಚಿಂತೆಯ ಕಾರಣವನ್ನು ನೀವು ನನ್ನಲ್ಲಿ ಹೇಳಲೇ ಬೇಕು!" ಎಂದು ಇಬ್ರಾಹಿಂಖಾನನು ಆಗ್ರಹಪಡಿಸಿದ.

ಆಗ ರಾಮರಾಯನು ನಿರ್ವಾಹವಿಲ್ಲದೆ ಬಾಯಿಬಿಡಬೇಕಾಯಿತು!

"ನೀವು ಪರಮಾಪ್ತ ಮಿತ್ರರಾಗಿರುವುದರಿಂದ ನಿಮಗೆ ಈ ಸಂಗತಿಯನ್ನು ಹೇಳುತ್ತಿದ್ದೇನೆ. ನನ್ನನ್ನು ತಪ್ಪಾಗಿ ತಿಳಿದು ನನ್ನ ಸಹೋದರರು ನನ್ನ ಮೇಲೆ ದಂಗೆ ಎದ್ದಿರುವ ಸಂಗತಿ. ಅದನ್ನು ಅಡಗಿಸಲು ಸದಾಶಿವನಾಯಕನೊಡನೆ ಸೈನ್ಯವನ್ನು ಕಳುಹಿಸಿದ ಸಂಗತಿ ನಿಮಗೆ ತಿಳಿದಿದೆ. ಇಂದು ಸಂಜೆ— ಸಂತೋಷ ಕೂಟ ಆರಂಭವಾಗುವ ಮೊದಲು ಅದವಾನಿಯಿಂದ ಚಾರನೊಬ್ಬನು ಒಂದು ಭಯಂಕರವಾದ ವಾರ್ತೆಯನ್ನು ತಿಳಿಸಿದನು. ಅದು ಕೇಳಿದ ಲಾಗಾಯಿತು ನನಗೆ ಏನು ಮಾಡಬೇಕೆಂಬುದು ತಿಳಿಯದಾಗಿದೆ."

"ಆ ಚಾರನು ಏನು ಸುದ್ದಿ ಹೇಳಿದನು?"

"ಆದವಾನಿಯ ಮೇಲೆ ದಾಳಿ ಇಡಲು ಹೋಗಿದ್ದ ವಿಜಯನಗರ ಸೈನ್ಯವನ್ನು ನಡುದಾರಿಯಲ್ಲಿ ತಿರುಮಲ ವೆಂಕಟಾದ್ರಿಯರು ಸುತ್ತುಗಟ್ಟಿ ಸೋಲಿಸಿ ಓಡಿಸಿದರಂತೆ. ಸದಾಶಿವನಾಯಕನು ಕೈಸೆರೆಯಾದನಂತೆ. ನನ್ನ ಸೈನ್ಯದ ಬಹು ಭಾಗ ಈಗ ಅವರಿಗೆ ಶರಣಾಗತವಾಗಿದೆಯಂತೆ; ಇವರೂ ವಿದ್ರೋಹಿಗಳ ಪಕ್ಷಕ್ಕೆ ಸೇರಿದ್ದಾರಂತೆ!"

"ಈ ಅಲ್ಪ ಸಂಗತಿಗಾಗಿ ನೀವು ಇಷ್ಟು ಆಲೋಚಿಸಬೇಕೆ ಪ್ರಭು! ನನಗೆ ಒಂದು ಮಾತು ತಿಳಿಸಿದರೆ, ಆ ದ್ರೋಹಿಗಳನ್ನು ಸೆರೆಹಿಡಿದು ತಂದು ನಿಮ್ಮ ಪಾದಗಳ ಮೇಲೆ ಕೆಡಹುತ್ತೇನೆ. ನಾನು ನಿಮ್ಮಿಂದ ಉಪಕೃತನಾದುದಕ್ಕೆ ಈ ಪ್ರತ್ಯುಪಕಾರಮಾಡುವ ಅವಕಾಶವನ್ನು ನೀವು ನನಗೆ ಕೊಡಬೇಕು! ನೀವು ಈ ಸಣ್ಣ ವಿಷಯದ ಬಗ್ಗೆ ಇಷ್ಟು ಕೊರಗುವುದೆ? ನಿಮ್ಮ ಕೊರಗನ್ನು ಕಳೆಯದ ಮೇಲೆ ಸ್ನೇಹಿತರಾಗಿ ನಾನು ಬದುಕಿದ್ದೂ ಏನು ಪ್ರಯೋಜನ? ನೀವು ನನಗೆ ಅಪ್ಪಣೆ ಮಾಡಿ! ಇನ್ನು ಎಂಟು ದಿನಗಳಲ್ಲಿ ನಿಮ್ಮ ಸಹೋದರರನ್ನು ಬಂಧಿಸಿ ತಂದು ನಿಮ್ಮ ಪಾದಗಳ ಮೇಲೆ ಕೆಡಹುತ್ತೇನೆ! ನನ್ನ ಮಾತು ಅಲ್ಲಾನ ಆಣೆಗೂ ಸತ್ಯ!" ಎಂದು ವೀರೋಚಿತವಾದ ಪ್ರತಿಜ್ಞೆಯನ್ನು ಮಾಡಿದನು ಇಬ್ರಾಹಿಂಖಾನ್.

ಇದನ್ನು ಕೇಳಿ ರಾಮರಾಯನಿಗೆ ಹೃದಯ ತುಂಬಿ ಬಂತು. ಅವನು ಇಬ್ರಾಹಿಂಖಾನನನ್ನು ಆಲಿಂಗಿಸಿ "ನಿಮ್ಮಂಥ ಮಿತ್ರರನ್ನು ಪಡೆದ ನಾನು ನಿಜವಾಗಿಯೂ ಭಾಗ್ಯಶಾಲಿ! ಇಂದಿಗೆ ನನ್ನ ಚಿಂತೆ ಕಳೆಯಿತು! ನಿಮ್ಮಂಥ ಸನ್ಮಿತ್ರರು ಇರುವಾಗ ನನಗೆ ಏತರ ಚಿಂತೆ?" ಎಂದು ಅವನನ್ನು ಹೊಗಳಿದನು.

ಇಬ್ರಾಹಿಂ ಕುತುಬ್‌ಷಹನು ಮಾರನೆಯ ದಿನವೇ ತನ್ನ ಹಾಗೂ ವಿಜಯನಗರಗಳ ಎರಡು ಸೈನ್ಯವನ್ನು ಸೇರಿಸಿ, ಆದವಾನಿಯ ಮೇಲೆ ದಂಡೆತ್ತಿ ಹೋಗಲು ಸಿದ್ಧರಾಗಲು ಡಂಗೂರ ಹಾಕಿಸಿದ. ಅತ್ತ ಸೈನ್ಯವು ದಂಡಯಾತ್ರೆಗೆ ಸಿದ್ಧವಾಗುತ್ತಿದ್ದಂತೆ, ಇತ್ತ ಇಬ್ರಾಹಿಂಖಾನನು ರಾಮರಾಯನ ಬಳಿಗೆ ಯುದ್ಧವೀಳ್ಯವನ್ನು ಪಡೆಯಲು ಬಂದನು.

"ಇಬ್ರಾಹಿಂ ಕುತುಬ್‌ಷಹರೇ, ನೂತನವಾಗಿ ಸುಲ್ತಾನರಾದ ನಿಮ್ಮನ್ನು ಯುದ್ಧರಂಗಕ್ಕೆ ಕಳುಹಲು ನಾನು ಒಡಂಬಡುವುದಿಲ್ಲ. ನಿಮ್ಮನ್ನು ಅಲ್ಲಿ ಅಪಾಯಕ್ಕೆ ಈಡುಮಾಡಿ ನಾನು ಇಲ್ಲಿ ನೆಮ್ಮದಿಯಿಂದ ಇರುವುದು ತರವಲ್ಲ. ಯುದ್ಧಕ್ಕೆ ನೀವು ಹೋಗದೆ ಇಲ್ಲೇ ಉಳಿಯಿರಿ. ನಾನು ದಂಡಯಾತ್ರೆಯನ್ನು ನಡಸುತ್ತೇನೆ. ಆ ಬುದ್ಧಿಗೇಡಿ ಸಹೋದರರಿಗೆ ನಾನೇ ಸರಿಯಾಗಿ ಬುದ್ಧಿ

ಕಲಿಸುತ್ತೀನೆ ?" ಎಂದು ರಾಮರಾಯ ಗಂಭೀರವಾಗಿ ಹೇಳಿದ.

" ಇದೊಂದು ಬಾರಿ ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲು ನನಗೆ ಅವಕಾಶ ದೊರಕಿದೆ. ಇದನ್ನೂ ನೀವು ನನ್ನಿಂದ ಕಸಿದುಕೊಳ್ಳಬೇಕೆಂದಿದ್ದೀರಾ? ಇಲ್ಲ ಪ್ರಭು, ನಿಮ್ಮ ಅನ್ನದ ಋಣವನ್ನು ಹೇಗಾದರೂ ತೀರಿಸಲು ಅವಕಾಶ ಕೊಡಬೇಕು !"

" ಹಾಗಾದರೆ ನಾನೂ ನಿಮ್ಮೊಡನೆ ರಣರಂಗಕ್ಕೆ ಬರುತ್ತೇನೆ, ಇದಕ್ಕಾದರೂ ಒಪ್ಪಿಗೆ ಕೊಡಿ !"

" ವಿಜಯವಧು ನನ್ನೊಬ್ಬನಿಗೇ ಸಲ್ಲಬಾರದೆಂದು ನಿಮ್ಮ ಆಶಯವೆ?" ಎಂದು ನಕ್ಕ ಇಬ್ರಾಹಿಂಖಾನ್. ಅನಂತರ ಹೇಳಿದ :

" ಇದೊಂದು ಮಾತು ಮಾತ್ರ ಸಾಧ್ಯವಿಲ್ಲ. ವಿಜಯವಧು ನನ್ನ ಹೊರತು ಬೇರೆ ಯಾರಿಗೂ ಮಾಲೆ ಹಾಕಲು ನಾನು ಒಪ್ಪುವುದಿಲ್ಲ. ನನ್ನನ್ನು ಅಸೂಯಾ ಪರನೆಂದರೂ ಸರಿ. ಈ ದಂಡಯಾತ್ರೆಯ ಎಲ್ಲ ಕೀರ್ತಿ ನನ್ನೊಬ್ಬನಿಗೇ ಸಲ್ಲಬೇಕು !"

" ಹಾಗಾದರೆ ನೀವು ನನ್ನದೊಂದು ಮಾತು ನಡಸಿಕೊಡುತ್ತೀರಾ ?"

" ಏನದು ?"

" ಈ ದಂಡಯಾತ್ರೆಯನ್ನು ನೀವೇ ಮುನ್ನಡಸಿ; ನಿಮ್ಮ ಇಷ್ಟದ ವಿರುದ್ಧ ನಾನು ಪ್ರವೇಶಿಸುವುದಿಲ್ಲ. ಆದರೆ ಆ ನನ್ನ ಮೂರ್ಖ ಸಹೋದರರ ಬಗ್ಗೆ ಒಂದು ಮಾತು ಹೇಳುವುದಿದೆ. ನೀವು ಅವರ ಮೇಲೆ ಯುದ್ಧ ಹೂಡುವ ಮುನ್ನ ಅವರೊಡನೆ ಸಂಧಾನಕ್ಕೆ ಬರಲೆತ್ನಿಸಿ, ಸಂಧಾನಕ್ಕೆ ಒಪ್ಪದೆ ಯುದ್ಧವನ್ನೇ ಅವರು ಬಯಸುವುದಾದರೆ – ತಿಳಿದೇ ಇದೆ. ಯುದ್ಧ! ಆದರೆ ಯುದ್ಧಕ್ಕೆ ಆರಂಭಿಸುವ ಮೊದಲು ನಾನು ಅವರಿಗೆ ಬುದ್ಧಿ ಹೇಳಿ ಒಂದು ಪತ್ರ ಬರೆದು ಕೊಡುತ್ತೇನೆ. ಅದನ್ನು ಅವರಿಗೆ ತಲುಪಿಸಿ. ಅದನ್ನು ಅವರು ನಿರ್ಲಕ್ಷಿಸಿದರೆ —ಅದಕ್ಕೆ ತಕ್ಕ ಶಿಕ್ಷೆ ನಿಮ್ಮ ಕೈಯಲ್ಲಿ ಅನುಭವಿಸುತ್ತಾರೆ!" ಎಂದು ಹೇಳಿ ತಿರುಮಲ ವೆಂಕಟಾದ್ರಿಯನ್ನು ಕುರಿತು ಒಂದು ಪತ್ರವನ್ನು ಬರೆದು ಇಬ್ರಾಹಿಂ ಖಾನನ ಕೈಗೆ ಇತ್ತನು.

ರಾಮರಾಯನಿಗೆ ಸೋದರರ ನಡುವೆ ನಡಸುವ ಈ ಯುದ್ಧ-ಯಾದವೀ ಕಲಹ ಇಷ್ಟವಿರಲಿಲ್ಲ. ಶತ್ರುಮರ್ಧನಕ್ಕೆ ಉಪಯೋಗವಾಗಬೇಕಾದ ವಿಜಯ ನಗರ ಸೈನ್ಯವನ್ನು ವೃಥಾಕಾರಣದಿಂದ ಹಾಳುಗೆಡಹಲು ಇಷ್ಟವಿರಲಿಲ್ಲ. ಅಂತಲೇ ತಮ್ಮಂದಿರೊಡನೆ ಯುದ್ಧಕ್ಕೆಳಿಸುವ ಮುನ್ನ ಮತ್ತೊಮ್ಮೆ ಅವರಿಗೆ ಬುದ್ಧಿವಾದ ಹೇಳಿ ಯುದ್ಧವನ್ನು ತಪ್ಪಿಸಬೇಕೆಂಬ ಆಸೆಯಿಂದ ಇಬ್ರಾಹಿಂ

ಖಾನನ ಕೈಲಿ ಪತ್ರವೊಂದನ್ನು ಬರೆದುಕೊಟ್ಟು ಸಹೋದರರೊಡನೆ ಸಂಧಾನಕ್ಕೆ ಬರಲು – ಅವರ ವೈಷಮ್ಯ ಕಳೆಯಲು ಅವನು ಮಾಡಿದ ಕಡೆಯ ಪ್ರಯತ್ನ ವಿದು! ಇದರಲ್ಲಿ ತನಗೆ ಯಶಸ್ಸು ದೊರೆತೀತೆಂಬ ನಂಬಿಕೆ ಇರದಿದ್ದರೂ ಅವನು ಪ್ರಯತ್ನಿಸುವುದನ್ನು ಮಾತ್ರ ಬಿಡಲಿಲ್ಲ.

ಇಬ್ರಾಹಿಂಖಾನನು ತನ್ನ ಸೈನ್ಯದೊಡನೆ ಹೊರಟು ಆದವಾನಿಯ ಬಳಿ ಬಂದು ಬೀಡುಬಿಟ್ಟನು. ಯುದ್ಧ ಆರಂಭಿಸುವ ಮುನ್ನ ಅವನು ರಾಮರಾಯನು ಬರೆದಿದ್ದ ಪತ್ರವನ್ನು ದೂತರ ಮೂಲಕ ತಿರುಮಲ ವೆಂಕಟಾದ್ರಿಯರಿಗೆ ಕಳು ಹಿಸಿಕೊಟ್ಟನು.

ಈ ಪತ್ರವು ತಿರುಮಲನ ಕೈಸೇರಿ ಅವನು ಅದನ್ನು ಓದಿಕೊಂಡನು. ರಾಮರಾಯನು ತನ್ನ ಪತ್ರದಲ್ಲಿ ಹೀಗೆ ಬರೆದಿದ್ದನು :

ಪ್ರಿಯ ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿ ಇವರಿಗೆ—

ರಾಮರಾಯನ ಆಶೀರ್ವಾದಗಳು. ಈಗ ಪತ್ರ ಬರೆಯುವುದೇನೆಂದರೆ ಹಿರಿಯನಾದ ನಾನು, ನಿಮಗೆ ಕೆಲವೊಂದು ಮಾತು ತಿಳಿಸಬೇಕಾಗಿದೆ.

ನೀವು ನನ್ನನ್ನು ಮೋಸಗೊಳಿಸಿ, ಸೈನ್ಯದೊಡನೆ ಆದವಾನಿಯನ್ನ ಸೇರಿ ನನ್ನ ಮೇಲೆ ದಂಗೆ ಎದ್ದಿರುವ ವಾರ್ತೆ ನನಗೆ ಸಿಡಿಲಿನಂತೆ ಬಂದು ಬಡಿದಿದೆ. ಇಂತಹ ವರ್ತನೆಯನ್ನು ನಾನು ನಿಮ್ಮಿಂದ ನಿರೀಕ್ಷಿಸಿರಲಿಲ್ಲ. ನೀವು ನನ್ನ ಬೆನ್ನಿನಲ್ಲಿ ಬಿದ್ದ ಸಹೋದರರು – ರಕ್ತ ಹಂಚಿಕೊಂಡು ಹುಟ್ಟಿದವರು ಎಂದು ನಿಮ್ಮನ್ನು ನಂಬಿದ್ದೆ. ಆದರೆ ನೀವು ನಂಬಿಕೆ ದ್ರೋಹ ಮಾಡಿರುವುದು ಮಾತ್ರ ವಲ್ಲ, ಉಂಡಮನೆಗೆ ಎರಡು ಬಗೆದಿದ್ದೀರಿ! ಸಾಮ್ರಾಜ್ಯದ ಉಪ್ಪುಂಡು ಸಾಮ್ರಾ ಜ್ಯದ ವಿರುದ್ಧ ಕತ್ತಿ ಎತ್ತಿದ್ದೀರಿ. ಇದು ಅಕ್ಷಮ್ಯ ಅಪರಾಧ! ನಿಮ್ಮಂಥ ವ್ಯಕ್ತಿಗಳು ಮಾಡುವ ಕಾರ್ಯವಲ್ಲ. ಯಾವ ಕೈಗಳು ಶತ್ರುಮರ್ಧನಕ್ಕೆ ಉಪ ಯೋಗವಾಗಬೇಕಾಗಿತ್ತೋ ಆ ಕೈಗಳು ಇಂದು ಸಾಮ್ರಾಜ್ಯದ ವಿರುದ್ಧ ಕತ್ತಿ ಹಿರಿದಿದೆ! ಸಾಮ್ರಾಜ್ಯವನ್ನು ನಾಶಮಾಡಲು, ಗಂಡಾಂತರಕ್ಕೆ ನೂಕಲು ಹವಣಿ ಸಿದೆ. ಇದನ್ನು ನೋಡಿ ನನಗೆ ತುಂಬಾ ವ್ಯಥೆಯಾಗುತ್ತಿದೆ.

ನಿಮಗೆ ನನ್ನ ಮೇಲೆ ಸಿಟ್ಟಿರಬಹುದು. ಅಸಮಾಧಾನವಿರಬಹುದು! ಆದರೆ ನನ್ನ ಮೇಲಿನ ಸಿಟ್ಟನ್ನು ನೀವು ವಿಜಯನಗರ ಸಾಮ್ರಾಜ್ಯದ ಮೇಲೆ ತೀರಿಸಿಕೊಳ್ಳಲೆತ್ನಿಸುತ್ತಿದ್ದೀರಿ. ವಿಜಯನಗರ ನಿಮಗೆ ಮಾಡಿದ ಅಪಚಾರ ವಾದರೂ ಏನು? ನಿಮ್ಮಂತಹ ಸ್ವಾಮಿನಿಷ್ಠ ಸೇವಕರು ಮಾಡುವ ಕಾರ್ಯವೇ ಇದು?

ನನ್ನ ವಿಷಯದಲ್ಲಿ ನಿಮಗೆ ಅಸಮಧಾನ ಉಂಟಾಗಲು ಕಾರಣವಿದೆ.

ಆದರೆ ನೀವು ತಿಳಿದಷ್ಟು ನೀಚನು ನಾನಲ್ಲ. ನಾನು ಸದಾಶಿವರಾಯರನ್ನು ಬಂಧಿಸಿದ್ದೇನೆ, ನಿಜ. ಅದನ್ನು ರಾಜಕೀಯ ಕಾರಣಗಳಿಗಾಗಿ, ಸಾಮ್ರಾಜ್ಯದ ಹಿತದೃಷ್ಟಿಯಿಂದ ಮಾಡಿದ್ದೇನೆ. ಅವರನ್ನ ಬಂಧಿಸಿದ್ದರೂ ಅವರಿಗೆ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿಕೊಡಲಾಗಿದೆ – ವ್ಯಕ್ತಿಸ್ವಾತಂತ್ರ್ಯ ಒಂದು ಉಳಿದು. ಅಲ್ಲದೆ ಅವರನ್ನು ಗೌರವದಿಂದ ನಡಸಿಕೊಳ್ಳಲಾಗುತ್ತಿದೆ. ನಾನು ಅವರನ್ನು ಸಾಮ್ರಾಜ್ಯಸೇವೆಯಲ್ಲಿ ನನ್ನ ಕಾಲ್ತೊಡಕಾಗುವರೆಂದು ಎಣಿಸಿರಲಿಲ್ಲ. ಅವರು ನನ್ನನ್ನು ಬಾರಿಬಾರಿಗೂ ತಿರಸ್ಕರಿಸಿ ಅಪಮಾನಗೊಳಿಸಿ, ಸಾಮ್ರಾಜ್ಯದ ಆಡಳಿತಕ್ಕೆ ವಿಘ್ನಕಾರಿಯಾಗಿ ನಿಂತರು. ಅಂತಲೇ ಅವರನ್ನು ನಿರ್ಬಂಧದಲ್ಲಿ ಇಡಬೇಕಾಯಿತೇ ಹೊರತು ನಾನು ಸಿಂಹಾಸನವನ್ನು ಆಕ್ರಮಿಸಲೆಂದಲ್ಲ. ನನ್ನ ಮಾತು ನಿಮ್ಮಾಣೆಗೂ ಸತ್ಯ. ನಾಳೆ ಸಾಮ್ರಾಜ್ಯದ ಆಡಳಿತದಲ್ಲಿ ಅವರಿಂದ ನಿರ್ವಿಘ್ನವೆಂದು ತಿಳಿದ ದಿನ – ಅವರನ್ನ ನಿರ್ಬಂಧದಿಂದ ಬಿಡುಗಡೆಮಾಡುತ್ತೇನೆ. ನನಗೆ ವಿಜಯನಗರ ಸಿಂಹಾಸನವನ್ನು ಹತ್ತುವ, ಇಲ್ಲವೇ ನನ್ನದು ಮಾಡಿಕೊಳ್ಳುವ ಯಾವ ದುರುದ್ದೇಶಗಳೂ ಇಲ್ಲ. ಪಂಪಾಪತಿಯಾಣೆಗೂ ಈ ಮಾತು ಸತ್ಯ. ನಾನು ಎಷ್ಟೇ ಪ್ರಬಲನಾದರೂ ಸಾಮ್ರಾಟರ ಪಾದಸೇವಕ – ರಾಜಪ್ರತಿನಿಧಿ! ನಿಜವಾದ ಸಾಮ್ರಾಟರು ಸದಾಶಿವರಾಯರೇ ಆಗಿರುತ್ತಾರೆ. ನಿಮಗೆ ಈಗಲಾದರೂ ನನ್ನ ವಿಷಯದಲ್ಲಿ ಇದ್ದ ಪೂರ್ವಾಗ್ರಹ ಬಗೆಹರಿದಿದೆ ಎಂದು ನಂಬಿದ್ದೇನೆ.

ನೀವು ನಿಮ್ಮ ಅಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟು ನನ್ನಲ್ಲಿ ಕ್ಷಮೆ ಯಾಚಿಸುವುದಾದರೆ ಈಗಲೂ ನಿಮ್ಮನ್ನು ಕ್ಷಮಿಸಲು ಸಿದ್ಧವಾಗಿದ್ದೇನೆ. ನಿಮ್ಮ ವಿಷಯದಲ್ಲಿ ನನಗೆ ಎಂದೂ ದ್ವೇಷ ಮತ್ಸರಗಳು ಇರಲಿಲ್ಲ – ಇಂದೂ ಇಲ್ಲ. ನಾನು ನಿಮ್ಮ ಸಹಕಾರ ಸಹಾಯಗಳಿಂದ ಅನೇಕ ಮಹತ್ಕಾರ್ಯ ಸಾಧಿಸುವ ಆಸೆ ಇಟ್ಟುಕೊಂಡಿದ್ದೇನೆ. ನನಗೆ ನಿಮ್ಮ ವಿಷಯದಲ್ಲಿ ಇನ್ನೂ ಮೊದಲಿನ ಆದರ ಭಾವಗಳೇ ಇವೆ. ನೀವು ಈಗಲೂ ಆದುದಕ್ಕೆ ಪಶ್ಚಾತ್ತಾಪಪಟ್ಟು ಸಾಮ್ರಾಜ್ಯಸೇವೆಯಲ್ಲಿ ನನಗೆ ಬೆಂಬಲವಾಗಿ ನಿಲ್ಲುವಿರೆಂದು ನಂಬಿದ್ದೇನೆ. ಶ್ರೀ ವೆಂಕಟಾಚಲಪತಿಯ ದಯದಿಂದ ಇನ್ನಾದರೂ ನಿಮಗೆ ಸದ್ಬುದ್ಧಿಯುಂಟಾಗಲಿ.

ಇಂತು ನಿಮ್ಮ ಒಲವಿನ ಸಹೋದರ
ರಾಮರಾಯ

ಈ ಪತ್ರವನ್ನು ಓದಿಕೊಂಡು ತಿರುಮಲ ಮತ್ತು ವೆಂಕಟಾದ್ರಿಯರಿಗೆ ತಾವು ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದುದು ದುಡುಕಾಯಿತೇನೋ ಎಂದೆನಿಸಿತು. ಆದರೆ ರಾಮರಾಯನು ತಮ್ಮನ್ನು ಸವಿಮಾತುಗಳಿಂದ ಬೆರಗುಗೊಳಿಸಿ ಹೇಗೆ

ಾಶಿವರಾಯನ ಬಂಧನವನ್ನು ಕಾರ್ಯಗೊಳಿಸಿದನೆಂಬುದನ್ನು ನೆನೆದಾಗ ುರಾಯನ ಕೃತ್ರಿಮ ನಡತೆಯ ಅರಿವಾಗಿ ಈ ಪತ್ರದಲ್ಲೂ ಯಾವುದೋ ್ರಮ ನಡವಳಿಕೆ ಇರಬಾರದೇಕೆ? ತಮ್ಮನ್ನು ಮೋಸಗೊಳಿಸಲು ಈ ಒಳ್ಳೆಯ ದ ಸೋಗು ಹಾಕಿರಬಾರದೇಕೆ ಎಂದೆನಿಸದೆ ಇರಲಿಲ್ಲ. ಅವರಿಗೆ ಈ ಪತ್ರವನ್ನು ಂಗೆ ಬರೆದಿರುವುದರಲ್ಲಿ ಯಾವುದೋ ರಹಸ್ಯ ಸಾಧನೆಯಿರಬೇಕು. ಇಲ್ಲದೇ ್ರೆ ತಮ್ಮ ಮೇಲೆ ಯುದ್ಧಕ್ಕೆಂದು ಬಂದ ಸೈನ್ಯ ಯುದ್ಧಮಾಡದೆ ಹೀಗೆ ಧಾನಕ್ಕೆ ಎಳೆಸುವುದರ ಅರ್ಥವೇನು? ಎಂದು ಅವರು ತರ್ಕಿಸಿದರು.

ಈಗ ಹೇಗೂ ಸದಾಶಿವನಾಯಕನನ್ನು ಸೋಲಿಸಿ ಯುದ್ಧದಲ್ಲಿ ಜಯಗಳಿ ್ರರು. ಇದರಿಂದ ಧರ್ಮಪಕ್ಷವಾದ ತಮಗೇ ಜಯ ಸಿದ್ಧವೆಂಬ ನಂಬಿಕೆ ರಲ್ಲಿ ಉಂಟಾಗಿತ್ತು. ಅಲ್ಲದೆ, ಅನೇಕ ಮಾಂಡಲೀಕರ ನೆರವು ಅವರಿಗೆ ರತಿತ್ತು. ಮತ್ತೆ ಕೆಲವರು ತಮ್ಮ ನೆರವನ್ನು ಕೊಡಲು ಆಶ್ವಾಸನ ಕೊಟ್ಟಿ ು. ಇಂತಹ ಸಮಯದಲ್ಲಿ ತಾವು ಯುದ್ಧಕ್ಕೆ ಸಿದ್ಧರಾಗಬೇಕೆ? ಸಂಧಾ ್ಕ ಒಡಂಬಡಬೇಕೆ? ಎಂಬ ಪ್ರಶ್ನೆ ಇಂದು ಬಂದಿತ್ತು. ಏಕೋ ಅವರಿಗೆ ುದ್ಧವೇ ಪ್ರಿಯವಾಯಿತು. ಸಂಧಾನದಿಂದ ಸಾಧಿಸಿಕೊಳ್ಳಲಾಗದುದು ುದ್ಧದಿಂದ ಸಾಧಿಸಿಕೊಳ್ಳಬಹುದೆಂದು ಅವರಿಗೆ ಖಚಿತವಾಗಿತ್ತು. ಅಂತಲೇ ರು ತಮ್ಮ ನಿರ್ಧಾರವನ್ನು ತಿಳಿಸಿ ಒಂದು ಪತ್ರ ಬರೆದು ಸಮರಾಹ್ವಾನ ್ನಕೊಟ್ಟ.

ತೀರ್ಥರೂಪ ಸಮಾನರಾದ ಅಣ್ಣಾಜಿಯವರಿಗೆ.

ಸಹೋದರರ ವಂದನೆಗಳು. ನಿಮ್ಮ ಪತ್ರದಿಂದ ಎಲ್ಲವೂ ತಿಳಿಯಿತು. ಂಗೆ ಸಿಂಹಾಸನವನ್ನೂ ಸಾಮ್ರಾಜ್ಯವನ್ನೂ ಆಕ್ರಮಿಸುವ ಇಲ್ಲವೇ ಅಪಹರಿ ವ ದುಷ್ಟ ಆಲೋಚನೆಗಳು ಇಲ್ಲವೆಂಬ ಸಂಗತಿಯನ್ನು ಕೇಳಿ ಸಂತೋಷ ಯಿತು. ಇದು ಮಾತಿನಲ್ಲಿ ಮುಗಿಯದೇ ಕೃತಿಗಿಳಿಸಬೇಕೆಂಬುದೇ ನಮ್ಮ ್ರೋಹದ ಉದ್ದಿಶ್ಯ. ನೀವು ಸಾಮ್ರಾಟರ ಬಗ್ಗೆ – ನಮ್ಮ ಬಗ್ಗೆ – ನಡೆದು ಂಡ ನಿಮ್ಮ ವರ್ತನೆಯಿಂದ ಹೇಳುವುದಾದರೆ ನಿಮ್ಮ ಮಾತನ್ನು ನಾವು ಬಲಾಗುವುದಿಲ್ಲ. ನಿಮ್ಮ ಮಾತಿನಲ್ಲಿ ನಮಗೆ ನಂಬಿಕೆ ಎಂದೋ ತಪ್ಪಿ ೀಗಿದೆ. ಇದಕ್ಕೆ ನಿಮ್ಮ ಹಿಂದಣ ನಡವಳಿಕೆಯೇ ಕಾರಣ. ನೀವು ಜವಾಗಿಯೂ ಸದುದ್ದೇಶದಿಂದ ಈ ಪತ್ರ ಬರೆದಿದ್ದರೆ ನಮ್ಮ ಮೇಲೆ ಇಷ್ಟು ಡ್ಡ ಸೈನ್ಯದೊಡನೆ ಯುದ್ಧಕ್ಕೆಂದು ಬರುತ್ತಿರಲಿಲ್ಲ. ಬಂದರೂ ಯುದ್ಧ ಗದಲ್ಲಿ ಸಂಧಾನಕ್ಕೆ ಎಳೆಸುತ್ತಿರಲಿಲ್ಲ. ಇದರಲ್ಲಿ ಏನೋ ಕೃತ್ರಿಮವಿದೆ. ತಲೇ ನಾವು ನಿಮ್ಮ ಸಂಧಾನಕ್ಕೆ ಒಪ್ಪುತ್ತಿಲ್ಲ. ನೀವು ನಿಜವಾಗಿ ಸಂಧಾ

ಸಾಪೇಕ್ಷಿಯಾಗಿದ್ದರೆ ನಮ್ಮ ಕೋರಿಕೆಯನ್ನು ಈಡೇರಿಸಿಕೊಡಿ. ಸೆರೆಯಲ್ಲಿರುವ ಪ್ರಭುಗಳನ್ನು ಬಿಡುಗಡೆ ಮಾಡಿ. ಇನ್ನು ಮುಂದೆ ಅವರ ಅಭೀಷ್ಟದಂತೆ ಆಡಳಿತ ನಡಸಲು ಒಪ್ಪಿಕೊಳ್ಳಿ. ಅವರಿಗೇ ಸಾಮ್ರಾಜ್ಯದ ಆಡಳಿತವನ್ನು ಕೂಡಲೇ ಒಪ್ಪಿಸಿ ನೀವು ಮಹಾಪ್ರಧಾನಿಗಳಾಗಿ ಸಾಮ್ರಾಜ್ಯಸೇವೆಗೆ ನಿಂತು ಕೊಳ್ಳಿ. ಆಗ ಮಾತ್ರ ನಿಮ್ಮನ್ನು ನಾವು ನಂಬುತ್ತೇವೆ. ನಿಮಗೆ ನಾವು ಶರಣು ಬರುತ್ತೇವೆ. ತಪ್ಪು ಒಪ್ಪಿಕೊಂಡು ಕ್ಷಮೆ ಬೇಡುತ್ತೇವೆ. ಅಲ್ಲಿಯ ತನಕ ನಿಮ್ಮ ಯಾವ ಮಾತನ್ನೂ ನಾವು ನಂಬುವುದಿಲ್ಲ, ಎಂದು ವಿಷಾದದಿಂದ ಬರೆಯಬೇಕಾಗಿದೆ. ನೀವು ನಿಜವಾಗಿಯೂ ಸಾಮ್ರಾಜ್ಯನಿಷ್ಠ ಸೇವಕರಾಗಿದ್ದರೆ, ನಿಮ್ಮೊಂದಿಗೆ ಸಹಕರಿಸಲು ನಮ್ಮ ಆಕ್ಷೇಪವಿಲ್ಲ. ಆದರೆ ನಿಮ್ಮ ಸಾಮ್ರಾಜ್ಯ ನಿಷ್ಠೆಯ ಪರೀಕ್ಷೆಯಾಗದ ಹೊರತು ನಿಮ್ಮನ್ನು ನಾವು ನಂಬುವುದಿಲ್ಲ. ನಾವು ಹೀಗೆ ಬರೆಯಬೇಕಾಗಿ ಬಂದುದಕ್ಕೆ ಕ್ಷಮಿಸಿ ನೀವು ಯುದ್ಧಕ್ಕೆಂದು ಸಿದ್ಧವಾಗಿ ಬಂದಿದ್ದೀರಿ. ನಿಮ್ಮ ನಮ್ಮ ಬಲಾಬಲಗಳು ಯುದ್ಧದಲ್ಲಿ ನಿರ್ಣಯವಾಗಲಿ.

ಇಂತು ಸಮರಾಕಾಂಕ್ಷಿಗಳಾದ ನಿಮ್ಮ ಸಹೋದರರು,
ತಿರುಮಲ ಮತ್ತು ವೆಂಕಟಾದ್ರಿ.

ಈ ಪತ್ರವನ್ನು ರಾಮರಾಯನಿಗೆ ಕಳುಹಿಸಿಕೊಟ್ಟಾಗ ರಾಮರಾಯನು ಇದಕ್ಕೆ ಸಮರದ ಉತ್ತರವನ್ನೇ ಕೊಡಲು ಇಬ್ರಾಹಿಂಖಾನನಿಗೆ ತಿಳಿಸಿದನು.

ಯುದ್ಧ ಸನ್ನಿಹಿತವಾಯಿತು. ಎರಡು ಕಡೆಯ ಸೈನಿಕರು ಯುದ್ಧಕ್ಕೆ ಅಣಿಯಾದರು.

ಇಬ್ರಾಹಿಂಖಾನನು ತನ್ನ ದಳಪತಿಯಾದ ಕಾಬೂಲ್‌ಖಾನನ ಕೈಲಿ ಆರುಸಾವಿರ ಅಶ್ವಸೈನ್ಯ ಮತ್ತಿತರ ಸೈನ್ಯದೊಡನೆ ಆದವಾನಿಯನ್ನು ಮುತ್ತಲು ಕಳುಹಿಸಿಕೊಟ್ಟನು. ಇನ್ನೊಂದು ಕಡೆಯಿಂದ ಸ್ವಯಂ ಇಬ್ರಾಹಿಂಖಾನನೇ ತಿರುಮಲನ ಸೈನ್ಯದ ಮೇಲೆ ಬಿದ್ದನು.

ಎರಡು ಕಡೆಯಿಂದ ನಡೆದ ಮುತ್ತಿಗೆ ಆರುತಿಂಗಳವರೆಗೆ ನಡೆಯಿತು. ಇಷ್ಟಾದರೂ ಆದವಾನಿಯು ವಶವಾಗುವ ಚಿಹ್ನೆ ಕಾಣಲಿಲ್ಲ ಆದವಾನಿಯಲ್ಲಿ ಸಾಕಷ್ಟು ಆಹಾರ, ಜಲ, ಮದ್ದು ಗುಂಡಗಳ ಸಂಗ್ರಹವಿತ್ತು. ದಾಳಿ ಇನ್ನೂ ಒಂದೆರಡು ವರ್ಷ ನಡೆದರೂ ಯಾವ ಭಯವಿರಲಿಲ್ಲ. ಕೇವಲ ಒಂದು ವಾರ ದಲ್ಲಿ ಆ ಸಹೋದರರನ್ನು ಸೋಲಿಸಿ ಸೆರೆ ಹಿಡಿದು ತರುವುದಾಗಿ ಹೇಳಿದ್ದ ಇಬ್ರಾ ಹಿಂಖಾನನಿಗೆ ಆರುತಿಂಗಳ ಮುತ್ತಿಗೆ ಕಳೆದರೂ ಗೆಲುವಾಗುವ ಸೂಚನೆ ತೋರ ಲಿಲ್ಲ. ಕಡೆಗೆ ಗೋಲ್ಕಂಡದ ದಳಪತಿಗಳಾದ ಸಿದ್ಧರಾಜತಿಮ್ಮಪ್ಪ, ನೂರ್‌ಖಾನ್, ಬಿಜ್ಜಲಿಖಾನ್ ಮುಂತಾದವರು ಉಪಾಯಾಂತರವಾಗಿ ಕೋಟೆಯ ಒಳಗೆ

ಹೇಗೋ ಪ್ರವೇಶ ದೊರಕಿಸಿಕೊಂಡು, ಕೋಟೆಯನ್ನು ಶತ್ರುಗಳಿಗೆ ತೆರೆದರು. ಇದಾದ ಮೇಲೆ ಅದವಾನಿ ಸುಲಭವಾಗಿ ಅವರ ವಶವಾಯಿತು. ತಿರುಮಲ ವೆಂಕಟಾದ್ರಿ ಇವರುಗಳು ಇಬ್ರಾಹಿಂಖಾನನಿಗೆ ಸೆರೆ ಸಿಕ್ಕಿದರು. ಅವರನ್ನ ರಾಮ ರಾಯನ ಬಳಿಗೆ ಕಳುಹಿಸಿಕೊಟ್ಟನು.

ರಾಮರಾಯನು ಸೋತು ಸೆರೆ ಸಿಕ್ಕಿದ ಸಹೋದರರನ್ನು ವಿಶ್ವಾಸದಿಂದಲೇ ನಡಸಿಕೊಂಡನು. ಅವನ ಸ್ನೇಹ, ನಿರ್ಮಲಾಂತಃಕರಣಗಳಿಗೆ ಸಹೋದರ ರಿಬ್ಬರು ಮಾರುಹೋದರು. ಅವರಿಗೆ ತಮ್ಮನ್ನು ಕ್ರೂರವಾಗಿ ಶಿಕ್ಷಿಸದೆ, ಕ್ಷಮೆ ನೀಡಿದ ರಾಮರಾಯನ ವಿಷಯದಲ್ಲಿ ಪೂಜ್ಯಭಾವನೆಯುಂಟಾಯಿತು. ಅವರು ಪಶ್ಚಾತ್ತಾಪದಿಂದ ಕಂಬನಿಗರೆದರು. ರಾಮರಾಯನ ಕಾಲುಗಳ ಮೇಲೆ ಬಿದ್ದು ಕ್ಷಮೆ ಬೇಡಿದರು. ರಾಮರಾಯನು ಅವರ ಎಲ್ಲ ತಪ್ಪುಗಳನ್ನೂ ಕ್ಷಮಿಸಿದನು.

ರಾಮರಾಯನ ಔದಾರ್ಯ ವೆಂಕಟಾದ್ರಿ ತಿರುಮಲರ ಹೃದಯ ಪರಿವರ್ತನೆ ಉಂಟು ಮಾಡಿತು. ಅವನ ನಿರ್ಮಲ ಪ್ರೀತಿಯು ಅವರ ಹೃದಯದ ಕಹಿಯನ್ನೆಲ್ಲಾ ತೊಳೆಯಿತು. ವೈಮನಸ್ಸು ಕಳೆದ ಮೇಲೆ ಅವರೆಲ್ಲರೂ ಮೊದಲಿ ನಂತೆ ಆತ್ಮೀಯ ವ್ಯಕ್ತಿಗಳೇ ಆದರು. ರಾಮರಾಯನು ತನ್ನ ಸದ್ಗುಣಗಳಿಂದ ಸಹೋದರರ ಮೇಲೆ ದಿಗ್ವಿಜಯ ಸಾಧಿಸಿದ್ದ. ಅವರು ಎಂದೆಂದಿಗೂ ರಾಮ ರಾಯನ ಪ್ರೀತಿಪಾತ್ರ ನಂಬುಗೆಯ ಸಹೋದರರಾಗಿ ಉಳಿದರು.

ತನಗೆ ತಮ್ಮಂದಿರ ಮೇಲೆ ಈ ದಿಗ್ವಿಜಯವನ್ನು ಸಾಧಿಸಿಕೊಟ್ಟ ಇಬ್ರಾ ಹಿಂಖಾನನನ್ನೂ ಅವನ ದಳಪತಿಗಳನ್ನೂ ರಾಮರಾಯನು ವೀರೋಚಿತವಾಗಿ ಮರ್ಯಾದೆ ಮಾಡಿದನು. ತನಗೆ ವಿಶಿಷ್ಟ ಬಗೆಯಾಗಿ ಸೇವೆ ಸಲ್ಲಿಸಿದ ಕಾಬೂಲ್ ಖಾನನಿಗೆ, ಉನಿಲ್ ಮುಲ್ಕನೆಂಬ ಬಿರುದಿತ್ತು ಸನ್ಮಾನಿಸಿದನು.

ಇದಾದ ಕೆಲವು ದಿನಗಳಲ್ಲಿ ರಾಮರಾಯನು ತನ್ನ ಸಹೋದರರಲ್ಲಿ ತನಗೆ ಇದ್ದ ನಂಬಿಕೆಯ ಕುರುಹಾಗಿ ಇಬ್ಬರನ್ನು ಮಾಂಡಲೀಕರನ್ನಾಗಿಯೂ, ವೆಂಕಟಾ ದ್ರಿಯನ್ನು ತಂಜಾವೂರಿನ ತಿರುವಯ್ಯಾರು ಸೀಮೆಗೆ ಮಾಂಡಲೀಕನನ್ನಾಗಿಯೂ ನೇಮಿಸಿ ಗೌರವಿಸಿದನು. ತನಗೆ ಯುದ್ಧದಲ್ಲಿ ನೆರವಿತ್ತ ಇಕ್ಕೇರಿಯ ಶಿವಪ್ಪ ನಾಯಕನಿಗೆ ಬಾರಕೂರನ್ನಿತ್ತು ಸನ್ಮಾನಿಸಿದನು.

ಹೀಗೆ ರಾಮರಾಯನು ತನ್ನ ನಿರ್ಮಲಾಂತಃಕಣಗಳಿಂದ ಸಹೋದರರ ಮೇಲೆ ಮಹತ್ತರ ದಿಗ್ವಿಜಯವನ್ನು ಸಾಧಿಸಿದನು.

*

## ೧೧

ಹಿಂದೂ ಮುಸ್ಲಿಂ ಸಖ್ಯ– ಸಾಮರಸ್ಯಗಳನ್ನು ಸಾಧಿಸಬೇಕೆಂಬುದು ರಾಮರಾಯನ ಹೆಬ್ಬಯಕೆಗಳಲ್ಲಿನ ಒಂದು ಪ್ರಮುಖ ಕನಸಾಗಿತ್ತು. ಇದನ್ನು ಗೋಲ್ಕುಂಡದ ಇಬ್ರಾಹಿಂಖಾನನ ಪ್ರಸಂಗದಲ್ಲಿ ಕೆಲಮಟ್ಟಿಗೆ ಸಾಧಿಸಿಕೊಂಡಿದ್ದನು. ವಿಜಯನಗರ ಹಾಗೂ ಗೋಲ್ಕುಂಡಗಳು ಪರಸ್ಪರ ಮಿತ್ರರಾಗಿದ್ದು ಹಿಂದೂ ಮಹಮದೀಯರ ಸ್ನೇಹಕ್ಕೆ ತಳಹದಿಯನ್ನು ಹಾಕಿಕೊಟ್ಟಿದ್ದುವು. ಈ ಅಡಿಪಾಯದ ಮೇಲೆ ತನ್ನ ಭವ್ಯ ಮಂದಿರವನ್ನು ರಚಿಸಬೇಕೆಂದು ರಾಮರಾಯನು ಆಶಿಸಿದನು. ಗೋಲ್ಕುಂಡದೊಂದಿಗೆ ಮಿತ್ರತ್ವ ಸಾಧಿಸಿದಂತೆ ಉಳಿದ ಬಹಮನೀ ಸುಲ್ತಾನರೊಡನೆ ಸಖ್ಯವನ್ನು ಬೆಳೆಸಿ, ಹಿಂದೂ ಮಹಮದೀಯರ ಗೆಳೆತನದ ವೃಕ್ಷಕ್ಕೆ ನೀರೆರೆಯಬೇಕೆಂದು ಆಲೋಚಿಸಿದ್ದನು. ಇಂಥವನಿಗೆ ಬಿಜಾಪುರ ಸುಲ್ತಾನ ಆಲಿ ಆದಿಲ್‌ಷಹನು ತನ್ನ ನೆರವನ್ನು ಬಯಸಿ ವಿಜಯನಗರಕ್ಕೆ ಬಂದುದು, ರೋಗಿ ಬಯಸಿದ ಪಥ್ಯವನ್ನೇ ವೈದ್ಯ ಹೇಳಿದಷ್ಟು ಸಂತೋಷ ಉಂಟುಮಾಡಿತ್ತು. ಆ ಪ್ರಸಂಗ ಹೀಗೆ ಉಂಟಾಗಿತ್ತು.

ಕ್ರಿ. ಶ. ೧೫೫೭ರಲ್ಲಿ ಬಿಜಾಪುರದ ಸುಲ್ತಾನ ಇಬ್ರಾಹಿಂ ಆದಿಲ್‌ಷಹನು ತೀರಿಕೊಳ್ಳಲು ಅವನನಂತರ ಅವನ ಮಗ ಆಲಿ ಆದಿಲ್‌ಷಹನು ಪಟ್ಟಕ್ಕೆ ಬಂದಿದ್ದನು. ಇವನು ಇನ್ನೂ ಅನುಭವವಿಲ್ಲದ ವ್ಯಕ್ತಿ ಎಂದು ಅಹಮದ್‌ನಗರದ ಸುಲ್ತಾನ, ಬರನ್ ನಿಜಾಂಷಹನನಂತರ ಪಟ್ಟಕ್ಕೆ ಬಂದಿದ್ದ. ಕುಟಿಲನೀತಿಗೆ ಎತ್ತಿದ ಕೈಯಾಗಿದ್ದ ಹುಸೇನ್ ನಿಜಾಂಷಹನು ಈ ಸಂದರ್ಭವನ್ನು ಉಪಯೋಗಿಸಿಕೊಂಡು ಬಿಜಾಪುರದ ರಾಜ್ಯವನ್ನು ಕಬಳಿಸಬೇಕೆಂದು ಆಶಿಸಿದನು. ಹುಸೇನ್ ನಿಜಾಂಷಹನು ಅತ್ಯಂತ ಸಮರ್ಥನಾದ, ಮಹತ್ವಾಕಾಂಕ್ಷಿಯಾದ ಸುಲ್ತಾನ. ಇವನು ತನ್ನ ಕಾರ್ಯಸಾಧನೆಗಾಗಿ ಯಾವ ಹೇಯಕೃತ್ಯಕ್ಕೂ ಸಿದ್ಧನಾಗಿದ್ದನು. ಮೋಸ, ವಂಚನೆ, ಕುಟಿಲ ನೀತಿಗಳೇ ಇವನ ಬತ್ತಳಿಕೆಯ ಬ್ರಹ್ಮಾಸ್ತ್ರಗಳಾಗಿದ್ದುವು. ಇವನು ಕುಡುಕನಾಗಿದ್ದಂತೆ ಸ್ತ್ರೀವ್ಯಸನಿಯೂ ಆಗಿದ್ದನು. ಅಲ್ಲದೆ ಹಿಂದೂ ಮತದ್ವೇಷಿಯಾಗಿದ್ದನು. ಹಿಂದೂಗಳನ್ನು ಕಾಫರರೆಂದು ತುಚ್ಛಭಾವನೆಯಿಂದ ನೋಡುತ್ತಿದ್ದನು. ಅವರ ವಿಗ್ರಹಗಳನ್ನು ಒಡೆದು, ಅವರ ಪವಿತ್ರ ದೇವಾಲಯಗಳನ್ನೂ ಮತಗ್ರಂಥಗಳನ್ನೂ ಹಾಳುಮಾಡುವುದರಲ್ಲಿ ಅವನಿಗೆ ವೈಯುಕ್ತಿಕ ಆನಂದವಿತ್ತು. ಅಂತೆಯೇ ಹಿಂದೂಗಳಿಗೆ ಪರಮ ಪೂಜ್ಯವಾದ ಗೋಹತ್ಯೆಯಲ್ಲೂ, ಹಿಂದೂ ಸ್ತ್ರೀಯರ ಮೇಲೆ ಮಾಡುವ ಅತ್ಯಾಚಾರ

ಗಳಲ್ಲೂ ಒಂದು ಬಗೆಯ ಸಂತೋಷವಿತ್ತು. ಇವನ ಹೆಸರು ಎತ್ತಿದ ಕೂಡಲೇ ಪ್ರಜೆಗಳು – ಮುಖ್ಯವಾಗಿ ಹಿಂದೂಗಳು ಗಡಗಡ ನಡುಗುತ್ತಿದ್ದರು. ಅವರು ದಿನವೊಂದನ್ನು ಯುಗವಾಗಿ ನೂಕುತ್ತಿದ್ದರು. ಒಂದೊಂದು ದಿನ ಕಳೆಯು ವುದು ಒಂದೊಂದು ಗಂಡಾಂತರವಾಗಿತ್ತು. ಈ ದುಷ್ಟನ ಕಪಿಮುಷ್ಟಿಯಿಂದ ತಮಗೆ ಬಿಡುಗಡೆ ಎಂದು ಬರುವುದೋ ಎಂದು ಹಾತೊರೆಯುತ್ತಿದ್ದರು.

ಇವನು ಮೊದಲಿನಿಂದಲೂ ಬಿಜಾಪುರದ ಮೇಲೆ ಕಣ್ಣಿಟ್ಟಿದ್ದನು. ಬರಾನ್ ನಿಜಾಂಷಹನು ಬದುಕಿದ್ದಾಗ ಅವನು ಬಿಜಾಪುರದ ಸಿಂಹಾಸನಕ್ಕೆ ಇನ್ನೊಬ್ಬ ವಾರಸುದಾರನಾಗಿದ್ದ ಅಬ್ದುಲ್ಲನ ಪಕ್ಷ ಕಟ್ಟಿ ಆ ಮೂಲಕ ತನ್ನ ಸ್ವಾರ್ಥ ಸಾಧಿಸಲು ಆಲೋಚಿಸಿದ್ದನು. ಇವನ ವಿರೋಧ ಕಟ್ಟಿಕೊಳ್ಳಲು ಹೆದರಿ ಇಬ್ರಾಹಿಂ ಆದಿಲ್‌ಷಹನು ಬರಾನ್ ನಿಜಾಂಷಹನನ್ನು ಧನಕನಕಗಳಿಂದ ಪ್ರಸನ್ನಗೊಳಿಸಿ ಅವನ ಸ್ನೇಹವನ್ನು ಸಂಪಾದಿಸಿದ್ದನು. ಇದು ರಾಮರಾಯನ ಹಸ್ತಕ್ಷೇಪದಿಂದ ಮತ್ತೆ ಸಿಡಿದಿತ್ತು. ಹೀಗಿರುವಾಗ ಬರಾನ್ ನಿಜಾಂಷಹನು ಒಮ್ಮೆಲೇ ಕಾಹಿಲೆ ಬಿದ್ದು ತೀರಿಕೊಂಡಿದ್ದನು. ಅವನನಂತರ ಪಟ್ಟಕ್ಕೆ ಬಂದಿದ್ದ ಹುಸೇನ್ ನಿಜಾಂಷಹನು ತಂದೆಯ ಸಿಂಹಾಸನದೊಂದಿಗೆ ಬಿಜಾ ಪುರದ ಹಗೆತನವನ್ನೂ ಬಳುವಳಿಯಾಗಿ ಪಡೆದಿದ್ದನು. ಆದರೆ ಬಿಜಾಪುರದ ಸಿಂಹಾಸನದಲ್ಲಿ ಇಬ್ರಾಹಿಂ ಆದಿಲ್‌ಷಹನು ಇರುವ ತನಕ ಅವನ ಆಟ ನಡೆಯು ವಂತೆ ಇರಲಿಲ್ಲ. ಈಗ ಇಬ್ರಾಹಿಂ ಆದಿಲ್‌ಷಹನು ಮಡಿದು, ಅವನನಂತರ ಇಪ್ಪತ್ತರ ಹರೆಯದ ಆಲಿ ಆದಿಲ್‌ಷಹನು ಸಿಂಹಾಸನವನ್ನು ಏರಿದ್ದನು. ಅವನ ಬಹುದಿನಗಳ ಆಸೆಯನ್ನು ಈಡೇರಿಸಿಕೊಳ್ಳಲು ಯೋಗ್ಯ ಸಂದರ್ಭ ದೊರೆ ತಿತ್ತು. ಅವನು ಗೋವೆಯಲ್ಲಿ ತಲೆಮರೆಸಿಕೊಂಡಿದ್ದ ಅಬ್ದುಲ್ಲನ ಪಕ್ಷ ಕಟ್ಟಿ ಅವನನ್ನು ಬಿಜಾಪುರದ ಸುಲ್ತಾನನನ್ನಾಗಿ ಮಾಡಲು ಹವಣಿಸಿ ಯುದ್ಧ ಸಿದ್ಧತೆ ಗಳನ್ನು ನಡಸಿದ್ದನು. ಅದು ಮುಗಿದ ಕೂಡಲೇ ಬಿಜಾಪುರದ ಮೇಲೆ ದಾಳಿ ಇಟ್ಟನು. ಅಪಾಯವನ್ನು ಅರಿಯದಿದ್ದ ಆಲಿ ಆದಿಲ್‌ಷಹನು ಒಮ್ಮೆಲೇ ನಡೆದ ಈ ದಾಳಿಯನ್ನು ಇದಿರಿಸಲಾರದೆ, ಬಿಜಾಪುರದಿಂದ ತಪ್ಪಿಸಿಕೊಂಡು, ವಿಜಯ ನಗರಕ್ಕೆ ಓಡಿಬಂದು ಅಹಮದ್‌ನಗರದ ಸುಲ್ತಾನನ ವಿರುದ್ಧ ರಾಮರಾಯನ ಸಹಾಯವನ್ನು ಯಾಚಿಸಿದನು. ಹೀಗೆ ಆಲಿ ಆದಿಲ್‌ಷಹನು ರಾಮರಾಯನ ಆಶ್ರಯಕ್ಕೆ ಬರಲು, ಅವನ ತಂದೆ ಇಬ್ರಾಹಿಂ ಆದಿಲ್‌ಷಹನು ತಾನು ಸಾಯುವ ಕಾಲಕ್ಕೆ ಮಗನಿಗೆ ಇತ್ತಿದ್ದ ಸಲಹೆಯೇ ಕಾರಣವಾಗಿತ್ತು.

ಇಬ್ರಾಹಿಂ ಆದಿಲ್‌ಷಹನು ತನ್ನ ಅವಸಾನಕಾಲ ಸಮೀಪಿಸಿತೆಂದು ತಿಳಿದೊಡನೆ ಮಗನನ್ನು ಹತ್ತಿರ ಕರೆದು ಅವನಿಗೆ ಹೀಗೆ ಹೇಳಿದ್ದನು :

"ಮಗೂ, ಬಿಜಾಪುರದ ರಾಜ್ಯವನ್ನು ನಿನಗೆ ಸುಭದ್ರವಾಗಿ ಗಳಿಸಿಕೊಟ್ಟು ಅನಂತರ ನಾನು ಕಣ್ಣು ಮುಚ್ಚಿಕೊಳ್ಳಬೇಕೆಂದಿದ್ದೆ. ಆದರೆ ಅಲ್ಲಾನ ಇಚ್ಛೆ ಬೇರೆಯಾಗಿದೆ. ನೀನು ರಾಜ್ಯಾಡಳಿತವೆಂದರೇನೆಂದು ತಿಳಿಯದ ಹಸುಗೂಸು. ಆದರೆ ನಿನ್ನ ಸುತ್ತ ರಾಜ್ಯವನ್ನು ಕಬಳಿಸಲು ತೋಳಗಳ ಹಿಂಡೇ ಕಾದು ಕುಳಿತಿದೆ. ಅವರ ಬಾಯಿಗೆ ಬೀಳದೆ ನೀನು ಹೇಗೆ ಉಳಿದುಕೊಳ್ಳುವಿಯೋ, ಬಿಜಾಪುರವು ಹೇಗೆ ಪಾರಾಗುವುದೋ ಆ ಅಲ್ಲಾನಿಗೆ ಮಾತ್ರ ಗೊತ್ತು!

"ನನ್ನ ಅಂತ್ಯ ಸಮೀಪಿಸುತ್ತಿದೆ. ಅಂತಲೇ ಈ ಕಿವಿಮಾತು ಹೇಳುತ್ತಿದ್ದೇನೆ. ನೀನು ಈ ಬಹಮನಿ ಸುಲ್ತಾನರು ಯಾರನ್ನೂ ನಂಬಬೇಡ. ಎಲ್ಲರೂ ನೀಚರು. ಸ್ವಾರ್ಥಸಾಧಕರು. ಅದರಲ್ಲೂ ಈ ಕುಟಿಲ, ಅಹಮುದ್ ನಗರದ ಹುಸೇನ್‌ನಿಜಾಂಷಹನನ್ನು ನಂಬಲೇಬೇಡ. ಅವನು ದ್ರೋಹಿ ಮಾತ್ರವಲ್ಲ – ಮುಸಲ್ಮಾನರಿಗೆ ಕಳಂಕ ತರುವ ವ್ಯಕ್ತಿ. ಅವನ ಮಹತ್ವಾಕಾಂಕ್ಷೆಯ ವಿರುದ್ಧ ಹಾಗೂ ಗೋವೆಯಲ್ಲಿ ತಲೆಮರೆಸಿಕೊಂಡಿರುವ ಅಬ್ದುಲ್ಲನ ವಿರುದ್ಧ ನೀನು ಎಷ್ಟು ಎಚ್ಚರದಿಂದಿದ್ದರೂ ಸಾಲದು. ನೀನು ವಿಜಯನಗರದ ಅರಸರೊಂದಿಗೆ ಸ್ನೇಹದಿಂದ ಇರು. ಈಗ ಅವರೇ ನಮ್ಮ ನಿಜವಾದ ಮಿತ್ರರು. ಅವರನ್ನು ನಂಬಿದರೆ ನೀನು ಕೆಡುವುದಿಲ್ಲ. ಅವರು ಕಾಫರರೆಂದು ನೀನು ದ್ವೇಷಿಸಬೇಡ. ವಿಜಯನಗರ ಸಾಮ್ರಾಟರು – ರಾಮರಾಯರು ಹಿಂದೂ ಮುಸ್ಲಿಂ ಸ್ನೇಹಾಕಾಂಕ್ಷಿಗಳು. ಅಲ್ಲದೆ ಅವರು ವಿಶಾಲ ಹೃದಯ ಉಳ್ಳ ಆಶ್ರಿತ ರಕ್ಷಕರು. ಸ್ನೇಹಿತನಿಗಾಗಿ ಏನನ್ನಾದರೂ ಬಲಿಗೊಡಬಲ್ಲರು. ನಿನ್ನ ಆಪತ್ತಿನಲ್ಲಿ ನೀನು ಅವರ ಆಶ್ರಯಕ್ಕೆ ಹೋಗು – ಅವರ ನೆರವನ್ನು ಬೇಡಿ, ಅವರ ವಿಶ್ವಾಸದ ಭದ್ರಕೋಟೆಯಲ್ಲಿ ನಿನಗೆ ಯಾವ ಅಪಾಯವೂ ಇಲ್ಲ. ಯಾವುದೇ ಪ್ರಸಂಗದಲ್ಲಿ, ವಿರೋಧವನ್ನು ಕಟ್ಟಿಕೊಳ್ಳಬೇಡ. ಒಲಿದರೆ ಅವರಂತಹ ಮಿತ್ರರಿಲ್ಲ. ಮುನಿದರೆ ಅವರಂತಹ ಶತ್ರುಗಳಿಲ್ಲ. ಇದು ನನ್ನ ದೀರ್ಘ ಹೋರಾಟದ ಅನುಭವ ಕಲಿಸಿಕೊಟ್ಟಿರುವ ಪಾಠವಾಗಿದೆ. ಇದನ್ನು ಅರಿತುಕೊಂಡು ನೀನು ವಿಜಯನಗರದ ಅರಸರ ಮೈತ್ರಿಯನ್ನು ಸಾಧಿಸು. ದೇವರು ನಿನಗೆ ಒಳ್ಳೆಯದನ್ನು ಮಾಡಲಿ." ಎಂದು ಹೇಳಿ ತನ್ನ ಕಡೆ ಉಸಿರನ್ನು ಎಳೆದಿದ್ದನು.

ಈ ಎಲ್ಲ ಮಾತುಗಳು ಅಲಿ ಆದಿಲ್‌ಷಹನ ಮೇಲೆ ಚೆನ್ನಾಗಿ ಪರಿಣಾಮ ಉಂಟುಮಾಡಿದ್ದುವು. ಅವನು ತಂದೆ ತೀರಿಕೊಳ್ಳಲು ತನ್ನ ತಂದೆಯ ಮರಣದ ಸುದ್ದಿಯನ್ನು ರಾಮರಾಯನಿಗೆ ತಿಳಿಸಿ ಅವರ ಸ್ನೇಹವನ್ನು ಬಯಸಿ ಒಂದು ಪತ್ರ ಬರೆದಿದ್ದ. ಅದರಲ್ಲಿ ಹೀಗಿತ್ತು :

"ಈಗ ನೀವೇ ನನ್ನ ಹಿತೈಷಿಗಳೂ ಬಂಧುಗಳೂ ಆಗಿದ್ದೀರಿ. ನಿಮ್ಮ

ಸ್ನೇಹ ಪ್ರೀತಿ ವಿಶ್ವಾಸಗಳ ಮೇಲೆ ಬಿಜಾಪುರದ ಭವಿತವ್ಯ ನಿಂತಿದೆ. ನನ್ನನ್ನು ನಿಮ್ಮ ಪುತ್ರರಲ್ಲಿ ಒಬ್ಬನೆಂದು ಪರಿಗಣಿಸಿ, ಕಾಪಾಡಬೇಕು!"

ಇದಕ್ಕೆ ರಾಮರಾಯನು ಅಷ್ಟೇ ಕಳಿಕಳಿಯ ಉತ್ತರ ಕೊಟ್ಟಿದ್ದನು.

"ನಿಮ್ಮ ತಂದೆಯವರು ತಮ್ಮ ಜೀವಿತದ ಬಹುಭಾಗವನ್ನು ಹೋರಾಟದಲ್ಲಿಯೇ ಕಳೆದ ಶೂರರು. ಅವರು ಮೊದಲು ವಿಜಯನಗರದ ಶತ್ರುಗಳಾಗಿದ್ದರೂ ತಮ್ಮ ಕಡೆಯ ದಿನಗಳಲ್ಲಿ ನಮ್ಮ ಮಿತ್ರರಾಗಿ ಮಾರ್ಪಟ್ಟಿದ್ದರು. ಅವರ ಬಗ್ಗೆ ಮೊದಲಿನಿಂದಲೂ ನನಗೆ ಗೌರವವಿತ್ತು. ಅವರ ಸ್ನೇಹವನ್ನು ನಾವು ಮಹತ್ವದ್ದೆಂದು ತಿಳಿದಿದ್ದೆವು. ಅವರು ನಿಮಗೆ ಹೇಳಿರುವ ಕಿವಿಮಾತು —ಅವರು ನಮ್ಮಲ್ಲಿ ಇಟ್ಟಿರುವ ನಂಬಿಕೆ, ಪ್ರೀತಿ ವಿಶ್ವಾಸಗಳ ದ್ಯೋತಕವಾಗಿದೆ. ನೀವು ತಂದೆಯನ್ನು ಕಳೆದುಕೊಂಡ ಮೇಲೆ ಅನಾಥರಾದಿರೆಂದು ತಿಳಿಯುವ ಕಾರಣವಿಲ್ಲ. ನಮ್ಮ ಕೃಷ್ಣನಂತೆಯೇ ನೀವೂ ನಮ್ಮ ಪುತ್ರರೆಂದು ನಾವು ತಿಳಿದಿದ್ದೇವೆ. ನಿಮ್ಮ ಕಷ್ಟ ಸುಖಗಳನ್ನು ನನ್ನೊಂದಿಗೆ ನಿಸ್ಸಂಕೋಚದಲ್ಲಿ ಹೇಳಿಕೊಳ್ಳಿ. ನನ್ನ ಬಗ್ಗೆ ನಿಮಗೆ ಯಾವ ಸಂಕೋಚವೂ ಬೇಡ. ನಿಮಗೆ ನನ್ನಿಂದಾಗುವ ಸಹಾಯ ಮಾಡಲು ನಾನು ಯಾವಾಗಲೂ ಸಿದ್ಧನಿದ್ದೇನೆ. ನಿಮ್ಮ ತಂದೆಯವರ ಕಾಲದಲ್ಲಿ ಆರಂಭವಾದ ಈ ಎರಡು ರಾಷ್ಟ್ರಗಳ ಸ್ನೇಹ ನಿಮ್ಮ ಕಾಲದಲ್ಲಿ ಶಾಖೋಪಶಾಖೆಗಳಾಗಿ, ಹೂ ಕಾಯಿಹಣ್ಣುಗಳಿಂದ ತುಂಬಿಕೊಳ್ಳಲಿ. ನಮ್ಮೆಲ್ಲರಿಗೂ ತಂದೆಯಾದ ಆ ಜಗದೀಶ್ವರನು ನಿಮ್ಮ ಮೇಲೆ ಅನಂತ ಕೃಪೆ ಮಾಡಲಿ. ನಮ್ಮ ನಿಮ್ಮ ಸ್ನೇಹ ವೃದ್ಧಿಸಲಿ!"

ಈ ಪತ್ರದಿಂದ ಆಲಿ ಆದಿಲ್‌ಷಹನಿಗೆ ಎಷ್ಟೋ ಧೈರ್ಯ ಬಂದಿತ್ತು. ಇದಾದ ಮುಂದೆ ಕೆಲವು ಕಾಲದಲ್ಲೇ ತಂದೆಯು ಕೊಟ್ಟಿದ್ದ ಎಚ್ಚರಿಕೆ ನಿಜವಾಗಿತ್ತು. ಅಹಮುದ್‌ನಗರದ ಸುಲ್ತಾನ ಹುಸೇನ್ ನಿಜಾಂಷಹನು ಬಿಜಾಪುರದ ಸಿಂಹಾಸನದ ಮೇಲೆ ಸಮರ್ಥರಾದ ದೊರೆ ಇಲ್ಲದುದನ್ನು ಕಂಡು ದಾಳಿ ಇಟ್ಟಿದ್ದ. ಈಗ ಆಲಿ ಆದಿಲ್‌ಷಹನಿಗೆ, ಬಿಜಾಪುರವನ್ನು ಶತ್ರುಗಳಿಂದ ರಕ್ಷಿಸಿಕೊಳ್ಳುವುದು ಹಾಗಿರಲಿ, ಪ್ರಾಣದೊರಸೆ ತಪ್ಪಿಸಿಕೊಂಡು ಬರುವುದೇ ಕಠಿಣವಾಗಿತ್ತು.

ಆಲಿ ಆದಿಲ್‌ಷಹನು ವಿಜಯನಗರಕ್ಕೆ ಬರುವ ವೇಳೆಗೆ ರಾಮರಾಯನ ಗೃಹಜೀವನದಲ್ಲಿ ಭಾರಿ ಪೆಟ್ಟು ಬಿದ್ದಿತ್ತು. ಅವನ ಬಾಳಿನ ಹೊಂಗನಸಿನ ಪುತ್ಥಳಿಯಾಗಿದ್ದ, ಅವನ ಹಿರಿಯ ಪುತ್ರ ಕೃಷ್ಣನು ಅಕಾಲಮೃತ್ಯುವಿಗೆ ಈಡಾಗಿ, ತಂದೆತಾಯಿಗಳನ್ನು ಮಾತ್ರವಲ್ಲ, ಇಡೀ ಸಾಮ್ರಾಜ್ಯವನ್ನು ದುಃಖಕ್ಕೀಡು ಮಾಡಿದ್ದನು.

ಕೃಷ್ಣನು ರಾಮರಾಯನಿಗೆ ಪಟ್ಟದ ರಾಣಿ ತಿರುಮಲಾಂಬೆಯಲ್ಲಿ ಹುಟ್ಟಿದ

ಪುತ್ರರತ್ನ! ಕೃಷ್ಣದೇವರಾಯನಂತೆ ಅವನೂ ಕೀರ್ತಿಶಾಲಿಯಾಗಲೆಂದು ಕೃಷ್ಣನೆಂದು ಹೆಸರಿಟ್ಟರು. ಅವನು ಹೆಸರಿಗೆ ತಕ್ಕಂತೆಯೇ ಇದ್ದನು. ದಿನದಿನಕ್ಕೆ ಬೆಳೆದು ಪ್ರವರ್ಧಮಾನಕ್ಕೆ ಬಂದಿದ್ದನು. ಅವನಿಗೆ ಆಗಷ್ಟೇ ಇಪ್ಪತ್ತರ ಹರೆಯ ತುಂಬಿ ಬಂದಿತ್ತು. ಈ ವಯಸ್ಸಿಗಾಗಲೇ ಅವನು ತನ್ನ ತಾತನಂತೆ ಅತ್ಯಂತ ಸಮರ್ಥನಾದ ಸಾಮ್ರಾಟನಾಗುವ ಬಗ್ಗೆ ಎಲ್ಲರ ನಂಬಿಕೆಯನ್ನು ನಿಜಮಾಡಿದ್ದನು. ಆದರೆ ಅಷ್ಟರಲ್ಲಿ ಕ್ರೂರ ವಿಧಿಯು ತನ್ನ ಕರಾಳ ನಾಲಗೆಯನ್ನು ಚಾಚಿತ್ತು.

ಕೃಷ್ಣನು ತನ್ನ ಹದಿನಾರನೆಯ ವಯಸ್ಸಿನಲ್ಲಿಯೇ ಯುದ್ಧದ ಕಲೆಗಳಲ್ಲಿ ಕುಶಲನಾಗಿದ್ದ. ಅವನು ಆ ವಯಸ್ಸಿಗಾಗಲೇ ಅದ್ಭುತ ಶಸ್ತ್ರಕೌಶಲ್ಯವನ್ನು ಪ್ರದರ್ಶಿಸಿದ್ದ. ಒಳ್ಳೆ ಅಂಬುಗಾರನಾಗಿದ್ದುದು ಮಾತ್ರವಲ್ಲ – ಖಡ್ಗವಿದ್ಯೆಯಲ್ಲೂ ಮಲ್ಲಯುದ್ಧದಲ್ಲೂ ಚೆನ್ನಾಗಿ ನುರಿತಿದ್ದ. ಅವನು ಪ್ರಯೋಗಿಸಿದ ಅಸ್ತ್ರವೆಂದಿಗೂ ನಿರರ್ಥಕವಾಗುತ್ತಿರಲಿಲ್ಲ. ಇದರಂತೆಯೇ ಅವನು ಈ ವಯಸ್ಸಿಗಾಗಲೇ ಸಾಹಿತ್ಯ ಸಂಗೀತಗಳಲ್ಲೂ ಒಳ್ಳೆಯ ಪಾಂಡಿತ್ಯವನ್ನು ಪಡೆದಿದ್ದ. ಅವನಿಗೆ ಹಲವಾರು ವಿದ್ಯೆಗಳು ಬರುತ್ತಿದ್ದುವು, ಹಲವಾರು ಭಾಷೆಗಳು ತಿಳಿದಿದ್ದುವು. ಅವನು ತನ್ನ ಬುದ್ಧಿಶಕ್ತಿ, ಬಾಹುಶಕ್ತಿಗಳಿಂದ ರಾಮರಾಯನನ್ನೇ ಎಷ್ಟೋ ಬಾರಿ ಬೆರಗುಗೊಳಿಸಿದ್ದ. ವೃದ್ಧಾಪ್ಯದಲ್ಲಿ ಹುಟ್ಟಿದ್ದ ಆ ಮಗನು ತನ್ನ ನೂರು ಕನಸುಗಳನ್ನು ನನಸು ಮಾಡುವನೆಂದು ರಾಮರಾಯನು ತಿಳಿದಿದ್ದ. ಅವನ ನಿರೀಕ್ಷೆ ವ್ಯರ್ಥವಾಗಿರಲಿಲ್ಲ. ಇಪ್ಪತ್ತರ ವಯಸ್ಸಿನಲ್ಲೇ ಅವನು ಅನೇಕ ಯುದ್ಧಗಳಲ್ಲಿ ಪಾಲುಗೊಂಡು, ತಂದೆಯ ಜತೆಯಲ್ಲಿ ನಿಂತು ಯುದ್ಧಮಾಡಿದ್ದ. ತಾನೆಂತಹ ಪುರುಷಸಿಂಹನೆಂಬುದನ್ನು ತೋರಿಸಿದ್ದ. ಇದರಿಂದಾಗಿ ಕೃಷ್ಣನೆಂದರೆ ರಾಯನಿಗೆ ಪಂಚಪ್ರಾಣ. ಅವನ ಸಹೋದರ ಚಿಕ್ಕ ತಿರುಮಲನಿಗಿಂತಲೂ ಅವನನ್ನು ಕೊಂಡಾಡುವವರೇ ಬಹುಮಂದಿ. ಅವನು ಇಡೀ ಸಾಮ್ರಾಜ್ಯದ ಪುತ್ಥಳಿಯಾಗಿದ್ದನೆಂದರೂ ಸಲ್ಲುವುದು.

ಎಲ್ಲರಿಗಿಂತಲೂ ಹೆಚ್ಚಿಗೆ ಕೃಷ್ಣನ ಮೇಲೆ ಅವನ ಅಜ್ಜಿಯ ಪ್ರಭಾವ ಬಿದ್ದಿತ್ತು. ಕೃಷ್ಣದೇವರಾಯನ ಪತ್ನಿ ತಿರುಮಲಾದೇವಿಗೆ ತನ್ನ ಮೊಮ್ಮಗನನ್ನು ಕಂಡರೆ ತುಂಬಾ ಅಚ್ಚುಮೆಚ್ಚು. ಅಜ್ಜಿ ಮೊಮ್ಮಕ್ಕಳ ಸ್ನೇಹ ಗೂಢವಾಗಿ ಬೆಳದಿತ್ತು. ತಿರುಮಲಾದೇವಿ ಮೊಮ್ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಅವನಿಗೆ ರಾಮಾಯಣ, ಮಹಾಭಾರತದ ಕತೆಗಳನ್ನು ಹೇಳುತ್ತಿದ್ದಳು. ಸಾಮ್ರಾಟ್ ಕೃಷ್ಣದೇವರಾಯನ ಸಾಹಸಗಳನ್ನು ಕುರಿತ ಕಥೆಗಳನ್ನೂ, ಭಾರತದ ವೀರಪುರುಷರ ಚರಿತ್ರೆಯನ್ನೂ ಮನಮುಟ್ಟುವಂತೆ ಹೇಳುತ್ತಿ

ದ್ದಳು. ಅವುಗಳನ್ನು ಕೇಳಿ ತಾನೂ ಅವರಂತೆ ಆಗಬೇಕೆಂಬ ಆಸೆ ಕೃಷ್ಣನಿಗೆ ಉಂಟಾಗುತ್ತಿತ್ತು. ಹೀಗಾಗಿ ಬಾಲ್ಯದಲ್ಲೇ ಅವನಲ್ಲಿ ಧಾರ್ಮಿಕ ಬುದ್ಧಿಯೂ ಕ್ಷಾತ್ರತೇಜ ಬೆಳೆದು ಬಂದಿತ್ತು. ಎಲ್ಲರೂ ಅವನು ಮಹಾಪುರುಷನಾಗುವ ನೆಂದು ಆಶಿಸಿದ್ದರು. ಆದರೆ ವಿಧಿಯ ಇಚ್ಛೆಯೇ ಬೇರೆಯಾಗಿತ್ತು. ಕೃಷ್ಣನು – ಸಾಮ್ರಾಜ್ಯದ ಕಣ್ಮಣಿಯಾಗಿದ್ದ ಕೃಷ್ಣನು – ಹುಚ್ಚುಹಿಡಿದ ಆನೆಯಿಂದ ಒಂದು ಮಗುವನ್ನು ರಕ್ಷಿಸಲು ಹೋಗಿ, ಅದರ ಕೈಗೆ ಸಿಕ್ಕಿ ಅಪಮೃತ್ಯುವಿಗೆ ಈಡಾಗಿದ್ದನು.

ಆ ದಿನ ಕೃಷ್ಣನು ತನ್ನ ಗೆಳೆಯರೊಡನೆ ಕೂಡಿಕೊಂಡು ಅರಮನೆಯ ಮುಂದಿನ ಗಜಶಾಲೆಯ ಬಳಿ ಬರುತ್ತಿದ್ದನು. ಅಲ್ಲಿ ಜನರು ಗಾಬರಿಯಿಂದ ಕೂಗಿಕೊಳ್ಳುತ್ತಿದ್ದರು. ಅವರನ್ನು ಏನೆಂದು ವಿಚಾರಿಸಲಾಗಿ ಗಜಶಾಲೆಯಲ್ಲಿದ್ದ ಒಂದು ಗಂಡಾನೆಗೆ ಮದವೇರಿ, ಹುಚ್ಚುಹಿಡಿದು ಅದು ಅಲ್ಲಿಂದ ತಪ್ಪಿಸಿಕೊಂಡು, ಹೋಗಿದೆ ಎಂದು ತಿಳಿಯಿತು. ಅವರಲ್ಲಿ ಯಾರಿಗೂ ಏನು ಮಾಡುವುದೆಂದು ತಿಳಿದಿರಲಿಲ್ಲ.

ಇದನ್ನು ಅರಿತ ಕೃಷ್ಣ ಕೂಡಲೇ ಆ ಮದಗಜವನ್ನು ಹತೋಟಿಗೆ ತರಲು ಮುನ್ನುಗ್ಗಿದನು. ಕೂಡಲೇ ಅದನ್ನು ಹತೋಟಿಗೆ ತರದಿದ್ದರೆ ಅದರಿಂದ ಬಹಳ ಹಾವಳಿ, ಅನೇಕರ ಮರಣ ಸಂಭವಿಸುತ್ತಿತ್ತು. ಅದು ಓಡಿದ ದಿಕ್ಕಿನಲ್ಲಿ ವೇಗವಾಗಿ ಹೊರಟನು. ಇಂತಹ ಸಾಹಸ ಕೈಗೊಳ್ಳಬಾರದೆಂದು ಅವನ ಗೆಳೆಯರು, ಹಿತೈಷಿಗಳು, ಎಷ್ಟೇ ಹೇಳಿದರೂ ಅವರ ಮಾತಿಗೆ ಕಿವಿಗೊಡದೆ ಕೃಷ್ಣನು ಆನೆ ಹೊರಟ ದಿಕ್ಕಿನಲ್ಲಿ ಅಂಬಿನ ವೇಗದಲ್ಲಿ ಹೊರಟಿದ್ದನು. ಅವನನ್ನು ಹಿಮ್ಮೆಟ್ಟಿಸಲು, ತಡೆಯಲು, ಅವರ ಗೆಳೆಯರು ಅಸಮರ್ಥರಾದರು. ಅವರಿಗೆ ಬೇರೇನೂ ಮಾಡಲು ತೋರದೆ ರಾಮರಾಯನಿಗೆ ಈ ಸುದ್ದಿಯನ್ನು ತಿಳಿಸಲು ಅರಮನೆಗೆ ಓಡಿದರು. ರಾಮರಾಯನು ತನ್ನ ಮಗನನ್ನು ತಡೆಯಲು ಬರುವುದರೊಳಗೆ ನಡೆಯಬೇಕಾಗಿದ್ದ ಅನಾಹುತವು ನಡೆದು ಹೋಗಿತ್ತು.

ಆ ಮದಿಸಿದ ಆನೆಯು ಯಾರ ಅಂಕೆ ಶಂಕೆಯಿಲ್ಲದೆ ಮನಬಂದತ್ತ ನುಗ್ಗಿ ಕೈಗೆ ಸಿಕ್ಕಿದುದನ್ನೆಲ್ಲಾ ಹಾಳುಗೆಡಹುತ್ತ, ಆಗಾಗ್ಗೆ ಭಯಂಕರವಾಗಿ ವಿಕಾರವಾಗಿ ಕೂಗುತ್ತಾ, ಕಾಲಭೈರವನಂತೆ ನಗರದ ಬೀದಿಯಲ್ಲಿ ನುಗ್ಗಿ ಬರುತ್ತಿತ್ತು. ಅದನ್ನು ಹತೋಟಿಗೆ ತರಲು ಮಾವಟಿಗರೂ, ಸೈನಿಕರೂ, ಪಟ್ಟಣಿಗರೂ ಮಾಡಿದ ಎಲ್ಲ ಸಾಹಸ ವಿಫಲವಾಗಿತ್ತು. ಎಲ್ಲರೂ ತಮ್ಮ ಪ್ರಾಣಗಳ ಮೇಲಿನ ಭಯದಿಂದ ಆನೆಯ ಮಾರ್ಗದಿಂದ ಸರಿದು ದೂರ ಓಡುತ್ತಿದ್ದರು. ಆದರೂ

ಆನೆಯು ಮಾವುತನನ್ನೂ ಕೈಗೆ ಸಿಕ್ಕಿದ ಮೂರು ನಾಲ್ಕು ಜನರನ್ನೂ ಸೊಂಡಿಲಿನಿಂದ ಎತ್ತಿ ನೆಲಕ್ಕೆ ಅಪ್ಪಳಿಸಿ ಕೊಂದಿತ್ತು. ಮತ್ತೆ ಕೆಲವರನ್ನು ಕಾಲಿನಿಂದ ತುಳಿದು ಗಾಯಗೊಳಿಸಿತ್ತು. ಗೊತ್ತು ಗುರಿ ಇಲ್ಲದೆ ಬಿರುಗಾಳಿಯಂತೆ ನುಗ್ಗಿ ಬರುತ್ತಿದ್ದ ಅದನ್ನು ತಡೆಯುವ ಧೈರ್ಯ ಯಾರಿಗೂ ಬರಲಿಲ್ಲ. ತಡೆಯಲೆತ್ನಿಸಿದ ಒಬ್ಬಿಬ್ಬರ ಪ್ರಯತ್ನ ಸಫಲವಾಗಿರಲಿಲ್ಲ. ಎಲ್ಲೆಲ್ಲೂ ಹಾಹಾಕಾರ! ಎಲ್ಲೆಲ್ಲೂ ಗಾಬರಿಗೊಂಡ ಜನರ ಚೀರಾಟ! ಅದರ ಕೈಗೆ ಸಿಕ್ಕಿ ತೊಂದರೆ ಪಟ್ಟವರ ಆಕ್ರಂದನ!

ಇದ್ದಕ್ಕೆ ಇದ್ದಂತೆ ಆನೆಯು ತನ್ನ ದಿಕ್ಕನ್ನು ಬದಲಿಸಿ, ಅರಮನೆಯ ಸಮೀಪದ ಜನನಿಬಿಡವಾದ. ಮುತ್ತುರತ್ನಗಳ ಪೇಟೆಯನ್ನು ಹೊಕ್ಕಿತು. ಅಲ್ಲಿ ಶ್ರೀಮಂತರು ದೇಶವಿದೇಶಗಳಿಂದ ತರಿಸಿದ ಅನರ್ಘ್ಯ ವಸ್ತುಗಳನ್ನು ವಿಕ್ರಯಿಸುತ್ತಿದ್ದರು. ಪೆಗೂ, ಸಿಂಹಳಗಳಿಂದ ಮುತ್ತುರತ್ನಗಳನ್ನು, ಗೋಲ್ಕೊಂಡದ ವಜ್ರಗಳನ್ನು ರಾಶಿಹಾಕಿಕೊಂಡು ವ್ಯಾಪಾರ ಮಾಡುತ್ತಿದ್ದರು. ವಜ್ರವೈಡೂರ್ಯ ಪುಷ್ಯರಾಗ, ಗೋಮೇದಿಕ ಮುಂತಾದ ನವರತ್ನಗಳನ್ನು ಕೊಂಡುಕೊಳ್ಳಲು ವಿದೇಶಿ ವ್ಯಾಪಾರಿಗಳು ಸಾಲುಗಟ್ಟಿಕೊಂಡು ನಿಂತಿರುತ್ತಿದ್ದರು. ಮದಿಸಿದ ಆನೆ ನುಗ್ಗುತ್ತಾ ಬರುತ್ತಿದೆ ಎಂಬ ವಾರ್ತೆಯನ್ನು ಕೇಳುತ್ತಲೇ ಕೆಲವರು ತಮ್ಮ ಅಂಗಡಿ ಮುಂಗಟ್ಟನ್ನು ಮುಚ್ಚಿ ಅದರಿಂದ ಪಾರಾಗಲು ಹವಣಿಸಿದರು. ಮತ್ತೆ ಕೆಲವರು ಆನೆ ಅಲ್ಲಿಗೆ ಬರಲಾರದೆಂದು ತಮ್ಮ ವ್ಯಾಪಾರದಲ್ಲಿ ಮಗ್ನರಾಗಿದ್ದರು ಹೀಗಿರುವಲ್ಲಿ ಒಮ್ಮೆಲೇ ಆ ಬೀದಿಯಲ್ಲಿ ಹಾಹಾಕಾರವೆದ್ದಿತು. ಆನೆಯು ಆ ಕಡೆಯೇ ನುಗ್ಗಿ ಬರುತ್ತಿತ್ತು! ಕೆಲವರು ಅಂಗಡಿಗಳನ್ನು ಬಿಟ್ಟು ಒಳಗೆ ಸೇರಿಕೊಂಡರು! ಮತ್ತೆ ಕೆಲವರು ಅಂಗಡಿಯನ್ನು ಮುಚ್ಚುವ ಗಡಿಬಿಡಿಯಲ್ಲಿ ಜನರ ಕಾಲ ತುಳಿತಕ್ಕೆ ಸಿಕ್ಕಿದರು. ಎಲ್ಲೆಲ್ಲೂ ಭಯ, ಅನಿಶ್ಚಯತೆ! ಎಲ್ಲೆಲ್ಲೂ ಹಾಹಾಕಾರ! ಕಳವಳಗಳು!

ಹೀಗಿರುವಲ್ಲಿ ಒಂದು ಅಂಗಡಿಯಲ್ಲಿ ಹುಟ್ಟಿದ ಹಬ್ಬದ ಸಲುವಾಗಿ ತಮ್ಮ ಒಬ್ಬನೇ ಪುತ್ರನಿಗೆ ವಜ್ರದ ಉಂಗುರವನ್ನು ಕೊಂಡುಕೊಳ್ಳಲು ಬಂದಿದ್ದ ಮಧ್ಯಮತರಗತಿಯ ದಂಪತಿಗಳು, ಈ ಜನರ ಗದ್ದಲದಲ್ಲಿ ಸೇರಿ ಹೋಗಿ ತಮ್ಮ ಒಬ್ಬನೇ ಮಗನಿಂದ ಬೇರೆಯಾಗಿದ್ದರು. ಜನರ ಗದ್ದಲವನ್ನು ಕಂಡು, ಅದನ್ನು ಆಟವೆಂದು ತಿಳಿದ ನಾಲ್ಕುವರ್ಷದ ಆ ಬಾಲಕನು ತಾಯಿಯ ದೃಷ್ಟಿಯನ್ನು ತಪ್ಪಿಸಿಕೊಂಡು, ಯಾವ ಮಾಯದಲ್ಲೋ ಬೀದಿಗೆ ಇಳಿದಿದ್ದನು. ಅವನನ್ನು ಹಿಂಬಾಲಿಸಿ, ಹಿಂದಕ್ಕೆ ಕರೆತರುವುದರಲ್ಲಿ ಬೀದಿಯಲ್ಲಿ ಜನರ ಗದ್ದಲ ಹೆಚ್ಚಾಗಿ ಆ ಹುಡುಗನು ಕಾಣೆಯಾದನು. ಅವನಿಗಾಗಿ ಅಲ್ಲಿ ಇಲ್ಲಿ ಆ ದಂಪತಿಗಳು

ಹುಡುಕುತ್ತಿರುವಾಗಲೇ, ಆನೆಯು ಅವರ ಕಡೆಯೇ ಬರುತ್ತಿತ್ತು. ಜನರು ಅದರ ಕೈಗೆ ಸಿಕ್ಕದಂತೆ, ಅಕ್ಕಪಕ್ಕದ ಮನೆಗಳಿಗೆ ನುಗ್ಗಿದರು. ಈ ಗದ್ದಲದಲ್ಲಿ ಸಿಕ್ಕಿಕೊಂಡ ಆ ದಂಪತಿಗಳು ಜನರ ಒತ್ತಡವನ್ನು ತಡೆಯಲಾಗದೆ, ಮಗನಿಗಾಗಿ ಹಂಬಲಿಸುತ್ತಲೇ ಅಂಗಡಿಯ ಮುಂಗಟ್ಟಿನ ಬಳಿಗೆ ಆಶ್ರಯ ಪಡೆಯುವಂತೆ ಆಗಿತ್ತು. ನೋಡುತ್ತಿದ್ದಂತೆ ತುಂಬಿದ್ದ ರಾಜಬೀದಿ ನಿರ್ಜನವಾಯಿತು. ಹುಚ್ಚು ಹಿಡಿದ ಆನೆ ಆ ಕಡೆಗೆ ಧಾವಿಸಿ ಬರುತ್ತಿತ್ತು. ನಿರ್ಜನವಾದ ರಸ್ತೆಯಲ್ಲಿ ಜನರ ಗದ್ದಲದಲ್ಲಿ ಪಾರಾಗಿದ್ದ ಆ ನಾಲ್ಕು ವರ್ಷದ ಮಗು ಮಾತ್ರ ಬೀದಿಯಲ್ಲಿ ಓಡುತ್ತಿತ್ತು. ಯಾವ ಅಪಾಯವನ್ನೂ ನೆನೆಯದೆ ಅಲ್ಲಿದ್ದ ಸಹಸ್ರಾರು ಜನರಲ್ಲಿ ಯಾರೊಬ್ಬರಿಗೂ ಬೀದಿಗೆ ನುಗ್ಗಿ ಆ ಮಗುವನ್ನು ಎತ್ತಿಕೊಂಡು ಬರುವ ಧೈರ್ಯವಾಗಲಿಲ್ಲ. ಏಕೆಂದರೆ ಆ ಆನೆ ಕೆಲವೇ ಮಾರು ದೂರದಲ್ಲಿ ಓಡಿ ಬರುತ್ತಿತ್ತು. ಎಲ್ಲರಿಗೂ ಆ ಮಗುವಿನ ಆಸೆ ಬಿಟ್ಟಂತೆಯೇ ಎಂದು ತಿಳಿದಿದ್ದರು. ಅಷ್ಟರಲ್ಲಿ ದೂರದಿಂದ ಮಗುವನ್ನು ಗುರುತಿಸಿದ ತಾಯಿ, ತನ್ನ ಪ್ರಾಣದ ಮೇಲಿನ ಆಸೆಯನ್ನು ತೊರೆದು, ತಾಯಿಕರುಳಿನ ಹಂಬಲದಿಂದ ಬೀದಿಗೆ ನುಗ್ಗಿದ್ದಳು. ಎಲ್ಲರೂ ಅವಳಿಗೆ ಬುದ್ಧಿಕೆಟ್ಟಿದೆ ಎಂದು ತಿಳಿದರು. ಆದರೆ ಮಗನನ್ನು ಉಳಿಸಿಕೊಳ್ಳಲು ಹಾತೊರೆದ ಆ ತಾಯಿ ಅಪಾಯವನ್ನೂ ನೆನೆಯದೆ ಬೀದಿಗೆ ನುಗ್ಗಿದಳು.

ಕಾಲಯಮನಂತೆ ನುಗ್ಗಿ ಬರುತ್ತಿದ್ದ ಹುಚ್ಚು ಹಿಡಿದ ಆನೆ!  
ನಿಶ್ಚಿಂತೆಯಿಂದ ಅದರೊಡನೆ ಆಟಕ್ಕೆ ಹೊರಟ ಆ ಮುಗ್ಧ ಬಾಲಕ!  
ಅದನ್ನು ಉಳಿಸಲು ತನ್ನನ್ನೇ ಬಲಿಕೊಡಲು ಹೊರಟ ಆ ತಾಯಿ!  
ಜನ ಎವೆಯಿಕ್ಕದೆ ನೋಡಿದರು! ಅವಾಕ್ಕಾಗಿ ನೋಡಿದರು.!

ಅವರು ನೋಡುತ್ತಿದ್ದಂತೆ ಆ ಮದಿಸಿದಾನೆ ರೌದ್ರಾವೇಶದಲ್ಲಿ ಕೈಗೆ ಸಿಕ್ಕಿದುದನ್ನು ತುಳಿಯುತ್ತಾ, ಸೊಂಡಿಲಿಂದ ಕಿತ್ತೆಸೆಯುತ್ತಾ, ಮೃತ್ಯುವೇ ಮುನ್ನುಗ್ಗಿ ಬರುವಂತೆ, ನುಗ್ಗಿ ಬಂತು. ಆದರೆ ಈ ವೇಳೆಗೆ ನಡುರಸ್ತೆಗೆ ಬಂದು ನಿಂತಿದ್ದ ಆ ನಾಲ್ಕು ವರ್ಷದ ಮಗು ಮಾತ್ರ ಯಾವ ಅಪಾಯವನ್ನೂ ಅರಿಯದೆ ಆನೆಯ ಕಡೆ ಕೈ ಚಾಚಿ ಕೇಕೆ ಹಾಕಿ, ಹರ್ಷೋದ್ಗಾರ ಮಾಡುತ್ತಾ ಅದರ ದಿಕ್ಕಿಗೇ ಓಡಿತು. ಅದು ಆನೆಯ ಕೈಗೆ ಸಿಕ್ಕಿದರೆ ಖಂಡಿತ ಸಾಯುವುದೆಂದು ತಿಳಿದ ತಾಯಿ ಮಗನ ಜೀವವನ್ನು ರಕ್ಷಿಸುವ ಏಕೈಕ ಉದ್ದಿಶ್ಯದಿಂದ ಹುಚ್ಚಿಯಂತೆ 'ಅಯ್ಯೋ ನನ್ನ ಕಂದಾ!' ಎಂದು ಚೀರುತ್ತಾ ಮಗನೆಡೆಗೆ ನುಗ್ಗಿ ಬಂದಿದ್ದಳು.

ನೋಡುತ್ತಿದ್ದ ಜನ ಈ ತಾಯಿಮಕ್ಕಳ ಕಥೆ ಪೂರೈಸಿತೆಂದು ಬಗೆದು ಅವರಿಗಾಗಿ ಮರುಗಿದರು.

ಅಷ್ಟರಲ್ಲಿ ಒಂದು ಘಟನೆ ನಡೆಯಿತು. ಎಲ್ಲಿಂದಲೋ ಕೃಷ್ಣನು ಅಲ್ಲಿಗೆ ಬಂದಿದ್ದನು. ಅವನು ಧಾವಿಸಿ ಬಂದು ಮಿಂಚಿನ ವೇಗದಲ್ಲಿ ಆ ಮಗುವನ್ನು ಎತ್ತಿ ತಾಯಿಗೆ ಕೊಟ್ಟು ಅಲ್ಲಿಂದ ಓಡಿಹೋಗಲು ತಿಳಿಸಿದನು. ಅವಳು ಭಯ ವಿಸ್ಮಯಗಳಿಂದ ಕೂಡಿ, ಮಗುವನ್ನು ಎದೆಗೆ ಬಿಗಿದಪ್ಪಿಕೊಂಡು, ಬೀಳುವು ದನ್ನೂ, ಏಳುವುದನ್ನೂ ನೋಡದೆ ಓಡಿದಳು. ತನ್ನ ಮಗು ಕಡೆಗೂ ತನ್ನ ದಾಯಿತಲ್ಲಾ ಎಂಬ ತಾಯಿಗರುಳಿನ ಸಂತೋಷ ಅವಳಿಗೆ ಕಣ್ಣೀರು ಬರು ವಂತೆ ಮಾಡಿತ್ತು. ಅವಳು ಮಗುವಿನೊಡನೆ ಪಕ್ಕದ ಅಂಗಡಿಯೊಂದರ ಕೈಸಾಲೆಗೆ ನುಗ್ಗಿ ಅಲ್ಲಿ ರಕ್ಷಣೆ ಪಡೆದಳು. ತಾಯಿಯ ಮಗು ಆ ಮದಿಸಿದಾನೆಯ ಕೈಯಿಂದ ಪಾರಾಯಿತು. ಆದರೆ ಮಗುವನ್ನು ಉಳಿಸಲು ಬೀದಿಗೆ ನುಗ್ಗಿದ್ದ ಕೃಷ್ಣನು ಆನೆಯ ಕೈಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆನೆಯು ಮಗುವನ್ನು ಪಾರುಮಾಡಿದುದಕ್ಕೆ ಅವನ ಮೇಲೆ ಸೇಡು ತೀರಿಸಿಕೊಳ್ಳುವಂತೆ ಹೂಂಕರಿಸುತ್ತಾ ಮೇಲೆ ಬಿದ್ದಿತ್ತು. ಅದರ ಗಮನಕ್ಕೆ ಬಿದ್ದಿದ್ದ ಕೃಷ್ಣ ನಿಗೆ ಅದನ್ನು ಎದುರಿಸದ ಹೊರತು ಗತ್ಯಂತರ ಉಳಿಯಲಿಲ್ಲ. ಅವನು ದೈವದ ಮೇಲೆ ಭಾರಹಾಕಿ, ಸೊಂಟದಲ್ಲಿದ್ದ ಒರೆಯಿಂದ ಖಡ್ಗವನ್ನು ಎಳೆದ ಆನೆಯ ಮೇಲೆ ಏರಿಹೋದನು.

ಇದುವರೆಗೆ ಬಿರುಗಾಳಿಯಂತೆ ಸ್ವೇಚ್ಛೆಯಾಗಿ ಬರುತ್ತಿದ್ದ ಅದನ್ನು ಎದು ರಿಸುವ ಸಾಹಸ ಯಾರೂ ಮಾಡಿರಲಿಲ್ಲ. ಯಾರೂ ಮಾಡದಿದ್ದ ಸಾಹಸವನ್ನು —ಆ ಆನೆಯನ್ನು ಎದುರಿಸಿ ಹೋರಾಡಿ ಕೊಲ್ಲುವ ಸಾಹಸವನ್ನು ಇಪ್ಪತ್ತರ ಹರೆ ಯದ ಕೃಷ್ಣ ಮಾಡಿದ್ದನು. ಜನ ಆನೆಯ ಮೇಲೆ ಹೋರಾಟಕ್ಕೆ ನಿಂತ ಈ ಬಾಲಕನಾರು ಎಂದು ಆಚ್ಚರಿಪಟ್ಟರು. ಪ್ರಾಣದ ಮೇಲಿನ ಹಂಗು ತೊರೆದು ಆದ ಉಪಟಳವನ್ನು ತಡೆಯಲು ಧೈರ್ಯದಿಂದ ನಿಂತ ಆ ವೀರಪುರುಷನಾರು ಎಂದು ಚಕಿತರಾದರು. ಎಲ್ಲರೂ ಏನಾಗುವುದೋ ಎಂದು ಭಯಭ್ರಾಂತರಾಗಿ ನೋಡಿದರು. ಕೃಷ್ಣನಿಗೆ ಹಿಂದಕ್ಕೆ ಓಡಿಬರಲು ಕೂಗಿದರು. ಆದರೆ ಕೃಷ್ಣನು ಬರಲು ಅಲ್ಲಿಗೆ ಬಂದಿರಲಿಲ್ಲ. ಆ ಧೂರ್ತ ಆನೆಯನ್ನು ಸಂಹರಿಸದಲ್ಲದೆ ಅವನು ಹಿಂದಕ್ಕೆ ಬರುವಂತೆ ಇರಲಿಲ್ಲ. ಪ್ರಾಣ ಹೋದರೂ ಸರಿ! ಆ ದುಷ್ಟ ಜಂತು ವನ್ನು ಕೊಲ್ಲಲೇಬೇಕು. ಜನತೆಗೆ ಉಂಟುಮಾಡುತ್ತಿದ್ದ ಹಾವಳಿಯನ್ನು ತಪ್ಪಿಸಬೇಕು ಎಂದು ನಿರ್ಧರಿಸಿದ್ದ ಕೃಷ್ಣ ಆನೆಯನ್ನು ಎದುರಿಸಿ ಹೋರಾಡಲು ಅನುವಾದನು.

ಆನೆಯೂ ಹಠಾತ್ತನೆ ಉಂಟಾದ ವಿಕೋಪದಿಂದ ಕ್ಷುಬ್ಧವಾಯಿತು. ಅದು ಕೃಷ್ಣನನ್ನು ಒಂದೇ ಬಾರಿಗೆ ಮುಗಿಸಿಬಿಡಲು ತನ್ನ ಸೊಂಡಿಲನ್ನು ಅವನ

ಕಡೆಗೆ ಬೀಸಿತು – ಯಮಪಾಶ ಬೀಸುವಂತೆ. ಆದರೆ ಅದರ ಕೈಗೆ ಕೃಷ್ಣನು ಸಿಕ್ಕಲಿಲ್ಲ. ಹುಲ್ಲೆಯ ಮರಿಯಂತೆ ನೆಗೆದು ತಪ್ಪಿಸಿಕೊಂಡು, ಅದರ ನೆತ್ತಿಗೆ ಗುರಿ ಇಟ್ಟು ಕತ್ತಿಯಿಂದ ಒಂದು ಪೆಟ್ಟು ಕೊಟ್ಟನು. ಇದು ಅದರ ಮರ್ಮ ಸ್ಥಳಕ್ಕೆ ಬೀಳದಿದ್ದರೂ ಆನೆಗೆ ಬಲವಾದ ಗಾಯವಾಗಿ ರಕ್ತ ಹರಿಯತೊಡ ಗಿತು. ಇದರಿಂದ ಭಯಂಕರ ಯಾತನೆಯಾಗಿ ಆನೆಯು ಚೀರಿತು. ಭಯಂಕರ ವಾಗಿ ರೋಷಗೊಂಡು ಅವನ ಕಡೆಗೆ ನುಗ್ಗಿ ಅವನನ್ನು ಸೊಂಡಿಲಿನಿಂದ ಬಾಚಿ ಎಳೆದುಕೊಂಡು ಕಾಲಿನಿಂದ ಹೊಸಗಿಹಾಕಲು ನೋಡಿತು. ಅದು ನುಗ್ಗಿ ಬಂದ ಆವೇಶಕ್ಕೆ ಜನ “ ಅಯ್ಯೋ !” ಎಂದು ಚೀರಿದರು ಆದರೆ ಕೃಷ್ಣ ಬೆದರ ಲಿಲ್ಲ. ಅವನು ಬರಲಿರುವ ವಿಪತ್ತಿಗೆ ಸಿದ್ಧನಾಗಿಯೇ ಇದ್ದ. ಅವನು ತನ್ನನ್ನು ಹಿಡಿದುಕೊಳ್ಳಲು ಬೀಸಿದ ಸೊಂಡಿಲಿಗೆ ಗುರಿಯಿಟ್ಟು ತನ್ನ ಬಲವನ್ನೆಲ್ಲಾ ಬಿಟ್ಟು ಖಡ್ಗವನ್ನು ಬೀಸಿದನು. ಅವನ ಖಡ್ಗ ಗುರಿ ತಪ್ಪಲಿಲ್ಲ. ಅವನನ್ನು ಹಿಡಿಯಲು ಬಂದ ಸೊಂಡಿಲು – ಕೊಂಬೆಯನ್ನು ಕಡಿದರೆ ಬೀಳುವಂತೆ ಕತ್ತ ರಿಸಿ ಬಿತ್ತು. ಆನೆ ನೋವಿನಿಂದ ಚೀರಿತು. ಅದರ ಸುತ್ತಲೂ ರಕ್ತದ ಮಡು ವೇರ್ಪಟ್ಟಿತ್ತು. ಅದು ನೋವಿನಿಂದ ನರಳಿ, ಗಿರ‍್ರನೆ ತಿರುಗಿ ಹತ್ತಾರು ಮಾರು ಹಿಂದಕ್ಕೆ ಸರಿಯಿತು. ಇಷ್ಟೆಲ್ಲಾ ಗಾಯಗೊಳಿಸಿದ ಕೃಷ್ಣನನ್ನು ಸುಮ್ಮನೆ ಬಿಡ ಬಾರದೆಂದು ಅದು ನಿರ್ಧರಿಸಿತು. ಅಲ್ಲಿಂದಲೇ ಕೃಷ್ಣನ ಮೇಲೆ ಬೆಟ್ಟ ಉರುಳು ವಂತೆ ನುಗ್ಗಿತು. ಕೃಷ್ಣನು ಅದರ ಆವೇಶಕ್ಕೆ ಸಿಕ್ಕಿದ್ದರೆ ಅವನ ಕಥೆ ಮುಗಿ ಯುತ್ತಿತ್ತು. ಆದರೆ ಅವನು ಅದರ ತುಂಡಾಗಿದ್ದ ಸೊಂಡಿಲಿಗಾಗಲಿ, ಕಾಲು ಗಳಿಗಾಗಲೀ ಸಿಕ್ಕದೆ ಜಾಣ್ಮೆಯಿಂದ ತಪ್ಪಿಸಿಕೊಂಡನು. ಅದು ತಪ್ಪಿಸಿಕೊಂಡ ಕೃಷ್ಣನನ್ನು ಅರಸಿಕೊಂಡು ಅವನು ತಿರುಗಿದತ್ತ ತಿರುಗಿತು. ಅದರ ವೇಗದ ಮುಂದೆ, ಆವೇಶದ ಮುಂದೆ ಕೃಷ್ಣನ ಆಟ ನಡೆಯಲಿಲ್ಲ. ಅವನು ತಾನು ಆನೆಯ ಕೈಗೆ ಸಿಕ್ಕಿಬಿದ್ದು ತನ್ನ ಕಥೆ ಮುಗಿಯಿತೆಂದು ತಿಳಿದು, ಪಂಪಾಪತಿ ಯನ್ನು ನೆನೆಯುತ್ತಾ ಕಟ್ಟಕಡೆಯ ಸಾಹಸಕ್ಕೆ ಕೈಹಾಕಿದ. ಹೇಗಾದರೂ ಮಾಡಿ ಆನೆಯ ಸೊಂಡಿಲನ್ನೇರಿ ಅದರ ಫಾಲಪ್ರದೇಶವನ್ನು ಸೇರಿದರೆ, ಅದರ ಗಂಡಸ್ಥಳದಲ್ಲಿ ಮೇಲಿಂದ ಮೇಲೆ ಗಾಯಗೊಳಿಸಿ, ಅದನ್ನು ಕೊಲ್ಲಬಹುದೆಂದು ಅವನು ಯೋಚಿಸಿದನು. ಅದರಂತೆ ತನ್ನನ್ನು ಸದೆಬಡಿಯಲು ಬಂದ ಸೊಂಡಿ ಲನ್ನೇ ಬಲವಾಗಿ ಹಿಡಿದುಕೊಂಡು ಅದರ ತಲೆಯ ಮೇಲೆ ಏರಲು ಅವನು ಪ್ರಯತ್ನಿಸಿದನು. ಇನ್ನೇನು ಅವನು ಅದರ ತಲೆಯನ್ನು ಏರಿದನು ಎಂದೆನ್ನ ಬೇಕಾದರೆ, ರಕ್ತದಿಂದ ತೊಯ್ದಿದ್ದ ಸೊಂಡಿಲು ಜಾರಿ, ಹಿಡಿತತಪ್ಪಿ ಅವನು ನೆಲಕ್ಕೆ ಉರುಳಿದನು. ಜನ ‘ಅಯ್ಯೋ’ ಎಂದು ಚೀರಿದರು. ನೆಲಕ್ಕೆ ಬಿದ್ದ

ಕೃಷ್ಣನ ಮೇಲೆ ಆನೆಯು ತನ್ನ ಕಾಲುಗಳನ್ನು ಇಟ್ಟಿತು. ಕೃಷ್ಣನು 'ಅಯ್ಯೋ' ಎಂದು ಚೀರಿದ. ಮರುಕ್ಷಣದಲ್ಲಿ ಆನೆಯು ಅವನ ಸುಕುಮಾರ ದೇಹವನ್ನು ತುಳಿದು ಅವನ ಕಥೆಯನ್ನು ಮುಗಿಸಿತ್ತು. ಇಷ್ಟೆಲ್ಲ ಆಗುವ ವೇಳೆಗೆ ಕೃಷ್ಣನು ಅದರ ಗಂಡಸ್ಥಳದಲ್ಲಿ ಮಾಡಿದ್ದ ಗಾಯಗಳಿಂದ ವಿಪರೀತ ರಕ್ತಸ್ರಾವದಿಂದಾಗಿ ಆನೆಯು ಶಕ್ತಿಗುಂದಿ, ಅದು ಹತ್ತಿಪ್ಪತ್ತು ಮಾರು ತೂರಾಡುತ್ತಾ ನಡೆದು ನೋವಿನಿಂದ ನರಳಿ ಕಡೆಗೆ ನಿಶ್ಚೇಷ್ಟಿತವಾಗಿ ನೆಲಕ್ಕೆ ಉರುಳಿತು. ಅಲ್ಲಿಗೆ ಅದರ ಕಥೆಯೂ ಪೂರೈಸಿತು.

ಕೃಷ್ಣನು – ಎಲ್ಲರ ಪ್ರೇಮದ ಪುತ್ಥಳಿಯಾಗಿದ್ದ ಕೃಷ್ಣನು – ಮದಿಸಿದಾನೆಯೊಡನೆ ಹೋರಾಡಿ ತೀರಿಕೊಂಡ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ಅರಮನೆಗೂ ಮುಟ್ಟಿತು. ಇದನ್ನು ಕೇಳಿ ಇಡೀ ವಿಜಯನಗರದ ಜನತೆ ತಲ್ಲಣಗೊಂಡಿತು. ತಿರುಮಲಾಂಬೆಗಂತೂ ಈ ಸುದ್ದಿ ಭರಸಿಡಿಲಿನಂತೆ ಬಂದು ಬಡಿದಿತ್ತು. ಅವಳು ಈ ಸುದ್ದಿಯನ್ನು ಕೇಳಿ 'ಹಾ ಕೃಷ್ಣಾ!' ಎಂದು ಚೀರಿ ನೆಲಕ್ಕೆ ಕುಸಿದು ಹಾಗೇ ಮೂರ್ಛೆಹೋದಳು.

ಅವಳು ಮೂರ್ಛೆತಿಳಿದು ಎಷ್ಟೋ ವೇಳೆಯಾದರೂ ಅವಳ ದುಃಖದ ಆವೇಗ ತಗ್ಗಲಿಲ್ಲ. ಅವಳು ಕೃಷ್ಣನಿಗಾಗಿ ಹಂಬಲಿಸುತ್ತಿದ್ದಳು. ಅವನ ಹೆಸರನ್ನು ಕೂಗಿಕೊಂಡು ಅತ್ತಿತ್ತ ಓಡುತ್ತಿದ್ದಳು. ಉನ್ಮತ್ತಳಂತೆ ಎಲ್ಲರನ್ನೂ 'ಕೃಷ್ಣನೆಲ್ಲಿ? ನನ್ನ ಮುದ್ದು ಕೃಷ್ಣನೆಲ್ಲಿ ಅವನನ್ನು ನೀವು ಎಲ್ಲಿ ಅಡಗಿಸಿದ್ದೀರಿ?' ಎಂದು ಕೇಳುತ್ತಿದ್ದಳು. ಅವಳ ಮನಸ್ಸಿಗೆ ಕೃಷ್ಣನು ಇನ್ನೂ ಜೀವಂತ ವ್ಯಕ್ತಿಯೇ ಆಗಿದ್ದ. ಉನ್ಮತ್ತಳಾದ ಅವಳನ್ನು ಹೇಗೆ ಸಂತೈಸುವುದೆಂದು ಯಾರಿಗೂ ತಿಳಿಯದೇ ಹೋಗಿತ್ತು. ಎಲ್ಲರೂ ಅವಳಷ್ಟೇ ಕೃಷ್ಣನ ಸಲುವಾಗಿ ದುಃಖಿಸಿದರು; ಅವರ ಹೃದಯ ಕುಗ್ಗಿತ್ತು. ದುಃಖದ ಆವೇಶದಿಂದ ಅವರು ಮನ್ಸೂಕರಾಗಿದ್ದರು. ಅವರಿಗೆ ತಿರುಮಲಾದೇವಿಯನ್ನು ಹೇಗೆ ಸಮಾಧಾನಗೊಳಿಸುವುದೆಂದು ಬಗೆಹರಿಯದಾಗಿತ್ತು. ಮಗನನ್ನ ನೆನಸಿಕೊಂಡು ಅವಳು ಹಂಬಲಿಸುವುದನ್ನು ನೋಡಲಾರದೆ, ಅವಳ ದುಃಖವನ್ನು ಸಮಾಧಾನ ಪಡಿಸಲಾಗದೆ ಕಡೆಗೆ ರಾಜವೈದ್ಯರು ಅವಳಿಗೆ ನಿದ್ರೆಬರುವ ಸಮ್ಮೋಹನ ಚೂರ್ಣವನ್ನು ಅವಳಿಗೆ ಕೊಡಬೇಕಾಯಿತು. ಇದರ ಪ್ರಭಾವದಿಂದ ತಿರುಮಲಾಂಬೆ ದೀರ್ಘಕಾಲದವರಿಗೆ ನಿದ್ರೆಯಲ್ಲಿ ಇದ್ದು ತನ್ನ ದುಃಖವನ್ನು ಮರೆತಳು. ಆದರೆ ಅವಳಿಗೆ ತಿಳಿವು ಮರಳಿದಾಗ ಅವಳು ಮತ್ತೆ ಕೃಷ್ಣನನ್ನು ಹಂಬಲಿಸಿಕೊಂಡು ರೋದಿಸಿದಳು. ಅವಳ ದುಃಖದ ಆವೇಗ ಮಾತ್ರ ಕಡಿಮೆಯಾಗಿತ್ತು. ಇದುವರೆಗೆ ಅದು ಬಹಿರಂಗವಾಗಿದ್ದುದು ಈಗ ಅದು ಅಂತರ್ಮುಖಿಯಾಯಿತು.

ಅವಳು ತನ್ನ ದುಃಖವನ್ನು ಪ್ರದರ್ಶಿಸುವ ಬದಲು ಒಳಗಿಂದೊಳಗ ಅನುಭವಿಸುತ್ತಿದ್ದಳು. ದಿನಗಳು ಕಳೆದು ಎಲ್ಲರೂ ತಮ್ಮ ದುಃಖದಿಂದ ಚೇತರಿಸಿಕೊಂಡರು. ಆದರೆ ತಿರುಮಲಾಂಬೆ ಮಾತ್ರ ಚೇತರಿಸಿಕೊಳ್ಳಲಿಲ್ಲ. ದಿನಗಳು ಕಳೆದಂತೆ ತಿಂಗಳು ಕಳೆದಿದ್ದರೂ ಅವಳು ಮಾತ್ರ ಮೊದಲಿನಂತೆ ಆಗಲಿಲ್ಲ ಉಳಿದವರ ದುಃಖವನ್ನು ಕಾಲನು ಮುಗಿಸಿದ್ದರೆ, ತಿರುಮಲಾಂಬೆಯ ಹೃದಯದಲ್ಲಿ ಅದು ಇನ್ನೂ ಹಸಿಯಾಗಿ ಉಳಿದಿತ್ತು – ಮಂಜಿನಂತೆ ಹೆಪ್ಪುಕಟ್ಟಿಕೊಂಡಿತ್ತು. ಇದು ನೀರಾಗಿ ಕರಗದೆ, ಆವಿಯಾಗದೆ ಅವಳ ದುಃಖ ಸಂಪೂರ್ಣವಾಗಿ ಶಮನವಾಗುವಂತೆ ಇರಲಿಲ್ಲ. ಇದಕ್ಕಾಗಿ ಅರಮನೆಯ ದಾಸಿಯರಿಂದ ತೊಡಗಿ ರಾಮರಾಯನ ತನಕ ಎಲ್ಲರೂ ಪ್ರಯತ್ನಿಸಿ ವಿಫಲರಾಗಿದ್ದರು. ದಿನಗಳೆದಂತೆ ತಿರುಮಲಾಂಬೆಯು ಪುತ್ರಶೋಕದಿಂದ ಕಂಗೆಟ್ಟು ಹಾಸಿಗೆ ಹಿಡಿಯುವಂತೆ ಆಯಿತು.

ರಾಮರಾಯನಿಗೆ ಕೃಷ್ಣನ ಅಕಾಲಮರಣ ಸಹಿಸಲಾಗದ ಪೆಟ್ಟಾಗಿತ್ತು. ಅವನ ಹೊಂಗನಸುಗಳ ಭವ್ಯ ಮಂದಿರ ಕೃಷ್ಣನ ಮರಣದೊಂದಿಗೆ ನೆಲಕ್ಕೆ ಕುಸಿದಿತ್ತು. ಕೃಷ್ಣನ ಮರಣ ಅವನ ಜೀವವನ್ನೇ ಹಿಡಿದು ಅಲುಗಿಸಿತ್ತು. ಬಾಳನ್ನು ಕತ್ತರಿಸಿತ್ತು. ಅವನು ಹೃದಯಕ್ಕೆ ಬಿದ್ದ ಈ ಪೆಟ್ಟಿನಿಂದ ಚೇತರಿಸಿಕೊಳ್ಳಲು ಅವನಿಗೆ ಬಹುಕಾಲ ಬೇಕಾಯಿತು. ಅವನು ಅತಿ ಸಂಯಮದಿಂದ ತನ್ನ ದುಃಖಕ್ಕೆ ಹತೋಟಿ ಹಾಕಿದ್ದನು. ಆದರೂ ಅವನಿಗೆ ತನ್ನ ಪತ್ನಿಯ ಮುಖ ನೋಡಿದಾಗ ಸಂಯಮದ ಕಟ್ಟೆ ಒಡೆದುಕೊಂಡು ದುಃಖ ಮಹಾಪೂರವಾಗಿ ಹರಿದು ಬರುತ್ತಿತ್ತು.

ಇತ್ತೀಚಿನ ದಿನಗಳಲ್ಲಂತೂ ತಿರುಮಲಾಂಬೆಯು ದುಃಖದಿಂದ ದಿನದಿನಕ್ಕೆ ಕಂಗಾಲಳಾಗುತ್ತಾ ನಡೆದಳು. ಅವಳ ಅಂತಃಚೇತನ ದುಃಖದ ಹೊಡೆತಕ್ಕೆ ಸಿಕ್ಕಿ ಸಿಕ್ಕಿ ಜರ್ಜರಿತವಾಗಿತ್ತು. ಅವಳಿಗೆ ಈಗ ಯಾವುದರಲ್ಲಿಯೂ ಆಸಕ್ತಿ ಇರಲಿಲ್ಲ. ಊಟ ತಿಂಡಿ ನಿದ್ದೆಗಳೂ ಬೇಡವಾಗಿದ್ದುವು ಸದಾ ಕೃಷ್ಣನನ್ನು ಕುರಿತು ಚಿಂತೆ. ಈ ಚಿಂತೆಯಿಂದ ಅವಳು ದಿನದಿನಕ್ಕೆ ತೆಗೆದು ಹೋಗುತ್ತಿದ್ದಳು. ಅವಳನ್ನು ಹೇಗೆ ಸಮಾಧಾನ ಮಾಡಬೇಕು. ಹೇಗೆ ಅವಳ ಚಿಂತೆಯನ್ನು ಕಳೆಯಬೇಕೆಂಬುದೇ ರಾಮರಾಯನಿಗೆ ಸಮಸ್ಯೆಯಾಯಿತು. ಈ ಸ್ಥಿತಿಯಲ್ಲಿ ಹೆಚ್ಚು ಕಾಲ ಇರಗೊಟ್ಟರೆ ಅವಳೂ ಕೃಷ್ಣನ ಲೋಕಕ್ಕೆ ಹೋಗುವಳೆಂಬ ಭೀತಿ ರಾಮರಾಯನನ್ನು ಕಾಡಿತು. ಅಂತಲೇ ಅವನು ಅನೇಕ ವೇದಾಂತ ವಿಚಾರಗಳನ್ನು ಅವಳೊಂದಿಗೆ ಹೇಳಿ ಅವಳನ್ನು ವಿಮುಖಗೊಳಿಸಲೆತ್ನಿಸುತ್ತಿದ್ದ. ಒಮ್ಮೆ ಇದೇ ಮಾತು ನಡೆದಿದ್ದಾಗ ರಾಮರಾಯನು ಪತ್ನಿಯನ್ನು ಸಂತೈಸುತ್ತಾ ಹೇಳಿದ.

"ತಿರುಮಲಾ, ಸಾವು ಯಾರಿಗೆ ತಪ್ಪಿದೆ. ಇಂದಲ್ಲ ನಾಳೆ ನಾವೆಲ್ಲರೂ ಸಾಯಲೇಬೇಕು. ಕೃಷ್ಣ ನಮ್ಮೆಲ್ಲರಿಗಿಂತ ಹೆಚ್ಚು ದೇವರಿಗೆ ಪ್ರಿಯನಾಗಿದ್ದ. ಅಂತಲೇ ಅವನನ್ನು ದೇವರು ತನ್ನ ಬಳಿಗೆ ಕರೆಸಿಕೊಂಡ. ಇದಕ್ಕಾಗಿ ನಾವು ಮರುಗುವುದರಿಂದ ಏನು ಪ್ರಯೋಜನ? ಅಗಲಿದ ನಮ್ಮ ಕೃಷ್ಣ ನಮ್ಮಲ್ಲಿಗೆ ಮರಳುವನೇ!"

ಈ ಮಾತು ತಿರುಮಲಾಂಬೆಯ ಮೇಲೆ ಪರಿಣಾಮ ಮಾಡಿದಂತೆ ಕಂಡಿತು. ಇದರಿಂದ ಸ್ಫೂರ್ತಿಗೊಂಡು ಹೇಳಿದ.

"ಒಂದು ರೀತಿಯಲ್ಲಿ ಕೃಷ್ಣನು ಸತ್ತಿಲ್ಲವೆಂದೇ ಹೇಳಬೇಕು. ಅವನ ಪಾರ್ಥಿವ ದೇಹ ಕಣ್ಮರೆಯಾಗಿದ್ದರೂ ಅವನು ತನ್ನ ಸದ್ಗುಣಗಳನ್ನು ಹಿಂದು ಳಿಸಿ ಹೋಗಿದ್ದಾನೆ, ಕೃಷ್ಣನ ದೇಹ ಮಡಿದರೂ ಅವನ ಕೀರ್ತಿ ಉಳಿದಿದೆ– ಅವನು ಚಿರಂಜೀವಿಯಾಗಿದ್ದಾನೆ!"

ಈ ಮಾತು ಕೇಳಿ ತಿರುಮಲಾಂಬೆ ನಿಟ್ಟುಸಿರುಬಿಟ್ಟಳು.

ರಾಮರಾಯ ಮತ್ತೂ ಹೇಳಿದ: "ಜೀವನ ಮರಣಗಳೆಂದರೆ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಹುಟ್ಟಿದ ಜೀವಿಯು ಸಾಯಲೇಬೇಕು. ಹುಟ್ಟು ಸಾವುಗಳ ಈ ಚಕ್ರ ಆತ್ಮನ ಸಾಕ್ಷಾತ್ಕಾರದವರೆಗೆ ನಡೆದೇ ಇರುತ್ತದೆ. ಆತ್ಮವು ತನ್ನ ಗುರಿ ಮುಟ್ಟುವತನಕ ಅನೇಕ ದೇಹಗಳನ್ನು ಆಶ್ರಯಿಸುತ್ತದೆ. ಇದಕ್ಕಾಗಿ ನಾವು ಮರುಗಬೇಕೆ? ಪರಹಿತಕ್ಕಾಗಿ ತನ್ನನ್ನೇ ಆತ್ಮಾರ್ಪಣೆ ಮಾಡಿದ ಅವನದು ಸಂಸ್ಕಾರ ಪಡೆದಿದ್ದ ಜೀವ. ಅವನ ಆತ್ಮ ಆತ್ಮಸಿದ್ಧಿಯ ಊರ್ಧ್ವಮುಖದಲ್ಲಿ ನಡೆದಿದೆ. ಇಂತಹವನ ಸಾವಿಗಾಗಿ ನಾವೇಕೆ ಕೊರಗಬೇಕು? ಎಂದು ಸಮಾಧಾನಪಡಿಸಿದನು. ತಿರುಮಲಾಂಬೆ ಮಾತ್ರ ಒಣನಗೆ ನಕ್ಕಳೇ ಹೊರತು ಈ ಮಾತಿಗೆ ಮರುನುಡಿಯಲಿಲ್ಲ. ಅವಳ ದುಃಖದ ಉದ್ವೇಗ ಮಾತ್ರ ಕಡಮೆಯಾಗಲಿಲ್ಲ. ಕಡೆಗೆ ಬೇಸತ್ತ ರಾಮರಾಯನು ಒರಟಾಗಿ ಹೇಳ ಬೇಕಾಯಿತು. "ತಿರುಮಲಾ, ಹೀಗೆ ಇಲ್ಲದ ಮಗನಿಗಾಗಿ, ಬಾರದ ಮಗನಿಗಾಗಿ ಹಂಬಲಿಸುತ್ತಿದ್ದರೆ, ಕೊರಗುತ್ತಿದ್ದರೆ ಏನು ಪ್ರಯೋಜನ? ಹೋದವನು ಹಿಂದಿ ರುಗಿ ಬರವುದುಂಟೆ? ಈಗ ಅಗಲಿದವನಿಗೆ ಹಂಬಲಿಸದೆ, ಇರುವ ಚಿಕ್ಕ ತಿರುಮಲನನ್ನೇ ಕೃಷ್ಣನೆಂದು ತಿಳಿದು ಏಕೆ ಅವನಲ್ಲಿ ಸಮಾಧಾನ ಪಡೆಯ ಬಾರದು? ಅಗಲಿದ ಮಗನನ್ನು ಕುರಿತು ಚಿಂತಿಸುತ್ತಾ ಬದುಕಿರುವ ಮಗನನ್ನು ನಿರ್ಲಕ್ಷಿಸುವುದು ಯಾವ ನ್ಯಾಯ?"

ಈಗ ತಿರುಮಲಾಂಬೆಯ ವಿಚಾರದ ಕಣ್ಣು ತೆರೆಯಿತು. ಹೌದು, ರಾಮ ರಾಯನ ಮಾತು ನಿಜ. ಗತಿಸಿದ ಮಗನನ್ನು ಕುರಿತು ಚಿಂತಿಸುತ್ತಾ ಬದು

ದ್ದ ಮಗನನ್ನೇ ಅವಳು ಮರೆತಿದ್ದಳು. ಅವಳ ಮಾತೃಹೃದಯಕ್ಕೆ ಅವನೇ ಕೃಷ್ಣನಾಗಿ ತೋರಿದನು. ಅವನಲ್ಲಿ ಕೃಷ್ಣನನ್ನು ಕಂಡು ಆ ಮೂಲಕ ತನ್ನ ದುಃಖವನ್ನು ಮರೆತಳು. ಅಂದಿನಿಂದ ತಿರುಮಲಾಂಬೆಯು ತನ್ನ ಪುತ್ರವಿಯೋಗ ದಿಂದ ಕೊಂಚಕೊಂಚವಾಗಿ ಚೇತರಿಸಿಕೊಳ್ಳತೊಡಗಿದಳು.

ಇಂತಹ ಪರಿಸ್ಥಿತಿಯಲ್ಲಿ ಬಿಜಾಪುರದ ಸುಲ್ತಾನ ಅಲಿ ಅದಿಲ್‌ಷಹನು ರಾಮರಾಯನ ನೆರವನ್ನು ಬಯಸಿ, ವಿಜಯನಗರಕ್ಕೆ ಬಂದಿದ್ದನು.

ಅಲಿ ಅದಿಲ್‌ಷಹನು ವಿಜಯನಗರಕ್ಕೆ ಬಂದುದು ರಾಮರಾಯ ಹಾಗೂ ತಿರುಮಲಾಂಬೆಯರಿಗೆ ಅಗಲಿದ ತಮ್ಮ ಮಗ ಕೃಷ್ಣನು ಮತ್ತೆ ತಮ್ಮಲ್ಲಿಗೆ ಬಂದಂತೆ ಭಾಸವಾಯಿತು. ಏಕೆಂದರೆ ಅಲಿ ಅದಿಲ್‌ಷಹನು ನೋಡಲು ಕೃಷ್ಣ ನನ್ನೇ ಹೋಲುತ್ತಿದ್ದನು. ಅವನ ವಯಸ್ಸು ಕೃಷ್ಣನಿಗಿಂತ ಒಂದೆರಡು ವರ್ಷ ಹೆಚ್ಚಾಗಿದ್ದಿರಬಹುದು. ಆದರೆ ರೂಪ, ಮಾತು, ನಡೆ, ನುಡಿಗಳಲ್ಲಿ ಹಾವ ಭಾವಗಳಲ್ಲಿ ಅವನು ಕೃಷ್ಣನ ತದ್ರೂಪೇ ಆಗಿದ್ದನು. ಅವನ ಮುಖದ ಮೇಲೆ ಕೃಷ್ಣನ ಮುಖಛಾಯೆ ಎದ್ದು ಕಾಣುತ್ತಿತ್ತು. ಅದೇ ತೇಜಃಪುಂಜವಾದ ಕಣ್ಣು ಗಳು, ವಿಶಾಲವಾದ ಹಣೆ, ನಸುಬಾಗಿದ ಮೂಗು, ತುಂಬಿದ ಕೆನ್ನೆ, ನಕ್ಕರೆ ಗುಳಿಬೀಳುವ ಗಲ್ಲ, ಆ ನಗೆ, ಆ ನೋಟ ಎಲ್ಲವೂ ಕೃಷ್ಣನದೇ ಆಗಿತ್ತು. ಇದ್ದ ಒಂದೇ ಒಂದು ವ್ಯತ್ಯಾಸವೆಂದರೆ ಕೃಷ್ಣನು ಕೊಂಚ ತೆಳುವಾಗಿದ್ದನು – ಅಲಿ ಅದಿಲ್‌ಷಹನು ಕೊಂಚ ಸ್ಥೂಲವಾಗಿದ್ದನು. ಬದುಕಿದ್ದರೆ ಕೃಷ್ಣನು ಈ ವೇಳೆಗೆ ಹೀಗೆಯೇ ಆಗುತ್ತಿದ್ದನು. ಒಟ್ಟಿನಲ್ಲಿ ಅಲಿ ಅದಿಲ್‌ಷಹನು ಎಲ್ಲ ರೀತಿ ಯಲ್ಲಿ ಕೃಷ್ಣನನ್ನೇ ಹೋಲುತ್ತಿದ್ದುದರಿಂದ, ಅವನನ್ನು ನೋಡುತ್ತಲೇ ರಾಮ ರಾಯನಿಗೆ ತನ್ನ ಗತಿಸಿದ ಮಗನ ನೆನಪಾಯಿತು. ಅವನ ಮುಖದ ತೇಜಸ್ಸು, ನಡಿಗೆಯ ಗಾಂಭೀರ್ಯ, ಇವುಗಳನ್ನು ನೋಡುತ್ತಾ ನೋಡುತ್ತ ಅವನು ಅಲಿ ಅದಿಲ್‌ಷಹನೆಂಬುದನ್ನು ಮರೆತು,

"ಬಾ ಕೃಷ್ಣಾ, ಬಾ!" ಎಂದು ತನಗೆ ತಿಳಿಯದಂತೆ ಉದ್ಗರಿಸಿದ್ದ. ಅವ ರಿಬ್ಬರಿಗೆ ರೂಪದಲ್ಲಿ ಅಷ್ಟು ಸಾಮ್ಯ ಇತ್ತು. ಹೆತ್ತ ತಂದೆಯಾದ ರಾಮರಾಯ ನಿಗೇ ಹೀಗೆ ಆದಮೇಲೆ ಉಳಿದವರ ಮಾತು ಬೇಡ.

ಈ ಉದ್ಗಾರದಿಂದ ಅಲಿ ಅದಿಲ್‌ಷಹನು ಚಕಿತನಾದನು. ಅವನಿಗೆ ಕ್ಷಣಕಾಲ ಏನು ಮಾತನಾಡಬೇಕೆಂದು ಹೊಳೆಯಲಿಲ್ಲ.

"ಪ್ರಭು ನಾನು ಕೃಷ್ಣನಲ್ಲ, ಬಿಜಾಪುರದ ಸುಲ್ತಾನ ಅಲಿ ಅದಿಲ್‌ಷಹ!"

"ಓ! ನಾನು ಮರೆತೆ. ನಿಮ್ಮನ್ನು ನೋಡುತ್ತಲೇ ನನಗೆ ನನ್ನ ಮಗನ ನೆನಪು ಬಂತು. ಅವನೇ ನೀವೆಂದು ನಾನು ಭ್ರಮಿಸಿದೆ. ನನ್ನಿಂದ ನಿಮಗೆ ಅಪ ಚಾರವಾಗಿದ್ದರೆ ದಯವಿಟ್ಟು ಕ್ಷಮಿಸಿ!"

"ನಿಮ್ಮಿಂದ ಯಾವ ಅಪಚಾರವೂ ಆಗಿಲ್ಲ ಸರ್ಕಾರ್! ಆದರೆ ನನ್ನನ್ನು ನೋಡುತ್ತಲೇ ನಿಮಗೆ ನಿಮ್ಮ ಕೃಷ್ಣನ ನೆನಪು ಏಕೆ ಉಂಟಾಯಿತು?"

"ನಮ್ಮ ಕೃಷ್ಣನು ನೋಡಲು ನಿಮ್ಮಂತೆಯೇ ಇದ್ದ – ಇದೇ ಮುಖ, ಇದೇ ನಡಿಗೆ. ಎಲ್ಲವೂ ನಿಮ್ಮ ತದ್ರೂಪು!"

"ಈಗ ಎಲ್ಲಿದ್ದಾರೆ ಸರ್ಕಾರ್!"

"ದೇವರ ಬಳಿ!"

"ಹಾಗೆಂದರೆ?"

"ದೇವರಿಗೆ ನಮ್ಮ ಕೃಷ್ಣನ ಮೇಲೆ ಇಷ್ಟ ಉಂಟಾಯಿತು. ತನ್ನ ಬಳಿಗೆ ಕರೆಸಿಕೊಂಡ. ಆದರೆ ನಾವು ಮಾತ್ರ ನಿರ್ಭಾಗ್ಯರು. ಅವನನ್ನು ಕಳೆದು ಕೊಂಡೆವು."

ತಾನು ಈ ಪ್ರಶ್ನೆಯೇಕೆ ಕೇಳಿದೆನೋ ಎಂದೆನಿಸಿತು ಆಲಿ ಆದಿಲ್‌ಷಹನಿಗೆ. ಅವನು ಮೌನ ಧರಿಸಿದ. ರಾಮರಾಯನು ಮುಂದೆ ಮಾತನಾಡದೆ ಏನನ್ನೋ ಯೋಚಿಸುತ್ತ ಹಾಗೆಯೇ ಕುಳಿತ.

"ಖಾವಂದ್, ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸಿ. ನಾನು ನಿಮಗೆ ಅಪ್ರಿಯವಾದ ವಾರ್ತೆಯನ್ನು ಕುರಿತು ಪ್ರಶ್ನಿಸಿದೆ! ನಿಮ್ಮ ಮನಸ್ಸಿಗೆ ಬೇಸರ ವಾಗಿದ್ದರೆ ನನ್ನ ಅಪರಾಧವನ್ನು ಮನ್ನಿಸಬೇಕು!"

"ನಿಮ್ಮಿಂದ ಬೇಸರವೆ? ಅಪರಾಧವೆ? ಖಂಡಿತಾ ಇಲ್ಲ. ನೀವು ಸ್ವರ್ಗ ದಲ್ಲಿರುವ ಮಗನನ್ನು ನೆನಪುಮಾಡಿಕೊಟ್ಟ ದೇವದೂತರು. ನಿಮ್ಮ ಆಗಮನ ದಿಂದ, ದರ್ಶನದಿಂದ ನಮಗೆ ಎಷ್ಟು ಸಂತೋಷ ಉಂಟಾಗಿದೆ ಎಂಬುದನ್ನು ನೀವು ತಿಳಿಯಲಾರಿರಿ. ನಮ್ಮ ಬರಡಾದ ಜೀವನದಲ್ಲಿ ಈ ಒಂದು ಹನಿಯ ಯಷ್ಟಾದರೂ ಸಂತೋಷಕ್ಕೆ ಕಾರಣರಾದ ನಿಮಗೆ ನಾವು ಋಣಿಯಾಗಿದ್ದೇವೆ!"

ಈ ಮಾತು ಕೇಳಿ ಆಲಿ ಆದಿಲ್‌ಷಹನಿಗೆ ಕೃತಜ್ಞತೆಯ ಭಾರದಿಂದ ಹೃದಯ ತುಂಬಿಬಂದಿತು. ಪ್ರಥಮ ನೋಟದಲ್ಲೇ ತನ್ನ ಬಗ್ಗೆ ಎಷ್ಟೊಂದು ಆತ್ಮೀಯತೆ, ಆದರ, ಅಭಿಮಾನ! ಎಂದುಕೊಂಡು ಅವನು ಮನ್ಮೂಕನಾದ.

"ಕೃತಜ್ಞರಾಗಿರುವವರು ನೀವಲ್ಲ – ನಾನು!"

"ಅದು ಹೇಗೆ?"

"ನಾನು ನಿಮ್ಮಲ್ಲಿ ನೆರವು ಬೇಡಲು ಬಂದಿದ್ದೇನೆ. ಅದಕ್ಕಾಗಿ ನಾನು ನಿಮಗೆ ಕೃತಜ್ಞನಾಗಿರಬೇಕು. ಏಕೆಂದರೆ ನೀವು ಹೇಗೆ ಸ್ವಾಗತಿಸುತ್ತೀರೋ, ನನಗೆ ನೆರವು ಕೊಡಲು ಇಚ್ಛಿಸುತ್ತೀರೋ ಇಲ್ಲವೋ ಎಂಬ ಅಳುಕಿನಿಂದಲೇ ನಾನು ಇಲ್ಲಿಗೆ ಕಾಲಿಟ್ಟೆ. ಆದರೆ ನಿಮ್ಮ ಆದರದ ಸ್ವಾಗತ ಕಂಡು ನನ್ನ ಎಲ್ಲ

ಅಂಜಿಕೆಗಳು ಪರಿಹಾರವಾಯಿತು ಅದಕ್ಕಾಗಿ ನಾನು ನಿಮಗೆ ಋಣಿಯಾಗಿದ್ದೇನೆ."

"ನಾವೂ ಒಂದು ರೀತಿಯಾಗಿ ನಿಮಗೆ ಋಣಿಯಾಗಿದ್ದೇವೆ. ಗತಿಸಿದ ಮಗನ ನೆನಪನ್ನು ತಂದು ಕೊಟ್ಟ ನಿಮಗೆ ನಾವು ಋಣಿಯಾಗಬೇಕಾಗಿದೆ. ಇರಲಿ. ಈಗ ನೀವು ಇಲ್ಲಿಗೆ ಬಂದ ಕಾರಣ ತಿಳಿಯಬಹುದೆ? ನನ್ನಿಂದ ಯಾವ ನೆರವಾಗಬೇಕು! ನನ್ನ ಸ್ವಂತ ವಿಷಯಗಳನ್ನು ಕುರಿತು ಮಾತನಾಡುವುದರಲ್ಲಿ ನಿಮ್ಮ ವಿಚಾರವನ್ನೇ ವಿಚಾರಿಸುವುದನ್ನು ಮರೆತೆ" ಎಂದು ಹೇಳಿ ವಿಷಯ ಪ್ರಸ್ತಾಪಕ್ಕೆ ಬಂದನು.

ಆಲಿ ಆದಿಲ್‌ಷಹನು ಕೆಲವೇ ಮಾತುಗಳಲ್ಲಿ ಅಹಮುದ್‌ನಗರದ ಹುಸೇನ್ ನಿಜಾಂಷಹನಿಂದ ತನಗೆ ಬಂದಿದ್ದ ದುರ್ಗತಿಯನ್ನು ಕುರಿತು ತಿಳಿಸಿದ. ಅವನ ಕಥೆಯನ್ನು ಕೇಳಿ ಮೊದಲೇ ಅವನ ಬಗ್ಗೆ ಸಹಾನುಭೂತಿ ತಾಳಿದ್ದ ರಾಮರಾಯನಿಗೆ ಈಗ ಅನುಕಂಪ ಉಂಟಾಯಿತು. ಅವನ ಸಿಂಹಾಸನಕ್ಕೆ ಕಂಟಕವಾಗಿರುವ ಅಬ್ದುಲ್ಲನನ್ನೂ ಅವನ ಪಕ್ಷ ಕಟ್ಟಿ ಬಿಜಾಪುರದ ಮೇಲೆ ದಂಡೆತ್ತಿ ಬಂದಿದ್ದ ಹುಸೇನ್ ನಿಜಾಂಷಹನನ್ನೂ ಹಿಂದಕ್ಕೆ ಅಟ್ಟಲು ಕೂಡಲೇ ತಾನು ಸೈನ್ಯವನ್ನು ಕಳುಹಿಸಿಕೊಡುವುದಾಗಿಯೂ, ಈ ಬಗ್ಗೆ ಯಾವ ಚಿಂತೆ ಇಟ್ಟುಕೊಳ್ಳದೆ ರಾಜಧಾನಿಯಲ್ಲಿ ತನ್ನ ಅತಿಥಿಯಾಗಿ ಕೆಲವು ದಿನಗಳು ತಮ್ಮ ರತ್ನಕೂಟ ಅರಮನೆಯಲ್ಲಿಯೇ ಇರಬೇಕೆಂದೂ ಆಗ್ರಹಪೂರ್ವಕವಾಗಿ ಆಮಂತ್ರಣವಿತ್ತು ನಿಲ್ಲಿಸಿಕೊಂಡನು.

ಈ ಮಾತು ಕೇಳಿ ಆಲಿ ಆದಿಲ್‌ಷಹನು ಕೃತಜ್ಞತೆಯಿಂದ ಭಾರವಾದ ಹೃದಯದಿಂದ ಹೇಳಿದ. ಪ್ರಭು! ನಾನು ಇಷ್ಟು ಭಾಗ್ಯಶಾಲಿ ಎಂದು ತಿಳಿದಿರಲಿಲ್ಲ. ತಂದೆ ತಾಯಿಯನ್ನು ಕಳೆದುಕೊಂಡು ತಬ್ಬಲಿಯಂತೆ ಇದ್ದ ನನಗೆ ನೀವು ತಂದೆಯಂತೆ ಆಶ್ರಯಕೊಟ್ಟಿರಿ. ವಿಶ್ವಾಸ ತೋರಿಸಿದಿರಿ. ನಾನು ಈಗ ಅನಾಥನಲ್ಲ. ನೀವು ನಿಜಕ್ಕೂ ನನ್ನ ದಾದಾಜಿ! ಅವರಿಗಿಂತಲೂ ಹೆಚ್ಚು ಆತ್ಮೀಯರಾಗಿದ್ದೀರಿ, ನಿಮ್ಮನ್ನು ನಾನು ಪಿತಾಜಿ ಎಂದು ಕರೆಯುವ ಭಾಗ್ಯ ನನ್ನದಾದರೆ ನನ್ನಷ್ಟು ಭಾಗ್ಯಶಾಲಿ ಬೇರೊಬ್ಬರಿಲ್ಲ!" ಅವನು ಒತ್ತಿಬರುತ್ತಿದ್ದ ಆನಂದ ಬಾಷ್ಪಗಳನ್ನು ಒರಸಿಕೊಂಡನು.

ಇದರಿಂದ ರಾಮರಾಯನ ಹೃದಯವೂ ಆರ್ದ್ರವಾಯಿತು. ಅದು ಅವನ ಮೃದುವಚನಗಳಿಂದ ಬೆಣ್ಣೆಯಂತೆ ಕರಗಿತು.

"ನೀವು ನನ್ನನ್ನು ನಿಮ್ಮ ಇಷ್ಟದಂತೆ ಕರೆಯಬಹುದು. ನಿಮಗೆ ಪಿತಾಜಿಯಾಗುವ ಭಾಗ್ಯ ನನ್ನದಾದುದಕ್ಕೆ ನನಗೂ ತುಂಬಾ ಸಂತೋಷವಾಗಿದೆ.

ಅಂತೆಯೇ ನನ್ನ ಒಂದು ಕೋರಿಕೆ ನೆರವೇರಿಸಿ ಕೊಡಬೇಕು. ನಾನು ನಿಮ್ಮನ್ನು ಮಗನೆಂದು ತಿಳಿದಮೇಲೆ ನಿಮ್ಮನ್ನು ಮಗನೆಂದೇ ಕರೆಯುತ್ತೇನೆ. ನೀವು ನನ್ನ ಭಾಗಕ್ಕೆ ನನ್ನ ಮಗ ಕೃಷ್ಣನೇ. ಆದರೆ...."

"ಏನು ಆದರೆ?"

"ನೀವು ಸುಲ್ತಾನರು ನನ್ನ ಸರಿಸಮಾನರಾದ ಸ್ವತಂತ್ರ ಸಾಮ್ರಾಟರು. ಬಹಮನಿ ಸುಲ್ತಾನರ ಮುಕುಟದಂತೆ ಇರುವವರು! ನಿಮ್ಮನ್ನು ಏಕವಚನದಿಂದ ಮಗುವೆಂದು ಕರೆಯುವುದೆ?"

"ನೀವೂ ನಾನೂ ತಂದೆ ಮಕ್ಕಳಾದ ಮೇಲೆ ನಮ್ಮಲ್ಲಿ ದೇಶ ಕಾಲ ಸ್ಥಾನಗಳ ಭೇದವಿರಬಾರದು! ನೀವು ನನಗೆ ಪಿತಾಜಿ ಎಂತೋ ಅಂತೇ ನಾನು ನಿಮ್ಮ ಮಗನಂತೆ – ನಿಮಗೆ ಪುತ್ರ!"

"ಹೌದು ಮಗು, ನೀನೇ ನಮ್ಮ ಮುದ್ದು ಕೃಷ್ಣ. ನಾನು ಮರೆತಿದ್ದೆ!"

"ಪಿತಾಜಿ ನೀವು ನನ್ನನ್ನು ಕೃಷ್ಣನೆಂದು ಕರೆದು ಹಿಂದೂ ಮಾಡಿಬಿಟ್ಟಿರಲ್ಲಾ."

ಎಂದು ತಮಾಷೆಗಾಗಿ ಕೇಳಿದ ಆಲಿ ಆದಿಲ್‌ಷಹ.

"ಹೆಸರಿನಲ್ಲಿ ಏನಿದೆ ಮಗು? ಆ ಸರ್ವಶಕ್ತನಾದ ಭಗವಂತನನ್ನು ನಾವು ಕೃಷ್ಣನೆಂದು ಕರೆದರೆ ಮಹಮದೀಯರಾದ ನೀವು ಕರೀಮನೆಂದು ಕರೆಯುತ್ತೀರಿ. ನಾವು ಇಬ್ಬರು ಕರೆಯುವುದೂ ಒಬ್ಬ ತಂದೆಯನ್ನೇ! ಆ ಜಗದ್ರಕ್ಷಕನನ್ನೇ!! ಆದರೆ ಹೆಸರು ಮಾತ್ರ ಬೇರೆ ಬೇರೆ! ಇದಕ್ಕೇಕೆ ಬಡಿದಾಡಬೇಕು? ನಮ್ಮೆಲ್ಲರಿಗೂ ಒಬ್ಬನೇ ಭಗವಂತ ತಂದೆಯಾಗಿದ್ದಾನೆ. ನಾವೆಲ್ಲ ಅವನ ಪುತ್ರರು ಎಂದು ತಿಳಿದರೆ ನಮ್ಮಲ್ಲಿ ಇರುವ ಹಿಂದೂ ಮಹಮದೀಯ ಭೇದ ಅಳಿದು ನಾವು ಅಣ್ಣತಮ್ಮಂದಿರಂತೆ ಅನ್ಯೋನ್ಯದಿಂದ ಇರಲು ಸಾಧ್ಯವಾಗುತ್ತದೆ. ಈಗ ಭಾರತದಲ್ಲಿ ಈ ಎರಡು ಜನಾಂಗಗಳಲ್ಲಿ ಈ ಭಾವ ಬೆಳೆಯುವುದು ಆವಶ್ಯಕವಾಗಿದೆ. ಈ ಸಹೋದರ ಭಾವನೆ ಬೆಳೆಯಲು ಹಿಂದೂ ಮಹಮದೀಯರಲ್ಲಿ ಸಖ್ಯಸಮರಸಗಳು ಬೇಕಾಗಿವೆ. ಇಂದಿನ ಘರ್ಷಣೆಯ ಜಗತ್ತಿನಲ್ಲಿ ಪರಸ್ಪರ ವೈಷಮ್ಯಗಳ ರಾಜಕೀಯದಲ್ಲಿ ಎಂದಿಗಿಂತಲೂ ಇಂದು ಈ ಸಹೋದರಭಾವ ಅತ್ಯಗತ್ಯವಾಗಿದೆ. ಈ ಭಾವ ಬೆಳೆದಷ್ಟು ನಮ್ಮ ಬಾಳು ಹಸನಾಗುತ್ತದೆ. ನೆಮ್ಮದಿಯಿಂದ ಬಾಳಲು ಸಾಧಕವಾಗುತ್ತದೆ!" ಎಂದನು ರಾಮರಾಯ ಕನಸು ಕಾಣುತ್ತ.

"ನಿಮ್ಮ ಉದಾತ್ತ ವಿಚಾರಗಳನ್ನು ಕೇಳಿದರೆ ಮನಸ್ಸಿಗೆ ಎಷ್ಟೋ ಸಂತೋಷವಾಗುತ್ತದೆ. ಹೃದಯ ತುಂಬಿದಂತೆ ಆಗುತ್ತದೆ! ನಿಮ್ಮದು ಎಷ್ಟು

ವಿಶಾಲಮನಸ್ಸು! ಎಂತಹ ದಿವ್ಯ ವಿಚಾರ ನಿಮ್ಮದು?" ಆಲಿ ಆದಿಲ್‌ಷಹ ಉದ್ಗಾರ ತೆಗೆದ.

"ನಿನ್ನಷ್ಟು ಶಾಂತ ಸ್ವಾಭಾವದ ಮಹಮದೀಯರಿಗೆಲ್ಲಾ ಈ ಉದಾತ್ತ ಭಾವನೆಗಳು ಯಾವಾಗಲೂ ಪ್ರಿಯವಾಗಿರುತ್ತವೆ ಮಗು! ಆದರೆ ಈ ಜಗತ್ತು ಬಹಳ ಸಣ್ಣದು, ನಾವು ಎಷ್ಟು ದೊಡ್ಡವರಾಗುತ್ತೇವೋ ಈ ಜಗತ್ತು ಅಷ್ಟು ದೊಡ್ಡದಾಗುತ್ತದೆ. ಆಗ ಮಾತ್ರ ನಾವು ಒಬ್ಬ ಜಗದೀಶ್ವರನ ಮಕ್ಕಳು—ಸಹೋದರರು ಎಂಬ ಉದಾತ್ತ ವಿಚಾರ ಅರಿವಾಗುವುದು. ಆದರೆ ಈ ಸಂಕುಚಿತ ಜಗತ್ತಿನಲ್ಲಿ ಇದೆಲ್ಲಾ ಎಲ್ಲಿ ಸಾಧ್ಯ?"

"ಇಂದು ನಿಮ್ಮಿಂದ ಒಂದು ಅಮೋಘವಾದ ಸತ್ಯವನ್ನು ತಿಳಿದೆ!"

"ಏನದು ಮಗು!"

"ಹಿಂದೂ ಮುಸ್ಲಿಮರಿಬ್ಬರೂ ಅಣ್ಣತಮ್ಮಂದಿರು – ಒಬ್ಬ ತಂದೆಯ ಮಕ್ಕಳು ಎಂಬ ಸಂಗತಿ!"

"ಇದು ಇಂದು ನಿನ್ನೆಯ ಸತ್ಯವಲ್ಲ ಮಗು! ಹಿಂದಿನಿಂದಲೂ, ಅನಂತ ಕಾಲದಿಂದಲೂ ಹರಿದು ಬಂದಿರುವ ಸತ್ಯ. ಆದರೆ ಸ್ವಾರ್ಥ ಸಾಧಿಸಿಕೊಳ್ಳುವ ಹುರುಪಿನಲ್ಲಿ ನಾವು ಇದನ್ನು ಬೇಕೆಂದೇ ಮರೆತಿದ್ದೇವೆ. ಈಗ ಬದುಕಬೇಕಾದರೆ ಈ ಸತ್ಯವನ್ನು ಮತ್ತೆ ಮನಗಾಣಬೇಕಾಗಿದೆ, ಮಾತ್ರವಲ್ಲ ಅನುಷ್ಠಾನಕ್ಕೆ ತರಬೇಕಾಗಿದೆ. ಏಕೆಂದರೆ ಈ ಜಗತ್ತಿನಲ್ಲಿ ನಾವು ದೊಡ್ಡವರಾಗದೆ ಬದುಕುವುದು ಸಾಧ್ಯವೆ. ನಾವು ಒದುಕಬೇಕಾದರೆ ದೊಡ್ಡವರಾಗಬೇಕು! ದೊಡ್ಡ ರೀತಿಯಲ್ಲಿ ವಿಚಾರ ಮಾಡಬೇಕು! ಆಗಲೇ ಅಜ್ಞಾನದ ಕಾವಳ ಕಳೆಯುವುದು!" ಎಂದು ಏನೋ ಕನಸುಕಾಣುವವನಂತೆ ಕಣ್ಣುಮುಚ್ಚಿ ಕುಳಿತ. ಈ ಕನಸು – ಅಮೋಘ ದರ್ಶನ – ನನಸಾಗುವುದೆಂದು? ಎಂಬ ವಿಚಾರದಲ್ಲಿ ಆಲಿ ಆದಿಲ್‌ಷಹನೂ ಕನಸು ಕಾಣುತ್ತಾ ಕುಳಿತನು.

## ೧೨

ರಾಮರಾಯ ಮತ್ತು ತಿರುಮಲಾಂಬೆಯರು ಆಲಿ ಆದಿಲ್‌ಷಹನನ್ನು ಅಗಲಿದ ತಮ್ಮ ಪುತ್ರ ಕೃಷ್ಣನಂತೆ ನಡಸಿಕೊಂಡರು. ಆಲಿಯ ಹಿತಮಿತವಾದ ನಡವಳಿಕೆಯು ಆ ದಂಪತಿಗಳಿಗೆ ಬಹಳ ಪ್ರಿಯವಾದುವು. ಅವನ ಸ್ನೇಹ, ನಿರ್ಮಲ ಹೃದಯಗಳಿಗೆ ಅವರು ಮಾರುಹೋಗಿದ್ದರು. ಅವನ ಉದಾತ್ತ ವಿಚಾರಗಳಿಗೆ ಅವರಲ್ಲಿ ಅಭಿಮಾನ ಉಂಟಾಗಿತ್ತು. ಪುತ್ರಶೋಕದಿಂದ

ನೊಂದಿದ್ದ ಆ ದಂಪತಿಗಳ ನಿರ್ಮಲ ಪ್ರೀತಿ ಅವನಿಗೆ ತನ್ನ ತಂದೆ ತಾಯಿಗಳ ನೆನೆಪು ತಂದುಕೊಟ್ಟಿತ್ತು. ಬಾಲ್ಯದಲ್ಲಿಯೇ ತಂದೆತಾಯಿಯನ್ನು ಕಳೆದು ಕೊಂಡಿದ್ದ ಅವನಿಗೆ ತಿರುಮಲಾಂಬೆಯ ಪ್ರೀತಿ ಅಪ್ಯಾಯವಾಯಿತು. ಅವನು ಅವರಿಬ್ಬರನ್ನು ಪಿತಾಜಿ, ಮಾತಾಜಿ ಎಂತಲೇ ಸಂಬೋಧಿಸುತ್ತಿದ್ದನು. ಅವ ರಿಬ್ಬರ ಪಾಲಿಗೆ ಅವನು ಬಿಜಾಪುರದ ಸುಲ್ತಾನ ಆಲಿ ಆದಿಲ್‌ಷಹನಾಗದೆ ಅವರ ಮಗುವೇ ಆಗಿದ್ದನು.

ರಾಮರಾಯನು ಆಲಿ ಆದಿಲ್‌ಷಹನನ್ನು ತನ್ನ ರತ್ನಕೂಟದಲ್ಲಿ ಉಳಿಸಿ ಕೊಂಡು ಏಳು ದಿನಗಳ ಕಾಲ ಸಂಭ್ರಮದ ಔತಣವನ್ನು ಏರ್ಪಡಿಸಿದನು. ಅವನಿಗೆ ಅನೇಕ ಉಡುಗರೆಗಳನ್ನೂ, ಬೆಲೆಬಾಳುವ ವಸ್ತುಗಳನ್ನೂ ಇತ್ತು ತಮ್ಮ ಹೃದಯದ ಭಾವನೆಗಳನ್ನು ತೋರಿಸಿದರು. ತಿರುಮಲಾಂಬೆಯಂತೂ ಅವನನ್ನು ತನ್ನ ಮುದ್ದು ಕೃಷ್ಣನೆಂಬಂತೆ ಬೇಕಾದ ತಿಂಡಿತಿನಸುಗಳನ್ನು ತಿನಿಸಿದಳು. ಮಾತೃಹೃದಯದ ಅವಳ ಮಮತೆಗೆ ದೇಶಕಾಲಗಳಾಗಲೀ, ಜಾತಿಗಳಾಗಲೀ ಅಡ್ಡಬರಲಿಲ್ಲ. ಅವಳ ಭಾಗಕ್ಕೆ ಆಲಿ ಆದಿಲ್‌ಷಹನು ಅವಳ ಮಗನೇ ಆಗಿದ್ದ.

ತಾನು ಬಂದು ಅನೇಕ ದಿನಗಳಾದರೂ ಇನ್ನೂ ತನಗೆ ಬೀಳ್ಕೊಡುವ ಸೂಚನೆಯನ್ನೇ ರಾಮರಾಯನು ಮಾಡದಿರುವುದನ್ನು ಕಂಡು, ಆಲಿ ಆದಿಲ್ ಷಹನೇ ಹೊರಡುವ ಮಾತು ತೆಗೆದ. ಅಲ್ಲೇ ಇದ್ದ ತಿರುಮಲಾಂಬೆ,

"ಇಷ್ಟು ಬೇಗ ನೀನೇಕೆ ಹೋಗಬೇಕು ? ಇಲ್ಲಿ ನಿನಗೇನು ಕೊರತೆಯಾ ಗಿದೆ ?" ಎಂದು ಕಳಕಳಿಯಿಂದ ಕೇಳಿದಳು.

"ಇಲ್ಲ ತಾಯಿ, ನಾನು ಈಗ ಹೋಗಲೇಬೇಕಾಗಿದೆ. ನಾನು ಬಿಜಾ ಪುರಕ್ಕೆ ಹಿಂದಿರುಗದಿದ್ದರೆ ನನ್ನ ಸಿಂಹಾಸನ ನನ್ನ ಕೈ ತಪ್ಪಿ ಅಬ್ದುಲ್ಲನ ಪಾಲಾ ಗುತ್ತದೆ. ಈಗ ಒಂದೊಂದು ಕ್ಷಣವೂ ಅಮೂಲ್ಯವಾಗಿದೆ ! ನಾನು ನಿಧಾನ ಮಾಡಿದಷ್ಟೂ ನನಗೆ ಅಪಾಯಕರ !" ಎಂದನು.

"ನೀನು ಇನ್ನೂ ಒಂದೆರಡು ತಿಂಗಳು ಇಲ್ಲಿರುವುದಾಗಿ ಭಾವಿಸಿದ್ದೆ. ಇಷ್ಟು ಬೇಗ ಹಿಂದಿರುಗಬೇಕಾದರೆ ಇಲ್ಲಿಗೇಕೆ ಬಂದೆ ?" ಎಂದು ಪ್ರೀತಿಯಿಂದ ಜರೆದಳು.

"ಈ ಬಾರಿ ಕ್ಷಮಿಸಿ ತಾಯಿ. ಈ ಯುದ್ಧ ಮುಗಿದ ಮೇಲೆ ನೀವು ಹೋಗು ಎಂದು ಹೇಳುವತನಕ ನಾನು ಇಲ್ಲಿ ಇರುತ್ತೇನೆ !"

"ನೀನು ಬರುವುದು ಎಂದೋ ಏನೋ ! ಆದರೆ ನೀನು ಯಾವಾಗ ಬೇಕಾದರೂ ಇಲ್ಲಿಗೆ ಬಾ ! ನಿನಗೆ – ನನ್ನ ಮುದ್ದು ಕೃಷ್ಣನ ನೆನಪನ್ನು ತರುವ ನಿನಗೆ ಇಲ್ಲಿ ಸದಾ ಸುಸ್ವಾಗತವಿದೆ. ನಮ್ಮ ದತ್ತುಪುತ್ರ ನೀನಾದ ಮೇಲೆ ಇಲ್ಲಿಗೆ

ಬರಲು ನಾವು ಆಮಂತ್ರಣವೀಯಬೇಕೆ? ನಿನಗೆ ಬೇಕೆನಿಸಿದಾಗ ಬಾ ಮಗು?"

"ನೀವು ನನ್ನನ್ನು ಜಾತಿಕೆಡಿಸಿ ಹಿಂದೂ ಮಾಡಿಕೊಂಡುಬಿಟ್ಟರಿ ನಾನು ಕಾಲ್ಕೂಮಾಡಿಕೊಳ್ಳದೆ ಮತ್ತೆ ನನ್ನವರು ಮನೆಗೆ ಸೇರಿಸುವುದಿಲ್ಲ!" ಎಂದು ಆಲಿ ಆದಿಲ್‌ಷಹನು ಹಾಸ್ಯಮಾಡಿದ.

"ನೀನು ಮಹಮದೀಯನೆಂದು ನಾವು ತಿಳಿದೇ ಇಲ್ಲ. ನೀನು ನಮ್ಮ ಕೃಷ್ಣನಂತೆಯೇ ಇನ್ನೊಬ್ಬ ಮಗ!"

"ನಿಮ್ಮ ಪ್ರೀತಿಯ ಕಣ್ಣಿಗೆ ಜಾತಿಮತಗಳ ಸೋಂಕು – ಕಲ್ಮಶದ ಲೇಪ – ಇಲ್ಲ ತಾಯಿ! ಇಂತಹ ತಾಯಿಯನ್ನು ಪಡೆದ ನಾನು ನಿಜವಾಗಿಯೂ ಭಾಗ್ಯಶಾಲಿ!"

"ಪ್ರೀತಿ ಯಾವಾಗಲೂ ಕುರುಡೆಂದು ಹೇಳುತ್ತಾರೆ. ಈ ಮಾತಿನ ಸತ್ಯ ನನಗೆ ಇಂದು ತಿಳಿಯಿತು. ನೀನು ಮಹಮದೀಯನೆಂದು ಹೇಳುವ ತನಕ ಈ ಸಂಗತಿ ನನ್ನ ತಲೆಯಿಂದ ಮರೆತೇ ಹೋಗಿತ್ತು ಮಗು."

"ಈ ಭಾವನೆ ನಿಮ್ಮ ತಲೆಯಲ್ಲಿ ಅಪ್ಪಿತಪ್ಪಿಯಾದರೂ ಸುಳಿಯುವುದು ಬೇಡ ತಾಯಿ! ನಾನು ಎಂದಿದ್ದರೂ ನಿಮ್ಮ ಮಗನೇ. ನನ್ನವರು ನನ್ನನ್ನು ಜಾತಿಯಿಂದ ಹೊರಗೆ ಹಾಕಿದರೂ ಸರಿ, ನಾನು ಕಡೆತನಕ ನಿಮ್ಮ ಪುತ್ರನಾಗಿಯೇ ಉಳಿಯುತ್ತೇನೆ. ದೇವರು ನನ್ನನ್ನು ಕಡೆತನಕ ಅಗಲಿಸದೇ ಇರಲಿ. ಇಷ್ಟು ಮಾತ್ರ ನಡಸಿಕೊಡಲಿ!"

"ನೀನು ಬಿಜಾಪುರದ ಸುಲ್ತಾನ ಆಲಿ ಆದಿಲ್‌ಷಹನೆಂಬುದು ಇಂದಿನ ವರೆಗೆ ನನ್ನ ಮನಸ್ಸಿಗೆ ಬಂದಿರಲಿಲ್ಲ ಮಗು! ನಿನ್ನನ್ನ ನೋಡುತ್ತಲೇ ನನ್ನ ಕೃಷ್ಣ ಬಂದಿದ್ದಾನೆ ಎಂದು ತಿಳಿದೆ. ಸಹಜವಾಗಿಯೇ ನಿನ್ನನ್ನು ಪ್ರೀತಿಸಿದೆ. ನನ್ನ ಮಾತೃಹೃದಯ ನನ್ನ ಅಂಕೆಗೇ ನಿಲ್ಲಲಿಲ್ಲ. ಜಾತಿ, ಮತಗಳನ್ನು ನೋಡಲಿಲ್ಲ. ನಿನ್ನನ್ನು ಮಗನಾಗಿ ಒಪ್ಪಿಕೊಂಡಿತು. ಇದನ್ನೇ ಮಾಯೆ ಎಂದು ಕರೆಯುವುದು ಮಗು. ಒಮ್ಮೆ ನೀನು ನಮ್ಮ ಪ್ರೀತಿಗೆ ಪಾತ್ರವಾದ ಮೇಲೆ ಈ ಪ್ರೀತಿಯ ಗಂಗಾ ಪ್ರವಾಹ ಕಡೆತನಕ ನಿಲ್ಲದೆ ಹರಿಯುತ್ತಲೇ ಇರುತ್ತದೆ. ಸಹಜವಾಗಿ ಊಟೆಯಂತೆ ಉಕ್ಕಿಬಂದ ಈ ಭಾವ ದೇಶಕಾಲಗಳ, ಜಾತಿ ಮತಗಳ ಅಂಕೆಗೆ ಸಿಲುಕುವುದಿಲ್ಲ. ನೀನು ಎಲ್ಲೇ ಇರು, ಹೇಗೇ ಇರು ನಮ್ಮ ಪ್ರೀತಿ ನಿನ್ನದಾಗಿ ಉಳಿಯುತ್ತದೆ. ನೀನು ನಮಗೆ ಕೃತಜ್ಞನಾಗಿರು, ಇಲ್ಲದಿರು ನಮ್ಮ ನಮ್ಮ ಪ್ರೀತಿ ಮಾತ್ರ ತಗ್ಗುವುದಿಲ್ಲ. ಮೊದಲಿನಂತೆಯೇ ಇರುತ್ತದೆ. ಹೋಗಿ ಬಾ ಮಗು! ಭಗವಂತನು ನಿನಗೆ ಒಳ್ಳೆಯದನ್ನು ಮಾಡಲಿ!" ಎಂದು ಹೇಳಿದಳು.

ಇದನ್ನೆಲ್ಲಾ ಮೌನವಾಗಿ ಕೇಳುತ್ತಿದ್ದ ರಾಮರಾಯನು ಏನನ್ನೋ ಕನಸು ಕಾಣುತ್ತಾ ಕುಳಿತಿದ್ದನು. ಆ ತಾಯಿಮಕ್ಕಳ ಮಾತುಕತೆ ಅವನಿಗೆ ಬಹಳ ಹಿತಕರವಾಗಿತ್ತು. ಅವರ ಮಾತು ಮುಗಿದ ಮೇಲೆ ರಾಮರಾಯನು ಹೇಳಿದ:

"ಹಾಗಾದರೆ ನೀನು ಹೊರಡಲೇಬೇಕೆ ಮಗು! ಇನ್ನು ಕೆಲವು ದಿನಗಳಾದರೂ ಇರಲು ಸಾಧ್ಯವಿಲ್ಲವೆ?"

"ಅಪ್ಪಾಜಿ! ನೀವು ಎಲ್ಲವನ್ನೂ ಬಲ್ಲವರು! ನಿಮಗೆ ತಿಳಿಯಹೇಳುವಷ್ಟು ನಾನು ಸಮರ್ಥನಲ್ಲ. ಆದರೂ ನಾನು ರಾಜಧಾನಿಯಿಂದ ಹೆಚ್ಚು ಕಾಲ ಹೊರಗಿರುವುದು ಅಪಾಯವೆಂದು ಮಾತ್ರ ವಿಜ್ಞಾಪಿಸಿಕೊಳ್ಳಬಲ್ಲೆ! ನಾನು ತಡ ಮಾಡಿದರೆ ಆ ದ್ರೋಹಿ ಹುಸೇನ್ ನಿಜಾಂಷಹನು ಆ ಅಬ್ದುಲ್ಲನನ್ನು ಸಿಂಹಾಸನದ ಮೇಲೆ ಕೂಡಿಸುವುದು ಖಂಡಿತ! ಇದರಿಂದ ರಾಜ್ಯ ನನ್ನ ಕೈ ಬಿಡುವ ಸಂಭವ ಉಂಟು!"

"ನಿನ್ನ ರಾಜ್ಯ ನಿನ್ನ ಕೈಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಈ ಬಗ್ಗೆ ಚಿಂತಿಸಬೇಡ ಮಗು! ನಾನು ಇಂದೇ ನನ್ನ ಸೈನ್ಯ ಸಿದ್ಧತೆಗೆ ಆಜ್ಞೆ ಮಾಡುತ್ತೇನೆ. ಇನ್ನು ಕೆಲವೇ ದಿನಗಳಲ್ಲಿ ನಿನ್ನ ಸಿಂಹಾಸನ ನಿನ್ನದಾಗುತ್ತದೆ. ಈ ಬಗ್ಗೆ ಯೋಚಿಸಬೇಡ!" ಎಂದು ಸಮಾಧಾನ ಪಡಿಸಿದ ರಾಮರಾಯ.

"ನೀವು ಪಿತಾಜಿಯಾಗಿರುವ ತನಕ ನನಗೆ ಯಾವ ಚಿಂತೆ ಯೋಚನೆಗಳೂ ಇಲ್ಲ ಪಿತಾಜಿ! ಆದರೂ ನಾನು ಯುದ್ಧ ಮಾಡುವಕಾಲದಲ್ಲಿ ಇಲ್ಲಿ ವೃಥಾ ಕಾಲಹರಣ ಮಾಡುತ್ತಿರುವೆನಲ್ಲಾ ಎಂದು ಮನಸ್ಸಿಗೆ ನೆಮ್ಮದಿಯಿಲ್ಲವಾಗಿದೆ!"

"ಇದು ನಿನ್ನಂತಹ ವೀರನಿಗೆ ಸಹಜವೇ! ನೀನು ಚಿಂತಿಸಬೇಡ. ಇಂದೇ ಮುಕುಂದನಾಯಕನೊಡನೆ ಈ ದಂಡಯಾತ್ರೆಯನ್ನು ಕುರಿತು ಮಾತನಾಡುತ್ತೇನೆ. ಸಾಧ್ಯವಾದರೆ ನಾಳೆಯೇ ನಿನ್ನೊಡನೆ ಸೈನ್ಯ ಪ್ರಯಾಣಮಾಡುವಂತೆ ಮಾಡುತ್ತೇನೆ!"

"ನಿಮ್ಮನ್ನು ಹೇಗೆ ವಂದಿಸಬೇಕೆಂದು ತಿಳಿಯದಾಗಿದೆ ಪಿತಾಜಿ! ನಾನು ಇಲ್ಲಿಗೆ ಬಂದಾಗ ರಾಜ್ಯ ಕೋಶ, ತಂದೆತಾಯಿಗಳನ್ನು ಕಳೆದುಕೊಂಡು ಅನಾಥನಂತೆ ಬಂದೆ. ಆದರೆ ಇವುಗಳನ್ನೆಲ್ಲಾ ನೀವು ಅನುಗ್ರಹಿಸಿದ್ದೀರಿ! ನಿಮ್ಮ ಉಪಕಾರಕ್ಕೆ ನಾನು ಪ್ರತ್ಯುಪಕಾರವೇನು ಮಾಡಬಲ್ಲೆ? ನಿಮ್ಮ ಕೃತಜ್ಞತೆಯನ್ನು ನಾನು ಹೇಗೆ ತಾನೆ ತೀರಿಸಬಲ್ಲೆ?" ಕಂಪಿತ ಧ್ವನಿಯಲ್ಲಿ ಹೇಳಿದ ಆಲಿ ಆದಿಲ್‌ಷಹ.

"ಮಗು, ಕೃತಜ್ಞತೆಯ ಮಾತು ಹೇಳಬೇಡ. ಹಾಗೆ ನೋಡಹೋದರೆ ನಾವೂ ನಿನಗೆ ಕೃತಜ್ಞರಾಗಿರಬೇಕಾಗಿದೆ. ನೀನು ನಮ್ಮ ಪಾಲಿಗೆ ಅಗಲಿದ

ಪುತ್ರನಾಗಿ ಬಂದು ನಮಗೆ ಕೊಟ್ಟಿರುವ ಸಂತೋಷ ಅಲ್ಪವೆ? ನೀನು ನಮ್ಮ ಹೃದಯಕ್ಕೆ ಅಮೃತಸೇಚನ ಮಾಡಿದೆ. ನಮ್ಮ ಗಾಯವನ್ನು ಮಾಗಿಸಿದೆ. ನಿನ್ನಿಂದ ತಿರುಮಲೆಗೆ ಉಂಟಾಗಿರುವ ಸಮಾಧಾನಕ್ಕೆ ನಾವು ಎಷ್ಟು ಮಾಡಿದರೂ ಏನು ಕೊಟ್ಟರೂ ಅಲ್ಪವೇ. ಪುತ್ರಶೋಕದಿಂದ ಮತಿವಿಕಲಳಾಗಿದ್ದ ಅವಳು ನಿನ್ನನ್ನು ನೋಡಿದ ಮೇಲೆ ತನ್ನ ದುಃಖವನ್ನು ಮರೆತಳು. ಅವಳ ಭಾವೋನ್ಮಾದ ಕಳೆಯಿತು. ದೇವರೇ ನಮ್ಮ ನೊಂದ ಹೃದಯಗಳಿಗೆ ಸಂಜೀವಿನಿಯಾಗಿ ನಿನ್ನನ್ನು ನಮ್ಮ ಬಳಿಗೆ ಕಳುಹಿಸಿಕೊಟ್ಟಿರಬೇಕು. ನೀನೂ ನಮ್ಮ ನಿರೀಕ್ಷೆಯನ್ನು ವ್ಯರ್ಥಗೊಳಿಸಲಿಲ್ಲ. ನಿನ್ನ ನಿರ್ಮಲ ಹೃದಯದಲ್ಲಿ ನಮಗೆ ಅವಕಾಶ ಕೊಟ್ಟಿರುವೆ. ನಮ್ಮನ್ನು ತಾಯಿತಂದೆಗಳಂತೆ ಕರೆದು ನಮಗೆ ಇಲ್ಲದ ಗೌರವ ಕೊಟ್ಟಿರುವೆ. ನಿನ್ನಂಥ ಪುತ್ರರನ್ನು ಪಡೆಯಲು ನಾವು ನಿಜವಾಗಿಯೂ ಪುಣ್ಯಶಾಲಿಗಳು....ನೀನು ನಮ್ಮನ್ನು ಸ್ನೇಹಿತರೆಂದು ಬೇಕಾದರೂ ತಿಳಿ, ಸಾಕು ತಂದೆ ತಾಯಿಗಳೆಂದಾದರೂ ತಿಳಿ. ನಮ್ಮನ್ನು ನೆನೆದರೂ ಸರಿ! ಮರೆತರೂ ಸರಿ! ನೀನು ಮಾತ್ರ ನಮ್ಮ ಹೃದಯಗಳಲ್ಲಿ ಎಂದೆಂದಿಗೂ ನಮ್ಮ ಪ್ರೀತಿಯ, ಅಭಿಮಾನದ ಪುತ್ರನಾಗಿಯೇ ಉಳಿಯುತ್ತೀಯೆ. ನೀನು ಎಲ್ಲೇ ಇರು, ಹೇಗೇ ಇರು ನಮ್ಮ ಸಾಕುಮಗನಾಗಿಯೇ ಇರುತ್ತೀಯೆ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ! ಯಶೋವಂತನಾಗಿರು ಕಂದಾ! ಕೀರ್ತಿವಂತನಾಗು ಕಂದಾ!" ಎಂದು ಅಲಿ ಆದಿಲ್‌ಷಹನನ್ನು ತಬ್ಬಿಕೊಂಡು ಅವನನ್ನು ಪ್ರೀತಿಯಿಂದ ನೇವರಿಸಿ, ಹೃದಯ ತುಂಬ ಹಾರೈಸಿದನು.

ಇದನ್ನೆಲ್ಲಾ ನೋಡುತ್ತಾ ತಿರುಮಲಾಂಬೆ ಶಿಲಾಮೌನದಲ್ಲಿ ಕುಳಿತಳು. ಭಾವೋನ್ಮಾದದಲ್ಲಿ ಇದ್ದ ಯಾರೂ ಯಾರಿಗೂ ಏನೊಂದನ್ನೂ ನುಡಿಯುವಂತಿರಲಿಲ್ಲ.

ಅಲಿ ಆದಿಲ್‌ಷಹನ ಹೆದರಿಕೆ ನಿರಾಧಾರವಾಗಿರಲಿಲ್ಲ.

ಅಹಮದ್ ನಗರದ ಸುಲ್ತಾನ ಹುಸೇನ ನಿಜಾಂಷಹನ ಪ್ರಚೋದನೆ, ಪ್ರೋತ್ಸಾಹಗಳಿಂದ ಇದುವರೆಗೆ ಗೋವೆಯ ಪೋರ್ಚುಗೀಸರ ಬಳಿ ಆಶ್ರಯ ಪಡೆದಿದ್ದ ಅಬ್ದುಲ್ಲನು ಮತ್ತೊಮ್ಮೆ ಬಿಜಾಪುರದ ಸಿಂಹಾಸನವನ್ನು ಅಪಹರಿಸುವ ಪ್ರಯತ್ನ ಮಾಡಿದ್ದನು. ಪೋರ್ಚುಗೀಸರು ತಮ್ಮ ನೆರವಿಗೆ ಬಂದರೆ, ಬಿಜಾಪುರವನ್ನು ಆಕ್ರಮಿಸಿ, ಅಲ್ಲಿನ ಸಿಂಹಾಸನದ ಮೇಲೆ ಅಬ್ದುಲ್ಲನನ್ನು ಕೂಡಿಸಲು ತನ್ನಿಂದಾದ ಪ್ರಯತ್ನ ಮಾಡುವುದಾಗಿ ನಿಜಾಂಷಹನು ಗೋವೆಗೆ ಪತ್ರ ಬರೆದಿದ್ದನು. ಇದರಿಂದ ಸುಪ್ರಸನ್ನರಾಗಿದ್ದ ಪೋರ್ಚುಗೀಸರು ಅಬ್ದುಲ್ಲನೊಡನೆ ಬಿಜಾಪುರಕ್ಕೆ ಹೊರಟಿದ್ದರು. ಅಬ್ದುಲ್ಲನಿಗೆ ಇತ್ತಿದ್ದ ತಮ್ಮ ವಾಗ್ದಾನವನ್ನು

ಈಡೇರಿಸಿಕೊಳ್ಳುವ ಅವಕಾಶ ಇದೀಗ ಬಂದಿತ್ತು. ಸಾಲ್ಸೆಟ್ಸ್ ಮತ್ತು ಬಾರ್ಡೋಸ್ ಪ್ರದೇಶಗಳ ಮೇಲಿನ ಆಸೆಯಿಂದ ಅವರು, ಮಿತ್ರರಾಗಿದ್ದ ಬಿಜಾಪುರದ ಸುಲ್ತಾನನ ಮೇಲೆ ಈಗ ದಂಡೆತ್ತಿ ಬಂದಿದ್ದರು. ಇವರಿಗೆ ದಂಡನಾಯಕನಾಗಿ ಗ್ಯಾಸ್ಪರ್ ಡಿ ಮೆಲ್ಲೋ ಎಂಬ ದಕ್ಷದಳಪತಿಯು ಹೊರಟಿದ್ದನು. ಇವರು ದಾರಿಯಲ್ಲಿ ಸಿಕ್ಕಿದ ಪೆಂಡವನ್ನು ಆಕ್ರಮಿಸಿಕೊಂಡು ಬಿಜಾಪುರದ ಮೇಲೆ ಹೊರಟಿದ್ದರು.

ಈ ವಾರ್ತೆಯು ಗೂಢಚಾರರಿಂದ ವಿಜಯನಗರಕ್ಕೆ ಬಂದಿತ್ತು. ಈಗ ದಂಡಯಾತ್ರೆಯನ್ನು ನಿಧಾನ ಮಾಡುವಂತೆ ಇರಲಿಲ್ಲ. ಕೂಡಲೇ ರಾಮರಾಯನು ಮುಕುಂದನಾಯಕನ ಕೈಲಿ ದೊಡ್ಡದೊಂದು ಸೈನ್ಯವನ್ನು ಕೊಟ್ಟು ಪೋರ್ಚುಗೀಸರ ಮೇಲೆ ಕಳುಹಿಸಿಕೊಟ್ಟನು.

ಮುಕುಂದನಾಯಕನು ಸೈನ್ಯದೊಂದಿಗೆ ವೇಗವಾಗಿ ಹೊರಟು ಪೋರ್ಚುಗೀಸರನ್ನು ಬೇರೊಂದು ಮಾರ್ಗದಲ್ಲಿ ಬಂದು ಎದುರಿಸಿದನು. ತಮ್ಮ ಮೇಲೆ ವಿಜಯನಗರದರಸರು ಹೀಗೆ ಅನಿರೀಕ್ಷಿತವಾಗಿ ದಾಳಿ ನಡಸುವರೆಂದು ಅವರು ತಿಳಿದಿರಲಿಲ್ಲ. ಏಕೆಂದರೆ ಈಗ ವಿಜಯನಗರದವರಿಗೂ ಪೋರ್ಚುಗೀಸರಿಗೂ ಕೆಲವು ಕಾಲದ ಹಿಂದೆ ಒಪ್ಪಂದವೇರ್ಪಟ್ಟಿತ್ತು. ಇದರಿಂದ ಅಶ್ವವ್ಯಾಪಾರ ವಿಜಯನಗರದವರದಾಗಿತ್ತು. ಅವರು ಪರಸ್ಪರ ಮಿತ್ರರೇ ಆಗಿದ್ದರು. ತಮ್ಮೊಡನೆ ಮಿತ್ರತ್ವದಿಂದ ಇರುವ ವಿಜಯನಗರದವರು ಒಮ್ಮೆಲೇ ದಾಳಿ ಇಡುವರೆಂದು ಅವರು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ. ಅಂತಲೇ ನಡುದಾರಿಯಲ್ಲಿ ವಿಜಯನಗರ ಸೈನ್ಯ ತಮ್ಮ ಮೇಲೆ ಬಿದ್ದಾಗ ಅವರು ಅಧೀರರೇ ಆದರು.

ಇದಕ್ಕೆ ತಕ್ಕಂತೆ ಪ್ರಕೃತಿಯೂ ಅವರಿಗೆ ವಿರೋಧವಾಗಿತ್ತು. ಹಿಂದಣ ದಿನದಷ್ಟೇ ಭಾರಿ ಮಳೆ ಬಂದು ಪೋರ್ಚುಗೀಸರ ತೋಪಿನ ಗಾಡಿಗಳು ಮಣ್ಣಿನಲ್ಲಿ ಹೂತುಕೊಂಡು ಪ್ರಯೋಜನಕ್ಕೆ ಬಾರದಾದುವು. ಮದ್ದು ಗುಂಡುಗಳು ಒದ್ದೆಯಾಗಿ ನಿಷ್ಪ್ರಯೋಜನವಾಗಿದ್ದುವು. ಅವರ ಆಹಾರ ಸಂಗ್ರಹ, ಮತ್ತಿತರ ವಸ್ತುಗಳೆಲ್ಲ ನೀರಿನಿಂದ ತೊಯ್ದು ಹೋಗಿದ್ದುವು. ಹೀಗಾಗಿ ಒಮ್ಮೆಲೇ ಬಿದ್ದ ವಿಜಯನಗರದ ಸೈನ್ಯವನ್ನು ಎದುರಿಸಲಾರದೇ ಪೋರ್ಚುಗೀಸರು ಹಿಮ್ಮೆಟ್ಟಿದರು; ಯುದ್ಧದಲ್ಲಿ ತಮಗೆ ಸೋಲಾಗುವುದೆಂದು ಅರಿತೊಡದೆಯೇ ಅಬ್ದುಲ್ಲನು ಅಹಮದ್‌ನಗರಕ್ಕೆ ಓಡಿಹೋದನು. ಸೋತ ಪೋರ್ಚುಗೀಸರ ಪಡೆಯು ಗೋವೆಗೆ ಪಲಾಯನ ಮಾಡಿತು.

ಈ ಸುದ್ದಿಯನ್ನು ಕೇಳಿದ ಅಹಮದ್‌ನಗರದ ನಿಜಾಮುಷಹನು ತಾನು ಬಿಜಾಪುರದಲ್ಲಿ ಇದ್ದರೆ, ತನಗೂ ಅದೇ ದುರ್ಗತಿ ಬರಬಹುದೆಂದು ಹೆದರಿ

ಅದನ್ನು ತಿಳಿದು ಅಹಮುದ್‌ನಗರದ ರಕ್ಷಣೆಗೆ ಧಾವಿಸಿದನು.

ಮುಕುಂದನಾಯಕನು ಕೊಂಚ ಸೈನ್ಯವನ್ನು ಆಲಿ ಅದಿಲ್‌ಷಹನಿಗೆ ಕೊಟ್ಟು ಅವನನ್ನು ಬಿಜಾಪುರಕ್ಕೆ ಕಳುಹಿಸಿಕೊಟ್ಟ. ಅಬ್ದುಲ್ಲನು ತಲೆತಪ್ಪಿಸಿ ಕೊಂಡಿದ್ದ ಅಹಮುದ್‌ನಗರದ ಮೇಲೆ ದಂಡೆತ್ತಿ ಹೊರಟನು. ಅಬ್ದುಲ್ಲನನ್ನು ಕೈಸೆರೆ ಹಿಡಿಯುವುದಲ್ಲದೆ ಬಿಜಾಪುರದ ಮೇಲೆ ವ್ಯಥಾಕಾರಣವಾಗಿ ದಾಳಿ ಮಾಡಿದ ಹುಸೇನ್‌ನಿಜಾಂಷಹನನ್ನು ಶಿಕ್ಷಿಸುವುದು ಬೇಕಾಗಿತ್ತು. ಈಗ ಬಿಜಾ ಪುರವು ಶತ್ರುನಿರ್ಭಾದಿತವಾಗಲು ಅವನು ಅಹಮುದ್‌ನಗರದ ಮೇಲೆ ದಂಡೆತ್ತಿ ಹೊರಟಿದ್ದನು.

ಇದನ್ನು ಕಂಡು ಹುಸೇನ್ ನಿಜಾಂಷಹನಿಗೆ ಗಾಬರಿಯಾಯಿತು. ಅಬ್ದು ಲ್ಲನ ಕಾರಣದಿಂದ ಬೀದಿಯಲ್ಲಿ ಹೋಗುತ್ತಿದ್ದ ಮಾರಿಯನ್ನು ಮನೆಗೆ ಆಹ್ವಾನಿ ಸಿದಂತೆ ಆಗಿತ್ತು. ಅವನು ಅಬ್ದುಲ್ಲನ ನಿಜವಾದ ಮಿತ್ರನೂ ಆಗಿರಲಿಲ್ಲ. ತನ್ನ ಸ್ವಾರ್ಥ ಸಾಧಿಸಿಕೊಳ್ಳಲು ಅವನು ಅಬ್ದುಲ್ಲನ ಪಕ್ಷ ಕಟ್ಟಿದ್ದ ಅಷ್ಟೇ. ಈಗ ಅಬ್ದುಲ್ಲನು ಅಹಮುದ್‌ನಗರದಲ್ಲಿ ಅಡಗಿದ್ದುದರಿಂದ ಅವನು ವಿಜಯನಗರದ ದ್ವೇಷಕ್ಕೆ ಪಕ್ಕಾಗಬೇಕಾಯಿತು. ಅಬ್ದುಲ್ಲನ ದೆಸೆಯಿಂದ ವಿಜಯನಗರದೊಡನೆ ಯುದ್ಧ ಸನ್ನಿಹಿತವಾಗುವುದು ಅವನಿಗೆ ಇಷ್ಟವಿರಲಿಲ್ಲ. ಅವನೊಂದು ಬಯ ಸಿದ್ದ, ದೈವವೊಂದು ನೆನೆದಿತ್ತು. ಅವನು ಎಬ್ಬಿಸಿಬಿಟ್ಟಿದ್ದ ಭೂತ ಅವನ ಮೇಲೇ ಎರಗಿದಂತೆ ಆಗಿತ್ತು. ಅವನಿಗೆ ವಿಜಯನಗರದ ಸೈನ್ಯದ ಮುಂದೆ ನಿಂತರೆ ತನಗೆ ಸೋಲಾಗುವುದೆಂದು ತಿಳಿದಿತ್ತು. ಪೋರ್ಚುಗೀಸರ ನೆರವು – ಅವರ ತೋಪುಗಳು ಮದ್ದು ಗುಂಡುಗಳು, ಅವರ ಅಶ್ವ ಸೈನ್ಯಗಳ ನೆರವು ದೊರೆತಿದ್ದರೆ ಆ ಮಾತು ಬೇರೆಯಾಗಿತ್ತು. ಆದರೆ ಪೋರ್ಚುಗೀಸರು ನಡುನೀರಿನಲ್ಲಿ ಅವನ ಕೈ ಬಿಟ್ಟಿದ್ದರು. ಈಗ ಹೇಗಾದರೂ ಮಾಡಿ ವಿಜಯನಗರದೊಂದಿಗೆ ಯುದ್ಧ ತಪ್ಪಿಸಿಕೊಳ್ಳಲು ಆಶಿಸಿದನು. ಅಂತಲೇ ಅವನು ಮುಕುಂದನಾಯ ಕನ ಬಳಿಗೆ ಸಂಧಾನಾಕಾಂಕ್ಷಿಯಾಗಿ ದೂತರನ್ನು ಅಟ್ಟಿದನು.

ಯುದ್ಧದಿಂದಸಾಧ್ಯವಾಗುವುದು ಸಂಧಾನದಿಂದ ಸಾಧಿಸುವುದಾದರೆ ಅದಕ್ಕೆ ಮುಕುಂದನಾಯಕನು ಸಿದ್ಧನಾಗಿಯೇ ಇದ್ದ. ಅವನಿಗೆ ಬೇಕಾಗಿದ್ದುದು ಬಿಜಾಪುರದ ಸಿಂಹಾಸನಕ್ಕೆ ಪ್ರತಿಸ್ಪರ್ಧಿಯಾಗಿದ್ದ ಅಬ್ದುಲ್ಲನ ಭೀತಿ ನಿವಾರಣೆ ಗಾಗಿ ಬಿಜಾಪುರದ ಮೇಲೆ ವಿನಾಕಾರಣವಾಗಿ ದಂಡೆತ್ತಿ ಬಂದಿದ್ದ ಅಹಮುದ್ ನಗರದ ಸುಲ್ತಾನನನ್ನು ದಂಡಿಸುವುದು. ಇವುಗಳನ್ನು ಸಾಧಿಸಲು ಮುಕುಂದ ನಾಯಕನು ಇವುಗಳನ್ನೇ ಸಂಧಾನದ ಷರತ್ತುಗಳಾಗಿ ಒಡ್ಡಿದನು. ಈಗ ಅಹ ಮುದ್‌ನಗರದಲ್ಲಿ ತಲೆತಪ್ಪಿಸಿಕೊಂಡಿರುವ ಅಬ್ದುಲ್ಲನನ್ನು ತನಗೆ ಒಪ್ಪಿಸಿ ಯುದ್ಧದ

ವೆಚ್ಚದ ಕೆಲವಂಶ ಅವನು ಕೊಡುವುದಾದರೆ ಒಪ್ಪಂದಕ್ಕೆ ಬರಲು ತನ್ನ ಒಪ್ಪಿಗೆ ಉಂಟೆಂದು ದೂತರ ಮೂಲಕ ಮುಕುಂದನಾಯಕನು ಹೇಳಿಕಳುಹಿಸಿದನು.

ಇದರಿಂದ ನಿಜಾಂಷಹನು ಇಕ್ಕಟ್ಟಿಗೆ ಸಿಕ್ಕಿಕೊಂಡನು. ಅಬ್ದುಲ್ಲನನ್ನು ಮುಕುಂದನಾಯಕನಿಗೆ ಒಪ್ಪಿಸಿದರೆ ಅವನನ್ನು ತಾನೇ ಮೃತ್ಯುವಿನ ವಶಮಾಡಿದಂತೆ ಎಂದು ಅವನಿಗೆ ತಿಳಿದಿತ್ತು. ತನ್ನನ್ನು ಮಿತ್ರನೆಂದು ಬಗೆದು ಆಶ್ರಯಕ್ಕೆ ಬಂದವನನ್ನು ತನ್ನ ಸ್ವಾರ್ಥಕ್ಕೆ ಬಲಿಗೊಡುವುದೇ ಎಂದು ಚಣಕಾಲ ಆಲೋಚಿಸಿದನು. ಕಡೆಗೆ ನಿರ್ವಾಹವಿಲ್ಲದೆ ಮುಕುಂದನಾಯಕನಿಗೆ ಒಂದು ಪತ್ರ ಬರೆದು, ತನ್ನಲ್ಲಿ ಆಶ್ರಯ ಬೇಡಿ ಬಂದಿರುವ ಅಬ್ದುಲ್ಲನಿಗೆ ತಾನು ಪ್ರಾಣ ರಕ್ಷಣೆಯ ವಾಗ್ದಾನ ಮಾಡಿರುವುದಾಗಿಯೂ, ಅವನ ಅಪರಾಧಗಳನ್ನು ಮನ್ನಿಸಿ ಅವನಿಗೆ ಪ್ರಾಣದಾನ ನೀಡುವುದಾದರೆ ಅಬ್ದುಲ್ಲನನ್ನು ಅವನಿಗೆ ಒಪ್ಪಿಸಲು ತಾನು ಸಿದ್ಧವಿರುವುದಾಗಿಯೂ ತಿಳಿಸಿದನು. ಇದಕ್ಕೆ ಮುಕುಂದನಾಯಕನು ಒಪ್ಪಿಕೊಂಡನು. ಅವನಿಗೆ ಬೇಕಾಗಿದ್ದುದು ಅಬ್ದುಲ್ಲನ ಮರಣವಲ್ಲ, ಸಿಂಹಾಸನಕ್ಕೆ ಅವನಿಂದ ಇದ್ದ ಭೀತಿಯ ನಿರ್ಮೂಲ. ಅಂತಲೇ ಅಬ್ದುಲ್ಲನು ತನ್ನ ಹಕ್ಕು ನಿವೃತ್ತಿಯ ಬಗ್ಗೆ ಒಂದು ಪತ್ರ ಬರೆದುಕೊಟ್ಟನು. ಅವನನ್ನು ಬುರ್ಲಿದುರ್ಗದಲ್ಲಿ ನಿರ್ಬಂಧದಲ್ಲಿ ಇರಿಸಿ, ಮುಂದೆ ಅವನಿಂದ ಯಾವ ತೊಂದರೆಯಾದರೂ ಇದಕ್ಕೆ ಅಹಮದ್‌ನಗರದ ಹುಸೇನ್‌ನಿಜಾಂಷಹನೇ ಜವಾಬ್ದಾರನೆಂದು ಅವನ ಕೈಲಿ ಮುಚ್ಚಳಿಕೆಯನ್ನು ಬರೆಸಿಕೊಂಡು, ಅವನೊಡನೆ ಒಂದು ಒಪ್ಪಂದ ಮಾಡಿಕೊಂಡು ವಿಜಯನಗರಕ್ಕೆ ಹಿಂದಿರುಗಿದನು.

ರಾಮರಾಯನು ಬಿಜಾಪುರದ ಸುಲ್ತಾನನಿಗೆ ಕೊಟ್ಟಿದ್ದ ವಾಗ್ದಾನ ಈಡೇರಿತ್ತು. ಬಿಜಾಪುರದ ಸಿಂಹಾಸನ ಮತ್ತೆ ಅಲಿ ಆದಿಲ್‌ಷಹನಿಗೆ ದೊರೆತುದಲ್ಲದೆ, ಅಬ್ದುಲ್ಲನ ಭಯವೂ ನಿರ್ಮೂಲವಾಗಿತ್ತು.

ಅಹಮದ್‌ನಗರದ ನಿಜಾಂಷಹನು ವಿಜಯನಗರದೊಂದಿಗೆ ತಾತ್ಕಾಲಿಕ ಒಪ್ಪಂದ ಮಾಡಿಕೊಂಡಿದ್ದರೂ ಅವನಿಗೆ ತನ್ನ ಎಲ್ಲ ಹಂಚಿಕೆಗಳನ್ನೂ ನಿರರ್ಥಕಗೊಳಿಸಿದ ರಾಮರಾಯನ ಮೇಲೆ ಸಿಟ್ಟು ಅಸಮಾಧಾನಗಳು ಇದ್ದೇ ಇದ್ದುವು. ರಾಮರಾಯನು ತನ್ನಂತೆಯೇ ಮಹತ್ವಾಕಾಂಕ್ಷಿಯಾಗಿದ್ದುದು ಅವನಿಗೆ ಬಲವಾದ ಪ್ರತಿಸ್ಪರ್ಧಿ ಹುಟ್ಟಿಕೊಂಡಂತೆಯೆ ಆಗಿತ್ತು. ಅವನಿಗೆ ರಾಮರಾಯನ ವಿಷಯದಲ್ಲಿ ಗೌರವವಿರಲಿಲ್ಲ. ಅವನ ಹಿಂದೂ ಮುಸ್ಲಿಂ ಸಖ್ಯದ ನೀತಿಯ ಹಿಂದೆ ಯಾವುದೋ ಕುಟಿಲಕಾರಾಗಾರವಿದೆ ಎಂದು ಅವನು ಶಂಕಿಸಿದ್ದ. ಬಹಮನಿ ಸುಲ್ತಾನರನ್ನು ಸವಿನುಡಿಗಳಿಂದ ಮರುಳುಗೊಳಿಸಿ, ಸ್ನೇಹದ ಹೆಸರಿನಲ್ಲಿ ಅವರನ್ನು ಸಾಮಂತ ರಾಜ್ಯಗಳಾಗಿ ಮಾಡಿಕೊಂಡು ದಕ್ಷಿಣಾಪಥದಲ್ಲೆಲ್ಲಾ

ವಿಜಯನಗರ ಸಾಮ್ರಾಜ್ಯವನ್ನು ಮೆರೆಸುವುದೇ ರಾಮರಾಯನ ಆಶಯವೆಂದು ಅವನು ಊಹಿಸಿದ್ದನು. ಇಂದು ಸ್ನೇಹಿತರಾದ ಸುಲ್ತಾನರು ನಾಳೆ ಸಾಮಂತರು; ನಾಳೆ ಸಾಮಂತರಾದವರು ಮುಂದೊಂದು ದಿನ ವಿಜಯನಗರ ಸಾಮ್ರಾಜ್ಯದಲ್ಲಿ ಸೇರಿಹೋಗಿ, ಬಹಮನಿ ಸುಲ್ತಾನರ ಹೆಸರನ್ನು ಇತಿಹಾಸದಿಂದ ತೊಡೆದುಹಾಕಿ ಮುಸಲ್ಮಾನ ಜನತೆಯನ್ನು ಹಿಂದೂ ಮುಸ್ಲಿಂ ಸಖ್ಯದ ಹೆಸರಿನಲ್ಲಿ ಮತಾಂತರ ಗೊಳಿಸಿ, ಅಖಂಡ ಹಿಂದೂ ರಾಜ್ಯಸ್ಥಾಪನೆ ಮಾಡುವುದೇ ಅವನ ದುರುದ್ದೇಶ ವೆಂದು ಅವನು ಭಾವಿಸಿದ್ದನು. ಇದರಿಂದಾಗಿ, ಉತ್ಕಟ ಮಹಮದೀಯು ನಾಗಿದ್ದ ಹುಸೇನ್ ನಿಜಾಂಷಹನಿಗೆ ವಿಜಯನಗರದ ಮೇಲೆ – ರಾಮರಾಯನ ಮೇಲೆ ಭಯಂಕರ ಸಿಟ್ಟು ಇತ್ತು. ಅವನ ಆಡುವ ರಾಜಕೀಯ ಚದುರಂಗ ದಾಟದಲ್ಲಿ ಗೋಲ್ಕಂಡ ಹಾಗೂ ಬಿಜಾಪುರಗಳ ಸುಲ್ತಾನರು ಕಾಯಿಗಳಾದುದು ಅವನಿಗೆ ಇಷ್ಟವಿರಲಿಲ್ಲ ಅವನು ತಮ್ಮ ಹಿತವನ್ನು ಮರೆತು ರಾಮರಾಯನ ಕೈ ಬೊಂಬೆಗಳಾಗಿದ್ದುದುಕ್ಕೆ ಅವರ ಮೇಲೂ ಅವನಿಗೆ ಆಕ್ರೋಶವಿತ್ತು. ಈಗ ತಾನೊಬ್ಬನೇ ಮುಸಲ್ಮಾನ ಧರ್ಮದ ಪುನರುದ್ಧಾರಕ್ಕಾಗಿ ಹೋರಾಡಬೇಕಾ ಗಿದೆ. ಮುಸ್ಲಿಮ ಜನತೆಯ ಹಿತವನ್ನು ಎತ್ತಿ ಹಿಡಿಯಬೇಕಾಗಿದೆ ಎಂದು ಅವನು ತಿಳಿದಿದ್ದನು. ಅವನು ರಾಮರಾಯನೊಂದಿಗೆ ತಾತ್ಕಾಲಿಕ ಒಪ್ಪಂದಕ್ಕೆ ಬಂದಿದ್ದರೂ, ಇತರ ಬಹಮನಿ ಸುಲ್ತಾನರಿಗೆ ರಾಮರಾಯನ ಗೋಮುಖ ವ್ಯಾಘ್ರತನದ ಪರಿಚಯ ಮಾಡಿಕೊಟ್ಟು ಅವರನ್ನು ತನ್ನ ಕಡೆಗೆ ಒಲಿಸಿಕೊಂಡು, ಮುಸ್ಲಿಮ ಧರ್ಮದ ರಕ್ಷಣೆಗಾಗಿ ಜಿಹಾದನ್ನು ಕೈಗೊಳ್ಳಬೇಕೆಂಬ ಮಹತ್ವಾ ಕಾಂಕ್ಷೆ ಇತ್ತು. ಅಂತಲೇ ರಾಮರಾಯನೊಂದಿಗೆ ಸ್ನೇಹವನ್ನು ನಟಿಸಿ, ಒಳಗೆ ಕತ್ತಿ ಮಸೆಯುತ್ತಾ ಯುದ್ಧಸಿದ್ಧನಾಗುತ್ತಿದ್ದನು.

ನಿಜಾಮುಷಹನಿಗೆ ರಾಮರಾಯನ ಮೇಲೆ ಆಕ್ರೋಶ ಬರಲು ಇನ್ನೊಂದು ಕಾರಣವೂ ಇತ್ತು. ಈ ಹಿಂದೆ ತನ್ನಿಂದ ಕಿತ್ತುಕೊಂಡಿದ್ದ ಕಲ್ಯಾಣಿಯನ್ನು ರಾಮರಾಯನು ಸ್ನೇಹದ ಕಾಣಿಕೆಯಾಗಿ ಆಲಿ ಅದಿಲ್‌ಷಹನಿಗೆ ಕೊಟ್ಟಿದ್ದನು. ಕಲ್ಯಾಣಿಯನ್ನು ರಾಮರಾಯನೇ ಉಳಿಸಿಕೊಂಡಿದ್ದರೆ ನಿಜಾಮುಷಹನಿಗೆ ಅಷ್ಟು ವ್ಯಥೆಯಾಗುತ್ತಿರಲಿಲ್ಲ. ತನ್ನ ಪ್ರತಿಕಕ್ಷಿಯಾಗಿದ್ದ ಆಲಿ ಅದಿಲ್‌ಷಹನಿಗೆ ಅದನ್ನು ಕೊಟ್ಟುದು ಅವನಿಗೆ ಸಹನೆಯಾಗಲಿಲ್ಲ. ಇದನ್ನು ಆಲಿ ಆದಿಲ್‌ಷಹನಿಂದ ಹಿಂದಕ್ಕೆ ಪಡೆಯಲು ಹೊಂಚುಹಾಕುತ್ತಿದ್ದನು. ಇದಕ್ಕೆ ಯುದ್ಧವೊಂದೇ ದಾರಿಯಾಗಿತ್ತು.

ನಿಜಾಮುಷಹನು ಇದ್ದಕ್ಕಿದ್ದಂತೆ, ಯಾರಿಗೂ ತಿಳಿಸದೆ ಕಲ್ಯಾಣಿಯ ಮೇಲೆ ದಾಳಿ ಇಟ್ಟು ಅದನ್ನು ವಶಪಡಿಸಿಕೊಂಡನು. ಈ ಸುದ್ದಿ ಮಿಂಚಿನ ವೇಗ

ದಲ್ಲಿ ಬಿಜಾಪುರಕ್ಕೆ ಮುಟ್ಟಿತು. ಈ ಸಂಗತಿಯನ್ನು ಕೇಳಿ ಆಲಿ ಅದಿಲ್‌ಷಹನಿಗೆ ಏನುಮಾಡಬೇಕೆಂದು ತಿಳಿಯಲಿಲ್ಲ. ಅವನಲ್ಲಿದ್ದ ಅಲ್ಪ ಸೈನ್ಯದೊಂದಿಗೆ ಕಲ್ಯಾಣಿಯ ರಕ್ಷಣೆಗೆ ಹೋಗುವಂತೆ ಇರಲಿಲ್ಲ. ಅವನು ನಿರ್ವಾಹವಿಲ್ಲದೆ ಕಲ್ಯಾಣಿಯಮೇಲೆ ನಿಜಾಮುಷಹನು ದಾಳಿ ಇಟ್ಟು ವಶಪಡಿಸಿಕೊಂಡ ಸಂಗತಿಯನ್ನು ರಾಮರಾಯನಿಗೆ ತಿಳಿಸಿ, ಅವನ ನೆರವನ್ನು ಕೋರಿ, ತನ್ನ ಸ್ನೇಹಿತರಾದ ಕಿಶ್‌ವಾರಖಾನ ಮತ್ತು ಅಬುತುರುಬ್ ಖಾನರನ್ನು ರಾಯಭಾರಿಗಳಾಗಿ ವಿಜಯನಗರಕ್ಕೆ ಕಳುಹಿಸಿಕೊಟ್ಟನು.

ಈ ಸುದ್ದಿಯನ್ನು ಕೇಳಿ ರಾಮರಾಯನು ಪ್ರಕ್ಷುಬ್ಧಗೊಂಡನು. ತಾನು ಆಲಿ ಆದಿಲ್‌ಷಹನಿಗೆ – ತನ್ನ ದತ್ತುಪುತ್ರನಿಗೆ ಉಡುಗೊರೆಯಾಗಿ ಇತ್ತಿದ್ದ ಕಲ್ಯಾಣಿಯ ಮೇಲೆ ನಿಜಾಂಷಹನ ವಕ್ರದೃಷ್ಟಿ ಬೀಳುವುದೆಂದು ಅವನು ತಿಳಿದಿರಲಿಲ್ಲ. ಅವನೊಡನೆ ಬಂದಿದ್ದ ಒಪ್ಪಂದವನ್ನು ಅವನು ತಾನಾಗಿ ಮುರಿಯುವನೆಂದು ಅವನು ತಿಳಿದಿರಲಿಲ್ಲ. ಕೂಡಲೆ ರಾಮರಾಯನು ಅವನನ್ನು ವಿಚಾರಿಸಿ, ಬುದ್ಧಿವಾದ ಹೇಳಿ ಒಂದು ಪತ್ರ ಬರೆದನು. ನಿಜಾಮುಷಹನು ಈ ಪತ್ರಕ್ಕೆ ಉತ್ತರಕೊಡುವ ಸೌಜನ್ಯ ತೋರಿಸಲಿಲ್ಲ. ಧೂರ್ತನಾದ ನಿಜಾಮುಷಹನಿಗೆ ಈ ಬಾರಿ ತಕ್ಕ ಬುದ್ಧಿ ಕಲಿಸಬೇಕೆಂದು ರಾಮರಾಯನೇ ಸೈನ್ಯ ಸಮೇತ ಹೊರಟನು.

ಈ ಅವಧಿಯಲ್ಲಿ ಕುಟಿಲನಾದ ನಿಜಾಮುಷಹರು ಗೋಲ್ಕಂಡದ ಇಬ್ರಾಹಿಂ ಕುತುಬ್‌ಷಹ ಹಾಗೂ ರಾಮರಾಯನ ಸ್ನೇಹದಲ್ಲಿ ವಿಷವನ್ನು ಬೆರೆಸುವುದರಲ್ಲಿ ಸಾಕಷ್ಟು ಯಶಸ್ಸು ಪಡೆದಿದ್ದ. ರಾಮರಾಯನೊಂದಿಗೆ ಅಷ್ಟೆಲ್ಲಾ ವಿಶ್ವಾಸದಿಂದ ಇದ್ದ ಇಬ್ರಾಹಿಂ ಕುತುಬ್ ಷಹನನ್ನು ತನ್ನ ಕಡೆಗೇ ಒಲಿಸಿಕೊಳ್ಳುವುದು ನಿಜಾಮುಷಹನಿಗೆ ಸುಲಭದ ಕಾರ್ಯವಾಗಲಿಲ್ಲ. ರಾಮರಾಯನು ಹಿಂದೂ ಮುಸ್ಲಿಮ ಸಖ್ಯದ ಹೆಸರಿನಲ್ಲಿ ಮುಸ್ಲಿಂ ಧರ್ಮ ಸಂಸ್ಕೃತಿಗಳಿಗೆ ಎಂತಹ ಗಂಡಾಂತರ ತರುವನೆಂದು ನೂರಾರು ಬಾರಿ ಹೇಳಿ, ಅವನ ಧಾರ್ಮಿಕ ಶ್ರದ್ಧೆಯನ್ನು ಕೆರಳಿಸಿದ್ದನು. ಇದನ್ನು ರಾಮರಾಯನನ್ನು ಚೆನ್ನಾಗಿ ತಿಳಿದಿದ್ದ ಇಬ್ರಾಹಿಂಕುತುಬ್‌ಷಹನು ಒಮ್ಮೆಲೇ ನಂಬಲಿಲ್ಲ. ರಾಮರಾಯನು ತನ್ನೊಡನೆ ಎಷ್ಟೊಂದು ಉದಾರವಾಗಿ, ಸ್ನೇಹದಿಂದ, ನಡೆದುಕೊಂಡಿದ್ದನೆಂಬುದನ್ನು ತಿಳಿದಿದ್ದ ಅವನಿಗೆ ರಾಮರಾಯನ ಗೋಮುಖವ್ಯಾಘ್ರತನದ ಬಗ್ಗೆ ನಿಜಾಮುಷಹನು ಬಿತ್ತಿದ್ದ ಸಂಶಯವನ್ನು ಒಮ್ಮೆಲೇ ನಂಬಲಾಗಲಿಲ್ಲ. ಇದನ್ನು ಅರಿತ ನಿಜಾಂಷಹನು, ರಾಮರಾಯನ ಬಗ್ಗೆ ಅವನ ಮನಸ್ಸನ್ನು ಕೆಡಿಸಲು ಇನ್ನೊಂದು ಆಟ ಹೂಡಿದನು.

"ರಾಮರಾಯನು ಅವನನ್ನು ನಿಜವಾದ ಮಿತ್ರನೆಂದು ತಿಳಿದಿದ್ದರೆ, ಆಲಿ ಆದಿಲ್‌ಷಹನಿಗೆ ಕಾಣಿಕೆಯಾಗಿ ಕಲ್ಯಾಣಿಯನ್ನು ಕೊಟ್ಟಂತೆ ಅವನಿಗ್ಯೇಕೆ ಏನನ್ನೂ ಕೊಡಲಿಲ್ಲ? ಕಲ್ಯಾಣಿಯನ್ನು ಕೊಡುವಾಗಲೂ ಹಳೆಯ ಮಿತ್ರನಾದ ಇಬ್ರಾಹಿಂ ಕುತುಬ್‌ಷಹನಿಗೆ ಕೊಡದೆ, ಕುಲಶತ್ರುಗಳಾಗಿದ್ದ ಬಿಜಾಪುರದ ಆಲಿ ಆದಿಲ್‌ಷಹನಿಗೇಕೆ ಕೊಟ್ಟ? ರಾಮರಾಯನ ಸಹೋದರರ ದಂಗೆಯನ್ನು ಅಡಗಿಸಿ, ಅವರನ್ನು ರಾಮರಾಯನಿಗೆ ಸೆರೆಹಿಡಿದು ತಂದೊಪ್ಪಿಸಿದುದಕ್ಕಾದರೂ ರಾಮರಾಯನು ಕೃತಜ್ಞನಾಗಿ ಯಾಕೆ ಏನನ್ನೂ ಕೊಡಲಿಲ್ಲ? ಇದರ ಕಾರಣ ಇಷ್ಟೇ. ರಾಮರಾಯನು ಮೇಲೆ ವಿಶ್ವಾಸವನ್ನು ನಟಿಸುತ್ತಿದ್ದರೂ ಒಳಗೆ ದ್ರೋಹಚಿಂತನೆ ಮಾಡುತ್ತಿದ್ದಾನೆ. ಅವನು ಕೇವಲ ಸ್ವಾರ್ಥಕ್ಕಾಗಿ ಇಬ್ರಾಹಿಂ ಕುತುಬ್‌ಷಹನೊಡನೆ ಸ್ನೇಹ ನಟಿಸುತ್ತಿದ್ದಾನೆಯೇ ಹೊರತು ಅಂತರಂಗದಲ್ಲಿ ನಿಜವಾದ ಸ್ನೇಹವಿಲ್ಲ. ಅವನ ಗೋಮುಖವನ್ನು ನಂಬಬಾರದು. ಅದರ ಹಿಂದೆ ಭಯಂಕರವಾದ ವ್ಯಾಘ್ರವೇ ಅಡಗಿದೆ. ಎಷ್ಟೇ ಸ್ನೇಹ ನಟಿಸಿದರೂ, ಪ್ರೀತಿ ತೋರಿಸಿದರೂ – ವಿಗ್ರಹಾರಾಧಕರಾದ, ಆ ಕಾಫರರನ್ನು ನಂಬಲೇ ಬಾರದು! ಪರಸ್ಪರ ವಿಧರ್ಮಿಗಳಾದ ಅವರು ಮುಸಲ್ಮಾನರ ಮಿತ್ರರಾಗಲು ಸಾಧ್ಯವೇ ಇಲ್ಲ. ಈಗ ಇಬ್ರಾಹಿಂ ಕುತುಬ್‌ಷಹರಂತಹ ವಿಚಾರವಂತರು ನೈಮರೆತರೆ, ಮುಂದೆ ದಕ್ಷಿಣಾಪಥದಿಂದ ಬಹಮನಿ ರಾಜ್ಯಗಳು ನಾಮಾವಶೇಷವಾಗುವುದು ಮಾತ್ರವಲ್ಲ. ಮುಸ್ಲಿಂ ಧರ್ಮ, ಮುಸ್ಲಿಂ ಸಂಸ್ಕೃತಿಗಳು ಅಳಿಸಿಹೋಗುವುದು ಖಂಡಿತ! ಈಗ ಅವರು ಎಚ್ಚತ್ತುಕೊಂಡು ಯಾರು ಶತ್ರುಗಳು, ಯಾರು ಮಿತ್ರರು ಎಂಬುದನ್ನು ಅರಿತು ಕಾಲಿಡಬೇಕಾಗಿದೆ." ಎಂದೆಲ್ಲಾ ಉಪದೇಶ ಮಾಡಿ ಪತ್ರ ಬರೆದ; ಮೇಲಿಂದ ಮೇಲೆ ದೂತರನ್ನೂ, ರಾಯಭಾರಿಗಳನ್ನೂ ಕಳುಹಿಸಿಕೊಟ್ಟು – ಅವನ ಮನಸ್ಸನ್ನು ಕೆಡಿಸಲೆತ್ನಿಸಿದ. ಈ ಎಲ್ಲ ಕಾರಣದಿಂದ ರಾಮರಾಯನ ನಿಜವಾದ ನಡವಳಿಕೆಯ ಬಗ್ಗೆ ಇಬ್ರಾಹಿಂ ಕುತುಬ್‌ಷಹನಿಗೆ ಕೊಂಚ ಸಂಶಯ ಬಾರದೆ ಇರಲಿಲ್ಲ ಇದನ್ನು ಒರೆಹಚ್ಚಿ ನೋಡದ ಹೊರತು ಯಾವುದನ್ನೂ ನಿರ್ಧರಿಸಬಾರದೆಂದು ಅವನು ದುಡುಕದೆ ರಾಮರಾಯನ ವರ್ತನೆಯನ್ನು ದೂರದಿಂದಲೇ ನೋಡುತ್ತಾ ಕುಳಿತ.

ಈ ವೇಳೆಗೆ ರಾಮರಾಯನು ತನಗೆ ದ್ರೋಹ ಬಗೆದ ಅಹಮದ್‌ನಗರದ ಹುಸೇನ್‌ಷಹನನ್ನು ಶಿಕ್ಷಿಸಲು, ಇಬ್ರಾಹಿಂ ಕುತುಬ್‌ಷಹನು ಸೈನ್ಯದೊಂದಿಗೆ ಬಂದು ತನಗೆ ನೆರವೀಯಲು ಅವನಿಗೆ ಪ್ರಾರ್ಥಿಸಿ ಪತ್ರ ಬರೆದಿದ್ದ. ರಾಮರಾಯನ ಕೋರಿಕೆಯನ್ನು ತಿರಸ್ಕರಿಸುವ ಧೈರ್ಯ ಗೋಲ್ಕಂಡದ ಇಬ್ರಾಹಿಂ

ಕುತುಬ್‌ಷಹನಿಗೆ ಇರಲಿಲ್ಲ. ರಾಮರಾಯನ ನಿಜವಾದ ಸ್ವರೂಪವನ್ನು ಹತ್ತಿರದಿಂದ ತಿಳಿದುಕೊಳ್ಳಲು, ಇದೀಗ ಸಮಯವೆಂದು ಅವನು ತನ್ನ ಸೈನ್ಯದೊಡನೆ ರಾಮರಾಯನ ನೆರವಿಗೆ ಹೊರಟ. ಇದರಿಂದ ಭೀತನಾದ ನಿಜಾಂಷಹನಿಗೆ 'ತಾನು ರಾಮರಾಯನಿಗೆ ಮಿತ್ರನಂತೆ ನಟಿಸಿ ಅಂತರಂಗದಲ್ಲಿ ಅವನಿಗೆ ಸಹಾಯ ಮಾಡುವುದಾಗಿ' ಆಶ್ವಾಸನವನ್ನು ಇತ್ತು ಸಮಾಧಾನಪಡಿಸಿದ್ದ.

ಹೀಗೆ ಅಹಮದ್‌ನಗರದ ಹಾಗೂ ವಿಜಯನಗರಗಳಿಗೆ ಯುದ್ಧ ಸನ್ನಿಹಿತವಾಯಿತು.

ರಾಮರಾಯನು ಹುಸೇನ್ ನಿಜಾಮುಷಹನ ಉದ್ಧಟವರ್ತನೆಗೆ ತಕ್ಕ ಶಾಸ್ತಿ ಮಾಡಲು ದಾರಿಯಲ್ಲಿ ಸಿಕ್ಕಿದ ಅವನ ರಾಜ್ಯದ ಅನೇಕ ಊರುಗಳನ್ನು ಕೊಳ್ಳೆ ಹೊಡೆದು, ಪಾಳುಗೆಡಹುತ್ತಾ, ಬಿರುಗಾಳಿಯಂತೆ ಅಹಮದ್‌ನಗರದ ಮೇಲೆ ನುಗ್ಗಿದನು.

ರಾಮರಾಯನು ಮಳೆಗಾಲ ಆರಂಭವಾಗುವುದರೊಳಗೆ ಅಹಮದ್‌ನಗರದ ಮೇಲಿನ ದಂಡಯಾತ್ರೆಯನ್ನು ಮುಗಿಸಬೇಕೆಂದು ಹಂಚಿಕೆ ಹಾಕಿದ್ದ. ಅವನು ತನ್ನ ಪ್ರಚಂಡ ಸೈನ್ಯದೊಡನೆ ಅಹಮದ್‌ನಗರದ ಬಳಿಗೆ ಬಂದು ಬೀಡು ಬಿಟ್ಟ. ಆಗ ಅಹಮದ್‌ನಗರದ ಸುಲ್ತಾನನಿಗೆ ನಿಜವಾಗಿಯೂ ಗಾಬರಿಯಾಯಿತು. ರಾಮರಾಯನ ಸೈನ್ಯದ ಮುಂದೆ ತನ್ನ ಸೈನ್ಯ ನಿಲ್ಲಲಾರದೆಂದೂ, ಈಗ ದುಡುಕಿದರೆ ತನ್ನ ಸರ್ವನಾಶ ಖಂಡಿತವೆಂದೂ ಅವನು ನಿಶ್ಚಯಿಸಿದ. ಈಗ ಉಳಿದುಕೊಂಡರೆ ಮುಂದೆ ಎಂದಾದರೂ ತನ್ನ ಹಂಚಿಕೆಯನ್ನು ಈಡೇರಿಸಬಹುದೆಂದೂ ಬಗೆದು ಹೇಗಾದರೂ ಮಾಡಿ ರಾಮರಾಯನನ್ನು ಹಿಂದಕ್ಕೆ ಹೋಗುವಂತೆ ಮಾಡಲು ತನ್ನ ಅಂತರಂಗದ ಸ್ನೇಹಿತನಾಗಿದ್ದ ಗೋಲ್ಕಂಡದ ಇಬ್ರಾಹಿಂ ಕುತುಬ್‌ಷಹನಿಗೆ ಶರಣುಬಂದ. ಅವನ ಮೇಲಿನ ಕರುಣೆಯಿಂದ, ಇಬ್ರಾಹಿಂ ಕುತುಬ್‌ಷಹನು ತನ್ನ ಸ್ನೇಹಿತ ಮುಸ್ತಫಖಾನನೊಂದಿಗೆ, ರಾಮರಾಯನನ್ನು ಅವನ ಶಿಬಿರದಲ್ಲಿ ಕಂಡು, ತಕ್ಕ ಜಾಣ್ಮೆಯನೆಲ್ಲಾ ವೆಚ್ಚಮಾಡಿ, ಕಡೆಗೂ ಸಂಧಾನವನ್ನು ಸಾಧಿಸಿದ. ರಾಮರಾಯನು ಗೆಳೆಯನಾಗಿದ್ದ ಕುತುಬ್‌ಷಹನ ಮಾತು ಮೀರಲಾರದೇ, ಹೆದರಿ ಕುಳಿತಿದ್ದ ನಿಜಾಮುಷಹನಿಗೆ ಪ್ರಾಣಭಿಕ್ಷೆನೀಡಿದ. ಈ ಬಾರಿ ಕೊಂಡಪಲ್ಲಿಯನ್ನೂ ಬಿಟ್ಟುಕೊಡಬೇಕಾಯಿತು. ರಾಮರಾಯನು ಅವನೊಡನೆ ಸಂಧಿಮಾಡಿಕೊಂಡು, 'ಕೊಂಡಪಲ್ಲಿ ಹರಣ' 'ಇಂದ್ರ ಪುರರಕ್ಷಕ' ಇತ್ಯಾದಿ ನೂತನ ಬಿರುದುಗಳನ್ನು ಪಡೆದು, ವಿಜಯನಗರಕ್ಕೆ ಹಿಂತಿರುಗಿದನು.

ಇದರಿಂದ ಅಹಮದ್‌ನಗರದ ಸುಲ್ತಾನನನ್ನು ಶಿಕ್ಷಿಸದಂತೆ ಆಗಿದ್ದರೂ ಅವನ ಗರ್ವಭಂಗವಾಗಿತ್ತು. ಅವನ ಉದ್ಧಟವರ್ತನೆಗೆ ತಕ್ಕ ಶಾಸ್ತಿ ಮಾಡಿ

ದಂತೆ ಆಗಿತ್ತು. ಹಿಂದೂ ಮುಸಿಂ ಸಖ್ಯ ಬೆಳೆಸಲು ಆಶಿಸಿದ್ದ ರಾಮರಾಯ ಸಂಧಾನ ಬಯಸಿ ಬಂದ ನಿಜಾಮುಷಹನ ಕೋರಿಕೆಯನ್ನು ತಿರಸ್ಕರಿಸಲು ವ್ಯಾಜ್ಯನ ವಾಗದೆ, ಇಷ್ಟರಿಂದಲೇ ತೃಪ್ತಿಗೊಂಡು ವಿಜಯನಗರಕ್ಕೆ ಹಿಂತಿರುಗಿದ್ದನು.

ಅಹಮುದ್‌ನಗರದ ಸುಲ್ತಾನನ ಪಾಲಿಗೆ ಬೀಸಿದ ದೊಣ್ಣೆ ತಪ್ಪಿತ್ತು. ಅವನಿಗೆ ಬೇಕಾಗಿದ್ದುದೂ ಇಷ್ಟೆ. ತನಗೆ ಉಸಿರಾಡಲು ಅವಕಾಶ ಕೊಟ್ಟರೆ ವಿಜಯನಗರವನ್ನು ಕಬಳಿಸುವ ಘಟಸರ್ಪ ತಾನಾಗುವೆನೆಂದು ಅವನು ತಿಳಿದಿದ್ದ. ತನಗೆ ಮೇಲಿಂದ ಮೇಲೆ ಬೀಳುತ್ತಿದ್ದ ಪೆಟ್ಟುಗಳಿಂದ ವಿಜಯನಗರದ ಬಗ್ಗೆ, ದ್ವೇಷ, ತಿರಸ್ಕಾರಗಳು ಹೆಚ್ಚುತ್ತಿತ್ತೇ ಹೊರತು, ಕಡಿಮೆಯಾಗಿರಲಿಲ್ಲ. ಇಂದಲ್ಲ ನಾಳೆ ವಿಜಯನಗರವನ್ನು ನಾಶಮಾಡದಿದ್ದರೆ ತಾನು ನಿಜಾಮುಷಹನಲ್ಲ ಎಂದು ಪ್ರತಿಜ್ಞೆಮಾಡಿದ್ದ. ಇದನ್ನು ಈಡೇರಿಸಿಕೊಳ್ಳಲು ಸೂಕ್ತ ಸಮಯಕ್ಕಾಗಿ ಕಾಯುತ್ತಾ ಕುಳಿತ.

ವಿಜಯನಗರದ ಮೇಲೆ ಸೇಡು ತೀರಿಸಿಕೊಳ್ಳಲು ಹಾತೊರೆಯುತ್ತಿದ್ದ ನಿಜಾಮುಷಹನಿಗೆ ತನ್ನ ಬಯಕೆ ಈಡೇರಲು ಬಹಮನಿ ಸುಲ್ತಾನರು ಒಂದಾಗದೆ ಸಾಧ್ಯವಿಲ್ಲವೆಂದು ತಿಳಿದಿತ್ತು. ಮೇಲಿಂದ ಮೇಲೆ ದೊರೆತ ಪರಾಭವ ಇದನ್ನು ಹೆಚ್ಚು ಸ್ಪಷ್ಟಗೊಳಿಸಿತ್ತು. ತನ್ನವರೇ ತನಗೆ ಎದುರು ನಿಂತಮೇಲೆ, ತನಗೆ ಯುದ್ಧದಲ್ಲಿ ಸೋಲು ಖಂಡಿತವೆಂದೂ, ಇದರಿಂದ ರಾಮರಾಯನ ಹೆಗ್ಗಳಿಕೆ ಪ್ರತಿಷ್ಠೆ ಬೆಳೆಯುವುದೆಂದೂ ತಿಳಿದಿದ್ದ. ಅವನ ಊಹೆ ನಿಜವಾಗಿತ್ತು. ಈಗ ಬಹಮನಿ ರಾಜ್ಯಗಳಲ್ಲಿ ರಾಮರಾಯನ ಮಾತುಗಳನ್ನು ಧಿಕ್ಕರಿಸುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಬಹಮನಿ ಸುಲ್ತಾನರು ಸ್ವತಂತ್ರ ಅರಸರಾಗಿದ್ದರು. ಅವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ರಾಮರಾಯನ ದಾಕ್ಷಿಣ್ಯಕ್ಕೆ ಕಟ್ಟು ಬಿದ್ದಿದ್ದರು. ಅವನು ಹೇಳಿದಂತೆ ಕೇಳುತ್ತಿದ್ದರು. ಅವನ ವಿರುದ್ಧ ಕತ್ತಿ ಕಟ್ಟುವ ಧೈರ್ಯ ಹಾಗಿರಲಿ, ಉಸಿರೆತ್ತುವ ಧೈರ್ಯ ಯಾರಿಗೂ ಇರಲಿಲ್ಲ. ಹೀಗಾಗಿ ಬಹಮನಿ ರಾಜ್ಯಗತಿ ಆಗುಹೋಗುಗಳು ರಾಮರಾಯನ ಕೈಯಲ್ಲಿ ಇದ್ದಿತೆಂದರೂ ಸಲ್ಲುತ್ತದೆ. ಅವನು ಒಂದು ಹುಬ್ಬುಗಂಟಿಕ್ಕಿದರೆ ಅವುಗಳ ಹಣೆಯಬರಹ ನಿರ್ಧರಿಸಲ್ಪಡುತ್ತಿತ್ತು. ಸಾಮಾನ್ಯ ವ್ಯಕ್ತಿ ಸುಲ್ತಾನನಾಗುತ್ತಿದ್ದ, ಶತ್ರುಗಳು ಮಿತ್ರರಾಗುತ್ತಿದ್ದರು, ಮಿತ್ರರು ಶತ್ರುಗಳಾಗುತ್ತಿದ್ದರು. ನಿಜಕ್ಕೂ ಬಹಮನಿ ಸುಲ್ತಾನರು ರಾಮರಾಯನ ಚದುರಂಗದಾಟದ ವಸ್ತುಗಳೇ ಆಗಿದ್ದರು. ರಾಮರಾಯನು ಕುಳಿತಲ್ಲಿಂದ ಯಾವ ಕಾಯನ್ನು ಯಾವ ಮನೆಗೆ ಬೇಕಾದರೂ ನಡಸಬಹುದಿತ್ತು. ಈ ಚದುರಂಗದಾಟ ವಿಜಯನಗರದ ಹೆಗ್ಗಳಿಕೆಗೆ ಕಾರಣ ವಾಗಿದ್ದಂತೆ, ಅವನತಿಗೂ ಕಾರಣವಾಗಬಹುದೆಂಬುದನ್ನು ರಾಮರಾಯನು

ಸ್ತೊತ್ರ ಆಗ ತಿಳಿಯದೇ ಹೋಗಿದ್ದ ! ಇದೇ ವಿಧಿಯ ವೈಚಿತ್ರ !

ಬಹಮನಿ ಸುಲ್ತಾನರ ನೆರವಿಲ್ಲದೆ ವಿಜಯನಗರದ ಮೇಲೆ ಸೇಡು ತೀರಿಸಿ ಕೊಳ್ಳಲು ಸಾಧ್ಯವಿಲ್ಲವೆಂದು ತಿಳಿದಿದ್ದ ಅಹಮದ್‌ನಗರದ ನಿಜಾಮುಷಹನ ಮುಂದೆ ಈ ಕಾರ್ಯ ಸಾಧಿಸಿಕೊಳ್ಳಲು ಇದ್ದ ಮಾರ್ಗಗಳೆರಡೇ. ಬಹಮನಿ ಸುಲ್ತಾನರು ರಾಮರಾಯನಿಗೆ ನೆರವು ಕೊಡದಂತೆ ಮಾಡುವುದು ಒಂದು ದಾರಿ. ಅವರು ರಾಮರಾಯನಿಗೆ ವಿರುದ್ಧ ತನಗೆ ನೆರವು ಕೊಡದಂತೆ ಮಾಡುವುದು ಇನ್ನೊಂದು ದಾರಿ. ಇದರಲ್ಲಿ ಎರಡನೆಯ ದಾರಿಗಿಂತಲೂ ಮೊದಲನೆಯ ದಾರಿ ಹೆಚ್ಚು ಸುಲಭಸಾಧ್ಯವಾಗಿತ್ತು. ಇದನ್ನು ಸಾಧಿಸಿದ ಹೊರತು ವಿಜಯ ನಗರದ ಮೇಲೆ ಯುದ್ಧಕ್ಕೆಳಸಬಾರದೆಂದು ಅವನು ನಿರ್ಧರಿಸಿದ್ದ.

ಬಹಮನಿ ಸುಲ್ತಾನರು ರಾಮರಾಯನ ವಿರುದ್ಧ ತನಗೆ ನೆರವು ಕೊಡಲು ಸದ್ಯದ ಪರಿಸ್ಥಿತಿಯಲ್ಲಿ ಸಾಧ್ಯವಿರಲಿಲ್ಲವೆಂದು ಅವನು ಮನಗಂಡಿದ್ದ. ಎಲ್ಲ ಸುಲ್ತಾನರೂ ಒಂದಲ್ಲ ಒಂದು ಕಾರಣದಿಂದ ರಾಮರಾಯನ ವಿಶ್ವಾಸಕ್ಕೆ ಪಾತ್ರ ರಾಗಿದ್ದರು. ಅಲ್ಲದೆ ಅವರಿಗೆ ತಮ್ಮತಮ್ಮಲ್ಲಿ ದ್ವೇಷಾಸೂಯೆಗಳಿದ್ದು ದರಿಂದ, ಯಾರು ಮುಂದಕ್ಕೆ ಬಂದರೂ ಅವರು ಸಹಿಸುತ್ತಿರಲಿಲ್ಲ. ಹೀಗಿರು ವುದರಲ್ಲಿ ಅಹಮದ್‌ನಗರದ ನಿಜಾಮುಷಹನನ್ನು ನಾಯಕನಾಗಿ ಸ್ವೀಕರಿಸುವ ಮಾತು ದೂರವೇ ಉಳಿದಿತ್ತು. ಅಂತಲೇ ರಾಮರಾಯನ ವಿರುದ್ಧ ಅವರನ್ನು ಎತ್ತಿಕಟ್ಟುವ ಮಾತು ದೂರದ ಮಾತಾಗಿತ್ತು. ಆದರೆ ಅವರಿಗಾಗಿ ರಾಮ ರಾಯನ ಸ್ನೇಹ ವಿಶ್ವಾಸಗಳ ನಡುವೆ ವಿಷಹಾಕಿ, ಆ ಮೂಲಕ ಅವರ ಮನ ಸ್ಸನ್ನು ಕೆಡಿಸಿ, ತನ್ನ ಕಾರ್ಯ ಸಾಧಿಸಿಕೊಳ್ಳಬಹುದಿತ್ತು. ಇದನ್ನು ಸಾಮದಾನ ಭೇದಗಳಿಂದ ಸಾಧಿಸಿಕೊಳ್ಳಲು ನಿಜಾಮುಷಹನು ಪ್ರಯತ್ನಿಸಿದನು.

ಈಗಾಗಲೇ ಅವನು ಗೋಲ್ಕಂಡದ ಇಬ್ರಾಹಿಂಕುತುಬ್‌ಷಹನ ಮನಸ್ಸಿ ನಲ್ಲಿ ರಾಮರಾಯನ ವಿರುದ್ಧ ಸಂಶಯದ ಬೀಜ ಬಿತ್ತಲು ಸಮರ್ಥನಾಗಿದ್ದ. ಈಗ ಅವನನ್ನು ಸಂಪೂರ್ಣವಾಗಿ ತನ್ನ ವಶಕ್ಕೆ ಸೇರಿಸಿಕೊಳ್ಳಲು – ರಕ್ತ ಸಂಬಂಧಕ್ಕಿಂತ ಬೇರೆ ಗಾಢವೂ ಸುಲಭವೂ ಆದ ಮಾರ್ಗವಿಲ್ಲವೆಂದು ಯೋಚಿಸಿ ಅವನು ತನ್ನ ಮಗಳಾದ ಬೀಬಿ ಜಮಾಲಿಯನ್ನು ಇಬ್ರಾಹಿಂಕುತುಬ್ ಷಹನಿಗೆ ವಿವಾಹ ಮಾಡಿದನು. ಕಲ್ಯಾಣಿಯನ್ನು ಗೆದ್ದುಕೊಡಲು ಅವನು ನೆರವಾದರೆ ಅದನ್ನು ಅವನಿಗೆ ಉಡುಗರೆಯಾಗಿ ಕೊಡುವುದಾಗಿ ಆಸೆ ಹುಟ್ಟಿ ಸಿದನು. ಇದನ್ನು ಕಾರ್ಯಗತಗೊಳಿಸಲು ಮಾವ ಅಳಿಯಂದಿರ ಸೇನೆಗಳು ಒಂದಾಗಿ, ಶ್ರಮಿಸಬೇಕೆಂದು ಮದುವೆಯ ಮನೆಯಲ್ಲೇ ನಿಶ್ಚಯಿಸಿದರು. ಸುಮಾರು ಒಂದು ತಿಂಗಳ ಕಾಲ ವಿವಾಹ ಸಂಭ್ರಮಗಳು ನಡೆದು, ಮಾವ

ಅಳಿಯಂದಿರಿಬ್ಬರು ದಿಬ್ಬಣದ ಸಡಗರದಲ್ಲಿ ತಮ್ಮ ಸೈನ್ಯಗಳ ಸಮೇತ ಹೊರಟು, ಕಲ್ಯಾಣಿಯನ್ನು ಮುತ್ತಿದರು. ಅವರ ಬಳಿ ಏಳುನೂರು ತೋಪುಗಳೂ, ಐನೂರು ಆನೆಗಳೂ, ಅಸಂಖ್ಯಾತ ಕುದುರೆಗಳೂ ಇದ್ದುವು. ಅವರು ಇನ್ನೇನು ಕಲ್ಯಾಣಿಯ ಮೇಲೆ ದಾಳಿ ಇಡಬೇಕೆನ್ನುವುದರಲ್ಲಿ ದೈವ ಅವರಿಗೆ ಅಡ್ಡವಾಗಿ ಬಂದಿತು. ಒಮ್ಮೆಲೇ ಪ್ರಚಂಡವಾದ ಬಿರುಗಾಳಿ ಎದ್ದು ಮಳೆ ಸುರಿದು ಅವರ ಶಿಬಿರಕ್ಕೆ ಬಹಳ ನಷ್ಟವನ್ನುಂಟುಮಾಡಿತು ಗುಡಾರಗಳು ವಾಯುದೇವನ ಪ್ರಕೋಪಕ್ಕೆ ಸಿಕ್ಕಿ ಗಾಳಿಪಟಗಳಾದುವು. ಮದ್ದು ಗುಂಡುಗಳು ಮಳೆಯಲ್ಲಿ ನೆನೆದು ಕೆಲಸಕ್ಕೆ ಬಾರದಾದುವು. ತೋಪಿನಗಾಡಿಗಳು ಕಪ್ಪುಮಣ್ಣಿನ ನೆಲದಲ್ಲಿ ಹೂತುಹೋದುವು. ಆನೆಗಳು ಕೆಸರು ತುಂಬಿದ ಮಣ್ಣಿನಲ್ಲಿ ಮುಂದಡಿ ಇಡಲಾರದೆ ಹೋದುವು. ಕುದುರೆಗಳು ಶಿಲಾವಿಗ್ರಹಗಳಂತೆ ಆಗಿದ್ದುವು. ಆಹಾರವಸ್ತುಗಳು ನೀರಿನಲ್ಲಿ ಕೊಚ್ಚಿಕೊಂಡು ಹೋದುವು. ಮಳೆಯಲ್ಲಿ ನೊಂದು, ಚಳಿಯಲ್ಲಿ ನಡುಗುತ್ತಾ ಉಪವಾಸಬೀಳುವ ಹೊತ್ತು ಬಂದಿತ್ತು ಸೈನಿಕರಿಗೆ.

ಇದೇ ಸಮಯದಲ್ಲಿ ವಿಜಯನಗರಕ್ಕೆ ಈ ಸುದ್ದಿ ಮುಟ್ಟಿ ರಾಮರಾಯನು ಕಲ್ಯಾಣಿಯ ರಕ್ಷಣೆಗೆಂದು ಪ್ರಚಂಡವಾದ ಬಲದೊಡನೆ ಬಿರುಗಾಳಿಯಂತೆ ನುಗ್ಗಿಬಂದನು ಸಿದ್ದರಾಯತಿಮ್ಮಪ್ಪನೆಂಬುವನು ಐವತ್ತು ಸಾವಿರ ಕುದುರೆಗಳೊಡನೆ ಹೊರಟು ಕೊಂಡವೀಡನ್ನು ಮುತ್ತಿ ವಶಪಡಿಸಿಕೊಂಡನು. ರಾಮರಾಯನ ಅಳಿಯ ಜ್ಯೋತುಮರಾಜನು ಇಪ್ಪತ್ತು ಸಾವಿರ ಕುದುರೆಗಳೊಡನೆ ಹೊರಟು ಇಂದ್ರಕುಂಡವನ್ನು ಮುತ್ತಿದನು. ಚನ್ನಪ್ಪನಾಯಕನ ಮಕ್ಕಳು ಗಾಂಧಿಕೋಟೆಯನ್ನು ಮುತ್ತಿ ವಶಪಡಿಸಿಕೊಂಡರು. ಜಗದೇವನು ಪಂಗಲದ ಮೇಲೆ ಬಿದ್ದನು. ದಾರಿಯಲ್ಲಿ ಸಿಕ್ಕಿದ ರವೆಕೊಂಡ, ಗಂಗಾಪುರ ಮುಂತಾದ ಕೋಟೆಗಳು ರಾಮರಾಯನ ವಶವಾದುವು.

ವೆಂಕಟಾದ್ರಿಯು ಇನ್ನೊಂದು ದಿಕ್ಕಿನಿಂದ ಮಚಲೀಪಟ್ಟಣ, ದೇವರಕೊಂಡ, ಮುಂತಾದುವುಗಳನ್ನು ಗೆಲ್ಲುತ್ತಾ ಬಂದನು. ಗೋಲ್ಕಂಡ ಹಾಗೂ ಅಹಮದ್‌ನಗರಗಳ ಅನೇಕ ಪ್ರದೇಶಗಳನ್ನು ಹಾಳುಮಾಡಿ ವಿಶ್ವಾಸದ್ರೋಹಮಾಡಿದ ಅವರ ಮೇಲೆ ಸೇಡು ತೀರಿಸಿಕೊಂಡರು. ವಿಜಯೋನ್ಮತ್ತರಾದ ಹಿಂದೂಸೈನಿಕರು ಗೆದ್ದಪ್ರದೇಶಗಳಲ್ಲಿ ಅನೇಕ ಅತ್ಯಾಚಾರಗಳನ್ನೂ ಎಸಗಿದರು. ಕೈಗೆ ಸಿಕ್ಕಿದ ಮುಸಲ್ಮಾನ ಹೆಂಗಸರನ್ನೂ—ಮುದುಕರನ್ನೂ—ನೋಡದೆ ಕೊಲೆಮಾಡಿದರು. ಮಹಮದೀಯರ ಊರುಗಳು ನೆಲಸಮವಾದುವು. ಅವರ ಮನೆಗಳನ್ನು ಕೊಳ್ಳೆ ಹೊಡೆದು ಸೂರೆಮಾಡಿದರು. ಕೈಗೆ ಸಿಕ್ಕಿದ್ದನ್ನು ದೋಚಿದರು. ಮುಸಲ್ಮಾನರ ಮಸೀದಿಗಳನ್ನು ನೆಲಕ್ಕುರುಳಿಸಿದರು. ಅವರ ಪವಿತ್ರವಾದ ಸ್ಥಳಗಳನ್ನು ಅಪವಿ

ತ್ರಗೊಳಿಸಿದರು. ಎಲ್ಲೆಲ್ಲಿ ನೋಡಿದರೂ ಮುಸಲ್ಮಾನ ಜನತೆಯ ಮೇಲೆ ಅತ್ಯಾಚಾರ, ಕೊಲೆ ಸುಲಿಗೆ! ಎಲ್ಲೆಲ್ಲಿ ನೋಡಿದರೂ ಹಾಹಾಕಾರ! ಹಿಂದೂ ಸೈನಿಕರು ಹುಚ್ಚರಂತೆ, ಉನ್ಮತ್ತರಂತೆ ವರ್ತಿಸಿದರು. ಇಷ್ಟೆಲ್ಲವೂ ರಾಮರಾಯನಿಗೆ ತಿಳಿಯದಂತೆ, ಅವನ ಅಂಕೆಗೆ ಒಳಗಾಗದೇ ಇದ್ದ ಸೈನ್ಯದಲ್ಲಿ ನಡೆದಿತ್ತು–ಇದನ್ನು ಕೇಳಿದಾಗ ರಾಮರಾಯನು ಹೌಹಾರಿದ! ತನ್ನ ಹಿಂದೂ ಮುಸ್ಲಿಮಸಖ್ಯದ ಮಂದಿರ ಪುಡಿಪುಡಿಯಾಯಿತೆಂದು ಬಹುವಾಗಿ ನೊಂದುಕೊಂಡನು. ಆದರೆ ಈ ವೇಳೆಗೆ ನಡೆಯಬಾರದ ಕೃತ್ಯಗಳು ನಡೆದುಹೋಗಿತ್ತು. ಇನ್ನು ಮುಂದೆ ಅಂತಹ ಕೃತ್ಯ ನಡೆಯದಂತೆ ರಾಮರಾಯನು ಎಚ್ಚರವಹಿಸಿದನು. ಹಿಂದೂ ಸೈನಿಕರ ಕೈಗೆ ಸಿಕ್ಕಿ ನರಳಿದವರಿಗೆ, ನೊಂದವರಿಗೆ ಪರಿಹಾರ ಕೊಡಲು ಮುಂದಾದನು. ಅವರಿಂದ ಕಿತ್ತುಕೊಂಡ ಆಸ್ತಿಪಾಸ್ತಿಗಳನ್ನು ಹಿಂದಿರುಗಿಸಿದನು. ಇಷ್ಟೆಲ್ಲಾ ಮಾಡಿದರೂ ರಾಮರಾಯನಿಗೆ ಮಾತ್ರ, ಮುಸ್ಲಿಮರ ಶತ್ರು ಎಂಬ ಅಪಕೀರ್ತಿ ತಪ್ಪಲಿಲ್ಲ. ಎಲ್ಲೆಲ್ಲಿ ನೋಡಿದರೂ ಅವನ ಸೈನಿಕರು ನಡಸಿದ್ದ ಅತ್ಯಾಚಾರಕ್ಕೆ ಮೂಕಸಾಕ್ಷಿಯಾಗಿ ಸಂವೃದ್ಧವಾಗಿದ್ದ ಊರುಗಳು ಮಸಣದಂತೆ ನಿರ್ಜನವಾಗಿ ನಿಂತಿದ್ದುವು. ಜನ ತಮ್ಮ ಸಮಸ್ತವನ್ನೂ ಕಳೆದುಕೊಂಡು, ಬೀದಿಯ ಭಿಕಾರಿಗಳಾಗಿ, ಸೇಡಿನಿಂದ ಕುದಿಯುತ್ತಾ, ಅಂತರ ಪಿಶಾಚಿಗಳಂತೆ ತಿರುಗುತ್ತಿದ್ದರು. ತನ್ನ ದೇಶದ ಜನತೆಗೆ, ಉಂಟಾದ ಪರಾಭವವನ್ನು ನೆನೆದು, ನಿರ್ವಾಹವಿಲ್ಲದೆ ಅಹಮದ್‌ನಗರ ಗೋಲ್ಕೊಂಡಗಳ ಸುಲ್ತಾನರು ಸಂಧಿಗಾಗಿ ರಾಮರಾಯನ ಬಳಿಗೆ ಖಾಸಿಂಬೇಗ್ ಮತ್ತು ಇನಾಯತುಲ್ಲಾ ಎಂಬ ರಾಯಭಾರಿಗಳನ್ನು ಕಳುಹಿಸಿಕೊಟ್ಟರು. ಅವರು ವಿಜಯೋನ್ಮತ್ತರಾಗಿದ್ದ ವಿಜಯನಗರದರಸರನ್ನು ಸಂಧಿಗಾಗಿ ಕಾಡಿ, ಬೇಡಿ ಅವರನ್ನು ಒಪ್ಪಿಸಬೇಕಾಯಿತು.

ರಾಮರಾಯನು ಉದಾರಮನಸ್ಸಿನಿಂದ ಸಂಧಿಗೆ ಒಪ್ಪಿಕೊಂಡನು. ತಾನು ಯಾರನ್ನು ಆತ್ಮೀಯ ಮಿತ್ರನೆಂದು ಕೇಳಿದ್ದನೋ ಆ ಇಬ್ರಾಹಿಂ ಕುತುಬ್‌ಷಹನ ಮಿತ್ರದ್ರೋಹವನ್ನು ಮರೆಯಲು ಒಪ್ಪಿದನು. ಅವನನ್ನು ತನ್ನ ಮೇಲೆ ಎತ್ತಿಕಟ್ಟಿದ ವಿಶ್ವಾಸದ್ರೋಹಿ ಅಹಮದ್‌ನಗರದ ಹುಸೇನ ನಿಜಾಮುಷಹನ ತಪ್ಪನ್ನು ಮರಯಲು ಒಪ್ಪಲಿಲ್ಲ. ಅವರು ಬಹುವಾಗಿ ಪ್ರಾರ್ಥಿಸಿದ ಮೇಲೆ ತಾನು ಅವರ ಬಹುಪಾಲು ರಾಜ್ಯವನ್ನು ಗೆದ್ದಿದ್ದರೂ ಉದಾರ ಹೃದಯದಿಂದ ಅವರಿಗೆ ಅವನ್ನು ಒಪ್ಪಿಸಲು ಒಡಂಬಟ್ಟನು. ತನ್ನ ವಿಶ್ವಾಸದ್ರೋಹದಿಂದ ರಾಮರಾಯನು ವಿಪರೀತ ಸಿಟ್ಟಿಗೆದ್ದಿರುವನೆಂದು ತಿಳಿದಿದ್ದ ಹುಸೇನ ನಿಜಾಮುಷಹನು ರಾಮರಾಯನ ಮನಸ್ಸನ್ನು ಸಮಾಧಾನ ಪಡಿಸಲು, ರಾಮರಾಯನ ಮೇಲೆ ಯುದ್ಧ ಮಾಡಲು ತನ್ನನ್ನ ಪ್ರೇರೇಪಿಸಿದನರು ಜಹಂಗೀರಖಾನ ಮತ್ತು

ದಾಹಿಯಾ ಇಮಾಮುಲ್ಕರೆಂಬ ದಳಪತಿಗಳೆಂದು ಹೇಳಿ ಜಾರಿಕೊಳ್ಳಲೆತ್ನಿಸಿದನು. ರಾಮರಾಯನ ಇಚ್ಛೆಯಂತೆ ಆ ದ್ರೋಹಿಗಳನ್ನು ಶೂಲಕ್ಕೇರಿಸಿ, ಅವರ ಮೇಲಿದ್ದ ತನ್ನ ಅಂತರಂಗದ ದ್ವೇಷವನ್ನು ತೀರಿಸಿಕೊಂಡನು. ಇದರಿಂದ ರಾಮರಾಯನು ಸುಪ್ರಸನ್ನನಾದಂತೆ ತೋರಿದರೂ, ಅಹಮುದ್‌ಖಾನನು ತನ್ನ ಕೈಯಿಂದ ವೀಳ್ಯವನ್ನು ಸ್ವೀಕರಿಸದ ಹೊರತು ತಾನು ಒಪ್ಪಂದ ಮಾಡಿಕೊಳ್ಳುವುದಿಲ್ಲವೆಂದು ಆಗ್ರಹಪಡಿಸಿದನು. ಸ್ನೇಹದ ಹೆಸರಿನಲ್ಲಿ ರಾಮರಾಯನು ಮಾಡುವ ಅಪಮಾನವಿದೆಂದು ತಿಳಿದಿದ್ದರೂ ನಿರ್ವಾಹವಿಲ್ಲದೆ ಹುಸೇನ ನಿಜಾಂಷಹನು ಇದಕ್ಕೆ ಒಡಂಬಡಬೇಕಾಯಿತು.

ಆದರಂತೆ ತುಂಬಿದ ಸಭೆಯಲ್ಲಿ ಅಹಮುದ್‌ನಗರದ ಸುಲ್ತಾನ ಹುಸೇನ್ ನಿಜಾಮುಷಹನು ವಿಜಯನಗರದ ಸಾಮ್ರಾಟ್ ರಾಮರಾಯನಿಂದ ಸ್ನೇಹದ, ವಿಶ್ವಾಸದ ಕುರುಹಾಗಿ ಅವನ ಕೈಯಿಂದ ವೀಳ್ಯವನ್ನು ಸ್ವೀಕರಿಸಿದನು. ಅನಂತರ ಅವನು ತನ್ನ ಶಿಬಿರಕ್ಕೆ ಹೋಗಿ ಅಲ್ಲಿದ್ದ ನೀರಿನಲ್ಲಿ, ರಾಮರಾಯನ ಕೈಯನ್ನು ಮುಟ್ಟಿ ತಾನು ಕುಲಷಿತನಾದಂತೆ, ಕೈಯನ್ನು ತೊಳೆದುಕೊಂಡನು. ಈ ಸುದ್ದಿಯನ್ನು ಕೇಳಿದ ರಾಮರಾಯನು 'ಆ ದ್ರೋಹಿಯು ನನಗೆ ಶರಣು ಬರದಿದ್ದರೆ ಅವನ ಕೈಗಳನ್ನು ಕತ್ತರಿಸಿಹಾಕುತ್ತಿದ್ದೆ' ಎಂದು ಕ್ರೋಧದಿಂದ ಹಲ್ಲುಕಡಿಯುತ್ತ ಹೇಳಿದನು.

ಆದರೆ ದೈವ ಆ ಹುಸೇನ ನಿಜಾಮುಷಹನ ಕೈಗಳಿಗೆ ಎಂತಹ ಘೋರ ಕೃತ್ಯವನ್ನು ಮೀಸಲಿಟ್ಟಿರುವನೆಂದು ಅವನಿಗೆ ಆಗ ತಿಳಿಯದೆ ಹೋಗಿತ್ತು !

## ೧೩

ರಾಮರಾಯನು ಗೋಲ್ಕುಂಡದ ಇಬ್ರಾಹಿಂಕುತುಬ್‌ಷಹ ಹಾಗೂ ಅಹಮುದ್‌ನಗರದ ಹುಸೇನ್ ನಿಜಾಂಷಹರ ವಿದ್ರೋಹವನ್ನು ಮರೆತರೂ, ಸೋತು ಶರಣುಬಂದ ಅವರಿಗೆ ಪುನಃ ಸ್ನೇಹ ಹಸ್ತವನ್ನು ನೀಡಿ ಸಂಧಿಮಾಡಿಕೊಂಡಿದ್ದರೂ, ಅವರು ತಮಗಾದ ಅನ್ಯಾಯ, ಅಪಮಾನ, ಅತ್ಯಾಚಾರಗಳನ್ನು ಮರೆಯಲಿಲ್ಲ. ಅದರಲ್ಲೂ ಹುಸೇನ್ ನಿಜಾಂಷಹನು ಕ್ರೋಧದ ಮೂರ್ತಿಯೇ ಆಗಿದ್ದ. ಅವನೆಷ್ಟು ಪ್ರಯತ್ನಿಸಿದರೂ ರಾಮರಾಯನ ಕೈಯಿಂದ ತುಂಬಿದ ಸಭೆಯಲ್ಲಿ ಸೋಲಿನ ಕುರುಹಾದ ವೀಳ್ಯವನ್ನು ತೆಗೆದುಕೊಂಡು, ರಾಮರಾಯನ ಪ್ರತಿಷ್ಠೆಗೆ ತಲೆಬಾಗಿಸಬೇಕಾಗಿ ಬಂದ ಆ ಪ್ರಸಂಗವನ್ನು ಮಾತ್ರ ಮರೆಯಲಾಗಲಿಲ್ಲ. ಅದನ್ನು ಸಾಯುವ ತನಕ ಮರೆಯುವಂತೆಯೂ ಇರಲಿಲ್ಲ. ಅದಕ್ಕೆ

ತಕ್ಕಂತೆ ಹಿಂದೂ ಸೈನಿಕರು ವಿಜಯೋನ್ಮತ್ತರಾಗಿ ಮಾಡಿದ್ದ ಹಾವಳಿ, ನಡಸಿದ್ದ ಅತ್ಯಾಚಾರಗಳು ಎಲ್ಲೆಲ್ಲೂ ಕಾಣುತ್ತಿದ್ದುವು. ಅವು ಮುಸಲ್ಮಾನ ಮತ ಸಂಸ್ಕೃತಿಗಳ ಗೋರಿಯಾದಂತೆ ಅವನಿಗೆ ಭಾಸವಾದುವು. ಹಿಂದೂಮುಸ್ಲಿಂ ಸಖ್ಯ ಬಯಸುತ್ತಿದ್ದ ರಾಮರಾಯನ ಸೈನಿಕರು ಮಾಡಿದ್ದ ಈ ಅತ್ಯಾಚಾರದಿಂದ, ಅವನಿಗೆ ರಾಮರಾಯನ ನಿಜವಾದ ಗೋಮುಖವ್ಯಾಘ್ರತನಕ್ಕೆ ನಿದರ್ಶನ ದೊರೆತಂತಾಗಿತ್ತು. ಇದನ್ನು ಇತರ ಬಹಮನಿ ಸುಲ್ತಾನರಿಗೆ ತೋರಿಸಿ, ರಾಮರಾಯನ ಬಗ್ಗೆ, ವಿಜಯನಗರದವರ ಬಗ್ಗೆ ಅವರ ವಿಚಾರದ ಕಣ್ಣು ತೆರೆಸಬೇಕೆಂದು ಅವನು ನಿರ್ಧರಿಸಿದನು.

ಎಲ್ಲಕ್ಕಿಂತಲೂ ಅವನಿಗೆ ಹೆಚ್ಚು ವ್ಯಥೆಯನ್ನು ಉಂಟುಮಾಡಿದ ಸಂಗತಿ ಎಂದರೆ ತನ್ನವರೇ ಆಗಿದ್ದ, ಬಿಜಾಪುರ, ಬಿದರೆ, ಬೀರುರುಗಳ ಸುಲ್ತಾನರು ಕಾಫರ ದೊರೆಯ ಎಂಜಲಿಗೆ ಕೈಯೊಡ್ಡಿ, ತನ್ನ ದೇಶದಲ್ಲಿ ನಡಸಿದ ಅನ್ಯಾಯ ಅತ್ಯಾಚಾರಗಳು. ಇವರು ನಿಜವಾದ ಕಾಫರರಿಗಿಂತಲೂ ಭಯಂಕರ ಶತ್ರುಗಳಂತೆ ಅವನಿಗೆ ತೋರಿದರು. ಅವರನ್ನು ತನ್ನ ಮೇಲೆ ಎತ್ತಿಕಟ್ಟಿ ತಮ್ಮ ಮತದ ಮೇಲೆ ಅತ್ಯಾಚಾರ ನಡಸಲು ಪ್ರೇರೇಪಿಸಿದ ರಾಮರಾಯನ ಚಾತುರ್ಯಕ್ಕೆ, ಮುತ್ಸದ್ದಿತನಕ್ಕೆ, ಚಾಣಾಕ್ಷತನಕ್ಕೆ ಅವನು ಬೆರಗಾಗದೆ ಇರಲಿಲ್ಲ. ಇಂದು ಅವರು ಹಿಂದೂಮುಸ್ಲಿಂ ಸಖ್ಯದ ಸಮ್ಮೋಹನವನ್ನು ತಾವು ಹರಿದೊಗೆದು ಹೊರಗೆ ಬಂದಿದ್ದರೆ ತಮ್ಮ ಸರ್ವನಾಶವಾಗುವುದೆಂದು ಇತರ ಸುಲ್ತಾನರಿಗೆ ಹೇಗೆ ತಿಳಿಸಿಕೊಡಬೇಕೆಂಬುದೇ ಅವನಿಗೆ ಬಗೆಹರಿಯದಾಗಿತ್ತು. ಅಲ್ಲಾನು ಅವರಿಗೆ ಸದ್ಬುದ್ಧಿ ಕೊಡಲೆಂದು ಮಾತ್ರ ಪ್ರಾರ್ಥಿಸಬಹುದಿತ್ತು ಅಷ್ಟೆ. ಇನ್ನಾದರೂ ಅವರು ತಮ್ಮ ತಿಳಿಗೇಡಿತನವನ್ನು ಮೂರ್ಖತೆಯನ್ನು ನೆನೆದು, ರಾಮರಾಯನು ಬೀಸಿದ್ದ ಬಲೆಯಿಂದ ತಪ್ಪಿಸಿಕೊಂಡು, ಮುಸ್ಲಿಂ ಧರ್ಮ, ಸಂಸ್ಕೃತಿಗಳ ರಕ್ಷಣೆಗೆ ನಿಲ್ಲಲೆಂದು ಅಲ್ಲಾನಲ್ಲಿ ಮೊರೆಯಿಟ್ಟ. ಈ ಕಾರ್ಯ ಸಾಧಿಸುವ ತನಕ ತಾನು ಯಾವ ಬಗೆಯ ಭೋಗಕ್ಕೂ ಮನಸ್ಸು ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ.

ಇದುವರೆಗೆ ರಾಮರಾಯನ ಹಿಂದೂ ಮುಸ್ಲಿಮ ಸಖ್ಯದ ಬಗ್ಗೆ ಸಂಶಯ ತಾಳಿದ್ದ ಗೋಲ್ಕಂಡದ ಇಬ್ರಾಹಿಂಕುತುಬ್‌ಷಹನು ತನ್ನ ರಾಜ್ಯದಲ್ಲಿ ರಾಮರಾಯನ ಸೈನಿಕರು ನಡಸಿದ್ದ ಕೊಲೆ ಸುಲಿಗೆ, ಅತ್ಯಾಚಾರ, ಅನ್ಯಾಯಗಳನ್ನು ಕಂಡು ಅವನು ನಿಜವಾದ ಗೋಮುಖವ್ಯಾಘ್ರನೆಂದು ನಿರ್ಧರಿಸಿ, ಅವನನ್ನು ನೆಲಕ್ಕುರುಳಿಸಲು ತನ್ನಿಂದಾಗುವ ಎಲ್ಲ ಪ್ರಯತ್ನ ಮಾಡಲು ನಿರ್ಧರಿಸಿದ್ದನು. ಇದರಿಂದ ಅಹಮದ್‌ನಗರದ ಸುಲ್ತಾನನ ಕ್ರೋಧದ ಬೆಂಕಿಗೆ ಗಾಳಿಯಂತೆ ಇವನ ನೆರವು ಬರದೊದಗಿತು.

ಅಹಮುದ್‌ನಗರದ ಮೇಲಿನ ದಂಡಯಾತ್ರೆಯಿಂದ ರಾಮರಾಯನಿಗೆ ಸಂತೋಷವಾಗುವ ಬದಲು ದುಃಖವೇ ಆಗಿತ್ತು. ತಾನು ಯಾರನ್ನು ಪರಮಾಪ್ತ ಮಿತ್ರನೆಂದು ಭಾವಿಸಿದ್ದನೋ ಆ ಇಬ್ರಾಹಿಂಕುತುಬ್‌ಷಹನು ತನ್ನ ವಿರೋಧಿಯಾಗಿ ನಿಂತಿದ್ದನು. ಇದರಿಂದ ರಾಮರಾಯನು ಕಟ್ಟಿದ್ದ ಹಿಂದೂ ಮುಸ್ಲಿಮ ರನ್ನಮಂದಿರಕ್ಕೆ ಸಿಡಿಲೆರಗಿದಂತೆ ಆಗಿತ್ತು. ಅವನು ಒಬ್ಬ ಸನ್ಮಿತ್ರನನ್ನು ಕಳೆದುಕೊಂಡಿದ್ದ. ಕೇವಲ ರಕ್ತಬಾಂಧವ್ಯದಿಂದ ಹತ್ತಿರವಾದ ಮಾತ್ರಕ್ಕೆ ತನ್ನ ಮೇಲೆ ಕತ್ತಿಕಟ್ಟಿ, ವಿಶ್ವಾಸದ್ರೋಹ ಮಾಡುವಷ್ಟು ಅವನು ಪತಿತನಾಗುವನೆಂದು ರಾಮರಾಯನು ತಿಳಿದಿರಲಿಲ್ಲ. ಅವನನ್ನು ತನ್ನ ವಿರುದ್ಧ ಎತ್ತಿಕಟ್ಟಿದ್ದ ನಿಜಾಂಷಹನಮೇಲೆ ರಾಮರಾಯನಿಗೆ ಭಯಂಕರ ಅಸಮಾಧಾನವಿತ್ತು. ಅವನ ವಿಷಯದಲ್ಲಿ ಮನಸ್ಸು ಪ್ರಕ್ಷುಬ್ಧವಾಗಿತ್ತು.

ಈಗ ಇದುವರೆಗೆ ರಾಮರಾಯನು ಯಾರನ್ನು ಮಿತ್ರನೆಂದು ತಿಳಿದಿದ್ದನೋ ಆ ಇಬ್ರಾಹಿಂಖಾನನು ಶತ್ರುವಾಗಿ ಮಾರ್ಪಟ್ಟಿದ್ದ. ಅದರಂತೆಯೇ ಆ ದ್ರೋಹಿಗಳನ್ನು ತನ್ನ ಹಾಗೂ ಆಲಿ ಅದಿಲ್‌ಷಹರ ನಿರ್ಮಲ ಪ್ರೀತಿ ವಿಶ್ವಾಸಗಳ ನಡುವೆ ಹುಳಿ ಹಿಂಡಿ, ತನ್ನ ವಿರುದ್ಧ ಅವನ ಮನಸ್ಸನ್ನು ಕೆಡಿಸಿದರೆ? ಎಂಬ ಅನುಮಾನ ಉಂಟಾಯಿತು. ಅಂತಹ ಇಬ್ರಾಹಿಂಖಾನನು ಅಂಬರ್‌ಖಾನನ ಪ್ರಕರಣದಲ್ಲಿ ತಾನು ಯಾರ ಸಲುವಾಗಿ ಸಹೋದರರ, ಕಡೆಗೆ ಸಾಮ್ರಾಟರ ಅಸಮಾಧಾನವನ್ನು ಕಟ್ಟಿಕೊಳ್ಳಬೇಕಾಯಿತೋ ಅಂತಹ ಇಬ್ರಾಹಿಂಖಾನನು – ತಮ್ಮಂದಿರ ವಿದ್ರೋಹವನ್ನೂ, ದಂಗೆಯನ್ನೂ ಅಡಗಿಸಲು ಸಹಾಯಮಾಡಿದ ಆ ಇಬ್ರಾಹಿಂಖಾನನು ಇಂದು ವಿರೋಧಿಯಾದ ಮೇಲೆ ನಾಳೆ ಆಲಿ ಅದಿಲ್‌ಷಹನು ವಿರೋಧಿಯಾಗುವುದಿಲ್ಲವೆಂದು ಹೇಳಲು ಏನು ನಂಬಿಕೆ? ತಾವು ವಿಧರ್ಮಿಯರು, ಊಟ ಉಡಿಗೆ, ಆಚಾರ ಸಂಪ್ರದಾಯಗಳಲ್ಲಿ ಭಿನ್ನಮತದವರು ಎಂದು ಹೇಳಿಕೊಂಡು ತಮ್ಮ ಸ್ನೇಹಬಂಧನವನ್ನು ಆ ನೀಚರು ಕಡಿದೊಗೆಯುವುದಿಲ್ಲವೆಂದು ಏನು ನಂಬಿಕೆ? ಇಂತಾದರೆ ತನ್ನ ಹಿಂದೂ ಮುಸ್ಲಿಮ ಸಖ್ಯದ ಕನಸು ಪುಡಿಪುಡಿಯಾದಂತೆಯೇ ಸರಿ! ಇದು ತನ್ನ ಬಾಳಿನ ದುರಂತವೇ ಸರಿ! ಎಂದುಕೊಂಡ ರಾಮರಾಯ ಇಂತಹ ಆದರ್ಶ ಕನಸನ್ನು ಕಾಣಲೆತ್ನಿಸುವುದು ತಪ್ಪೆ? ನಿಷ್ಠುರವಾದ ಜಗತ್ತಿನಲ್ಲಿ ಮತಾಭಿಮಾನ, ಅಂಧಶ್ರದ್ಧೆಗಳ ಮುಂದೆ ಮಾನವತೆಗೆ, ನಿರ್ಮಲ ಭಾವನೆಗಳಿಗೆ ಬೆಲೆ ಇಲ್ಲವೆ? ಎಂದು ಆಲೋಚಿಸಿದ. ಇದಕ್ಕೆ ಉತ್ತರ ಮಾತ್ರ ದೊರೆಯಲಿಲ್ಲ. ಈ ಚಿಂತೆಯಲ್ಲಿ ತನ್ನ ದಿಗ್ವಿಜಯ ಸಂತೋಷದ ಬದಲು ದುಃಖವನ್ನೇ ಉಂಟುಮಾಡಿತ್ತು.

ಈಗ ರಾಮರಾಯನು ಆ ವಿಶ್ವಾಸದ್ರೋಹಿಗಳ ವಿರುದ್ಧ ತನ್ನ ಹಾಗೂ

ಆಲಿ ಆದಿಲ್‌ಷಹನ ಸ್ನೇಹವನ್ನು ಕಾಯ್ದುಕೊಳ್ಳಬೇಕಾಗಿತ್ತು. ಅಷ್ಟೇ ಅಲ್ಲ, ಅವರು ಮತ್ತೆ ಯಾವ ಕುತಂತ್ರ, ಕಪಟತನಗಳಿಂದ ವಿಜಯನಗರಕ್ಕೆ ತೊಂದರೆ, ಗಂಡಾಂತರಗಳನ್ನು ತರುವರೋ ಹೇಳಲು ಬರುವಂತೆ ಇರಲಿಲ್ಲ. ಹಾವಿನ ಮೊಟ್ಟೆ ಒಡೆದಿತ್ತು. ಮರಿಗಳು ಯಾವ ರೂಪದಲ್ಲಿ ಬಂದು ತಮ್ಮ ವೈಷಮ್ಯದ ವಿಷವನ್ನು ಕಾರುವುವೋ ಬಲ್ಲವರಾರು? ಅವರ ಬಗ್ಗೆ ತಾನು ಹೆಚ್ಚು ಎಚ್ಚರದಿಂದ ಇರಬೇಕೆಂದು ನಿರ್ಧರಿಸಿದ. ಈ ಬಗ್ಗೆ ಅವನು ಕೈಗೊಂಡ ಪ್ರಥಮ ಕಾರ್ಯವೆಂದರೆ – ವಿಜಯನಗರ ಹಾಗೂ ಗೋಲ್ಕಂಡ ಮತ್ತು ಅಹಮದ್ ನಗರಗಳ ನಡುವೆ ಇದ್ದ ಸಂಪರ್ಕವನ್ನು ಹೆಚ್ಚು ಪರಿಶೀಲನೆಗೆ ಒಳಪಡಿಸಿದ.

ಇದುವರೆಗೆ ವಿಜಯನಗರಕ್ಕೆ ಯಾರು ಬೇಕಾದರೂ ಎಲ್ಲಿಂದ ಬೇಕಾದರೂ ಬರಬಹುದಿತ್ತು. ಅವರನ್ನು ಶೋಧಿಸುತ್ತಿರಲಿಲ್ಲ. ಅವರನ್ನು ಗಡಿ ಪ್ರದೇಶದ ಸುಂಕದ ಕಟ್ಟೆಗಳಲ್ಲಿ ತಡೆಯುತ್ತಿರಲಿಲ್ಲ. ಇದರಿಂದ ವಿದೇಶೀಯ ವ್ಯಾಪಾರಿಗಳು ಯಾವ ಅಡ್ಡಿ ಆತಂಕಗಳಿಲ್ಲದೆ ವಿಜಯನಗರದೊಂದಿಗೆ ತಮ್ಮ ವ್ಯಾಪಾರವನ್ನು ನಡಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವು ವಿದ್ರೋಹಿಗಳು, ಅಪರಾಧಿಗಳು ಮಹಮದೀಯ ಸ್ತ್ರೀಯರ ಸೌಲಭ್ಯವಾಗಿದ್ದ ಘೋಷಾಪದ್ಧತಿಯಲ್ಲಿ, ಗಡಿಯಲ್ಲಿ ಕಾಯುತ್ತಿದ್ದ ವಿಜಯನಗರದ ಅಧಿಕಾರಿಗಳ ಕಣ್ಣು ತಪ್ಪಿಸಿ ಗೋಲ್ಕಂಡ ಹಾಗೂ ಅಹಮದ್‌ನಗರಗಳಿಗೆ ತಪ್ಪಿಸಿಕೊಂಡು ಹೋಗುತ್ತಿದ್ದುದು ರಾಮರಾಯನ ಗಮನಕ್ಕೆ ಬಂದಿತ್ತು. ಇತ್ತೀಚೆಗೆ ಅನೇಕ ಸ್ತ್ರೀಯರು ಘೋಷಾ ಪದ್ಧತಿ ಎಂದು ಹೇಳಿಕೊಂಡು ಅನೇಕ ಆಕ್ಷೇಪಕರವಾದ ಪತ್ರಗಳನ್ನೂ ವಸ್ತುಗಳನ್ನೂ ಶತ್ರುಗಳ ಗಡಿಗೆ ಸಾಗಿಸುತ್ತಿದ್ದುದು ವರದಿಯಾಗಿತ್ತು. ಮುಖ್ಯವಾಗಿ ಗೋಲ್ಕಂಡ ಹಾಗೂ ಅಹಮದ್‌ನಗರಗಳ ಗಡಿಯಲ್ಲಿ ಇಂತಹ ಘಟನೆಗಳು ಹೆಚ್ಚಾಗಿ ನಡೆದಿದ್ದುವು. ಇದರಿಂದಾಗಿ ರಾಮರಾಯನು ದೇಶದ ಭದ್ರತೆಯ ಹಿತದೃಷ್ಟಿಯಿಂದ, ಘೋಷಾಪದ್ಧತಿಗೆ ಸಲ್ಲಬೇಕಾದ ಮರ್ಯಾದೆಯನ್ನು ಸಲ್ಲಿಸಿ, ಸಂಶಯಾಸ್ಪದವಾದ ಮೇನೆಗಳನ್ನು ಜಡತಿಮಾಡುವ, ತಪಾಸಣೆ ಮಾಡುವ ಆಜ್ಞೆಯನ್ನು ಹೊರಡಿಸಿ, ಗಡಿಗಳಲ್ಲಿ ಹೆಚ್ಚು ದಕ್ಷರಾದ ಅಧಿಕಾರಿಗಳನ್ನು ನೇಮಿಸಿ, ಅವರಿಗೆ ಯೋಗ್ಯ ರಕ್ಷಣೆ ಕೊಟ್ಟಿದ್ದನು.

ಇದರ ಜೊತೆಗೆ ರಾಮರಾಯನು ಪ್ರಯಾಣಿಕರು ತಮ್ಮೊಂದಿಗೆ ಆವಶ್ಯಕವಿದ್ದುದಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿ ಸಶಸ್ತ್ರ ಸೇವಕರನ್ನು ಕರೆದೊಯ್ಯಬಾರದೆಂದು ಆಜ್ಞೆ ಮಾಡಿದ್ದನು. ಅನೇಕ ವೇಳೆ ಈ ಸೇವಕವೇಷದಲ್ಲಿ ಕಳ್ಳರು ಅಕ್ಕಪಕ್ಕದ ಗ್ರಾಮಗಳಿಗೆ ಊರುಗಳಿಗೆ ನುಗ್ಗಿ ಹಾವಳಿ ಮಾಡುತ್ತಿದ್ದರು. ಆಸ್ತಿಪಾಸ್ತಿಗಳನ್ನು ದೋಚುತ್ತಿದ್ದರು. ಮತ್ತೆ ಕೆಲವು ಬಾರಿ ಗಡಿಯ ರಕ್ಷಣೆಗೆ

ಇದ್ದ ಅಧಿಕಾರಿಗಳೊಡನೆ ವೃಥಾ ಜಗಳ ತೆಗೆದು ಅವರ ಮೇಲೆ ಕೈಮಾಡಿ ತಪ್ಪಿಸಿಕೊಳ್ಳುತ್ತಿದ್ದರು. ಇದನ್ನೆಲ್ಲಾ ತಪ್ಪಿಸುವ ಸಲುವಾಗಿ, ರಾಮರಾಯನು ಹೆಚ್ಚು ಜನ ಸೇವಕರು ಪ್ರಯಾಣ ಕಾಲದಲ್ಲಿ ತಮ್ಮ ಒಡೆಯ ಇಲ್ಲವೇ ಒಡತಿಯರನ್ನು ಹಿಂಬಾಲಿಸಿ ಬರುವುದನ್ನು ಬಹಿಷ್ಕರಿಸಿದ್ದ. ಇದರಿಂದ ಅಹಮದ್‌ನಗರ ಗೋಲ್ಕಂಡಗಳಿಂದ ವಿಜಯನಗರಕ್ಕೆ ಬಂದು ಹೋಗುತ್ತಿದ್ದ ವಿದ್ರೋಹಿಗಳಿಗೆ, ಗೂಢಚಾರರಿಗೆ ಬಹಳ ತೊಂದರೆಯುಂಟಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ವಿಜಯನಗರದ ಗಡಿಯಿಂದ ಅಹಮದ್‌ನಗರದ ಕಡೆಗೆ ಹೋಗುತ್ತಿದ್ದ ಒಂದು ಮುಸಲ್ಮಾನ ಪ್ರಯಾಣಿಕರ ತಂಡವು ಗಡಿಯಲ್ಲಿದ್ದ ರಕ್ಷಣೆ ಅಧಿಕಾರಿಗಳ ಸಂಶಯಕ್ಕೆ ಒಳಗಾಗಿತ್ತು. ಅದು ಒಂದು ಸಣ್ಣ ತಂಡ. ಒಂದು ಮೇನೆಯನ್ನು ದೃಢಕಾಯರಾದ ನಾಲ್ವರು ಸ್ಥಾಯರು ಹೊತ್ತಿದ್ದರು. ಇವರ ರಕ್ಷಣೆಗೆಂದು ಹತ್ತು ಸಶಸ್ತ್ರ ಸೇವಕರು ಹಿಂದೆ ನಡೆದಿದ್ದರು. ಎಲ್ಲಕ್ಕೂ ಮುಂದೆ ಮಧ್ಯಮ ವಯಸ್ಸಿನ ವ್ಯಕ್ತಿಯೊಬ್ಬ ಆ ತಂಡದ ಮುಖಂಡನೆಂಬಂತೆ, ಮುಂದೆ ನಡೆದಿದ್ದ. ಸುಂಕದ ಕಟ್ಟೆಯು ಬರಲು ಅವರ ಮೇನೆಯನ್ನು ಪರಿಶೀಲನೆಗೆ ಒಳಪಡಿಸಲಾಯಿತು. ಆಗ ತಂಡದ ಮುಖಂಡನು ಸಂದೇಹಾಸ್ಪದವಾಗಿ ನಡೆದುಕೊಳ್ಳಲು, ರಕ್ಷಣೆಯ ಅಧಿಕಾರಿಗೆ ಹೆಚ್ಚು ಸಂಶಯ ಉಂಟಾಯಿತು. ಅಧಿಕಾರಿಯು ಅದನ್ನು ಪರಿಹರಿಸಿಕೊಳ್ಳುವ ಸಲುವಾಗಿ ಅವರನ್ನು ತಡೆದು ಪ್ರಶ್ನಿಸಿದ.

"ಮೇನೆಯಲ್ಲಿ ಯಾರಿದ್ದಾರೆ? ಅವರ ವಯಸ್ಸು ಎಷ್ಟು? ಅವರು ಎಲ್ಲಿಗೆ ಹೊರಟಿದ್ದಾರೆ?"

"ಮೇನೆಯಲ್ಲಿ ನಮ್ಮ ಅಜ್ಜಿ ಇದ್ದಾರೆ. ಅವರ ವಯಸ್ಸು ಸುಮಾರು ಎಪ್ಪತ್ತು! ನಾವು ಅಹಮದ್‌ನಗರಕ್ಕೆ ಹೊರಟಿದ್ದೇವೆ!" ಎಂದು ಮುಖಂಡನು ಉತ್ತರ ಕೊಟ್ಟನು.

"ಎಲ್ಲಿಂದ ಬರುತ್ತಿದ್ದೀರಿ?"

"ರಾಯಚೂರಿನಿಂದ."

"ರಾಯಚೂರಿನಲ್ಲಿ ನೀವು ಯಾರ ಮನೆಯವರು?"

"ಶೇಖ್‌ಮೊಹದೀನ್ ಸಾಹೇಬರ ಮನೆಯವರು!"

"ಅವರು ಅಲ್ಲಿ ಏನು ಕೆಲಸ ಮಾಡುತ್ತಿದ್ದಾರೆ?"

"ರಾಯಚೂರು ಖಿಲ್ಲೆಯ ದಳಪತಿಯಾಗಿದ್ದಾರೆ!"

"ನಿಮ್ಮ ಅಜ್ಜಿಗೂ ಅವರಿಗೂ ಏನು ಸಂಬಂಧ! ನೀವು ಯಾವ ಕೆಲಸಕ್ಕೆ ಅಹಮದ್‌ನಗರಕ್ಕೆ ಹೋಗುತ್ತಿದ್ದೀರಿ?"

"ನಮ್ಮ ಅಜ್ಜಿ ಮೊಹದೀನ್ ಸಾಹೇಬರ ಅತ್ತೆಯಾಗಬೇಕು. ನಾವು ಅವರ ಮಗಳ ಮದುವೆಗೆಂದು ರಾಯಚೂರಿಗೆ ಬಂದಿದ್ದೆವು. ಈಗ ಹಿಂದಿರುಗುತ್ತಿದ್ದೇವೆ!"

ಆದರೆ ಒಂದು ಸಂಶಯ ಮಾತ್ರ ಅಧಿಕಾರಿಗೆ ಉಳಿಯಿತು. 'ಒಬ್ಬ ಅಜ್ಜಿಯ ರಕ್ಷಣೆಗೆ ಇಷ್ಟು ಮಂದಿ ಸೇವಕರು ಏಕೆ?' ಎಂದು ಅವನು ಪ್ರಶ್ನಿಸಿದ. ಈ ಮಾತು ಕೇಳಿ ಆ ಮುಖಂಡನು ಕೆರಳಿ,

"ಇದನ್ನೆಲ್ಲಾ ಪ್ರಶ್ನಿಸಲು ನೀವು ಯಾರು? ಇದನ್ನು ಕಟ್ಟಿಕೊಂಡು ನಿಮಗೇನಾಗಬೇಕು?"

"ನಾವು ಗಡಿಯ ರಕ್ಷಣೆಗೆ ನಿಯೋಜಿತರಾಗಿರುವ ಅಧಿಕಾರಿಗಳು. ನಮಗೆ ಸಂಶಯ ಬಂದ ವ್ಯಕ್ತಿಗಳನ್ನು ನಾವು ಹೀಗೆಲ್ಲ ಪ್ರಶ್ನಿಸಬೇಕಾಗುತ್ತದೆ, ಸಮಾಧಾನಕರವಾದ ಉತ್ತರ ಬಂದರೆ ನಿಮ್ಮನ್ನು ನಾವು ತಡೆಯುವುದಿಲ್ಲ."

"ನಿಮಗೆ ಬೇಕಾದ ವಿವರಗಳನ್ನೆಲ್ಲಾ ತಿಳಿಸಿದ್ದರೂ ಇನ್ನೂ ನಿಮಗೆ ನನ್ನ ಮೇಲೆ ಸಂಶಯವೆ?" ಕೊಂಚ ತಗ್ಗಿ ಕೇಳಿದ ಆ ಮುಖಂಡ.

"ಹಾಗಲ್ಲ. ನಮ್ಮ ಕರ್ತವ್ಯ ನಾವು ಮಾಡಬೇಕಾಗಿದೆ! ಈ ಮೇನೆಯಲ್ಲಿ ಯಾರಿದ್ದಾರೋ ಅವರನ್ನು ನಾವು ಖಚಿತಪಡಿಸಿಕೊಳ್ಳಬೇಕಾಗಿದೆ. ದಯವಿಟ್ಟು ನಮ್ಮ ದಳದಲ್ಲಿರುವ ಸ್ತ್ರೀ ಶೋಧಕಿಗೆ ಮೇನೆಯನ್ನು ಪರೀಕ್ಷಿಸಲು ಅವಕಾಶ ಕೊಟ್ಟರೆ, ಯಾವ ತೊಂದರೆ ಇಲ್ಲದೆ ನಿಮ್ಮ ಪ್ರಯಾಣ ಮುಂದುವರಿಸಲು ಅವಕಾಶ ಕೊಡುತ್ತೇವೆ!"

"ಇದೊಂದು ಮಾತು ಮಾತ್ರ ಸಾಧ್ಯವಿಲ್ಲ!" ಕೆರಳಿ ಹೇಳಿದ ಮುಖಂಡ.

"ಏಕೆ?"

"ನಮ್ಮ ಬಳಿ ಆಕ್ಷೇಪಕರವಾದ ವಸ್ತು, ಇಲ್ಲವೇ ವ್ಯಕ್ತಿ ಇರುವರೆಂದು ತಾನೇ ನಿಮಗೆ ನಮ್ಮಲ್ಲಿ ಸಂಶಯ? ನಮ್ಮ ಮಾತಿನಲ್ಲಿ ನಿಮಗೆ ನಂಬಿಕೆ ಇಲ್ಲದ ಮೇಲೆ ನಿಮ್ಮಿಂದ ನಮಗೆ ತೊಂದರೆಯಾಗದೆಂದು ಏನು ನಂಬಿಕೆ?"

"ನಮ್ಮಿಂದ ನಿಮಗೆ ಯಾವ ತೊಂದರೆಯಾಗುವುದಿಲ್ಲವೆಂದು ಆಶ್ವಾಸನ ಕೊಡುತ್ತೇವೆ. ನಿಮ್ಮ ಮೇನೆಯನ್ನು ಪರೀಕ್ಷಿಸಲು ಅವಕಾಶ ಕೊಡಬೇಕು!"

"ನಿಮಗೆ ನಮ್ಮ ಮಾತಿನಲ್ಲಿ ನಂಬಿಕೆಹುಟ್ಟದಿರುವುದು ನಮ್ಮ ದುರದೃಷ್ಟ! ಆಕ್ಷೇಪಕರವಾದ ವಸ್ತುಗಳಿಲ್ಲವೆಂದು ಅಲ್ಲಾನ ಆಣೆ ಇಟ್ಟು ಹೇಳುತ್ತೇವೆ. ನಮ್ಮ ಮಾತನ್ನು ನಂಬಿ. ನಾವು ದ್ರೋಹಿಗಳಲ್ಲ. ಸಾಮಾನ್ಯ ಪ್ರಯಾಣಿಕರು."

"ಹಾಗಾದರೆ ನೀವೇಕೆ ಮೇನೆಯನ್ನು ಶೋಧನೆಗೆ ಒಳಪಡಿಸಲು ಹಿಂದು ಮುಂದೆ ನೋಡುತ್ತೀರಿ!"

" ನಿಜ ಹೇಳುವುದಾದರೆ, ಮೇನೆಯಲ್ಲಿ ಅನೇಕ ಬೆಲೆಬಾಳುವ ವಡವೆ ವಸ್ತುಗಳಿವೆ !"

" ಅವುಗಳನ್ನು ನಾವು ಮುಟ್ಟುವುದಿಲ್ಲ. ನೀವು ಭಯಪಡಬೇಡಿ !" ಎಂದು ಹೇಳಿ ಅಧಿಕಾರಿ ಸ್ತ್ರೀ ಸೇವಕಿಯೊಂದಿಗೆ ಮೇನೆಯ ಬಳಿಗೆ ಹೊರಟ.

ಕೂಡಲೇ ಆ ಮುಖಂಡನು ಮೇನೆಯ ಬಾಗಿಲ ಬಳಿಗೆ ನುಗ್ಗಿ ಅದಕ್ಕೆ ಬೆನ್ನು ಅಡ್ಡಬರುವಂತೆ ನಿಂತು,

" ನೀವು ನಮ್ಮನ್ನು ವೃಥಾ ಶಂಕಿಸಿ ತೊಂದರೆಪಡಿಸುತ್ತಿದ್ದೀರಿ !" ಎಂದು ಗರ್ಜಿಸಿದ.

"ನಿಮಗೆ ನಮ್ಮಿಂದ ತೊಂದರೆಯಾಗಿದ್ದರೆ ಕ್ಷಮಿಸಿ. ನಾವು ನಮ್ಮ ಕರ್ತವ್ಯ ವನ್ನು ನಿರ್ವಹಿಸಬೇಕಾಗಿದೆ !"

" ಕರ್ತವ್ಯ ! ಕರ್ತವ್ಯ ! ಕರ್ತವ್ಯದ ಹೆಸರಿನಲ್ಲಿ ನೀವು ನಮ್ಮನ್ನು ಕೊಂದು ಬಿಡಿ ! ನಿಮ್ಮ ಈ ಕಾಫರ ರಾಜ್ಯದಲ್ಲಿ ಮುಸಲ್ಮಾನರಿಗೆ ಉಳಿಗಾಲವಿಲ್ಲ. ಅವರ ಮಾನ ಮರ್ಯಾದೆ ತೆಗೆಯುವುದೆಂದರೆ ನಿಮಗೆ ಒಂದು ವಿನೋದವಾದ ಆಟ ವಾಗಿದೆ. ಈ ಕಾಫರ ರಾಜ್ಯ ಎಂದು ಹಾಳಾಗುತ್ತದೋ ಅಂದೇ ನಮಗೆ ಶಾಂತಿ. ಆಗಲೇ ಇಸ್ಲಾಂ ಧರ್ಮ ಉಳಿಯುವುದು. ಅಲ್ಲಿಯ ತನಕ ನಿಮ್ಮಿಂದ ನಮಗೆ ಉಳಿಗಾಲವಿಲ್ಲ, ನಮ್ಮ ಧರ್ಮಕ್ಕೂ ಗೌರವವಿರುವುದಿಲ್ಲ !" ಎಂದು ಗೊಣಗಿದ.

" ನೀವು ನಮ್ಮ ಮೇಲೆ ವೃಥಾ ಸಿಟ್ಟಾಗಿದ್ದೀರಿ ! ನಾವು ನಿಮ್ಮನ್ನು ಇದು ವರೆಗೆ ಗೌರವದಿಂದಲೇ ನಡಸಿಕೊಂಡೆವು. ನಿಮ್ಮ ಧರ್ಮವನ್ನು ಮರ್ಯಾದೆ ಯಿಂದಲೇ ಕಂಡಿದ್ದೇವೆ. ಆದರೆ ನೀವು ನಮ್ಮನ್ನು, ನಮ್ಮ ಸರಕಾರವನ್ನು ದೂಷಿ ಸುವುದು ಸರಿಯಲ್ಲ! ಇದರಿಂದ ನೀವು ವೃಥಾ ತೊಂದರೆಗೆ ಸಿಕ್ಕುತ್ತಿದ್ದೀರಿ ಅಷ್ಟೇ!"

" ನೀವು ನಮ್ಮ ಮರ್ಯಾದೆಯನ್ನು – ನಮ್ಮ ಘೋಷಾಪದ್ಧತಿಯನ್ನು ಅವಹೇಳನಮಾಡುತ್ತಿದ್ದೀರಿ ! ಅದಕ್ಕೆ ಅಪಚಾರವೆಸಗುತ್ತಿದ್ದೀರಿ !"

" ಸುಮ್ಮನೆ ಇಲ್ಲದ ಕ್ಲೇಶ ಹಚ್ಚಿಕೊಳ್ಳಬೇಡಿ. ನಿಮ್ಮ ಧರ್ಮವನ್ನೂ ನಿಮ್ಮ ಘೋಷಾವನ್ನೂ ಅಪಮಾನಗೊಳಿಸುವ ಯಾವ ಉದ್ದಿಶ್ಯವೂ ನಮಗೆ ಇಲ್ಲ. ಇದು ಹಿಂದೂ ರಾಜ್ಯವಾದರೂ ಮುಸಲ್ಮಾನರನ್ನು ಸಮತೆಯಿಂದ ಕಾಣುವ ಧರ್ಮರಾಜ್ಯ. ನಮ್ಮ ಸಾಮ್ರಾಟರು ಸಕಲ ಧರ್ಮದವರನ್ನೂ ಸಹಿಷ್ಣು ದೃಷ್ಟಿಯಿಂದ ನೋಡುತ್ತಿದ್ದಾರೆ. ಈ ಸಂಗತಿ ನೀವು ತಿಳಿದಿರಬೇಕು. ಈಗ ನಿಮ್ಮನ್ನು ನಾವು ಶೋಧಿಸಬೇಕಾಗಿದೆ. ಇದರಿಂದ ನಿಮಗೆ ತೊಂದರೆಯಾದರೂ ರಾಷ್ಟ್ರದ ಹಿತದೃಷ್ಟಿಯಿಂದ ನಾವು ನಮ್ಮ ಕರ್ತವ್ಯವನ್ನು ಮಾಡಬೇಕಾಗಿದೆ!"

" ನೀವು ಏನು ಹೇಳಿದರೂ ಶೋಧನೆಯ ಮಾತು ಹಾಗಿರಲಿ, ಈ ಮೇನೆ ಯನ್ನು ಮುಟ್ಟಲೂ ಅವಕಾಶಕೊಡಲಾರೆ!"

" ಹಾಗಾದರೆ ನಾವು ನಿಮ್ಮನ್ನು ಬಲಾತ್ಕರಿಸಬೇಕಾಗುತ್ತದೆ ಅಷ್ಟೇ."

" ನೀವು ಪ್ರಾಣದ ಮೇಲೆ ಆಸೆ ಬಿಟ್ಟಿದ್ದರೆ ಈ ತಿಳಿಗೇಡಿತನದ ಕಾರ್ಯಕ್ಕೆ ಕೈ ಹಾಕುತ್ತೀರಿ !"

ನೀವು ಒಳ್ಳೆಯ ಮಾತಿಗೆ ಕಿವಿಗೊಡುವಂತೆ ಕಾಣುವುದಿಲ್ಲ!" ಎಂದು ಹೇಳಿ ಆ ಅಧಿಕಾರಿಯು ಒರೆಯಿಂದ ಕತ್ತಿಯನ್ನು ತೆಗೆದು, ಒಂದು ಬಾರಿ ತನ್ನ ಸೈನಿಕರ ಕಡೆ ನೋಡಿದ. ಅವರು ಹತ್ತಿರಕ್ಕೆ ಬರುವ ಮೊದಲೇ ಆ ಮುಖಂಡನು ಮೇನೆಯ ಒಳಗೆ ಛಂಗನೆ ಹಾರಿ, ಅದರ ಬಾಗಿಲನ್ನು ತುಸುವೇ ತೆಗೆದು ಒಂದು ಕೈಚೀಲವನ್ನು ಹೊರಗೆ ತೆಗೆದು ಅದನ್ನು ಅಧಿಕಾರಿಯ ಕೈಗೆ ಕೊಡುತ್ತಾ, ನಮ್ರನಾಗಿ ಹೇಳಿದ.

" ನಿಮಗೆ ನಮ್ಮ ಮಾತಿನಲ್ಲಿ ನಂಬಿಕೆ ಹುಟ್ಟದಿರುವುದು ನಮ್ಮ ದುರ್ದೈವ. ಹೋಗಲಿ ! ಈ ಥೈಲಿಯಲ್ಲಿ ನೂರು ದುರ್ಗಿ ವರಹಗಳು ಇವೆ. ಇವುಗಳನ್ನು ತೆಗೆದುಕೊಂಡು ನಮ್ಮ ಮೇನೆ ಶೋಧಿಸದೆ ಬಿಟ್ಟು ಬಿಡಿ ! ನಿಮ್ಮ ದಮ್ಮಯ್ಯ ! ನಮಗೆ ಉಪಕಾರಮಾಡಿದಂತೆ ಆಗುತ್ತದೆ ! ನಮ್ಮ ಘೋಷಾಪದ್ಧತಿಯನ್ನು ಉಳಿಸಿದಂತೆ ಆಗುತ್ತದೆ" ಎಂದು ಬೇಡಿಕೊಂಡ.

ಅಧಿಕಾರಿಯು ಅವನು ಕೊಟ್ಟ ಹಣವನ್ನು ಮುಟ್ಟದೆ,

" ನಾವು ಇರುವುದು ಸಾಮ್ರಾಜ್ಯದ ಗಡಿಯನ್ನು ವಿದ್ರೋಹಿಗಳಿಂದ ಕಾಯುವುದಕ್ಕೆ. ಇದಕ್ಕೆ ಸಾಮ್ರಾಟರು ನಮಗೆ ಮಾಶಾಸನ ಕೊಡುತ್ತಾರೆ. ನಮಗೆ ಈ ಹಣದ ಆವಶ್ಯಕವಿಲ್ಲ – ನೀವು ನಮಗೆ ಕೊಡಬಾರದು ! ಹಿಂದಕ್ಕೆ ತೆಗೆದುಕೊಳ್ಳಬೇಕು !" ಎಂದು ಹೇಳಿದ.

ತನ್ನನ್ನೇ ಆವಾಕ್ಕಾಗಿ ನೋಡುತ್ತಾ ನಿಂತ ಅವನನ್ನು ಕುರಿತು ಮತ್ತೆ ಹೇಳಿದ :

" ನೀವು ನಿಮ್ಮ ಒಂದೊಂದು ಕಾರ್ಯದಿಂದಲೂ ನಮ್ಮ ಸಂಶಯವನ್ನು ವೃದ್ಧಿಗೊಳಿಸುತ್ತಾ ನಡೆದಿದ್ದೀರಿ ! ಮೇನೆಯ ಒಳಗೆ ಮುದುಕಿ ಇದ್ದರೆ ನೀವೇಕೆ ನಮಗೆ ಹೆದರಿಕೊಂಡು ಹಣ ಕೊಡಲು ಮುಂದೆ ಬರುತ್ತಿದ್ದಿರಿ? ಇದರಲ್ಲಿ ಏನೋ ವಿಶೇಷವಿದೆ ; ನೀವು ಮೇನೆಯನ್ನು ಪರೀಕ್ಷಿಸಲು ನಮಗೆ ಅವಕಾಶ ಕೊಡಲೇ ಬೇಕು !"

" ಹಾಗಾದರೆ ನೀವು ನಮ್ಮನ್ನು ಅಪಮಾನಗೊಳಿಸಲು ನಿರ್ಧರಿಸಿದ್ದರೆ ನಾವು ಏನು ತಾನೇ ಮಾಡಲಾದೀತು ! ನೀವು ನಮಗೆ ತೊಂದರೆ ಕೊಡುತ್ತಿದ್ದೀರಿ. ಎಂದು ಹೇಳಿದರೆ ಕೇಳುವವರು ಯಾರು ? ಹೇಳುವವರು ಯಾರು ? ಈ ಕಾಫರರ ಹುಚ್ಚು ದೌಲತ್ತಿನಲ್ಲಿ ನ್ಯಾಯ ನೀತಿಗಳಿಗೆ ಬೆಲೆ ಎಲ್ಲಿದೆ! ಇದೊಂದು ಸೈತಾನಿ

ರಾಜ್ಯವಾಗಿದೆ! ಎಂದಿಗೆ ಇದು ನಾಶವಾಗುತ್ತದೋ ಆ ಅಲ್ಲಾನಿಗೇ ಗೊತ್ತು!" ಎಂದು ಅವನು ಶಪಿಸಿದ.

"ನೀವು ನಮ್ಮ ಸಾಮ್ರಾಟರನ್ನು ವೃಥಾ ನಿಂದಿಸುತ್ತಿದ್ದೀರಿ, ಜೋಕೆ! ಇದರಿಂದ ಒಳ್ಳೆಯದಾಗುವುದಿಲ್ಲ. ಇದರ ಫಲವನ್ನು ನೀವು ಅನುಭವಿಸಬೇಕಾಗಿ ಬಂದೀತು! ಜೋಕೆ!" ಎಂದು ಆ ಅಧಿಕಾರಿ ಕೆರಳಿ ಹೇಳಿದ.

"ಆ ಕಾಫರ ದೊರೆ ಸಾಮ್ರಾಟನಾದರೆ ನಿಮಗೆ ಹೆಚ್ಚು! ನಮಗೆ ಅವನು ಸಾಮ್ರಾಟನಲ್ಲ. ನಮ್ಮ ಇಸ್ಲಾಂ ಧರ್ಮವನ್ನು ಹಾಳುಮಾಡಲು ಹುಟ್ಟಿರುವ ಸೈತಾನ ಅವನು. ಅಹಮುದ್‌ನಗರದಲ್ಲಿ ಅವನು ಮಾಡಿದ ಅತ್ಯಾಚಾರಗಳು ಒಂದೇ ಎರಡೇ? ನಿಮ್ಮ ದೆಸೆಯಿಂದ ಅಹಮುದ್‌ನಗರದಲ್ಲಿ ಒಂದು ಮನೆಯೂ ಉಳಿಯದೇ ಹೋಯಿತು—ನಮಗಿದ್ದ ಒಂದೇ ಮನೆ—ಅದನ್ನು ಕಳೆದುಕೊಂಡು ನಾವು ನೆಲೆಯಿಲ್ಲದೆ ಹೋದೆವು. ಆ ನಿಮ್ಮ ಸೈತಾನರಾಕ್ಷಸರ ಕೈಗೆ ಸಿಕ್ಕಿ ನಮ್ಮ ಸಂಸಾರವೇ ತೊಡೆದುಹೋಯಿತು. ನಮ್ಮ ತಂದೆಯನ್ನು ಕೊಂದರು. ಹೆಂಗಸರ ಮಾನವನ್ನು ಅಪಹರಿಸಿದರು; ಮಕ್ಕಳನ್ನು ಕ್ರೂರವಾಗಿ ಕೊಂದರು. ಮನೆಯಲ್ಲಿದ್ದ ಪವಿತ್ರವಾದ ಕುರಾನನ್ನ ಅವರು ಬೆಂಕಿಯಿಟ್ಟು ಸುಟ್ಟರು. ಅದೇ ಬೆಂಕಿಯಿಂದ ಮನೆಯನ್ನು ಸುಟ್ಟರು! ಅಯ್ಯೋ! ನೆನೆಸಿಕೊಂಡರೆ ಮೈಯೆಲ್ಲಾ ಉರಿಯುತ್ತದೆ! ನೆತ್ತರು ಹೆಪ್ಪುಗಟ್ಟುತ್ತದೆ! ಆ ಅನ್ಯಾಯ! ಆ ಕೊಲೆ ಸುಲಿಗೆ! ಆ ಅತ್ಯಾಚಾರ! ಸೈತಾನರಿಂದ ಮಾತ್ರ ಸಾಧ್ಯ! ಇದಕ್ಕೆಲ್ಲಾ ಕಾರಣ ಆ ಕಾಫರ ದೊರೆಯ ರಾಜ್ಯ ಲಲಾಸೆ! ಇದನ್ನೆಲ್ಲಾ ನೆನೆದರೆ ನಿಮ್ಮದು ಎಂತಹ ಧರ್ಮರಾಜ್ಯವೆಂದು ತಿಳಿದೀತು! ಎಲ್ಲವೂ ಮೋಸ! ಎಲ್ಲವೂ ವಂಚನೆ! ಈಗ ನಮ್ಮ ಮೇಲೆ ಕರ್ತವ್ಯದ ಹೆಸರಿನಲ್ಲಿ, ಅತ್ಯಾಚಾರಮಾಡಲು ನೋಡುವಿರಾ?" ಅವನು ಉರಿಗಣ್ಣು ಬಿಟ್ಟುನೋಡಿದ.

"ಹಾಗಾದರೆ ನೀವು ಯಾರೋ ಸಾಮಾನ್ಯರಲ್ಲ. ಅಹಮುದ್‌ನಗರದ ಸುಲ್ತಾನರ ಕಡೆಯ ಪ್ರಮುಖರು ಯಾರೋ ಇದ್ದಂತೆ ಇದೆ!"

"ನಾನು ಸುಲ್ತಾನನೂ ಅಲ್ಲ, ಸುಲ್ತಾನನ ಕಡೆಯವರೂ ಅಲ್ಲ. ನಾನೊಬ್ಬ ಮೌಲ್ವಿ! ನನಗಿದ್ದ ಸರ್ವಸ್ವವನ್ನೂ ಕಳೆದುಕೊಂಡು ಕಡೆಗೆ ಅಹಮುದ್‌ನಗರದಲ್ಲಿ ನನ್ನ ಹಾಗೂ ನನ್ನ ಮಗಳ ಮಾನಸಂರಕ್ಷಣೆಯಾಗದೆಂದು ರಾಯಚೂರಿಗೆ ಹೋಗಿ ಆಶ್ರಯ ಪಡೆದೆವು. ಅಲ್ಲಿ ನನ್ನ ಮಗಳನ್ನು ಬಿಟ್ಟು ಈಗ ಅಜ್ಜಿಯೊಡನೆ ಹಿಂದಿರುಗುತ್ತಿದ್ದೇನೆ!"

"ಹಾಗಾದರೆ ಈ ಮೇನೆಯಲ್ಲಿ ಇರುವ ವ್ಯಕ್ತಿ ನಿಮ್ಮ ಅಜ್ಜಿಯಲ್ಲ, ನಿಮ್ಮ ಮಗಳು!" ಎಂದ ಅಧಿಕಾರಿ ನಗುತ್ತ.

"ಈ ಎಲ್ಲ ಅಧಿಕಪ್ರಸಂಗತನವೇಕೆ! ನನ್ನ ಮಾತು ನಿಜ! ಅದನ್ನು ನಂಬಿರಿ! ನಾವು ಸುಳ್ಳು ಹೇಳಿ ಏನನ್ನು ಸಾಧಿಸಬೇಕಾಗಿದೆ!"

."ನೀವು ನಿಜವನ್ನೇ ಹೇಳುತ್ತಿದ್ದರೆ ಶೋಧನೆಯ ಬಗ್ಗೆ ಇಷ್ಟೇಕೆ ಹಠ ಹಿಡಿಯುತ್ತಿದ್ದಿರೋ ತಿಳಿಯದಾಗಿದೆ. ಇದರಲ್ಲಿ ಏನೋ ಮೋಸವಿದ್ದಂತೆ ಇದೆ. ನಾವು ಇದನ್ನು ಪರಿಶೀಲಿಸಲೇ ಬೇಕು!" ಎಂದು ಹೇಳಿ ಒಂದು ಹೆಜ್ಜೆ ಮುಂದೆ ಇಟ್ಟ. ಆಗ ಅವನ ಮೇಲೆ ಆಕ್ರಮಿಸಲು ಆ ಮುಖಂಡನು ತನ್ನ ಸಶಸ್ತ್ರ ಸೇವಕರಿಗೆ ಆಜ್ಞೆಮಾಡಿ, ಬೋಯಿಗಳಿಗೆ ಮೇನೆಯನ್ನು ಹೊತ್ತುಕೊಳ್ಳಲು ಹೇಳಿ, ಅಲ್ಲಿಂದ ಓಡಿ ಪಾರಾಗಲು ನೋಡಿದ. ಇದನ್ನು ನೋಡಿದ ಆ ಅಧಿಕಾರಿ ಕೂಡಲೇ ಎಚ್ಚರವಹಿಸಿ, ತನ್ನ ಮೇಲೆ ಬಿದ್ದ ಸೈನಿಕರನ್ನು ಕೈಚಳಕದಿಂದ ದೂರಪಡಿಸಿ, ಅವರನ್ನು ವಿಚಾರಿಸಿಕೊಳ್ಳಲು ತನ್ನ ಕಡೆಯವರನ್ನು ಬಿಟ್ಟು, ಸಂಗಡಿಗರೊಂದಿಗೆ, ವೇಗವಾಗಿ ಹೋಗುತ್ತಿದ್ದ ಮೇನೆಯನ್ನು ಮುತ್ತಿದ.

ಈ ಹೋರಾಟದಲ್ಲಿ ಆ ಮುಖಂಡನು ಮರಣಹೊಂದಿದನು. ಇನ್ನೇನು ಆ ಅಧಿಕಾರಿ ಮೇನೆಯ ಬಾಗಿಲನ್ನು ತೆಗೆಯಬೇಕೆನ್ನುವುದರಲ್ಲಿ, ಆಪಾದಮಸ್ತಕ ಬುರುಕಿಹೊದ್ದಿದ್ದ ಒಬ್ಬ ವ್ಯಕ್ತಿ ಮೇನೆಯಿಂದ ಛಂಗನೆ ಹೊರಗೆ ಬಂದು,

"ನನ್ನ ಹತ್ತಿರ ಬಂದರೆ ಜೋಕೆ! ನಿಮ್ಮ ಕಾಫರ ದೊರೆಗೆ ನಮ್ಮಂಥ ಹೆಂಗಸರ ಮಾನಭಂಗ ಮಾಡಲು ಸಂತೋಷವಾಗುವುದೆಂದು ಕಾಣುತ್ತೆ! ನನ್ನ ಹತ್ತಿರಕ್ಕೆ ಬಂದರೆ ನಿಮಗೆ ದೊರೆಯುವುದು ನಾನಲ್ಲ, ನನ್ನ ಹೆಣ! ನಾನು ಬದುಕಿರುವ ತನಕ ಈ ಮೇನೆಯನ್ನಾಗಲಿ, ಈ ಬುರುಕೆಯನ್ನಾಗಲೀ ಪರೀಕ್ಷಿಸಲು ಅವಕಾಶ ಕೊಡಲಾರೆ!" ಎಂದು ಹೇಳಿ ಮತ್ತೆ ಮೇನೆಯೊಳಗೆ ಹೋಗಿ ಕುಳಿತಳು. ಅವಳ ನಡೆನುಡಿಗಳನ್ನು ಕಂಡು ಅವಳು ಅರುವತ್ತು ವರ್ಷದ ಮುದುಕಿಯಾಗಿರದೆ ಹದಿನೇಳು ಇಪ್ಪತ್ತುವರ್ಷದ ತರುಣಿ ಎಂಬುದು ಸ್ಪಷ್ಟವಾಯಿತು! ಅವಳ ವೀರೋಚಿತವಾದ ಮಾತುಗಳು ಆ ಅಧಿಕಾರಿಯ ಕಣ್ಣು ತೆರೆಸಿತು! ಈಗ ತಾನು ಬಲಾತ್ಕಾರವಾಗಿ ಮೇನೆಯನ್ನು ಶೋಧಿಸಿದರೆ ಆ ವ್ಯಕ್ತಿ, ತನ್ನ ಮಾತಿನಂತೆ ಆತ್ಮಹತ್ಯ ಮಾಡಿಕೊಂಡರೆ ಇದರಿಂದ ಅನ್ಯಾಯವಾಗಿ ಇನ್ನೊಂದು ಜೀವ ತೆಗೆದ ಪಾಪ ತನ್ನದಾಗುತ್ತದೆ. ಅಲ್ಲದೆ, ಇವರಿಬ್ಬರ ಕೊಲೆಗೆ ತಾನೇ ಹೊಣೆಗಾರನಾಗಬೇಕಾಗುತ್ತದೆ! ಇದರಲ್ಲಿ ತಾನು ದುಡುಕಿದರೆ ಗಂಡಾಂತರವು ಬರುವುದು ಖಂಡಿತ! ಈ ಪರಿಸ್ಥಿತಿಯನ್ನು ತಾನು ಸಾಮ್ರಾಟರಿಗೆ ವರದಿಮಾಡಿ, ಅವರ ಆಜ್ಞೆಯಂತೆ ನಡೆದುಕೊಳ್ಳುವುದು ಲೇಸು ಎಂದು ಆಲೋಚಿಸಿ, ಆ ಮೇನೆಯವರಿಗೆ ಮೇನೆಯನ್ನು ಹೊತ್ತುಕೊಂಡು ವಿಜಯನಗರಕ್ಕೆ ಹಿಂದಿರುಗಲು ಆಜ್ಞೆಮಾಡಿದ. ಪ್ರಾಣಕ್ಕೆ ಹೆದರಿದ್ದ ಅವರು ಮರುಮಾತನಾಡದೆ

ಮೇನೆಯನ್ನು ಹೊತ್ತುಕೊಂಡು ವಿಜಯನಗರದ ಕಡೆಗೆ ಹೊರಟರು. ಅಧಿಕಾರಿಯೂ ಅವರನ್ನು ಹಿಂಬಾಲಿಸಿದ.

## ೧೪

ಆ ದಿನ ರಾಮರಾಯನು ತನ್ನ ಅನುದಿನದ ರಾಜಕಾರ್ಯವನ್ನು ನಿರ್ವಹಿಸಲು ಒಡ್ಡೋಲಗದಲ್ಲಿದ್ದನು. ಅಂದು ಯಾವುದೋ ನ್ಯಾಯ ತೀರ್ಮಾನವಾಗುವುದಿತ್ತು. ರಾಮರಾಯನು ನ್ಯಾಯಮೂರ್ತಿಯಾಗಿ, ಪೀಠದಲ್ಲಿ ಮಂಡಿಸಿದ್ದನು. ಧರ್ಮಾವತಾರರು ಕೆಳಗೆ ಕುಳಿತಿದ್ದರು. ಅಪರಾಧಿಯನ್ನು ತಂದು ಆಸ್ಥಾನದಲ್ಲಿ ನಿಲ್ಲಿಸಿದ್ದರು. ಅಷ್ಟರಲ್ಲಿ ಅಧಿಕಾರಿಯು ಮೇನೆಯೊಡನೆ ಅಲ್ಲಿಗೇ ಬಂದಿದ್ದನು ಮೇನೆಯಲ್ಲಿದ್ದ ವ್ಯಕ್ತಿ ತನಗಾಗಿರುವ ಅನ್ಯಾಯವನ್ನು ರಾಮರಾಯನಿಗೆ ನಿವೇದಿಸಿಕೊಳ್ಳಲು ತನ್ನ ಸಂಗಡಿಗರಲ್ಲಿ ಒಬ್ಬನನ್ನು ಕಳುಹಿಸಿಕೊಟ್ಟಳು.

ಅವನು ಬಂದು ಓಲಗದಲ್ಲಿ ರಾಮರಾಯನನ್ನು ಕುರಿತು, ತಲೆಬಾಗಿ ನಮಸ್ಕಾರಮಾಡಿ "ಪ್ರಭು! ನಮಗೆ ಬಹಳ ಅನ್ಯಾಯವಾಗಿದೆ! ನಮ್ಮ ಮೇಲೆ ಈ ಗಡಿಯ ಸಂರಕ್ಷಣಾಧಿಕಾರಿಗಳು ಅತ್ಯಾಚಾರಮಾಡಿದ್ದಾರೆ! ನಮ್ಮ ಒಡೆಯನನ್ನು ಕೊಂದು ನಮಗೆ ಬಹಳ ತೊಂದರೆ ಕೊಟ್ಟಿದ್ದಾರೆ! ಧರ್ಮಾವತಾರರಾದ ತಾವು ನಮಗಾಗಿರುವ ಅನ್ಯಾಯವನ್ನು ಸರಿಪಡಿಸಿಕೊಡಬೇಕು!" ಎಂದು ಬಿನ್ನವಿಸಿಕೊಂಡನು. ರಾಮರಾಯನು ಅಧಿಕಾರಿಯ ಕಡೆ ನೋಡಲು ಅವನು ಕೆಲವೇ ಮಾತುಗಳಲ್ಲಿ ನಡೆದ ಎಲ್ಲ ಸಂಗತಿಯನ್ನೂ ಹೇಳಿ,

"ಈ ಸಂಗತಿ ಬಹಳ ಸೂಕ್ಷ್ಮವೂ ಮಹತ್ವದ್ದೂ ಇದ್ದುದರಿಂದ ಸನ್ನಿಧಾನಕ್ಕೆ ಕರೆತಂದಿದ್ದೇನೆ. ಪ್ರಭುಗಳು ತಾವೇ ಈ ಪ್ರಯಾಣಿಕರನ್ನು ವಿಚಾರಿಸಿ ಮೇನೆಯಲ್ಲಿ ಆಕ್ಷೇಪಕರವಾದ ವಸ್ತುಗಳು ಇದ್ದರೆ ಅದನ್ನು ಶೋಧಿಸುವಂತೆ ಅನುಗ್ರಹಿಸಬೇಕು!" ಎಂದನು.

"ಮೇನೆ ಎಲ್ಲಿದೆ?" ರಾಮರಾಯನು ಪ್ರಶ್ನಿಸಿದನು.

"ಆಸ್ಥಾನದ ಹೊರಗೆ ಇದೆ ಪ್ರಭು!"

"ಮೇನೆಯಲ್ಲಿರುವ ವ್ಯಕ್ತಿ ಯಾರೆಂದು ನಿಮ್ಮ ಭಾವನೆ?"

"ಯಾರೋ ಅಹಮದ್‌ನಗರದ ಸುಲ್ತಾನರ ಕಡೆಯ ವ್ಯಕ್ತಿ ಇರಬೇಕೆಂದೂ ವಿಜಯನಗರದಲ್ಲಿ ಯಾವುದೋ ವಿದ್ರೋಹದ ಕಾರ್ಯದಲ್ಲಿ ತೊಡಗಿರಬೇಕೆಂದೂ ನನ್ನ ಊಹೆ. ಒಂದು ಸಂಗತಿ ಮಾತ್ರ ಸ್ಪಷ್ಟವಾಗಿದೆ. ಮೇನೆಯಲ್ಲಿ

ವಯಸ್ಸಾದ ಮುದುಕಿ ಇರುವಳೆಂದು ಅವರ ಮುಖಂಡ ಸುಳ್ಳು ಹೇಳಿದ್ದ. ಆದರೆ ಮೇನೆಯಲ್ಲಿ ಒಬ್ಬ ತರುಣ ಸ್ತ್ರೀ ಇರುವಳೆಂಬುದರಲ್ಲಿ ಸಂಶಯವಿಲ್ಲ. ಸನ್ನಿಧಾನವು ಎಲ್ಲ ಸಂಗತಿಯನ್ನೂ ವಿಚಾರಿಸಿದರೆ ಇದರಿಂದ ಹೆಚ್ಚು ಮಹತ್ವದ ಸಂಗತಿ ಹೊರಬೀಳುವ ಸಂಭವವಿದೆ!"

"ಆಕೆಯನ್ನು ಆಸ್ಥಾನಕ್ಕೆ ಮರ್ಯಾದೆಯಿಂದ ಕರೆಯಿರಿ!" ಎಂದು ರಾಮರಾಯನು ಆಜ್ಞೆಮಾಡಿದ. ರಾಜಾಜ್ಞೆಯನ್ನು ತಿಳಿಸಿದಾಗ, "ನಾನು ಕುಲೀನ ಮಹಮದೀಯ ಸ್ತ್ರೀಯಾಗಿರುವುದರಿಂದ ಮೇನೆಯನ್ನು ಬಿಟ್ಟು ಹೊರಗೆಲ್ಲೂ ಬರುವುದಿಲ್ಲ" ಎಂದು ಉತ್ತರ ಕೊಟ್ಟಳು.

ರಾಮರಾಯನು ನಿರ್ವಾಹವಿಲ್ಲದೆ ಮೇನೆಯನ್ನೇ ಆಸ್ಥಾನದೊಳಗೆ ಕರೆಸಿಕೊಳ್ಳಬೇಕಾಯಿತು. ಅವನು ಮೇನೆಯನ್ನು ಉದ್ದೇಶಿಸಿ,

"ನೀವು ಯಾರು? ನೀವೇಕೆ ನಮ್ಮ ಗಡಿ ಅಧಿಕಾರಿಗಳನ್ನು ಸುಳ್ಳುಹೇಳಿ ವಂಚಿಸಲೆಳೆಸಿದಿರಿ? ಎಲ್ಲವನ್ನೂ ವಿವರವಾಗಿ ತಿಳಿಸಿದರೆ, ನಿಮಗೆ ನಮ್ಮಿಂದೇನಾದರೂ ತಿಳಿಯದೆ ಅನ್ಯಾಯವಾಗಿದ್ದರೆ ಅದನ್ನು ಸರಿಪಡಿಸಿಕೊಡಲೆತ್ನಿಸುತ್ತೇವೆ!" ಎಂದನು.

ಈ ಮಾತಿಗೆ ಮೇನೆಯಲ್ಲಿದ್ದ ವ್ಯಕ್ತಿ ಯಾವ ಉತ್ತರ ಕೊಡಲಿಲ್ಲ. ಅದರ ಬದಲು ಅವಳು ಅಳುತ್ತಿರುವಂತೆ ತೋರಿತು. ಅವಳು ಬಿಕ್ಕುವುದು ಮಾತ್ರ ಹತ್ತಿರದಲ್ಲಿದ್ದವರಿಗೆ ಕೇಳಿಸುತ್ತಿತ್ತು.

"ನೀವು ದುಃಖಿಸಬಾರದು! ನಿಮಗೆ ಇಲ್ಲಿ ಯಾವ ತೊಂದರೆಯಾಗದು. ನೀವು ಸತ್ಯ ಸಂಗತಿಯನ್ನು ನಿರ್ಭಯವಾಗಿ ತಿಳಿಸಿರಿ. ಧರ್ಮರಾಜ್ಯದಲ್ಲಿ ಎಲ್ಲರಿಗೂ ಸಮಾನ ನ್ಯಾಯದಾನ ದೊರಕುತ್ತದೆ. ಅಧಿಕಾರಿಯಿಂದೇನಾದರೂ ಅಕ್ರಮವಾಗಿದ್ದರೆ ಅವರನ್ನು ಶಿಕ್ಷಿಸುತ್ತೇವೆ. ನಿಮಗಾಗಿರುವ ಅನ್ಯಾಯವನ್ನು ಸರಿಪಡಿಸುತ್ತೇವೆ. ನೀವು ಯಾವುದಕ್ಕೂ ಭೀತಿಗೊಳ್ಳುವ ಕಾರಣವಿಲ್ಲ. ಎಲ್ಲವನ್ನೂ ಮರೆಮಾಚದೆ ಹೇಳಿ!"

"ಪ್ರಭು! ನಾವು ಅಹಮದ್‌ನಗರದವರು. ನಾನು ಅಲ್ಲಿನ ಜುಮ್ಮಾ ಮಸೀದಿಯ ಖಾಜೀ ಸಾಹೇಬರಾದ ಮೌಲನಾ ಭಾಶಾನಿಯವರ ನಿರ್ಭಾಗ್ಯ ಪುತ್ರಿ ಮಮತಾಜ್! ಅಹಮದ್ ನಗರದಲ್ಲಿ ಇದ್ದಾಗ ಹಿಂದೂ ಸೈನಿಕರು ನಡಸಿದ ಅನ್ಯಾಯ, ಅತ್ಯಾಚಾರಗಳನ್ನು ಕಂಡು ಹೆದರಿದ್ದ ನಮ್ಮ ತಂದೆಯು ಮೇನೆಯಲ್ಲಿ ಇರುವವಳು ತರುಣಿ ಎಂದು ತಿಳಿದರೆ ಸೈನಿಕರು ಅತ್ಯಾಚಾರ ಮಾಡಬಹುದೆಂದು ಹೆದರಿ ಹಾಗೆ ಸುಳ್ಳು ಹೇಳಿದರು. ಅಲ್ಲಾನು ಅವರು ಸುಳ್ಳು ಹೇಳಿದುದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿದ! ನನ್ನ ರಕ್ಷಣೆಗಾಗಿ ಅವರು ತಮ್ಮ

ಬಲಿದಾನ ಮಾಡಿದರು! ಅವರನ್ನು ಅನ್ಯಾಯವಾಗಿ ನಿಮ್ಮ ಆ ನೀಚ ಅಧಿಕಾರಿ ಕೊಂದನು! ಈಗ ನಾನು ಅನಾಥೆಯಾಗಿದ್ದೇನೆ. ಈ ಜಗತ್ತಿನಲ್ಲಿ ನನ್ನವ ರೆನ್ನುವವರು ಯಾರೂ ಇಲ್ಲ. ನಾನು ವಿದ್ರೋಹಿಯಲ್ಲ. ದೇಶಕ್ಕೆ ಅಹಿತವಾಗುವ ಯಾವ ಕಾರ್ಯವನ್ನೂ ನಾನು ಮಾಡಿಲ್ಲ. ಮೇನೆಯಲ್ಲಿ ನಾವು ಯಾವ ಆಕ್ಷೇಪಕರವಾದ ವಸ್ತುಗಳನ್ನೂ ತಂದಿಲ್ಲ. ನನ್ನ ಮಾತು ಅಲ್ಲಾನ ಆಣೆಗೂ ಸತ್ಯ! ಇದನ್ನು ನಂಬಿ!" ಎಂದು ಗದ್ಗದಕಂಠದಲ್ಲಿ ಹೇಳಿದಳು.

"ನೀವು ಅಹಮುದ್‌ನಗರದವರಾದರೆ ವಿಜಯನಗರದಲ್ಲಿ ನಿಮಗೇನು ಕೆಲಸವಿತ್ತು? ನೀವು ಇಲ್ಲಿಗೇಕೆ ಬಂದಿದ್ದೀರಿ? ಸಂಶಯಾಸ್ಪದವಾಗಿ ಏಕೆ ನಡೆದು ಕೊಂಡಿರಿ?"

"ನಮ್ಮ ತಂದೆಯ ಸಮೀಪದ ಬಂಧುಗಳೊಬ್ಬರು ರಾಯಚೂರು ಖಿಲ್ಲೆಯ ದಳಪತಿಗಳಾಗಿದ್ದಾರೆ. ಅಹಮುದ್‌ನಗರದ ಮುತ್ತಿಗೆಯಲ್ಲಿ ನಾವು ನಿರ್ಗತಿಕ ರಾದೆವು. ನಮ್ಮ ಸರ್ವಸ್ವವನ್ನೂ ಕಳೆದುಕೊಂಡೆವು. ಹಿಂದೂ ಸೈನಿಕರು ನಮ್ಮ ಮನೆಯ ಮೇಲೆ ದಾಳಿ ಇಟ್ಟು, ನಾವು ಪ್ರಾಣದ ಮೇಲಿನ ಆಸೆಯಿಂದ ಮನೆಯಿಂದ ಓಡಿಹೋಗಿ ಕಾಡಿನಲ್ಲಿ ತಲೆತಪ್ಪಿಸಿಕೊಂಡೆವು. ಅಲ್ಲೂ ನಮ್ಮ ಜೀವಕ್ಕೆ ಭದ್ರತೆ ಇರಲಿಲ್ಲ. ಇಡೀ ಅಹಮುದ್‌ನಗರ ರಾಜ್ಯದಲ್ಲೇ ನಮಗೆ ರಕ್ಷಣೆ ಇರಲಿಲ್ಲ. ಅಂತಲೇ ನಾವು ವೇಷಾಂತರದಲ್ಲಿ ಹೇಗೋ ತಪ್ಪಿಸಿಕೊಂಡು ರಾಯಚೂರಿಗೆ ಬಂದೆವು. ಅಲ್ಲಿನ ನಮ್ಮ ಬಂಧುಗಳ ಮನೆಯಲ್ಲಿ ಇದುವರೆಗೆ ಆಶ್ರಯ ಪಡೆದೆವು. ಈಗ ವಿಜಯನಗರ ಹಾಗೂ ಅಹಮುದ್‌ನಗರಗಳಿಗೆ ಯುದ್ಧ ನಿಂತು ಒಪ್ಪಂದವಾಗಿರುವುದರಿಂದ ನಾವು ಅಹಮುದ್‌ನಗರಕ್ಕೆ ಹೊರ ಟಿದ್ದೆವು. ದಾರಿಯಲ್ಲಿ ನನ್ನ ತಂದೆಯನ್ನು ಕರ್ತವ್ಯದ ಹೆಸರಿನಲ್ಲಿ ಆ ನೀಚರು ಕೊಂದರು! ಅಯ್ಯೋ! ಅಲ್ಲಾ! ನನ್ನನ್ನೇಕೆ ಇನ್ನೂ ಉಳಿಸಿರುವೆ? ಅವರ ಬದಲು ನಾನಾದರೂ ಸಾಯಬಾರದಿತ್ತೆ?" ಎಂದು ಹಲುಬಿದಳು.

"ನೀವು ದುಃಖಿಸಬಾರದು. ನಿಮಗೆ ಆಗಿರುವ ಅನ್ಯಾಯಕ್ಕೆ ನಾವು ಬಹಳ ವಾಗಿ ಮರುಗಿದ್ದೇವೆ. ನಮ್ಮಿಂದ – ನಮ್ಮ ಸೈನಿಕರಿಂದ ನಿಮಗೆ ತಂಬಾ ತೊಂದರೆಯಾಗಿದೆ. ಅದಕ್ಕಾಗಿ ನಾನು ವಿಷಾದಿಸುತ್ತೇನೆ. ಆದರೆ ನೀವೇಕೆ ನಮ್ಮ ಗಡಿ ಅಧಿಕಾರಿಗಳಿಗೆ ಸಂಶಯ ಬರುವಂತೆ ವರ್ತಿಸಿದಿರಿ? ಪ್ರಯಾಣಿಕರು ಹೆಚ್ಚಿನ ಸಂಖ್ಯೆಯಲ್ಲಿ ಸೈನಿಕರನ್ನು ಹಿಂಬಾಲಕರಾಗಿ ತೆಗೆದುಕೊಂಡು ಹೋಗ ಬಾರದೆಂಬ ನಮ್ಮ ಶಾಸನವನ್ನು ತಿಳಿದೂ ತಿಳಿದೂ ನೀವೇಕೆ ಇಷ್ಟು ಸಂಖ್ಯೆ ಯಲ್ಲಿ ಸೇವಕರನ್ನು ಕರೆದೊಯ್ದಿರಿ? ಮೇನೆಯನ್ನು ಶೋಧಿಸಲು ನೀವೇಕೆ ಅವಕಾಶ ಕೊಡದೆ ಹೋದಿರಿ? ಇದೆಲ್ಲ ಕಾರಣದಿಂದ ನೀವಾಗಿ ನೀವು ಇಲ್ಲದ

ವಿಪತ್ತನ್ನು ಮೇಲೆ ತಂದುಕೊಂಡಿರಿ! ಚಿಂತೆ ಇಲ್ಲ. ಈಗಲಾದರೂ ಮೇನೆಯಲ್ಲಿ ಯಾವುದಾದರೂ ಆಕ್ಷೇಪಕರವಾದ ವಸ್ತುವಿದ್ದರೆ ನಮಗೆ ಒಪ್ಪಿಸಿ! ಇಲ್ಲದಿದ್ದರೆ ನೀವು ಮೇನೆಯನ್ನು ಶೋಧಿಸಲು ಅವಕಾಶವಾದರೂ ಕೊಡಿ! ನಿಮ್ಮ ಘೋಷಾಪದ್ಧತಿ ಮತ್ತು ನಿಮ್ಮ ಧರ್ಮಕ್ಕೆ ಅಪಮಾನವಾಗದ ರೀತಿಯಲ್ಲಿ ಈ ಕಾರ್ಯವನ್ನು ನಡಸಲಾಗುತ್ತದೆ. ಈ ಬಗ್ಗೆ ನೀವು ಹೆದರುವ ಕಾರಣವಿಲ್ಲ!"

"ನಾವು ವಿದ್ರೋಹಿಗಳಲ್ಲ ಪ್ರಭು! ನಮ್ಮಲ್ಲಿ ಯಾವ ಆಕ್ಷೇಪಕರವಾದ ವಸ್ತುಗಳೂ ಇಲ್ಲ!"

"ಹಾಗಿದ್ದರೆ ನೀವು ಮೇನೆಯನ್ನು ಶೋಧಿಸಲು ಅವಕಾಶ ಕೊಡಬೇಕು!"

"ಇದೊಂದು ಮಾತನ್ನು ನಡಸಿಕೊಡಲು ಸಾಧ್ಯವಿಲ್ಲ ಪ್ರಭು!"

"ಏಕೆ?"

"ನಾನು ಕುಲೀನ ಮುಸ್ಲಿಮ ಸ್ತ್ರೀ. ನಮಗೆ ಘೋಷಾ ಪುರಾತನ ಕಾಲದಿಂದ ಬಂದ ಪವಿತ್ರ ಪದ್ಧತಿ. ಇದಕ್ಕೆ ಅಪಮಾನವಾಗುವುದನ್ನು ನಾನು ಸಹಿಸಲಾರೆ!"

"ನಿಮ್ಮ ಘೋಷಾಪದ್ಧತಿಯನ್ನು ನಾನು ಅಪಮಾನ ಮಾಡುವುದಿಲ್ಲ. ಏಕಾಂತದಲ್ಲಿ ಸ್ತ್ರೀಯರೇ ನಿಮ್ಮ ಮೇನೆಯನ್ನು ಶೋಧಿಸುತ್ತಾರೆ. ಇದರಿಂದ ನಿಮ್ಮ ಮರ್ಯಾದೆಗೆ, ಲಜ್ಜೆಗೆ ಎಳ್ಳಷ್ಟೂ ಕುಂದು ಬರುವುದಿಲ್ಲ. ಈ ಬಗ್ಗೆ ನಾನು ಆಶ್ವಾಸನ ಕೊಡುತ್ತೇನೆ!"

"ನನ್ನ ಪ್ರಾಣ ಹೋದರೂ ಇದೊಂದು ಮಾತನ್ನು ಮಾತ್ರ ನಡಸಿಕೊಡಲಾರೆ! ನನ್ನ ತಂದೆ ಯಾವ ಘೋಷಾಪದ್ಧತಿಯ ರಕ್ಷಣೆಗಾಗಿ, ಬಲಿದಾನ ಮಾಡಿದರೋ, ಆ ಪವಿತ್ರ ಪದ್ಧತಿಗೆ ಅಪಮಾನವಾಗುವುದಕ್ಕೆ ನಾನು ಅವಕಾಶ ಕೊಡಲಾರೆ! ನೀವು ಘೋಷಾಪದ್ಧತಿಯನ್ನು ಕಿತ್ತೊಗೆಯುವ ಮೊದಲು ನನ್ನನ್ನು ಕೊಂದು ಆ ಕೆಲಸ ಮಾಡಬೇಕೇ ಹೊರತು, ನಾನು ಪ್ರಾಣದಿಂದ ಇರುವತನಕ ನಿಮ್ಮ ಆಶಯ ಈಡೇರದು!"

"ನಿಮ್ಮಲ್ಲಿ ನನಗೆ ಸಂಶಯ ಬರುತ್ತದೆ. ಯಾವ ಆಕ್ಷೇಪಕರವಸ್ತುವಿಲ್ಲದಿದ್ದರೆ ನೀವೇಕೆ ಶೋಧನೆಗೆ ಒಪ್ಪುತ್ತಿಲ್ಲ. ಅದೂ ಏಕಾಂತದಲ್ಲಿ? ಸ್ತ್ರೀಯರಿಂದಲೇ ನಡಸುವ ಶೋಧನೆಗೆ ನೀವು ಒಡಂಬಡದಿರುವುದನ್ನು ನೋಡಿದರೆ, ಇದರಲ್ಲೇನೋ ವಿಶೇಷವಿದ್ದಂತೆ ಇದೆ. ನೀವು ಯಾರೋ ವಿದ್ರೋಹಿಗಳ ಕಡೆಯವರು ಇರಬೇಕು! ನಿಮ್ಮನ್ನು ನಾವು ಶೋಧಿಸಲೇಬೇಕು!"

"ನಾನು ಜೀವದಿಂದ ಇರುವವರೆಗೆ ಈ ಮಾತು ಖಂಡಿತ ಸಾಧ್ಯವಿಲ್ಲ!"

"ನೀವು ನಮ್ಮ ಒಳ್ಳೆಯ ಮಾತುಗಳಿಗೆ ಕಿವಿಗೊಡದೆ ಇದ್ದರೆ ನಿಮ್ಮನ್ನು ನಾವು ಬಲಾತ್ಕರಿಸಬೇಕಾಗುತ್ತದೆ!"

“ನಿಮಗೆ ಅಷ್ಟು ಧೈರ್ಯವಿದ್ದರೆ ನನ್ನ ಬಳಿಗೆ ಬಂದು ನೋಡಿ!” ಸಿಂಹಿಣಿಯಂತೆ ಅವಳು ಗರ್ಜಿಸಿದಳು. ಅನಂತರ,

“ನನ್ನ ಸರ್ವಸ್ವವನ್ನೂ ನಾಶಮಾಡಿ, ಈಗ ನನ್ನ ಮಾನಭಂಗ, ಶೀಲಭಂಗ ಮಾಡಲೆಳೆಸಿರುವ ಎಲೋ ಕಾಫರ ದೊರೆ! ನಾನು ಸಾಮಾನ್ಯ ಹೆಣ್ಣಲ್ಲ. ಮೌಲಾನಾ ಸಾಹೇಬರ ಮಗಳು ಎಂಬುದನ್ನು ಮರೆಯಬೇಡ! ನನ್ನ ತಂಟೆಗೆ ಬಂದರೆ ನಿನ್ನ ವಂಶವೇ ಬೂದಿಯಾದೀತು ಜೋಕೆ! ನನಗೆ ಮರ್ಯಾದೆಗಿಂತಲೂ ಮಾನಕ್ಕಿಂತಲೂ, ಈ ನೀಚ ಬಾಳ್ವೆ ಹೆಚ್ಚೆಂದು ನೀನು ತಿಳಿದಿರುವೆಯ? ನನ್ನನ್ನು ನೀನು ಬಲಾತ್ಕರಿಸುವುದಾದರೆ – ನನ್ನ ಹೆಣ ನಿನ್ನನ್ನು ಎದುರುಗೊಳ್ಳುವುದೇ ಹೊರತು ನಿಮಗೆ ನಾನು ಸಿಕ್ಕುವುದಿಲ್ಲ! ಮೌಲಾನ ಸಾಹೇಬರ ಮಗಳು ಮಮತಾಜ್ ಆತ್ಮಹತ್ಯಕ್ಕೆ ಹೆದರುವ ಹೆಣ್ಣಲ್ಲ. ಈ ಮಾತು ಚೆನ್ನಾಗಿ ನೆನಪಿನಲ್ಲಿಡು!” ಎಂದು ಅವಳು ಗುಡುಗಿದಳು–ಕ್ರೋಧದಿಂದ ಉರಿದೆದ್ದು ಗರ್ಜಿಸಿದಳು.

ತನ್ನ ಕಣ್ಣೆದುರಿನಲ್ಲೇ ಮೇಲಿಂದ ಮೇಲೆ ನಡೆದಿದ್ದ ವಿಧಿಯ ಕ್ರೂರ ಕೈತವದಿಂದ ಅವಳು ರೋಸಿಹೋಗಿದ್ದಳು. ಹತಾಶಳಾಗಿದ್ದಳು. ಅವಳ ಕಣ್ಣೆದುರಿಗೇ ಅವಳ ಒಬ್ಬಳೇ ಅಕ್ಕ, ಅವಳ ಒಂದೇ ಮಗು ಕ್ರೂರವಾದ ರೀತಿಯಲ್ಲಿ ಕೊಲೆಯಾಗಿದ್ದರು! ತಮ್ಮ ಧರ್ಮಕ್ಕೆ ಅಪಮಾನ ನಡೆದಿತ್ತು. ಪವಿತ್ರ ವಸ್ತುಗಳು ಅಪವಿತ್ರವಾಗಿದ್ದುವು! ಮನೆಗೆ ಬೆಂಕಿ ಬಿದ್ದಿತ್ತು! ಅಲ್ಲಿದ್ದ ಸಮಸ್ತ ವಸ್ತುಗಳೂ ಸೂರೆಯಾಗಿದ್ದುವು! ಈಗ ತನ್ನ ತಂದೆಯು ಕ್ರೂರರೀತಿಯಲ್ಲಿ ಕೊಲೆಯಾಗಿದ್ದ! ಅವಳಿಗೆ ತನ್ನವರೆನ್ನುವ ಯಾವ ವ್ಯಕ್ತಿ ವಸ್ತುಗಳೂ ಈಗ ಜಗತ್ತಿನಲ್ಲಿ ಇರಲಿಲ್ಲ. ಅಂತಲೇ ಅವಳು ರೋಸಿಹೋಗಿದ್ದಳು. ತಾನು ಯಾರೊಂದಿಗೆ ಮಾತನಾಡುತ್ತಿದ್ದೇನೆ, ಏನು ಮಾತನಾಡುತ್ತಿದ್ದೇನೆ ಎಂಬುದರ ಪರಿಜ್ಞಾನವಿಲ್ಲದೆ ಹುಚ್ಚಿಯಂತೆ ಚೀರಿದ್ದಳು. ಅದರ ಪರಿಣಾಮವೇನಾದೀತೆಂದು ತಿಳಿಯುವ ಗೋಜಿಗೆ ಅವಳು ಹೋಗಲಿಲ್ಲ! ಅವಳಿಗೆ ವಿಧಿಯ ಆಣಕ ಸಾಕಾಗಿತ್ತು. ಜೀವನ ಬೇಸರ ಬಂದಿತ್ತು! ಸಾವು ಸುಖಕರವಾಗಿತ್ತು! ಸಾಯುವ ಮೊದಲು ತನಗಾದ ಅನ್ಯಾಯಗಳಿಗೆ, ಕಾರಣನಾದ ರಾಮರಾಯನ ಮೇಲೆ ಸೇಡುತೀರಿಸಿಕೊಂಡು ಸಾಯಬೇಕೆಂಬುದೇ ಅವಳ ಇಚ್ಛೆಯಾಗಿತ್ತು. ಸಾಯಲು ಹೊರಟಿದ್ದ ಅವಳಿಗೆ ರಾಮರಾಯನನ್ನು ತುಂಬಿದ ಸಭೆಯಲ್ಲಿ ನಿಂದಿಸಲು ಸ್ವಲ್ಪವೂ ಹೆದರಿಕೆಯಾಗಲಿಲ್ಲ. ಅವಳು ಎಲ್ಲದಕ್ಕೂ ಸಿದ್ಧಳಾಗಿದ್ದಳು! ಅವಳ ಬಳಿಯಲ್ಲಿ ಇದ್ದ ಖಡ್ಗ ಅವಳಿಗೆ ಈ ಧೈರ್ಯ ಕೊಟ್ಟಿತ್ತು! ಅದನ್ನು ನಂಬಿಯೇ ಅವಳು ಈ ಎಲ್ಲ ಮಾತುಗಳನ್ನೂ ನಿರ್ಭಯವಾಗಿ ಹೇಳಿದ್ದಳು.

ಈ ಅವಳ ಮಾತುಗಳನ್ನು ಕೇಳಿ ಸಭೆ ಅವಾಕ್ಕಾಯಿತು. ರಾಮರಾಯನು ಪ್ರಕ್ಷುಬ್ಧನಾದನು. ತನ್ನನ್ನು ಯಃಕಶ್ಚಿತ ತರುಣಿಯು ತುಂಬಿದ ಸಭೆಯಲ್ಲಿ ತಿರಸ್ಕರಿಸುವುದೆಂದರೇನು? ಅಪಮಾನಗೊಳಿಸುವುದೆಂದರೇನು? ಅವನ ಸೈರಣೆ ತಪ್ಪಿತು. ಸಹನೆ ಮೀರಿತು! ತನ್ನನ್ನು ತುಂಬಿದ ಸಭೆಯಲ್ಲಿ ಅಪಮಾನ ಮಾಡಿದ ಆ ನೀಚ ಹೆಣ್ಣಿನ ಮಾನಭಂಗವಾಗಲೇಬೇಕು! ಎಂದು ತನ್ನಲ್ಲೇ ಹೇಳಿಕೊಂಡು, ಅಲ್ಲಿದ್ದ ಮುಕುಂದನಾಯಕನ ಕಡೆ ನೋಡಿ,

"ಈ ನೀಚ ಹೆಣ್ಣಿನ ಸೊಕ್ಕನ್ನು ನಾವು ಅಡಗಿಸದಿದ್ದರೆ ನಮ್ಮ ಮರ್ಯಾದೆ ಉಳಿಯುವುದಿಲ್ಲ! ಅವಳ ಆ ಮೇನೆಯನ್ನು ನಾವು ಶೋಧಿಸಲೇಬೇಕು! ಅದೂ ತುಂಬಿದ ಸಭೆಯಲ್ಲೇ! ಮುಕುಂದನಾಯಕ, ಆ ಮೇನೆಯನ್ನು ಶೋಧಿಸು!" ಎಂದು ಆಜ್ಞೆಮಾಡಿದ.

ಮುಕುಂದನಾಯಕನು ರಾಮರಾಯನ ಆಜ್ಞೆಯಂತೆ ಇನ್ನೇನು ಮೇನೆಯ ಕಡೆಗೆ ನುಗ್ಗಬೇಕೆಂದು ಇರುವಷ್ಟರಲ್ಲಿ, ಆಸ್ಥಾನದಲ್ಲಿದ್ದ ಉನಿಲ್‌ಮುಲ್ಕನೆಂಬ ಸರದಾರನು ಎದ್ದುನಿಂತು ಹೀಗೆ ಹೇಳಿದ.

"ಮಹಾಪ್ರಭು! ನನ್ನಿಂದ ಅಪರಾಧವಾಗಿದ್ದರೆ ಕ್ಷಮಿಸಬೇಕು! ಹಿಂದುವೇ ಆಗಲೀ, ಮಹಮದೀಯಳೇ ಆಗಲಿ, ಕುಲೀನ ಸ್ತ್ರೀಯಾದವಳು ತುಂಬಿದ ಸಭೆಯಲ್ಲಿ ಅಪರಾಧಿನಿಯಂತೆ ನಿಂತುಕೊಳ್ಳಲು ಇಚ್ಛಿಸುವುದಿಲ್ಲ. ಅದರಲ್ಲೂ ಈಕೆ ಮಹಮದೀಯಳು, ಮೌಲಾನಾ ಸಾಹೇಬರ ಮಗಳೆಂದು ಹೇಳಿಕೊಂಡಿದ್ದಾಳೆ. ಇಂಥವಳು ತನ್ನ ಧರ್ಮದ ಪದ್ಧತಿ ಶ್ರದ್ಧೆಗನುಗುಣವಾಗಿ ಘೋಷವನ್ನು ಕುಲೀನತೆಯ ಲಾಂಛನವೆಂದು ತಿಳಿದಿದ್ದಾಳೆ. ಅವಳನ್ನು ಬಲಾತ್ಕರಿಸುವುದರಿಂದ ಪ್ರಭುಗಳು ಅವಳಿಗೆ ಆಗಿರುವ ಅನ್ಯಾಯಗಳನ್ನು ಸರಿಪಡಿಸಲು ಹೋಗಿ ಇನ್ನಷ್ಟು ಘೋರ ಅನ್ಯಾಯ ಬಗೆದಂತೆ ಆಗುತ್ತದೆ. ಆಕೆ ಜೀವನದಲ್ಲಿ ತುಂಬಾ ನೊಂದಿರುವಂತೆ ಇದೆ. ತಂದೆತಾಯಿ, ಮನೆಮಠ, ತನ್ನ ಸರ್ವಸ್ವವನ್ನೂ ಕಳೆದುಕೊಂಡು ಈಗ ಅನಾಥಳಾಗಿ, ನಿರ್ಗತಿಕಳಾಗಿ ನಮ್ಮ ಮುಂದೆ ನಿಂತು ತನಗಾಗಿರುವ ಅನ್ಯಾಯಕ್ಕೆ ನ್ಯಾಯ ಬೇಡುತ್ತಿದ್ದಾಳೆ. ಇವಳು ತನ್ನ ದುಃಖದ ಭರದಲ್ಲಿ, ದುಡುಕಿ ಒಂದೆರಡು ಅಪಶಬ್ದಗಳನ್ನು ಆಡಿದ್ದಾಳೆ. ಧರ್ಮಾವತಾರರಾದ ಪ್ರಭುಗಳು ನೋವಿನ ಭಾರದಲ್ಲಿ ಆ ಹತಭಾಗಿನಿಯು ಆಡಿದ ಮಾತುಗಳನ್ನು ಮನಸ್ಸಿಗೆ ತಂದುಕೊಳ್ಳದೆ ಆಕೆಯ ತಪ್ಪನ್ನು ಮನ್ನಿಸಿ, ಆಕೆಗೆ ಆಗಿರುವ ಅನ್ಯಾಯಕ್ಕೆ ಪರಿಹಾರವನ್ನು ಅನುಗ್ರಹಿಸಬೇಕಾಗಿದೆ. ಈ ನಿರ್ಭಾಗ್ಯ ಹೆಣ್ಣು ತಮ್ಮ ಮಗಳೆಂದು ಅವಳು ಮಾಡಿರುವ ಸರ್ವಾಪರಾಧವನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು! ತಾವು ಮಹಾ ಉದಾರಿಗಳು! ದಯಾರ್ದ್ರ ಹೃದ

ಯರು! ದುಃಖಿಗಳ ನಿಜವಾದ ಬಂಧುಗಳು ನೀವು! ಹಿಂದೂ ಮಹಮದೀಯರ ಮಿತ್ರರಾಗಿದ್ದೀರಿ! ಅವರ ಸಖ್ಯ ಸಂವರ್ಧನೆಗಾಗಿ ಏನು ಮಾಡಲೂ ಸಿದ್ಧರಾಗಿದ್ದೀರಿ. ಈಗ ನೀವು ಈ ಹೆಣ್ಣುಮಗಳ ತಪ್ಪನ್ನು ದುಡುಕನ್ನು ಮನ್ನಿಸಿ ಅವಳ ಮೇಲೆ ಕೃಪೆ ಮಾಡಬೇಕಾಗಿದೆ!" ಎಂದು ಕೈಮುಗಿದು ಪ್ರಾರ್ಥಿಸಿಕೊಂಡ.

ಈ ಮಾತು ರಾಮರಾಯನ ಮೇಲೆ ಅವನ ನಿರೀಕ್ಷೆಗೂ ಮೀರಿದ ಪರಿಣಾಮ ಉಂಟುಮಾಡಿತು. ಅವನು ಉನಿಲ್‌ಮುಲ್ಕನು ಹೇಳಿದ ಮಾತುಗಳನ್ನು ಒಮ್ಮೆ ವಿಚಾರ ಮಾಡಿದನು. ಅವನ ಮಾತುಗಳು ಒಂದು ರೀತಿಯಲ್ಲಿ ಸರಿ ಎನಿಸಿತು. ಮೇಲಿಂದ ಮೇಲೆ ವಿಧಿಯ ಪೆಟ್ಟುಗಳಿಂದ ಹತಾಶಳಾದ ಹೆಣ್ಣು, ಭಾವಾವೇಶದಲ್ಲಿ, ದುಃಖದ ಭರದಲ್ಲಿ ಹೀಗೆ ದುಡುಕಿ ತನ್ನನ್ನು ನಿಂದಿಸಿರಬಹುದು. ಈಗ ಅವಳು ದುಡುಕಿದಂತೆ ತಾನು ದುಡುಕಬಾರದು ಎಂದು, ಮುಕುಂದ ನಾಯಕನನ್ನು ಹಿಂದಕ್ಕೆ ಕರೆದ.

"ಉನಿಲ್‌ಮುಲ್ಕರೇ, ನಿಮ್ಮ ಮಾತಿಗೆ ಗೌರವವಿತ್ತು ಈ ಹತಭಾಗಿನಿಯ ತಪ್ಪನ್ನು ಮನ್ನಿಸಿದ್ದೇನೆ. ನೀವಾದರೂ ಆಕೆಗೆ ಬುದ್ಧಿ ಹೇಳಿ ಆಕೆಯ ಮೊಂಡು ಹಠ ಬಿಡುವಂತೆ ಮಾಡಿ. ಆಕೆಯ ವರ್ತನೆಯನ್ನು ನೋಡಿದರೆ ನಮಗೆ ಆಕೆಯ ಬಗ್ಗೆ ಸಂಶಯ ಉಂಟಾಗುತ್ತಿದೆ. ಆಕೆಯು ನಿರಪರಾಧಿಯಾಗಿದ್ದರೆ, ಮೇನೆಯಲ್ಲಿ ಯಾವ ಬಗೆಯ ವಿದ್ರೋಹಕರವಾದ ವಸ್ತುಗಳೂ ಇಲ್ಲದಿದ್ದರೆ ಶೋಧನೆಗೆ ಅವಕಾಶ ಕೊಡುವುದಿಲ್ಲವೆಂದು ಅವಳೇಕೆ ಹಠ ಹಿಡಿಯಬೇಕು! ಇದರಲ್ಲಿ ಏನೋ ವಿಶೇಷವಿದೆ! ಇದರ ರಹಸ್ಯ ಭೇದ ಮಾಡಲೇಬೇಕು! ನೀವಾದರೂ ಆಕೆಗೆ ತಿಳಿಯಹೇಳಿ!" ಎಂದು ಉನಿಲ್‌ಮುಲ್ಕನಿಗೆ ರಾಮರಾಯನು ಹೇಳಿದನು.

ಉನಿಲ್‌ಮುಲ್ಕನು ಮಹಮದೀಯನಾದರೂ ರಾಮರಾಯನ ವಿಶ್ವಾಸಕ್ಕೆ ನಂಬಿಕೆಗೆ ಪಾತ್ರನಾಗಿದ್ದ ಒಬ್ಬ ದಕ್ಷ ಸರದಾರ. ಅವನು ರಾಮರಾಯನ ಅಂತರಂಗದ ಮಿತ್ರರಲ್ಲಿ ಒಬ್ಬನಾಗಿದ್ದನು. ಅಂತಲೇ ರಾಮರಾಯನ ಸ್ವಭಾವ ಪರಿಚಯ ಅವನಿಗಿತ್ತು. ಅವನ ಸಲಹೆಯನ್ನು ರಾಮರಾಯನು ತಿರಸ್ಕರಿಸದೆ ಅವುಗಳನ್ನು ಪುರಸ್ಕರಿಸಿದ್ದನು. ಇದರಿಂದ ರಾಮರಾಯನ ಬಗ್ಗೆ ಎಲ್ಲರಿಗೂ ಗೌರವ ಉಂಟಾಯಿತು.

ರಾಮರಾಯನ ಸಲಹೆಯಂತೆ ಉನಿಲ್ ಮುಮ್ತಾಜಳಿಗೆ ಬುದ್ಧಿವಾದ ಹೇಳಿದ. ಅವಳು ತನ್ನ ಮೊಂಡುತನ ಬಿಟ್ಟು ಶೋಧನೆಗೆ ಒಪ್ಪುವಂತೆ ಎಷ್ಟೋ ಪ್ರಯತ್ನಿಸಿದ. ಅವಳು ಅವನ ಮಾತನ್ನು ಕೇಳಲಿಲ್ಲ. ತನ್ನ ಹಠವನ್ನು ಬಿಡಲಿಲ್ಲ. ಕಡೆಗೆ ರಾಮರಾಯನು ನಿಷ್ಠುರದಿಂದ ಹೇಳಬೇಕಾಯಿತು.

"ನಮ್ಮ ಸೈರಣೆಗೂ ಮಿತಿ ಇದೆ. ನಿಮ್ಮನ್ನು ನಾವು ಇದುವರೆಗೆ

ಮರ್ಯಾದೆಯಿಂದಲೇ ಗೌರವದಿಂದಲೇ ನಡಸಿಕೊಂಡೆವು. ನೀವು ಒಳ್ಳೆಯ ಮಾತಿಗೆ ಕಿವಿಗೊಡುವಂತೆ ತೋರುವುದಿಲ್ಲ. ನಿಮ್ಮನ್ನು ನಾವು ಬಲಾತ್ಕಾರದಿಂದ ಶೋಧಿಸಬೇಕಾಗುತ್ತದೆ. ಈಗಲೂ ನಿಮಗೆ ಇನ್ನೊಮ್ಮೆ ಅವಕಾಶಕೊಡುತ್ತೇವೆ. ದುಡುಕದೆ ವಿಚಾರಮಾಡಿ, ನಿಮ್ಮ ನಿರ್ಣಯವನ್ನು ತಿಳಿಸಿ !" ಎಂದು ಗದ್ದರಿಸಿದ.

"ನನ್ನ ಸರ್ವಸ್ವವನ್ನೂ ಹಾಳುಮಾಡಿದ ನೀವು–ನಿಮ್ಮ ಸೈನಿಕರು ಈಗ ನನ್ನನ್ನು ಶೋಧಿಸುವ ನೆಪದಲ್ಲಿ ನನ್ನ ಮಾನಾಪಹಾರ, ಶೀಲಾಪಹಾರಮಾಡುವುದಿಲ್ಲವೆಂದು ಏನು ನಂಬಿಕೆ? ನೀವು ಎಷ್ಟು ಹೇಳಿದರೂ ನಾನು ಶೋಧನೆಗೆ ಒಪ್ಪುವುದಿಲ್ಲ ! ಈ ಮಾತು ಖಂಡಿತ !"

"ನಿಮಗೆ ನಮ್ಮಿಂದ ಯಾವ ಅನ್ಯಾಯವೂ ನಡೆಯುವುದಿಲ್ಲವೆಂದು ಪಂಪಾಪತಿಯ ಆಣೆ ಮಾಡಿ ಹೇಳಬಲ್ಲೆವು. ನಮ್ಮ ಮಾತನ್ನು ನಂಬಿರಿ !"

"ನಿಮಗೆ ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಮೇಲೆ ನಿಮ್ಮ ಮಾತನ್ನು ನಂಬುವುದಾದರೂ ಎಂತು ?"

"ನೀವು ನಿಜವನ್ನೆ ಹೇಳುತ್ತಿರಬಹುದು. ನಿಮ್ಮಲ್ಲಿ ಯಾವ ವಿದ್ರೋಹಕರ ವಸ್ತುವೂ ಇಲ್ಲದಿರಬಹುದು. ನೀವು ನಮ್ಮ ವಿರುದ್ಧ ಯಾವ ವಿದ್ರೋಹಕಾರ್ಯದಲ್ಲಿಯೂ ತೊಡಗಿಲ್ಲದೆ ಇರಬಹುದು. ಇದುವರೆಗೆ ನಮಗುಂಟಾಗಿರುವ ಅನುಭವಗಳಿಂದ ಸಾಮ್ರಾಜ್ಯರಹಿತ ದೃಷ್ಟಿಯಿಂದ, ನಿಮ್ಮನ್ನು ಶೋಧಿಸುವುದು ಅಗತ್ಯವಿದೆ. ನೀವು ಮೌಲಾನಾ ಸಾಹೇಬರ ಮಗಳೆಂದು ಹೇಳಿದ್ದೀರಿ. ಮೌಲಾನಾ ಸಾಹೇಬರಿಗೂ – ಅಹಮದ್‌ನಗರದ ಸುಲ್ತಾನರಿಗೂ ನಿಜವಾದ ಪರಿಚಯವಿದೆ. ಅಹಮದ್‌ನಗರದ ಸುಲ್ತಾನರು ನಿಮ್ಮ ಮೂಲಕ ಯಾವುದೋ ವಿದ್ರೋಹದ ಕಾರ್ಯವನ್ನು, ಸಾಧಿಸಲೆತ್ನಿಸುವಂತೆ ಇದೆ. ಆದುದರಿಂದ ನಿಮ್ಮ ನಿರಪರಾಧಿತನ ಹೊರಬೀಳಲು ನಿಮ್ಮನ್ನು ಶೋಧಿಸುವುದು ಅಗತ್ಯವಾಗಿದೆ. ಕೆಲವು ಅಪರಾಧಿಗಳೂ, ಶಿಕ್ಷಾರ್ಹ ವ್ಯಕ್ತಿಗಳೂ ಘೋಷಾಪದ್ಧತಿಯ ಹೆಸರಿನಲ್ಲಿ ನಮ್ಮ ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಂಡಿರುವುದರಿಂದ ನಿಮ್ಮ ಮೇನೆಯನ್ನು ನಾವು ಶೋಧಿಸಬೇಕಾಗಿದೆ."

"ನಾನು ಬದುಕಿರುವ ತನಕ, ನನ್ನ ಕಡೆಯುಸಿರು ಇರುವ ತನಕ ಇದಕ್ಕೆ ನಾನು ಸಮ್ಮತಿಸಲಾರೆ? ನೀವು ನನ್ನನ್ನು ಮುಟ್ಟಲು ಬಂದರೆ ನಿಮಗೆ ನನ್ನ ಬದಲು ನನ್ನ ಶವ ದೊರೆಯುತ್ತದೆ ? ಅದನ್ನು ನೋಡಬಯಸುವುದಾದರೆ ನೀವು ನನ್ನನ್ನು ಶೋಧಿಸಲು ಬನ್ನಿ !" ಮತ್ತೆ ಅದೇ ಒರಟು ಉತ್ತರ ಕೊಟ್ಟಳು.

"ಸಾಮ್ರಾಟರ ಆಜ್ಞೆಯನ್ನು ತಿರಸ್ಕರಿಸುವುದು ಸರಿಯಿಲ್ಲ." ಉನಿಲ್ ಮುಲ್ಕನು ಹೇಳಿದ.

"ಈ ಕಾಫರನು ನಿಮಗೆ ಸಾಮ್ರಾಟನಾದ ಮಾತ್ರಕ್ಕೆ ನನಗೆ ಸಾಮ್ರಾಟನಾದನೆ? ಇವನು ಸಾಮ್ರಾಟನಲ್ಲ-ನನ್ನ ಭಾಗದ ಸೈತಾನ! ನನ್ನಂಥ ನಿರ್ಭಾಗ್ಯ ಸ್ತ್ರಿಯರ ಮಾನ ತೆಗೆಯಲು ಹಾತೊರೆಯುವ ನೀಚ!" ಎಂದು ಅವಳು ಮೇನೆಯಿಂದಲೇ ಗದರಿಸಿದಳು.

"ಹುಷಾರ್! ನೀನು ಯಾರೊಂದಿಗೆ ಮಾತನಾಡುತ್ತಿರುವೆ ಎಂಬುದನ್ನು ನೆನಪಿನಲ್ಲಿಡು. ಮಾತು ಬರುವುದೆಂದು ನಾಲಗೆಯನ್ನು ಹೀಗೆಲ್ಲ ಹರಿಯಬಿಡಬೇಡ! ಇದುವರೆಗೆ ಕುಲೀನ ಸ್ತ್ರೀ ಎಂದು ಗೌರವಕೊಟ್ಟೆವು. ನಿನ್ನ ಕುಲವನ್ನು ನಿನ್ನ ನಾಲಗೆ ಅರುಹಿತು! ಸಾಮ್ರಾಟರನ್ನು ದೂಷಿಸಿದ ಶಿಕ್ಷೆ ಏನೆಂದು ತಿಳಿದಿದೆಯೆ?" ಉನಿಲ್‌ಮುಲ್ಕನು ಕೆರಳಿ ಹೇಳಿದ.

"ತಿಳಿದಿದೆ. ಈ ನಾಲಗೆಯನ್ನು ಕತ್ತರಿಸಿಹಾಕಬಹುದು. ಇನ್ನೂ ಸಿಟ್ಟು ಬಂದರೆ ಈ ದೇಹವನ್ನು ಛಿದ್ರಛಿದ್ರವಾಗಿ ಕತ್ತರಿಸಿ, ನಾಯಿನರಿಗಳ ಪಾಲು ಮಾಡಬಹುದು. ಅಷ್ಟೇತಾನೆ? ಇದಕ್ಕೆಲ್ಲ ಹೆದರುವ ಹೆಣ್ಣು ನಾನಾಗಿದ್ದರೆ ನಿಮ್ಮನ್ನು ಎದುರಿಸಿ ಮಾತನಾಡುತ್ತಿದ್ದೆನೇ? ನನಗೆ ಈ ನೀಚ ಸಾಮ್ರಾಟನ ಎದುರಿಗೆ ಬಂದು ನನ್ನ ದೇಹ ಕಲುಶಿತವಾಗಿದೆ. ಇದನ್ನು ನನ್ನ ವಂಶದ ಘನತೆ, ನನ್ನ ಧರ್ಮದ ರಕ್ಷಣೆಯ ಸಲುವಾಗಿ ಬಲಿದಾನ ಮಾಡಲು ನಾನು ಹಿಂದೆಗೆಯುವವಳಲ್ಲ. ನಾನು ಮೌಲಾನಾರವರ ಮಗಳಾದುದು ನಿಜವಾದರೆ ಇಂತಹ ಕಾಫರ ದೊರೆಯ ಆಜ್ಞೆಯನ್ನು ಲೆಕ್ಕಿಸುವುದಿಲ್ಲ – ನಮ್ಮ ಪವಿತ್ರ ಘೋಷಾಪದ್ಧತಿಗೆ ಆಗುವ ಅಪಮಾನವನ್ನು ತಡೆಯಲು ನಾನು ಪ್ರಾಣ ಹೋದರೂ ಸರಿ, ಹೋರಾಡುತ್ತೇನೆಯೇ ಹೊರತು ನಿಮ್ಮ ರಾಜಾಜ್ಞೆಗೆ ಮಣಿಯುವುದಿಲ್ಲ. ಈಗಲೂ ನಿಮ್ಮ ಕಾಫರದೊರೆ ಎಚ್ಚತ್ತುಕೊಳ್ಳಲಿ! ನನ್ನನ್ನು ಮುಟ್ಟಲು ಬಂದ ಕೈ ಮುಸ್ಲಿಂ ಸ್ತ್ರೀಯರ ಅಪಮಾನ ಮಾಡುತ್ತದೆ. ಅವನು ಅಹಮದ್‌ನಗರದಲ್ಲಿ ನಡಸಿದ ಅತ್ಯಾಚಾರಗಳು ಅವನ ಗೋರಿಯನ್ನು ಸಿದ್ಧಗೊಳಿಸಿವೆ. ನನ್ನ ಮಾನಭಂಗವಾದರೆ ಅವನ ಮಕುಟಭಂಗವಾಗುತ್ತದೆ! ನನ್ನ ನಾಶವಾದರೆ ಅವನ ಸರ್ವನಾಶವಾಗುತ್ತದೆ. ಈ ಸಿಂಹಾಸನ, ಈ ಸಾಮ್ರಾಜ್ಯಗಳು ಧೂಳೀಪಟವಾಗುತ್ತವೆ. ನನ್ನ ಮಾತುಗಳನ್ನು ಬರೆದಿಟ್ಟುಕೊಳ್ಳಿ!"

"ನೀನು ಕುಲೀನ ಸ್ತ್ರೀ ಎಂದು ನಿನಗೆ ಇದುವರೆಗೆ ಮರ್ಯಾದೆ ಇತ್ತೆವು. ನಿನ್ನ ದೂಷಣೆಯನ್ನು ಕೇಳಿಕೊಂಡಿದ್ದೆವು. ಇನ್ನು ಇವುಗಳನ್ನು ಕೇಳಿಕೊಂಡಿರಲು ಸಾಧ್ಯವಿಲ್ಲ. ಸಿಂಹಾಸನಕ್ಕೆ ಆಗಿರುವ ಅಪಮಾನ ಸಹಿಸಲು ಸಾಧ್ಯವಿಲ್ಲ. ತುಂಬಿದ ಸಭೆಯಲ್ಲಿ ಸಾಮ್ರಾಟರ ನಿಂದನೆ ಮಾಡಿದವರನ್ನು ಕೂಡಲೇ ಶಿಕ್ಷಿಸ

ಬೇಕು! ನೀನು ಹೆಣ್ಣಲ್ಲ, ರಕ್ಕಸಿ. ಮಾನಗೆಟ್ಟ ಹೆಂಗಸು! ನಿನ್ನಂಥ ಧೂರ್ತ ಹೆಣ್ಣಿಗೆ ತಕ್ಕ ಬುದ್ಧಿ ಕಲಿಸಲೇ ಬೇಕು! ನಿನ್ನ ದುರಹಂಕಾರಕ್ಕೆ ಶಾಸ್ತಿ ಮಾಡಲೇ ಬೇಕು! ಮುಕುಂದನಾಯಕ, ಅವಳನ್ನು ಮೇನೆಯಿಂದ ಹೊರಗೆ ಹಾಕಿ, ಅದನ್ನು ಶೋಧಿಸು!" ಎಂದು ಆಜ್ಞೆ ಮಾಡಿದನು.

ಇದನ್ನು ಕಾರ್ಯಗತಮಾಡಲು ಮುಕುಂದನಾಯಕನು ಹೊರಟಾಗ, ಆಸ್ಥಾನದಲ್ಲಿ ಗಜಿಬಿಜಿ ಶಬ್ದವಾಯಿತು. ಆಸ್ಥಾನಿಕರಲ್ಲಿ ಯಾರೋ ಎದ್ದು ನಿಂತು ಹೇಳಿದರು.

"ಪ್ರಭೂ! ಅಬಲೆಯ ಮೇಲೆ ಕೈಮಾಡಬಾರದು! ತುಂಬಿದ ಸಭೆಯಲ್ಲಿ ಅವಳ ಮಾನಭಂಗ ಮಾಡಬಾರದು! ಇದರಿಂದ ಸಾಮ್ರಾಜ್ಯಕ್ಕೆ ಶ್ರೇಯಸ್ಸಲ್ಲ!"

ರಾಮರಾಯನು ತನ್ನ ಆಜ್ಞೆಯನ್ನು ಹಿಂತೆಗೆದುಕೊಳ್ಳಲಿಲ್ಲ. ಮುಕುಂದ ನಾಯಕ ಒಂದಡಿ ಇಟ್ಟ.

"ಪ್ರಭು! ಪ್ರಭು! ತುಂಬಿದ ಸಭೆಯಲ್ಲಿ ಸ್ತ್ರೀಯನ್ನು ಅಪಮಾನ ಮಾಡು ವುದು ತಮ್ಮ ಘನತೆಗೆ ತಕ್ಕುದಲ್ಲ! ಹಿಂದೆ ಹೀಗೆ ಮಾಡಿ ಕೌರವ ಕೆಟ್ಟ!" ಮತ್ತೆ ಯಾರೋ ಹೇಳಿದರು.

ರಾಮರಾಯನು ಇದನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ತನ್ನ ಆಜ್ಞೆ ಯನ್ನು ಬದಲಿಸಲಿಲ್ಲ.

"ಪ್ರಭೂ! ಸ್ತ್ರೀಗೆ ಲಜ್ಜೆಯೇ ಭೂಷಣ. ಮಾನಿನಿಗೆ ಶೀಲವೇ ಸರ್ವಸ್ವ. ಸ್ತ್ರೀದೂಷಣೆ ಮಹಾಪಾಪ! ಸ್ತ್ರೀಯರ ಅಪಮಾನ ಮಾಡಿದವನಿಗೆ, ರೌರವ ನರಕ! ಎಲ್ಲವನ್ನೂ ತಿಳಿದ ಪ್ರಭುಗಳು ದುಡುಕಬಾರದು."

ಈ ಬುದ್ಧಿವಾದ ರಾಮರಾಯನ ಮೇಲೆ ಪರಿಣಾಮಮಾಡಲಿಲ್ಲ.

"ಪ್ರಭೂ! ಒಲಿದರೆ ನಾರಿ, ಮುನಿದರೆ ಮಾರಿ! ಜಗದಾಂಬೆಯ ಸೃಷ್ಟಿ ಸ್ಥಿತಿಲಯಗಳ ಅಂಶತ್ರಯಗಳನ್ನು ಪಡೆದಿರುವ ಹೆಣ್ಣನ್ನು ಕೆರಳಿಸಿದರೆ, ವಂಶವು ನಿರ್ವಂಶವಾದೀತು!"

ಇದಕ್ಕೂ ರಾಮರಾಯನು ವಿಚಲಿತನಾಗಲಿಲ್ಲ.

"ಮುಸ್ಲಿಂ ಭಗಿನಿಯ ಮಾನಭಂಗ ನಮ್ಮ ಧರ್ಮಸಾಮ್ರಾಜ್ಯಕ್ಕೆ ಅಳಿಸಲಾಗದ ಕಳಂಕ ಪ್ರಭು! ಇದರಿಂದ ಧರ್ಮಕ್ಷಯ! ಧರ್ಮಕ್ಷಯವಾ ದಂದೇ ಸಾಮ್ರಾಜ್ಯ ನಾಶವೆಂದು ಪೂಜ್ಯರಾದ ವಿದ್ಯಾರಣ್ಯ ಮುನೀಂದ್ರರ ಭವಿಷ್ಯ ವಾಣಿ ಇದೆ. ತಾವು ಈ ಒಬ್ಬ ಹೆಣ್ಣುಮಗಳ ಮರ್ಯಾದೆಯನ್ನು ತೆಗೆದರ ಇದರಿಂದ ಮುಸ್ಲಿಂ ಜನತೆಯ ಮೇಲೆ ಎಂತಹ ಭಯಂಕರ ಪರಿಣಾಮವಾಗುವುದೆಂಬುದನ್ನು ಆಲೋಚಿಸಿ! ತಾವು ಈಗ ದುಡುಕಿದರೆ ತಮ್ಮ ಸಂಸ್ಕೃತಿಗೆ ಎಂತಹ ಕಳಂಕ

ಯೋಚಿಸಿ! ತುಂಬಿದ ಸಭೆಯಲ್ಲಿ ಇಂತಹ ಹೇಯ ಕೃತ್ಯಕ್ಕೆ ತಾವು ಸಂಚಾಲಕರಾಗಬಾರದು ಪ್ರಭು! ಆ ಹತಭಾಗಿನಿಯನ್ನು ಕ್ಷಮಿಸಿ, ಕಾಪಾಡಿ!"

ಈ ಮೊರೆ ರಾಮರಾಯನ ಹೃದಯವನ್ನು ಮುಟ್ಟಲಿಲ್ಲ.

"ನಿರಪರಾಧಿ ಸ್ತ್ರೀಯನ್ನೇ ಇಂದು ಶಿಕ್ಷಿಸಿ ನಾಳೆ ಅನ್ಯಾಯ ನಡೆಯಿತೆಂದು ಪರಿತಪಿಸಬೇಕಾದ ಸಂದರ್ಭ ಒದಗಬಹುದು! ಕೋಪದಲ್ಲಿ ಕೊಯ್ದ ಮೂಗು ಶಾಂತರಾದಾಗ ಹಚ್ಚಲು ಬರುವುದಿಲ್ಲ ಪ್ರಭು! ತಾವು ಶಾಂತಚಿತ್ತದಿಂದ ಎಲ್ಲವನ್ನೂ ಆಲೋಚಿಸಿ ನಿರ್ಣಯ ಕೈಗೊಳ್ಳುವುದು ಉಚಿತ!"

ಈ ಸಲಹೆ ರಾಮರಾಯನಿಗೆ ಪ್ರಿಯವಾಗಲಿಲ್ಲ.

"ಸ್ತ್ರೀಬುದ್ಧಿ ಪ್ರಳಯಾಂತಕವಂತೆ! ತಮ್ಮಿಂದ ಅಪಮಾನಿತಳಾದ ಈಕೆ ತಮ್ಮ ಮೇಲೆ ಸೇಡುತೀರಿಸಿಕೊಳ್ಳಲು ನಿಂತರೆ ಇದರ ಪರಿಣಾಮ ಭಯಂಕರವಾದೀತು! ಇನ್ನಾದರೂ ತಾವು ತಮ್ಮ ಕ್ರೋಧವನ್ನು ಶಮನಗೊಳಿಸಿ, ಅವಳಿಗೆ ಕ್ಷಮಾಧಾನ ನೀಡಿ ಪ್ರಭು!"

ಈ ಬೇಡಿಕೆಗೂ ರಾಮರಾಯನ ಮನಸ್ಸು ಕರಗಲಿಲ್ಲ.

"ಪ್ರಭೂ! ತಾವು ಈಗ ದುಡುಕಿದರೆ ತಮ್ಮ ಹಿಂದೂ ಮುಸ್ಲಿಂ ಸಖ್ಯದ ವೃಕ್ಷಕ್ಕೆ ಎಂತಹ ಕೊಡಲಿಪೆಟ್ಟು ಬೀಳುವುದೆಂಬುದನ್ನು ಕ್ಷಣಕಾಲ ಆಲೋಚಿಸಿ. ಈ ಮುಸ್ಲಿಂ ಸ್ತ್ರೀಯನ್ನು ತಾವು ಶಿಕ್ಷಿಸಿದರೆ ಮುಸ್ಲಿಮರ ಮೇಲೆ ಇದರ ಪರಿಣಾಮ ಎಷ್ಟು ಘೋರವಾಗುವುದೆಂಬುದನ್ನು ಆಲೋಚಿಸಿ! ನಿಮ್ಮ ಮಿತ್ರರಾದ ಬಹಮನಿ ಸುಲ್ತಾನರು – ಅದರಲ್ಲೂ ಬಿಜಾಪುರದ ಅಲಿ ಅದಿಲ್‌ಷಹರು – ನಿಮ್ಮ ಅಭಿಮಾನದ ಪುತ್ರರು – ಏನು ಭಾವಿಸುತ್ತಾರೆ ಎಂಬುದನ್ನು ಆಲೋಚಿಸಿ. ತಾವು ಬಹುಕಾಲದಿಂದ ಕಟ್ಟಿದ್ದ ಹಿಂದೂ ಮುಸ್ಲಿಂ ಸಖ್ಯದ ಭವ್ಯಮಂದಿರಕ್ಕೆ ತಾವೇ ಭರಸಿಡಿಲಾಗುತ್ತೀರಾ? ಯಾವುದನ್ನೂ ಶಾಂತಚಿತ್ತದಿಂದ ಆಲೋಚಿಸಿ, ನಿರ್ಧಾರ ಕೈಗೊಳ್ಳಿ! ಇಂದು ದುಡುಕಿ ನಾಳೆ ಪಶ್ಚಾತ್ತಾಪ ಪಡುವಂತೆ ಆಗಬಾರದು!" ಎಂದು ಯಾರೋ ಎಚ್ಚರಿಸಿದರು.

ಈ ಎಚ್ಚರಿಕೆಗೂ ರಾಮರಾಯನು ಜಗ್ಗಲಿಲ್ಲ. ಅವನು ತನ್ನ ಆಜ್ಞೆಯನ್ನು ಕಾರ್ಯಗತಗೊಳಿಸಲು ನಿಶ್ಚಯಿಸಿದ್ದನು! ತನ್ನನ್ನು ನಿಂದಿಸಿದ್ದ ಆ ಧೂರ್ತಳನ್ನು ಸರಿಯಾಗಿ ಶಿಕ್ಷಿಸಲು ನಿಶ್ಚಯಿಸಿದ್ದನು. ಅಂತಲೇ ಅವನು ಮುಕುಂದನಾಯಕನ ಕಡೆ ನೋಡಿ, 'ಹೂಂ' ಎಂದು ಆಜ್ಞೆಮಾಡಿದನು.

ಮುಕುಂದನಾಯಕನು ಸ್ವಾಮಿನಿಷ್ಠ ಸೇವಕನಂತೆ – ತನ್ನ ಕರ್ತವ್ಯ ಮಾಡಲು ಮುಂದಾದನು. ಅವನು ಮೇನೆಯ ಕಡೆಗೆ ನುಗ್ಗಿಬರುವುದನ್ನು ಕಂಡು, "ಸ್ತ್ರೀಯ ಅಪಮಾನ ಸಲ್ಲದು....ಸಲ್ಲದು....ಇದು ತಮ್ಮಂಥವರಿಗೆ ತಕ್ಕು

ದಲ್ಲ! ಅಬಲೆಯ ಮೇಲೆ ಶಕ್ತಿ ಪ್ರದರ್ಶನ ಕೂಡದು!” ಎಂದು ಹಲವಾರು ಧ್ವನಿಗಳು ಚೀರಿದುವು.

ಇವುಗಳಾವುದರಿಂದಲೂ ವಿಚಲಿತನಾಗದೆ ಮುಕುಂದನಾಯಕನು ಮುಮ್ತಾಜಳ ಮೇನೆಯ ಬಳಿಗೆ ಬಂದು, ಅದರ ಬಾಗಿಲನ್ನು ತೆಗೆದು ಅದಕ್ಕೆ ಬಿಟ್ಟಿದ್ದ ಪರದೆಯನ್ನು ಸರಿಸಲು ಕೈಹಾಕಿದ. ಅಷ್ಟರಲ್ಲಿ ಒಂದು ವಿಸ್ಮಯ ಕಾರಕ ಸಂಗತಿ ನಡೆಯಿತು.

ಒಳಗಿದ್ದ ಮುಮ್ತಾಜಳು ತನ್ನ ಬುರುಕಿಗೆ ಮುಕುಂದನಾಯಕನು ಕೈ ಹಾಕುವ ಮೊದಲೇ, ಮೇನೆಯಿಂದ ಛಂಗನೆ ಹೊರಗೆ ಹಾರಿ ಬಂದು ನಿಂತು ತನ್ನ ಬುರುಕಿಯನ್ನು ಕಿತ್ತೆಸೆದು ಮೆಟ್ಟಿದ ಸರ್ಪಿಣಿಯಂತೆ ಬುಸುಗುಟ್ಟುತ್ತಾ, ಸಿಂಹಿಣಿಯಂತೆ ಗರ್ಜಿಸಿದಳು.

“ಎಲವೋ ಕಾಫರದೊರೆ! ನಿನಗೆ ಈಗ ತೃಪ್ತಿಯಾಯಿತೆ? ನೋಡು! ನನ್ನ ಮುಖವನ್ನು ಮನದಣಿಯ ನೋಡು! ನಾನು ಈ ಗಳಿಗೆಯಿಂದ ಮುಮ್ತಾಜಳಲ್ಲ, ನಿನ್ನ ಭಾಗದ ಶತ್ರು – ನಿನ್ನ ಮೃತ್ಯುವೆಂದು ತಿಳಿ! ನನ್ನ ಮಾನವನ್ನು ಕಳೆಯಲು ಹೊರಟ ನಿನ್ನ ತಲೆ ನೆಲಕ್ಕೆ ಬೀಳುವ ತನಕ ನಾನು ಈ ಬುರುಕಿಯನ್ನು ತೊಡುವುದಿಲ್ಲ! ನಿನ್ನ ವಂಶ ನಿರ್ವಂಶವಾಗುವತನಕ ನಾನು ಒಂದು ಕಡೆ ನಿಲ್ಲುವುದಿಲ್ಲ! ನಿನ್ನ ಸಿಂಹಾಸನ, ನಿನ್ನ ಸಾಮ್ರಾಜ್ಯ ದೂಳೀಪಟವಾಗುವ ತನಕ ನಾನು ಹಾಸಿಗೆಯ ಮೇಲೆ ಮಲಗುವುದಿಲ್ಲ. ನಿನ್ನ ಸಾಮ್ರಾಜ್ಯ ನಾಶವಾಗುವ ಕಾಲ ದೂರವಿಲ್ಲ! ನಿನ್ನ ಗೋರಿ ಇಂದೇ ಸಿದ್ಧವಾಗಿದೆ! ಇದು ನೀನು ಮಾಡಿದ ತಪ್ಪಿಗೆ, ಅಪಚಾರಕ್ಕೆ. ನಾಳೆ ನೀನು ಮಾತ್ರವಲ್ಲ ಸಮಸ್ತ ಹಿಂದೂಗಳು ಪಶ್ಚಾತ್ತಾಪ ಪಡಬೇಕಾದ ಕಾಲ ಬರುತ್ತದೆ! ನನ್ನ ಈ ಮಾತನ್ನು ನೀನು ಸೆರಗಿಗೆ ಕಟ್ಟಿಕೋ. ನಿನ್ನ ಎದೆಯ ಮೇಲೆ ಬರೆದಿಟ್ಟುಕೋ.” ಎಂದು ಹೇಳಿ ಅಲ್ಲಿ ನಿಲ್ಲದೆ ಬಿರುಗಾಳಿಯಂತೆ ಹೊರಟುಹೋದಳು.

ಅವಳು ಹೇಳಿದುದನ್ನೆಲ್ಲಾ ಕೇಳಿದ ಸಭಿಕರು – ಅವಾಕ್ಕಾಗಿ, ಆ ಅಗ್ನಿಕನ್ಯೆಯನ್ನು ನೋಡಿದರು. ಸಾಮ್ರಾಜ್ಯ ದುರಂತ ನಾಟಕವು ಆರಂಭವಾಯಿತು! ಇನ್ನು ಇದರ ಮುಗಿವು ಎಂತಹುದೋ ಎಂದು ಜನರು ಪ್ರಕ್ಷುಬ್ಧರಾಗಿ ರಾಮರಾಯನನ್ನು ನೋಡಿದರು. ಅವರಿಗೆ ರಾಮರಾಯನ ಕಣ್ಣುಗಳಲ್ಲಿ ಕಂಡುದು, ಕ್ರೋಧವಲ್ಲ. ಅಸಮಾಧಾನವಲ್ಲ! ಆದರೆ ಬರಿ ಶೂನ್ಯ!

## ೧೫

ತುಂಬಿದ ಸಭೆಯಲ್ಲಿ ತನ್ನನ್ನು ಧಿಕ್ಕರಿಸಿ ಹೋದ ಆ ಧೂರ್ತಸ್ತ್ರೀಯನ್ನು ಸುಮ್ಮನೆ ಬಿಡಬಾರದೆಂದು ಮುಕುಂದನಾಯಕನಿಗೆ ಅವಳನ್ನು ಬಂಧಿಸಲು ಆಜ್ಞಾಪಿಸಿ, ರಾಮರಾಯನು ಅಂದಿನ ಒಡ್ಡೋಲಗವನ್ನು ಮುಗಿಸಿಕೊಂಡು ರತ್ನಕೂಟಕ್ಕೆ ಬಂದು, ರಾಜಾಂತಃಪುರದಲ್ಲಿ ಹಂಸತೂಲಿಕಾತಲ್ಪದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಾ ಮಲಗಿದರೂ, ಅವನ ಮನಸ್ಸು ಮಾತ್ರ ಅಂದಿನ ಘಟನೆಗಳಿಂದ ಅಸ್ವಸ್ಥಗೊಂಡಿತ್ತು. ಅವನಿಗೆ ಅಂದಿನ ರಾಜಸಭೆಯಲ್ಲಿ ನಡೆದ ಪ್ರಸಂಗವನ್ನು ಎಷ್ಟು ಮರೆಯಲೆತ್ನಿಸಿದರೂ ಸಾಧ್ಯವಾಗಲಿಲ್ಲ. ಮಸ್ತಾಜಳ ಒಂದೊಂದು ಮಾತೂ ಬೆಂಕಿಯ ಉಂಡೆಯಂತೆ ನೆನಪಿನಲ್ಲಿ ಪ್ರಜ್ವಲಿಸುತ್ತಿತ್ತು. ಅದರ ಬೇಗೆಯಿಂದ ರಾಮರಾಯನ ಹೃದಯ ಕಮರಿಹೋಗಿತ್ತು. ತಾನು ಮಾಡಿದ್ದು ಸರಿಯೆ? ತಪ್ಪೆ? ಎಂಬ ನ್ಯಾಯಾನ್ಯಾಯದ ಪ್ರಶ್ನೆ ಹಿಂದೆಂದೂ ಹಿಂದಾವ ಪ್ರಸಂಗದಲ್ಲೂ ಕಾಡದಷ್ಟು ತೀವ್ರವಾಗಿ ಅವನನ್ನು ಕಾಡುತ್ತಿತ್ತು. ಒಮ್ಮೆ ಅವನಿಗೆ ತಾನು ಅವಳನ್ನು ಬಲಾತ್ಕರಿಸಲು ಹೊರಟದ್ದು ಅನ್ಯಾಯ. ತುಂಬಿದ ಸಭೆಯಲ್ಲಿ ಸ್ತ್ರೀಯನ್ನು ಹಾಗೆ ಅಪಮಾನಗೊಳಿಸಬಾರದಾಗಿತ್ತು ಎಂದೆನಿಸುತ್ತಿತ್ತು. ಮರುಗಳಿಗೆಯಲ್ಲಿ ತನ್ನನ್ನು ಅಪಮಾನಗೊಳಿಸಿ, ಧಿಕ್ಕರಿಸಿ ಮಾತನಾಡಿದ ಆ ಧೂರ್ತ ಸ್ತ್ರೀಗೆ ತಾನು ತಕ್ಕುದನ್ನೇ ಮಾಡಿದೆ. ಇದರಲ್ಲಿ ಯಾವ ತಪ್ಪಿಲ್ಲವೆಂದು ಸಮಾಧಾನ ಉಂಟಾಗುತ್ತಿತ್ತು. ಆದರೂ ಒಮ್ಮೊಮ್ಮೆ ತುಂಬಿದ ಸಭೆಯಲ್ಲಿ ತಾನು ಸ್ತ್ರೀಯನ್ನು ಬಲಾತ್ಕರಿಸಿ ಅಪಮಾನ ಮಾಡಲೆತ್ನಿಸಿದುದು ತಪ್ಪಾಯಿತೆಂದು ಅನಿಸದೆ ಇರಲಿಲ್ಲ. ಹಿಂದೆ ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ಭಂಗಗೊಳಿಸಿದ ಕುರುಪತಿಯ ಪಾಡೇನಾಯಿತೆಂಬುದನ್ನು ಅವನು ಓದಿ ಬಲ್ಲವನಾಗಿದ್ದ. ಅವನಿಗೆ ಆದಂತೆ ತನಗೂ ಊರು ಭಂಗ, ಕಿರೀಟ ಭಂಗಗಳು ಈ ಮಸ್ತಾಜಳ ಕಾರಣದಿಂದ ಉಂಟಾದರೆ? ರಾಮರಾಯನು ಈ ಸಂಗತಿಯನ್ನು ಯೋಚಿಸಲೂ ಹೆದರಿದ. ಅವಳು ಪಾಂಚಾಲಿ! ಪಂಚಪತಿಗಳ ಕ್ರೋಧವನ್ನು ಕೆಣಕಿ ತನಗಾದ ಅಪಮಾನಕ್ಕೆ ತಕ್ಕ ಶಾಸ್ತಿಯನ್ನು ಮಾಡಿಸಿದಳು. ಅಂತೆಯೇ ಈ ಮಸ್ತಾಜಳು ಆ ಅಗ್ನಿಪುತ್ರಿಯಂತೆ ತನ್ನ ವಿರುದ್ಧ ಪಂಚ ಬಹಮನೀ ಸುಲ್ತಾನರ ಕ್ರೋಧವನ್ನು ಕೆರಳಿಸಿ, ತನಗಾದ, ಇಸ್ಲಾಂ ಧರ್ಮಕ್ಕಾದ ಅನ್ಯಾಯ ಅಪಮಾನಗಳಿಗೆ ತನ್ನ ಮೇಲೆ ಸೇಡುತೀರಿಸಿಕೊಳ್ಳಲೆತ್ನಿಸಿದರೆ? ಅಂದಿನ ಆ ಮಹಾಭಾರತದ ಘಟನೆ ಇಂದಿನ ಭಾರತದಲ್ಲಿ ಮತ್ತೆ ಪುನರಾವರ್ತ

ಸಿದರೆ ಪರಿಣಾಮ ಅದೆಷ್ಟು ಘೋರ ಇದನ್ನು ನೆನೆಯಲು ಹೆದರಿದ ರಾಮರಾಯ.

ತುಂಬಿದ ಸಭೆಯಲ್ಲಿ ಮಮ್ತಾಜಳು ಹೇಳಿದ್ದಳು :

'ನಾನು ಈ ಗಳಿಗೆಯಿಂದ ನಿನ್ನ ಭಾಗದ ಮೃತ್ಯುವೆಂದು ತಿಳಿ. ನಿನ್ನ ತಲೆ ಉರುಳುವ ತನಕ ನಾನು ಈ ಬುರುಕಿಯನ್ನು ಧರಿಸುವುದಿಲ್ಲ. ನಿನ್ನ ವಂಶ ನಿರ್ವಂಶವಾಗುವತನಕ ನಾನು ಒಂದು ಕಡೆ ನಿಲ್ಲುವುದಿಲ್ಲ! ನಿನ್ನ ಸಿಂಹಾಸನ ಕೆಳಗುರುಳುವ ತನಕ ನಾನು ಮಲಗುವುದಿಲ್ಲ, ನಿನ್ನ ಸಾಮ್ರಾಜ್ಯ ನಿಶ್ಶೇಷವಾಗುವ ತನಕ ನಾನು ಕಣ್ಣು ಮುಚ್ಚುವುದಿಲ್ಲ. ನನ್ನ ಮಾತು ಅಲ್ಲಾನ ಆಣೆಗೂ ಸತ್ಯ! ಇಂದು ನೀನು ಮಾಡಿದ ಈ ದುಷ್ಕೃತ್ಯಕ್ಕಾಗಿ ನೀನು ಮಾತ್ರವಲ್ಲ, ಸಮಸ್ತ ಹಿಂದೂಗಳೂ ಪಶ್ಚಾತ್ತಾಪ ಪಡಬೇಕಾಗುತ್ತದೆ....' ಅವಳು ಬೆಂಕಿಯನ್ನೇ ಉಗುಳಿದ್ದಳು; ಲಾವಾರಸವನ್ನೇ ಕಾರಿದ್ದಳು. ಅವಳ ಒಂದೊಂದು ಮಾತು ನೆನೆದಂತೆ ರಾಮರಾಯನಿಗೆ ಯಾವುದೋ ಅವ್ಯಕ್ತ ಚಿಂತೆ ಕಾಡತೊಡಗಿತು. ಯಾರೂ ತುಂಬಿದ ರಾಜಸಭೆಯಲ್ಲಿ ಅವನಿಗೆ ಈ ಪರಿಯಲ್ಲಿ ಹೇಳಿರಲಿಲ್ಲ; ಈ ಬಗೆಯಲ್ಲಿ ತೇಜೋಭಂಗಮಾಡಿರಲಿಲ್ಲ. ದಕ್ಷಿಣಾ ಪಥದ ಸಮಸ್ತ ರಾಜರು ರಾಮರಾಯನ ಹೆಸರನ್ನು ಎತ್ತಲು ಹೆದರುತ್ತಿದ್ದರು. ಆದರೆ ಮಮ್ತಾಜಳ ಪಾಲಿಗೆ ರಾಮರಾಯನ ಸಕಲ ವೈಭವ ತೃಣವಾಗಿತ್ತು. ಅವಳ ಒಂದೊಂದು ಮಾತು ನೆನೆದಂತೆ, ಬೆಂಕಿಯನ್ನೇ ನುಂಗಿದಂತೆ ಅನಿಸುತ್ತಿತ್ತು. ಅವಳ ಮಾತುಗಳು ಯಃಕಶ್ಚಿತ ಸ್ತ್ರೀಯೊಬ್ಬಳು ಹೇಳಿದ ಮಾತುಗಳಾಗದೆ ಕಾಣದ ಕೈ ತನಗೆ ಕೊಟ್ಟ ಎಚ್ಚರಿಕೆಯ ಮಾತಾಗಿರಬಾರದೇಕೆ!

ಒಡ್ಡೋಲಗದಲ್ಲಿ ಅಂದು ನಡೆದಿದ್ದ ಘಟನೆಯೆಲ್ಲವೂ ರಾಮರಾಯನ ಕೈ ಮೀರಿ ನಡೆದಿತ್ತು. ಅವನಿಗೆ ಕುಲೀನ ಮುಸ್ಲಿಂ ಸ್ತ್ರೀಯುಳ ಅಪಮಾನ ಮಾಡುವುದು ಬೇಕಿರಲಿಲ್ಲ. ಮುಸ್ಲಿಂ ಜನತೆಯ ಸಂಪ್ರದಾಯಕ್ಕೆ ಮಸಿ ಬಳಿಯಲು ಅವನಿಗೆ ಇಷ್ಟವಿರಲಿಲ್ಲ. ಆದರೆ ಅಂತಹ ಪ್ರಸಂಗ ನಡೆದುಹೋಗಿತ್ತು! ಅವನಿಗೆ ಬೇಕಾಗಿದ್ದುದು ಹಿಂದೂ ಮುಸ್ಲಿಮರ ಸಖ್ಯ – ಸಾಮರಸ್ಯ! ಅವರು ತಮ್ಮ ವೈಷಮ್ಯವನ್ನು ಮರೆತು ಏಕಛತ್ರದ ಅಡಿಯಲ್ಲಿ ಸಹೋದರರಂತೆ ಬಾಳಬೇಕೆಂಬುದೇ ಅವನ ಅಭೀಷ್ಟವಾಗಿತ್ತು. ಆದರೆ ನಡೆದುದು ಮಾತ್ರ ವಿರುದ್ಧ.

ರಾಮರಾಯನು ಯಾರನ್ನ ತನ್ನ ಪರಮಾಪ್ತಮಿತ್ರನೆಂದು ತಿಳಿದಿದ್ದನೋ ಆ ಇಬ್ರಾಹಿಂ ಕುತುಬ್‌ಷಹನು ರಾಮರಾಯನ ಪರಮಶತ್ರುವಾಗಿ ಮಾರ್ಪಟ್ಟಿದ್ದ. ಅಂತೆಯೇ ಅಹಮದ್‌ನಗರದಲ್ಲಿ ನಡೆದಿದ್ದ ಅತ್ಯಾಚಾರ ಅನ್ಯಾಯಗಳ ಪ್ರಸಂಗಗಳು ರಾಮರಾಯನ ಇಚ್ಛೆಗೆ ವಿರೋಧವಾಗಿ ನಡೆದಿದ್ದುವು. ಇದರಿಂದ ಅವನ ಸತ್ಕೀರ್ತಿಗೆ ಕಳಂಕ ಉಂಟಾಗಿತ್ತು. ಮುಸ್ಲಿಮ ಜನತೆಯು

ರಾಮರಾಯನಲ್ಲಿಟ್ಟಿದ್ದ ನಂಬಿಕೆಯನ್ನು ಅದು ಬುಡಮೇಲು ಮಾಡಿತ್ತು. ಈಗ ಅಂತಹದೇ ಮತ್ತೊಂದು ಹೇಯಕಾರ್ಯ ಅವನಿಗೆ ತಿಳಿಯದಂತೆ ಘಟಿಸಿತ್ತು! ಮುಸ್ಲಿಂ ಸ್ತ್ರೀ ಸಮುದಾಯಕ್ಕೇ, ಮುಸ್ಲಿಂ ಜನತೆಗೇ ಅಪಮಾನವಾಗುವಂತಹ ಅಚಾತುರ್ಯ ರಾಮರಾಯನಿಂದಂದು ನಡೆದಿತ್ತು. ಹಿಂದೂಮುಹಮ್ಮದೀಯ ಸಖ್ಯದ ಸ್ವರ್ಣಮಂದಿರವನ್ನು ಕಟ್ಟಲು ಹೊರಟವನು ಹಿಂದೂ ಮುಸ್ಲಿಂ ಗೋರಿ ಗಳನ್ನು ಅಗೆದು ಪಿಶಾಚಿಗಳನ್ನು ಮೇಲಕ್ಕೆಬ್ಬಿಸದಂತೆ ಮಾಡಿದ್ದ. ಅವನ ಕಣ್ಣೆದುರಿಗೇ ಅವನ ಕನಸು ಭಗ್ನ ಮಂದಿರದಂತೆ ಕಾಣುತ್ತಿತ್ತು. ಅಯ್ಯೋ ತಾನೆಂತಹ ಅಪಚಾರ ಮಾಡಿದೆ? ಎಂದು ರಾಮರಾಯನು ಪರಿತಪಿಸಿದ. ತನ್ನಿಂದ ಎಂತಹ ಹೀನಕೃತ್ಯ ಘಟಿಸಿತು, ಎಂದು ವ್ಯಾಕುಲಗೊಂಡ. ಯಾವು ದನ್ನು ಮಾಡಬಾರದೆಂದಿದ್ದನೋ ವಿಧಿ ಅವನಿಂದ ಅದನ್ನು ಮಾಡಿಸಿತ್ತು. ಯಾವ ಸಾಮ್ರಾಜ್ಯ ದುರಂತ ನಾಟಕಕ್ಕೆ ತಾನು ನಾಯಕನಾಗಬಾರದೆಂದು ಆಶಿಸಿದ್ದನೋ ಅದಕ್ಕೇ ಅವನು ನಾಯಕನಾಗಿದ್ದ.

ರಾಮರಾಯನು ಈಗ ಶಾಂತನಾಗಿ ಕುಳಿತು ಆಲೋಚಿಸಿದಂತೆ ತಾನು ದುಡುಕಿದೆನೆಂದು ಸ್ಪಷ್ಟವಾಗಿ ಗೋಚರಿಸಿತ್ತು. ತಾನು ಆ ಮುಸ್ಲಿಂ ಸ್ತ್ರೀಯನ್ನು ಹಾಗೆ ಒತ್ತಾಯ ಮಾಡಬಾರದಾಗಿತ್ತು. ಆಕೆಯನ್ನು ಹಾಗೆ ಬಲಾತ್ಕರಿಸಬಾರ ದಾಗಿತ್ತು. ಎಂದು ಅವನಿಗೆ ಈಗ ಅನಿಸದೆಹೋಗಲಿಲ್ಲ. ಅವನಿಗೆ ಅನೇಕ ಆಸ್ಥಾನಿಕರು ಅನೇಕ ಬಗೆಯಲ್ಲಿ ಎಚ್ಚರಕೊಟ್ಟಿದ್ದರು. ಅವರ ಸಲಹೆಗಳನ್ನು, ಬುದ್ಧಿವಾದವನ್ನು ಕೇಳಲು ರಾಮರಾಯನ ಹಠಮಾರಿತನ, ದುರಭಿಮಾನ ಆತ್ಮಪ್ರತಿಷ್ಠೆಗಳು ಅಡ್ಡಬಂದುವು. ಅವುಗಳು ರಾಮರಾಯನ ಪತನಕ್ಕೆ ಕಾರಣ ವಾಗಿದ್ದುವು. ರಾಮರಾಯನು ನಿಸ್ಪೃಹನಾಗಿದ್ದರೂ, ಅವನು ಗೋಮುಖ ವ್ಯಾಘ್ರನೆಂದು ಅವು ಜಗತ್ತಿಗೆ ತೋರಿಸಿದ್ದುವು. ನಿಜವಾದ ಸಾಮ್ರಾಟನನ್ನು ನಿರ್ಬಂಧದಲ್ಲಿ ಇಟ್ಟು ರಾಮರಾಯನೇ ಸಾಮ್ರಾಟನಾಗುತ್ತಿದ್ದಾನೆ ಎಂದು ಜನತೆ ಆಕ್ಷೇಪಿಸುತ್ತಿತ್ತು. ಇದನ್ನು ನಿವಾರಿಸಲೆಂದೇ ರಾಮರಾಯನು ಪ್ರತಿ ವರ್ಷವೂ ನವರಾತ್ರಿಯ ಉತ್ಸವದಲ್ಲಿ ಸದಾಶಿವರಾಯನನ್ನು ಸಿಂಹಾಸನದಲ್ಲಿ ಕೂಡಿಸಿ, ಅವನೇ ನಿಜವಾದ ಸಾಮ್ರಾಟನೆಂದು ಜಗತ್ತಿಗೆ ತೋರಿಸುತ್ತಿದ್ದನು. ಇಷ್ಟಾ ದರೂ ಅವನ ವಿಷಯದಲ್ಲಿ ಜನತೆಗೆ ಸಂಶಯ ಇದ್ದೇ ಇತ್ತು. ಅಂತಲೇ ಜನ ತೆಗೆ ರಾಮರಾಯನು ಮೇಲಿಂದ ಮೇಲೆ ಬಹಮನಿಸುಲ್ತಾನರ ಅಂತಃಕಲಹ ಗಳಲ್ಲಿ, ಒಳಜಗಳಗಳಲ್ಲಿ ಕೈಹಾಕುವುದು ಇಷ್ಟವಿರಲಿಲ್ಲ. ರಾಮರಾಯನ ವಿದೇಶನೀತಿ ಅದಾಗಿತ್ತು. ರಾಮರಾಯನು ವೃಥಾ ಸಾಮ್ರಾಜ್ಯದ ಹಣವನ್ನೂ ಸೈನ್ಯವನ್ನೂ ಕೃತಘ್ನರಾದ ಬಹಮನಿ ಸುಲ್ತಾನರ ಸಲುವಾಗಿ ವ್ಯಯ ಮಾಡು

ತ್ತಿರುವನೆಂದೇ ವಿಜಯನಗರದ ಅನೇಕ ಪ್ರಮುಖರ ಅಭಿಪ್ರಾಯವಾಗಿತ್ತು. ಅವನಿಗೆ ಆಗದವರು ರಾಮರಾಯನು ಹಿಂದೂಮುಸ್ಲಿಂ ಸಖ್ಯದ ಹೆಸರಿನಲ್ಲಿ ಹಿಂದೂಗಳನ್ನು ಕಡೆಗಣಿಸಿ, ಮುಸ್ಲಿಮರಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದಾನೆ, ಅವರಿಗೆ ರಾಜ್ಯದಲ್ಲಿ ಹೆಚ್ಚು ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಿದ್ದಾನೆ ಎಂದು ದೂರುತ್ತಿದ್ದರು.

ವಾಸ್ತವಾಂಶವೂ ಹಾಗೇ ಇತ್ತು. ಹಿಂದೂ ರಾಜ್ಯವಾದ ವಿಜಯನಗರ ಸಾಮ್ರಾಜ್ಯದಲ್ಲಿ ಮುಸ್ಲಿಮರು ನಿರ್ಭಯದಿಂದ ಇರಲೆಂದು ರಾಮರಾಯನು ಅವರಿಗೆ ಅನೇಕ ತೆರಿಗೆಗಳನ್ನು ಮನ್ನಮಾಡಿದ್ದನು. ಅವರನ್ನು ಯೋಗ್ಯತೆಗೆ ತಕ್ಕಂತೆ, ಹಿರಿಯ ಹುದ್ದೆಗಳಿಗೆ ಏರಿಸಿದ್ದನು. ಸೈನ್ಯದಲ್ಲಿ ಅನೇಕ ಹಿರಿಯ ಸ್ಥಾನಗಳು ಅವರಿಗೆ ಕೊಡಲ್ಪಟ್ಟಿದ್ದುವು. ರಾಮರಾಯನು ಅವರಿಗೆ ರಾಜಧಾನಿಯಲ್ಲಿ ಮಸೀದಿಗಳನ್ನು ಕಟ್ಟಿಸಿಕೊಟ್ಟಿದ್ದುದಲ್ಲದೆ, ಅವರ ಪವಿತ್ರ ಗ್ರಂಥ ಕುರಾನನ್ನು ಸಭೆಯಲ್ಲಿ ಇಟ್ಟು ಅದಕ್ಕೆ ವಂದಿಸುತ್ತಿದ್ದನು. ಇದರಿಂದ ಉತ್ಕಟ ಹಿಂದೂಗಳಿಗೆ ರಾಮರಾಯನ ಬಗ್ಗೆ ಅಸಮಾಧಾನ ಉಂಟಾಗಿತ್ತು. ಪ್ರಬಲನಾಗಿದ್ದ ರಾಮರಾಯನ ವಿರುದ್ಧ ಅವರು ಬಾಯಿ ಬಿಟ್ಟು ಏನನ್ನೂ ಹೇಳುವಂತೆ ಇರಲಿಲ್ಲ. ಹೀಗೆ ಸಾಮ್ರಾಜ್ಯದಲ್ಲೇ, ಅವನಿಗೆ ತಿಳಿದಂತೆ ಅಸಂತೃಪ್ತಿಯ ಅಲೆ ಎದ್ದಿತ್ತು. ಇದಕ್ಕೆ ತಕ್ಕಂತೆ ಈಗ ಮುಸ್ಲಿಮರು ರಾಮರಾಯನನ್ನು ಸಂದೇಹ ದೃಷ್ಟಿಯಿಂದ ನೋಡುವಂತೆ ಆಗಿತ್ತು.

ರಾಮರಾಯನು ಶಾಂತಚಿತ್ತದಿಂದ ಅಂದಿನ ಘಟನೆಯನ್ನೆಲ್ಲಾ ಮತ್ತೆ ಪುನರ್ವಿಮರ್ಶಿಸಿದಾಗ ಮುಮ್ತಾಜಳ ವರ್ತನೆಗೆ ಕೆಲವೊಂದು ಸಮರ್ಥನೆ ದೊರೆತಿತ್ತು. ಆಗ ಅವನಿಗೆ ಮುಮ್ತಾಜಳ ಧೂರ್ತ ಮುಸ್ಲಿಂ ಸ್ತ್ರೀಯಾಗಿ ತೋರದೆ ಹತಭಾಗ್ಯ ಹೆಣ್ಣಾಗಿ ತೋರಿದಳು. ಅವಳು ಜೀವನದಲ್ಲಿ ಬಹುವಾಗಿ ನೊಂದಿದ್ದಳು. ತನ್ನ ಸರ್ವಸ್ವವನ್ನೆಲ್ಲಾ ಕಳೆದುಕೊಂಡು, ರಾಮರಾಯನ ಎದುರಿಗೆ ಅನಾಥೆಯಂತೆ ಬಂದಿದ್ದಳು. ಅವಳ ಪ್ರಾಣಕ್ಕಿಂತ ಪ್ರಿಯವಾಗಿದ್ದ ತಂದೆ ಅವಳ ರಕ್ಷಣೆಯ ಸಲುವಾಗಿ ಮಡಿದಿದ್ದ; ಈಗ ಜಗತ್ತಿನಲ್ಲಿ ಅವಳಿಗೆ ತನ್ನದೆನ್ನುವ ಯಾವ ವಸ್ತುವೂ ಇರಲಿಲ್ಲ, ತನ್ನವರೆನ್ನುವ ಯಾವ ವ್ಯಕ್ತಿಯೂ ಇರಲಿಲ್ಲ. ವಿಧಿಯ ಪೆಟ್ಟುಗಳಿಂದ ಅವಳ ಜೀವ ಜರ್ಜರಿತವಾಗಿತ್ತು. ಅವಳು ಹತಾಶಳಾಗಿದ್ದಳು. ಬದುಕಿಗಿಂತ ಅವಳಿಗೆ ಸಾವೇ ಸುಖಕರವಾಗಿತ್ತು. ಅವಳ ಹೃದಯವು ಪಾಷಾಣದಂತೆ ಆಗಿತ್ತು. ಅವಳಲ್ಲಿದ್ದ ಕೋಮಲ ಭಾವನೆಗಳೆಲ್ಲವೂ ತನಗಾಗಿದ್ದ ಅನ್ಯಾಯದ ಬೆಂಕಿಯಲ್ಲಿ ಸುಟ್ಟುಹೋಗಿದ್ದುವು. ಅವಳಿಗೆ ಈಗ ಬೇಕಾಗಿದ್ದುದು ಸೇಡು. ಸೇಡಿಗಾಗಿ ಅವಳು ಸಾಯದೇ ಬದುಕಿದ್ದಳು.

ರಾಮರಾಯನಿಗೆ ಅವಳು ಶೋಧಿಸಲು ಏಕೆ ಪ್ರತಿಭಟಿಸಿದಳೆಂಬ ಸಂಗತಿ ಎಷ್ಟು ಆಲೋಚಿಸಿದರೂ ಹೊಳೆಯಲಿಲ್ಲ. ಕಡೆಗೂ ಅವಳು ನಿರಪರಾಧಿಯಾಗಿಯೇ ಉಳಿದಿದ್ದಳು. ಅವಳ ಮೇನೆಯಲ್ಲಿ ಯಾವ ಆಕ್ಷೇಪಕರವಾದ ವಸ್ತುಗಳೂ ದೊರತಿರಲಿಲ್ಲ. ಅವಳು ತಾನಾಗಿ ತನ್ನ ಬುರುಕಿಯನ್ನು ಕಿತ್ತೆಸೆದು ಆಸ್ಥಾನದಲ್ಲಿದ್ದವರನ್ನೆಲ್ಲಾ ಚಕಿತಗೊಳಿಸಿದ್ದಳು. ಅವಳು ಅಪರಾಧಿನಿಯಾಗಿದ್ದರೆ ಹೀಗೆ ಮಾಡುತ್ತಿರಲಿಲ್ಲ. ಅವಳ ಮಾತುಗಳಲ್ಲಿ ತನಗಾಗಿದ್ದ ಅನ್ಯಾಯಕ್ಕೆ ಪ್ರತೀಕಾರ ಬಯಸುವ ಛಲ ಎದ್ದು ಕಾಣುತ್ತಿತ್ತು. ಅಂತಲೇ ಅವಳು ಧಿಕ್ಕರಿಸಿ ನುಡಿದಿದ್ದಳು.

ಈಗ ರಾಮರಾಯನಿಗೆ ಮಮ್ತಾಜಳಿಂದ ತನಗೆ ಆಗಿದ್ದ ಅಪಚಾರ ಅವಹೇಳನಗಳಿಗಿಂತಲೂ ತನ್ನಿಂದ ಅವಳಿಗೆ ಆಗಿದ್ದ ಅಪಮಾನ, ಅನ್ಯಾಯಗಳೇ ಅಧಿಕವೆಂದು ಅನಿಸಹತ್ತಿತ್ತು. ಈಗ ತಾನು ಕ್ಷಮೆ ಯಾಚಿಸಿದರೂ ಕ್ರೋಧದಿಂದ ಉರಿಯುತ್ತಿರುವ ಅವಳು ತನ್ನನ್ನು ನಂಬುವ ಹಾಗಿರಲಿಲ್ಲ. ಅವಳು ತನ್ನ ಮುಖದರ್ಶನವನ್ನು ಮಾಡದೆ ಹೋಗಬಹುದು. ಅವಳು ಸಮಾಧಾನ ಚಿತ್ತದಲ್ಲಿ ಇರುವಾಗ ಅವಳನ್ನು ಕಂಡು ಅವಳ ಕ್ಷಮೆ ಬೇಡಲು ಅವನು ನಿರ್ಧರಿಸಿದನು. ತನಗೆ ಉಂಟಾಗಿರುವ ಪಶ್ಚಾತ್ತಾಪವನ್ನು ಅವಳಲ್ಲಿ ತೋಡಿಕೊಂಡು, ಅವಳ ಕ್ರೋಧವನ್ನು ಕಳೆಯಬೇಕೆಂದು ಆಶಿಸಿದನು. ಅವಳಿಗೆ ಆಗಿದ್ದ ಅನ್ಯಾಯಗಳನ್ನು ಉಚಿತ ರೀತಿಯಲ್ಲಿ ಸರಿಪಡಿಸಿಕೊಡಬೇಕೆಂದು ನಿರ್ಧರಿಸಿದನು. ಅಂತಲೇ ಅವಳಿಗೆ ಸೆರೆಮನೆಯಲ್ಲಿ ತಾನಿರುವೆನೆಂಬಂತೆ ಕಲ್ಪನೆ ಬರದಂತೆ ಎಲ್ಲ ಬಗೆಯ ಸೌಲಭ್ಯಗಳನ್ನೂ ಒದಗಿಸಿಕೊಡಲು ಬಯಸಿದನು.

ಅವನು ಹೀಗೆ ಯೋಚಿಸುತ್ತಿದ್ದಂತೆ ಮುಕುಂದನಾಯಕನು ಅಲ್ಲಿ ಕಾಣಿಸಿಕೊಂಡನು. ಮಮ್ತಾಜಳನ್ನು ರಾಮರಾಯನ ಆಜ್ಞೆಯಂತೆ ಉಚಿತವಾದ ರಾಜಭವನದಲ್ಲಿ ನಿರ್ಬಂಧದಲ್ಲಿ ಇರಿಸಿ ಅದರ ರಕ್ಷಣೆಗೆ ತಕ್ಕ ವ್ಯವಸ್ಥೆ ಮಾಡಿ ಈ ಸಂಗತಿಯನ್ನು ರಾಮರಾಯನಿಗೆ ತಿಳಿಸಿ ಹೋಗಲು ಅವನು ಅಲ್ಲಿಗೆ ಬಂದಿದ್ದ. ರಾಮರಾಯನು ಅವಳಿಗೆ ಎಲ್ಲ ಸೌಲಭ್ಯ ಕಲ್ಪಿಸಿಕೊಟ್ಟು, ಮರ್ಯಾದೆಯಿಂದ ನಡಸಿಕೊಳ್ಳಲು ಅವನಿಗೆ ಆಜ್ಞೆ ಮಾಡಿ, ಅವಳ ರಕ್ಷಣೆಯ ಭಾರವನ್ನು ಅವನಿಗೆ ವಹಿಸಿದ್ದನು.

ಹೀಗೆ ಮಾಡುವುದರಿಂದ ರಾಮರಾಯನು ಮಮ್ತಾಜಳಿಗಾಗಿದ್ದ ಅನ್ಯಾಯವನ್ನು ಸರಿಪಡಿಸಿಕೊಡಬಹುದೆಂದು ಆಶಿಸಿದನು. ಏಕೋ ಮಮ್ತಾಜಳನ್ನು ನೆನೆದಾಗ ರಾಮರಾಯನಿಗೆ ಮೇಲಿಂದ ಮೇಲೆ ಮುಕುಂದನಾಯಕನ ನೆನಪು ಬರುತ್ತಿತ್ತು. ಅವರಿಬ್ಬರ ನೆನಪು ರಾಮರಾಯನಿಗೆ ಹೊಸದೊಂದು ಹೊಂಗನಸಿಗೆ ಕಾರಣವಾಗಿತ್ತು.

ಮುಕುಂದನಾಯಕನು ಜಗತ್ತಿನ ಪಾಲಿಗೆ ರಾಮರಾಯನು ಸಾಕಿ ಬೆಳಸಿ ದೊಡ್ಡವನಾಗಿ ಮಾಡಿದ, ಅವನ ನಂಬಿಕೆಗೆ ಪಾತ್ರನಾದ, ಪರಮಾಪ್ತಸ್ವಾಮಿ ನಿಷ್ಠ ಸೇವಕ. ಆದರೆ ಅಂತರಂಗದಲ್ಲಿ ಅವನು ರಾಮರಾಯನ ಮಗನೇ ಆಗಿದ್ದನು. ಆದರೆ ತಾಯಿ ಇಲ್ಲದ ಆ ತಬ್ಬಲಿಯನ್ನು ರಾಮರಾಯನು ತನ್ನ ಪುತ್ರನೆಂದು ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ತಾಯಿಯನ್ನು ಕಳೆದುಕೊಂಡು ಅನಾಥನಾಗಿ ಅವನು ರಾಮರಾಯನ ಬಳಿಗೆ ಬಂದಾಗ, ಅವನನ್ನು ಮಗನಾಗಿ ಸ್ವೀಕರಿಸಿದರೂ, ಜಗತ್ತಿನ ಪಾಲಿಗೆ ಅವನು ಅನಾಥನಾಗಿಯೇ ಉಳಿದಿದ್ದನು. ಇಂದಿಗೂ ರಾಮರಾಯ ಹಾಗೂ ಅನಿಲ್‌ಮುಲ್ಕನ ಹೊರತು ಮುಕುಂದನಾಯಕನ ಜನ್ಮವೃತ್ತಾಂತ ಬೇರೆ ಯಾರಿಗೂ ತಿಳಿದಿರಲಿಲ್ಲ. ಕೆಲವು ಕಾರಣಾಂತರಗಳಿಂದ ಅದು ಇದುವರೆಗೆ ರಹಸ್ಯವಾಗಿಯೇ ಉಳಿದಿತ್ತು. ಸ್ವಯಂ ಮುಕುಂದನಾಯಕನಿಗೂ ತಾನು ರಾಮರಾಯನ ಮಗನೆಂಬ ಸಂಗತಿ ತಿಳಿದಿರಲಿಲ್ಲ!

ಇದನ್ನು ಇಂದು ನಾಳೆ ತಿಳಿಸಬೇಕೆಂದು ಇದುವರೆಗೆ ಕಾಲ ತಳ್ಳುತ್ತಾ ಬಂದಿದ್ದ ರಾಮರಾಯ. ಮುಕುಂದನಾಯಕನಿಗೆ ಸತ್ಯಸಂಗತಿಯನ್ನು ತಿಳಿಸಲು ಉಚಿತಸಮಯ ಇದುವರೆಗೆ ಬಂದಿರಲೇ ಇಲ್ಲ.

ಆ ಕಥೆ ನಡೆದು ಸುಮಾರು ಮೂವತ್ತು ವರ್ಷಗಳು ಕಳೆದು ಹೋಗಿದ್ದುವು. ಆದರೂ ರಾಮರಾಯನ ಸ್ಮರಣೆಯಲ್ಲಿ ಅದು ನಿನ್ನೆ ಮೊನ್ನೆ ನಡೆದಂತೆ ಹಚ್ಚ ಹಸುರಾಗಿ ಉಳಿದಿತ್ತು! ಅದು ಅವನ ಬಾಳಿನ ರುದ್ರರಮಣೀಯವಾದ ಸ್ವಪ್ನ! ಅದನ್ನು ನೆನೆಯುವುದು ರಾಮರಾಯನಿಗೆ ಎಷ್ಟು ಪ್ರಿಯವಾಗಿತ್ತೊ ಅದರ ನೆನಪು ಅಷ್ಟೇ ದುಃಖದಾಯಕವಾಗಿತ್ತು. ಅದನ್ನು ನೆನೆದಾಗ ದುಃಖಮಿಶ್ರಿತ ಸಂತೋಷವಾಗುತ್ತಿತ್ತು; ಸಂತೋಷಮಿಶ್ರಿತ ದುಃಖವಾಗುತಿತ್ತು. ಅದು ಅವನ ಜೀವನದಲ್ಲಿ ಎಂದಿಗೂ ಮರೆಯಲಾಗದ ಚಿರಸ್ಮರಣೀಯವಾದ ಭಗ್ನ ಪ್ರಣಯದ ಸುಂದರ ಸ್ವಪ್ನ. ಅದು ನೆನೆದಾಗಲೆಲ್ಲ ರಾಮರಾಯನಿಗೆ ನಿಟ್ಟುಸಿರು ಬಾರದೇ ಇರುವುದಿಲ್ಲ. ಅವನ ಉತ್ಸಾಹ ಬತ್ತಿಹೋಗದೇ ಇರುವುದಿಲ್ಲ. ತಾನು ಇಷ್ಟೆಲ್ಲಾ ಸಂತೋಷ ವೈಭವಗಳ ನಡುವೆ, ನೂರಾರು ಮಂದಿ ಪ್ರೇಯಸಿಯರ ನಡುವೆ ಇದ್ದೂ, ತಾನು ಏಕಾಕಿ ಎಂಬ ಭಾವನೆ ಅವನಿಗೆ ಆಗ ಬರುತ್ತಿತ್ತು! ಆ ಘಟನೆಯನ್ನು ನೆನಸಿಕೊಂಡಾಗಲೆಲ್ಲಾ ಅವನು ಹೆಚ್ಚು ಅಸುಖಿಯಾಗುತ್ತಿದ್ದನು. ಹೀಗೆಂದು ಹೇಳಲಾಗದ ಅವ್ಯಕ್ತನೋವು, ಹೃದಯದ ಉಮ್ಮಳ ಉಂಟಾಗುತ್ತಿತ್ತು.

ಆಗ ರಾಮರಾಯನು ಏರು ಯೌವನದಲ್ಲಿದ್ದ ಕಾಲ. ಅವನು ಆಗ ಇನ್ನೂ ಮೂವತ್ತೈದು ವರ್ಷಗಳ ತರುಣನಾಗಿದ್ದ. ಅವನ ಬಾಳಿನ ಹೂ ಬಿರಿದು

ಜೀವನ ತುಂಬು ಹೊನಲಾಗಿ ಹರಿದಿತ್ತು. ದೇಹಮನಸ್ಸುಗಳಲ್ಲಿ ನವಜವ್ವನದ ಹುರುಪು, ಉತ್ಸಾಹಗಳು ತುಂಬಿತುಳುಕುತ್ತಿದ್ದುವು. ಅವನು ಸಾವಿರ ಹೊಂಗನಸುಗಳನ್ನು ಕಾಣುತ್ತಿದ್ದ. ಅವನಿಗೆ ಜೀವನವು ಒಂದು ಸುಖಸ್ವಪ್ನದಂತೆ ಕಾಣುತ್ತಿತ್ತು. ಎಲ್ಲೆಲ್ಲೂ ಚೆಲುವಿನ ನೋಟಗಳೇ ಕಾಣುತ್ತಿದ್ದುವು. ಅವನಿಗೆ ಜೀವನವು ರಸಮಯವಾಗಿದ್ದಂತೆ ಸಾಹಸಮಯವೂ ಆಗಿತ್ತು. ಅವನು ಸ್ವಭಾವತಃ ರಸಿಕನಾಗಿದ್ದನು. ಅಲ್ಲದೆ ಸೌಂದರ್ಯ ಪ್ರೇಮಿ. ಕೇವಲ ಕೆಲವು ದಿನಗಳ ಹಿಂದೆ ಗೋಲ್ಕೊಂಡದ ಕುತುಬ್‌ಷಾಹಿಯ ಸೈನ್ಯದಿಂದ ಬಿಡುಗಡೆ ಹೊಂದಿ, ನೂತನ ಸಾಹಸಗಳನ್ನು ಹುಡುಕಿಕೊಂಡು ಕೃಷ್ಣದೇವರಾಯನ ಆಸ್ಥಾನಕ್ಕೆ ಬಂದಿದ್ದನು. ಅಲ್ಲಿಂದ ಅವನ ಜೀವನದಲ್ಲಿ ನೂತನ ಅಧ್ಯಾಯ ಆರಂಭವಾಯಿತು.

ರಾಮರಾಯನು ತನ್ನ ಧೈರ್ಯ, ಸಾಹಸಾದಿ ಸದ್ಗುಣಗಳಿಂದಲೂ, ರೂಪಯೌವನಗಳಿಂದಲೂ ಕೃಷ್ಣದೇವರಾಯನ ಮನಸ್ಸನ್ನು ಬಹುಬೇಗನೆ ಅಪಹರಿಸಿದ್ದನು. ಅವನ ತಂದೆ ರಂಗಕ್ಷಿತಿಪತಿಯು ಕೃಷ್ಣದೇವರಾಯನ ಮಂತ್ರಿಗಳಲ್ಲಿ ಒಬ್ಬನಾಗಿದ್ದನು. ಅವನ ಐವರು ಪುತ್ರರಲ್ಲಿ ಅತ್ಯಂತ ಸಮರ್ಥನೂ, ವೀರಪುಂಗವನೂ, ಉದಾರಚರಿತನೂ ಆಗಿದ್ದ ರಾಮರಾಯನು ಕೃಷ್ಣದೇವರಾಯನ ಅಭಿಮಾನದ ಪುತ್ಥಳಿಯಾಗಿದ್ದನು. ಅವನಿಂದ ಮುಂದೆ ಸಾಮ್ರಾಜ್ಯಕ್ಕೆ ಮಹತ್ತರ ಸೇವೆ ದೊರೆಯಬಹುದೆಂದು ಬಗೆದ ಕೃಷ್ಣದೇವರಾಯನು ಅವನನ್ನು ಸೈನ್ಯದಲ್ಲಿ ದಳಪತಿಯಾಗಿ ಮಾಡಿದ್ದನು. ರಾಮರಾಯನು ಕೃಷ್ಣದೇವರಾಯನ ನಿರೀಕ್ಷೆಯನ್ನು ವ್ಯರ್ಥಗೊಳಿಸಲಿಲ್ಲ. ಅವನು ಕೃಷ್ಣದೇವರಾಯನ ಉಮ್ಮತ್ತೂರಿನ ಮುತ್ತಿಗೆಯಲ್ಲಿಯೂ, ಉತ್ಕಲದ ಮೇಲಣ ದಂಡಯಾತ್ರೆಯಲ್ಲಿಯೂ, ಅನಂತರ ನಡೆದ ಬಹಮನಿ ಸುಲ್ತಾನರ ಮೇಲಣ ವಿಜಯಯಾತ್ರೆಗಳಲ್ಲೂ ಅಸಾಧಾರಣ ಶೌರ್ಯ ಪ್ರದರ್ಶನ ಮಾಡಿ, ಎಲ್ಲರ ಮೆಚ್ಚಿಗೆಗೆ ಪಾತ್ರನಾಗಿದ್ದನು. ಕ್ರಮಕ್ರಮವಾಗಿ ಅವನು ಮೇಲೇರಿ ಕಡೆಗೆ ಕೃಷ್ಣದೇವರಾಯನ ಆಸ್ಥಾನದಲ್ಲಿ ಹಾಗೂ ಸೈನ್ಯದಲ್ಲಿ ಅತ್ಯಂತ ಸಮರ್ಥನಾದ ವ್ಯಕ್ತಿಯಾಗಿ ಮಾರ್ಪಟ್ಟಿದ್ದನು. ಇವನ ಉತ್ಕರ್ಷ, ಪ್ರಾಬಲ್ಯಗಳನ್ನು ನೋಡಿ, ಇವನ ಬಗ್ಗೆ ಮೊದಲಿನಿಂದಲೂ ಅಭಿಮಾನ ಹೊಂದಿದ್ದ ಸಾಮ್ರಾಟ್ ಕೃಷ್ಣದೇವರಾಯನು ಇವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದಿದ್ದನು.

ರಾಮರಾಯನಲ್ಲಿ ಯೌವನವಿತ್ತು, ಅಧಿಕಾರವಿತ್ತು, ಘನತೆ ಗೌರವಗಳಿದ್ದುವು. ಮೇಲಾಗಿ ರೂಪದಲ್ಲಿ ಅವನು ಮನ್ಮಥನಂತೆ ಇದ್ದನು. ಅವನು ಕೇವಲ ಸಾಹಸ, ವಿನೋದ, ಮನರಂಜನೆಯ ಸಲುವಾಗಿಯೇ ಕೆಲವು ಆಪ್ತ

ಮಿತ್ರರೊಡನೆ ದಕ್ಷಿಣದೇಶದ ಸಂಚಾರ ಕೈಗೊಂಡಿದ್ದನು. ಅದು ಗೊತ್ತು ಗುರಿ ಇಲ್ಲದ ಅನಿಶ್ಚಿತ ಸಂಚಾರವೆಂದರೂ ಸರಿ, ಅವನು ಗೆಳೆಯರೊಡನೆ ಹೊರಟು ಗಿರಿಕಾನನಗಳ ಚೆಲುವನ್ನೂ ರಮಣೀಯ ನೋಟವನ್ನೂ ನೋಡುತ್ತಾ ಮೈಮರೆಯುತ್ತಿದ್ದನು. ಅನೇಕ ಬಾರಿ ಬೇಟೆಯ ನೆಪದಲ್ಲಿ ದಟ್ಟವಾದ ಕಾಡುಗಳಲ್ಲಿ ಒಂಟಿಯಾಗಿ ಅಲೆಯುತ್ತಿದ್ದನು. ಅವನ ಆ ವಯಸ್ಸಿಗೆ ಈ ಬಗೆಯ ಸಾಹಸ ಜೀವನ ಬಹಳ ಆಪ್ಯಾಯಮಾನವಾಗಿತ್ತು. ಹೀಗೆ ಸಂಚರಿಸುತ್ತಾ ಅವನು ಅನಂತಪುರ ಮಂಡಲದ ಕದರಿ ಪಟ್ಟಣಕ್ಕೆ ಬಂದನು. ಅಲ್ಲಿನ ದೇವಾಲಯಗಳನ್ನು ನೋಡುತ್ತಿದ್ದಾಗ ಅಲ್ಲಿ ಅವನಿಗೆ ವಿಸ್ಮಯಕರವಾದ ಸಂಗತಿಯೊಂದು ಗೋಚರಿಸಿತು. ಅಲ್ಲಿದ್ದ ಚಂದ್ರವದನೆ ಮಂಟಪ, ಹಾಗೂ ದೇವಾಲಯಕ್ಕೆ ಅನತಿ ದೂರದಲ್ಲಿದ್ದ ಚಂದ್ರವದನೆ ಮೋಮಿಯಾರ ಇವರ ಸಮಾಧಿ ಇವುಗಳನ್ನು ನೋಡಿದನು. ಇವು ಅವನ ಮನಸ್ಸಿನ ಮೇಲೆ ಬಹಳ ಪರಿಣಾಮ ಉಂಟುಮಾಡಿದ್ದುವು. ಅವನು ಪ್ರಥಮಬಾರಿಗೆ ಹಿಂದೂ ಮುಸ್ಲಿಂ ಸಖ್ಯದ ಸುಂದರ ಕನಸನ್ನು ಅಲ್ಲಿ ಕಂಡನು. ಅವರಿಬ್ಬರ ಗೋರಿಗಳು ಅವರ ಅಮರ ಪ್ರೇಮದ ದ್ಯೋತಕವಾಗಿದ್ದುವು.

ಇಮ್ಮಡಿ ದೇವರಾಯನ ಕಾಲದಲ್ಲಿ ಕದರಿ ಪಟ್ಟಣದ ಪರಿಸರದಲ್ಲಿದ್ದ ಪಾತರಪಲ್ಲಿಯಲ್ಲಿ ರಂಗನಾಯಕನೆಂಬ ಧರ್ಮಿಷ್ಠನು ರಾಜ್ಯವಾಳುತ್ತಿದ್ದನು. ಇವನಿಗೆ ಚಂದ್ರವದನೆ ಎಂಬ ಮಗಳಿದ್ದಳು. ಇವಳು ಅತ್ಯಂತ ಸುಂದರಿಯೂ ಸದ್ಗುಣ ಶಾಲಿನಿಯೂ ಆಗಿದ್ದಳು. ಇವಳ ರೂಪಲಾವಣ್ಯವನ್ನು ಕಂಡು ಮುಗ್ಧರಾಗದವರು ಅಪರೂಪ. ಎಲ್ಲರೂ ಇವಳು ಹೆಸರಿಗೆ ತಕ್ಕ ಚೆಂದುಳ್ಳ ಹೆಣ್ಣೆಂದು ಹೊಗಳುತ್ತಿದ್ದರು. ಇವಳು ಸಾಮ್ರಾಟರ ಕೈಹಿಡಿಯಲು ತಕ್ಕವಳು ಎಂದು ಅವಳ ಸೌಂದರ್ಯವನ್ನು ನೋಡಿದವರೆಲ್ಲರೂ ಹೇಳುತ್ತಿದ್ದರು. ಅವಳ ರೂಪಲಾವಣ್ಯ ಊರಿನ ಹೆಂಗಸರ ಮನೆಮಾತಾಗಿತ್ತು. ಅವಳು ಊರಿನ ದೇವರ ಪರಮ ಭಕ್ತೆಯಾಗಿದ್ದಳು. ಪ್ರತಿದಿನ ನರಸಿಂಹಸ್ವಾಮಿಯನ್ನು ಸಂದರ್ಶಿಸಿ, ತೀರ್ಥಪ್ರಸಾದಗಳನ್ನು ತೆಗೆದುಕೊಳ್ಳದೆ ಅವಳು ಊಟಮಾಡುತ್ತಿರಲಿಲ್ಲ. ಹೀಗೆ ಅವಳು ತನ್ನ ಗೆಳತಿಯರೊಡನೆ ದೇವಾಲಯಕ್ಕೆ ಹೋಗುತ್ತಿದ್ದಾಗ ಮೋಮಿಯಾರನೆಂಬ ಕಾಬೂಲದೇಶದ ವರ್ತಕನ ಕಣ್ಣಿಗೆ ಬಿದ್ದಳು. ಅವನು ಒಬ್ಬ ಮುತ್ತುರತ್ನಗಳ ವ್ಯಾಪಾರಿ. ತನ್ನ ಮುತ್ತುರತ್ನಗಳೊಂದಿಗೆ ಅವನು ಊರಿಂದ ಊರಿಗೆ ತಿರುಗಿ ವ್ಯಾಪಾರ ಮಾಡುತ್ತಿದ್ದನು. ಅವನು ನೋಡಲು ಸುಂದರನಾಗಿದ್ದನು. ಇನ್ನೂ ಇಪ್ಪತ್ತೈದರ ಪ್ರಾಯ. ಅವನು ತನ್ನ ದೇಶಾಟನೆಯಲ್ಲಿ ಎಷ್ಟೋ ಹೆಣ್ಣುಗಳನ್ನು ನೋಡಿದ್ದರೂ, ಚಂದ್ರವದನೆಯಂತಹ ರೂಪಸಿಯನ್ನು

ನೋಡಿರಲಿಲ್ಲ. ಅವಳನ್ನು ನೋಡಿದುದೇ ತಡ, ಅವಳಲ್ಲಿ ಅವನಿಗೆ ಅನುರಾಗ ಉಂಟಾಯಿತು. ಅವಳಿಗೆ ತನ್ನ ಹೃದಯವನ್ನು ಒಪ್ಪಿಸಿದನು. ಅವಳಿಗಾಗಿ ಯಾವ ಸಾಹಸ ಕೃತ್ಯಕ್ಕೂ ಅವನು ಸಿದ್ಧನಾದನು.

ಚಂದ್ರವದನೆಯೂ ಮೋಮಿಯಾರಲ್ಲಿ ಅನುರಕ್ತಳಾಗಿದ್ದಳು. ಅವನ ಸೌಂದರ್ಯ, ಮೋಹಕವಾಗಿ ನಡೆನುಡಿಗಳಿಗೆ ಅವಳು ಮಾರುಹೋಗಿದ್ದಳು. ಅವನ ದೇಶಕುಲಗಳನ್ನು ವಿಚಾರಿಸದೆ ಅವನಲ್ಲಿ ಅನುರಕ್ತಳಾಗಿದ್ದಳು. ಇಬ್ಬರೂ ತಮ್ಮ ಪ್ರಣಯ ಸಾಫಲ್ಯ ಪಡೆಯುವುದೋ ಇಲ್ಲವೋ ಎಂಬುದನ್ನು ಆಲೋಚಿಸದೆ ಪರಸ್ಪರ ಹೃದಯಗಳನ್ನು ಅರ್ಪಿಸಿಕೊಂಡಿದ್ದರು. ಇಬ್ಬರೂ ದೇವಾಲಯದಲ್ಲಿ ಅನೇಕ ಬಾರಿ ಸಂದರ್ಶಿಸುತ್ತಿದ್ದರು. ಅನೇಕ ಪ್ರೇಮಾಲಾಪನೆಗಳನ್ನು ಮಾಡುತ್ತಿದ್ದರು. ಎಂತಹ ಪ್ರಸಂಗ ಬಂದರೂ ಅವರು ತಾವು ಪರಸ್ಪರ ಒಂದಾಗಿ ಇರಬೇಕೆಂದು ನರಸಿಂಹನ ಆಣೆ ಇಟ್ಟು ವಚನ ಕೊಟ್ಟುಕೊಂಡರು. ಇನ್ನೇನು ಅವರು ವಿವಾಹವಾಗಬೇಕೆಂದಿರುವಾಗಲೇ ಚಂದ್ರವದನೆಯ ತಂದೆಗೆ ಈ ಸಂಗತಿ ತಿಳಿಯಿತು. ಅವನು ನಿಷ್ಠಾವಂತ ಹಿಂದುವಾಗಿದುದ್ದರಿಂದ ಈ ಹಿಂದೂ ಮುಸ್ಲಿಂ ವಿವಾಹಕ್ಕೆ ಸಮ್ಮತಿಸಲಿಲ್ಲ. ಅವನು ಚಂದ್ರವದನೆಯನ್ನು ಹೊರಗೆ ಬಿಡದೆ ಮನೆಯಲ್ಲಿಯೇ ನಿರ್ಬಂಧದಲ್ಲಿ ಇರಿಸಿದನು. ತರುಣ ಪ್ರಣಯಿಗಳಿಬ್ಬರೂ ವಿರಹಪೀಡಿತರಾದರು. ಇದನ್ನು ಸಹಿಸಲಾಗದೆ ಚಂದ್ರವದನೆ ಆತ್ಮಹತ್ಯೆ ಮಾಡಿಕೊಂಡಳು. ಈ ಸುದ್ದಿಯನ್ನು ಕೇಳಿ ಮೋಮಿಯಾರನೂ ಆತ್ಮಹತ್ಯೆಮಾಡಿಕೊಂಡು ಪರಲೋಕದಲ್ಲಿ ತನ್ನ ಪ್ರೇಯಸಿಯನ್ನು ಸಂಧಿಸಲು ಹೊರಟನು. ಅವರ ಪ್ರೀತಿಯ ಗೂಢತೆಯನ್ನು ಕಂಡ ಚಂದ್ರವದನೆಯ ತಂದೆಗೆ ಆಗ ತನ್ನ ತಪ್ಪು ಅರಿವಾಯಿತು. ಅವನು ಅದಕ್ಕಾಗಿ ಪಶ್ಚಾತ್ತಾಪಪಟ್ಟನು. ಅವನು ಚಂದ್ರವದನೆಗೂ ಮೋಮಿಯಾರನಿಗೂ – ಒಂದೇ ಕಡೆ ಸಮಾಧಿ ಮಾಡಿಸಿದನು. ಆ ಭಗ್ನ ಪ್ರಣಯಿಗಳ ಸಮಾಧಿಯನ್ನು ಹಿಂದೂಮುಸಲ್ಮಾನ ಪದ್ಧತಿಗಳಿಗನುಗುಣವಾಗಿ ಕಟ್ಟಿಸಿದನು. ಊರಿನ ತರುಣ ತರುಣಿಯರಿಗೆ ಈ ಸಮಾಧಿ ಪವಿತ್ರ ಯಾತ್ರಾಸ್ಥಳವಾಯಿತು. ಮುಂದೆ ಅದರ ಕೀರ್ತಿ ಹಬ್ಬಿ ಭಿನ್ನ ಪ್ರಣಯಿಗಳ ಮನೋರಥವನ್ನು ಈಡೇರಿಸುವ ಸಮಾಧಿ ಅದೆಂದು ಖ್ಯಾತಿ ಪಡೆಯಿತು. ಅನೇಕ ಭಿನ್ನಪ್ರಣಯಗೊಂಡ ತರುಣ ತರುಣಿಯರು ಅಲ್ಲಿಗೆ ಬಂದು ಹೋಗುತ್ತಿದ್ದರು. ರಾಮರಾಯನು ಈ ಸಮಾಧಿಯನ್ನು ನೋಡಿದಾಗ ನಿರ್ಮಲ ಪ್ರಣಯಕ್ಕೆ ದೇಶ ಕಾಲ, ಜಾತಿಮತಗಳ ಸಂಕೋಲೆ ಇಲ್ಲವೆಂದು ಅರಿತನು ಅವರ ಪ್ರೀತಿ–ಸಾವಿನಲ್ಲೂ ಎಡಬಿಡದ ಅನುರಾಗ–ಅವನ ಹೃದಯದ ಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಿತ್ತು. ಅವನು ಅದನ್ನೇ ಮೆಲುಕು ಹಾಕುತ್ತಾ

ಬರುತ್ತಿದ್ದಾಗ ಹಿಂದೂ ಮುಸ್ಲಿಮರ ಸಖ್ಯಕ್ಕೆ ಇನ್ನೊಂದು ಸಾಕ್ಷಿಯೆಂಬಂತೆ ಪೆನಗೊಂಡೆಯಲ್ಲಿನ ಬಾಬಾಫಕ್ರುದ್ದೀನನ ಸಮಾಧಿ ಕಣ್ಣಿಗೆ ಬಿದ್ದಿತ್ತು.

.ಬಾಬಾಫಕ್ರುದ್ದೀನರು ಒಬ್ಬ ಸಂತರು. ಇವರು ಜಗದ್ರಕ್ಷಕನನ್ನು ಸಾಕ್ಷಾತ್ಕರಿಸಿಕೊಂಡ ಅನುಭವಿಗಳಲ್ಲಿ ಒಬ್ಬರಾಗಿದ್ದರು. ಅವರು ಮಹಾಮಹಿರಾಗಿ ಬಾಳಿದ್ದರು. ಅವರು ತೀರಿಕೊಂಡನಂತರ ಅವರ ಸಮಾಧಿ ಹಿಂದೂ ಮುಸ್ಲಿಂರಿಬ್ಬರಿಗೂ ಪೂಜ್ಯವಾಗಿತ್ತು. ಅದಕ್ಕೆ ಹಿಂದೂಮುಸ್ಲಿಮರಿಬ್ಬರೂ ಹರಕೆ ಸಲ್ಲಿಸುತ್ತಿದ್ದರು. ಮೊಹರಂ, ಬಕ್ರಿದ್, ರಾಮನವಮಿ ಗೋಕುಲಾಷ್ಟಮಿಗಳಲ್ಲಿ ಈ ಸಮಾಧಿಯ ಬಳಿ ವಿಶೆಷ ಉತ್ಸವ ನಡೆಯುತ್ತಿತ್ತು. ಹಿಂದೂಮುಸ್ಲಿಮರು ಒಟ್ಟಿಗೆ ಸೇರಿ ಈ ಹಬ್ಬಗಳಲ್ಲಿ ಬಡಬಗ್ಗರಿಗೆ ವಸ್ತ್ರದಾನವನ್ನು, ಅನ್ನದಾನವನ್ನು ಮಾಡುತ್ತಿದ್ದರು. ಹಿಂದೂ ಮಹಮದೀಯರ ಸಮಭಾವ, ಸೋದರಿಕೆಯನ್ನು ಕಂಡು ಅವರಿಬ್ಬರೂ ಏಕತಂದೆಯ ಮಕ್ಕಳೆಂಬ ಸತ್ಯವನ್ನು ರಾಮರಾಯನು ಪ್ರಥಮ ಬಾರಿಗೆ ಮನಗೊಂಡನು.

ಮುಂದೆ ಶ್ರೀರಂಗಕ್ಕೆ ಹೋಗಿದ್ದಾಗ ಈ ಮಾತು ಸತ್ಯವೆನ್ನಲು ಇನ್ನೊಂದು ನಿದರ್ಶನ ದೊರೆತಿತ್ತು. ಅಲ್ಲಿನ ಶ್ರೀರಂಗನಾಥ ಸ್ವಾಮಿಯ ದೇವಾಲಯದ ಪ್ರಾಕಾರದಲ್ಲಿ ' ಲಾಯಿಲ್ಲಾ ಹಾಇಲ್ಲಾಲ್ಲಾ, ಮಹಮ್ಮದರ್ ರಸುಲುಲ್ಲಾ ಹಿ! ' (ಹಿಂದೂ ಮಹಮದೀಯರು ಒಂದೇ) ಎಂಬ ಮಂತ್ರ ಕೆತ್ತಿರುವುದನ್ನು ನೋಡಿ ಅಚ್ಚರಿಗೊಂಡನು !

ಹೀಗೆ ರಾಮರಾಯನಿಗೆ ಅವನ ಸಂಚಾರ ಕಾಲದಲ್ಲಿ ಹಿಂದೂಮುಸ್ಲಿಮರ ಮಧುರಮೈತ್ರಿಯ ಬಗ್ಗೆ ಅಪೂರ್ವವಾದ ಸತ್ಯದರ್ಶನವಾಗಿತ್ತು. ಹಿಂದೂ ಮಹಮದೀಯರು ವಿಧರ್ಮಿಗಳಾದರೂ ಅವರು ಒಬ್ಬ ತಂದೆಯ ಮಕ್ಕಳು. ಮನಸ್ಸುಮಾಡಿದರೆ ಅವರು ಸಹೋದರರಂತೆ ಇರಲು ಸಾಧ್ಯವೆಂಬ ಸಂಗತಿಯ ಅರಿವಾಗಿತ್ತು. ಅವರು ತಮ್ಮ ವೈಷಮ್ಯಗಳನ್ನು ಮರೆತು, ಹೆಚ್ಚು ಸಾಮರಸ್ಯದಿಂದ ಬದುಕಿದರೆ ವಿಜಯನಗರ ಸಾಮ್ರಾಜ್ಯವು ಶಾಶ್ವತವಾಗಿ ಉಳಿಯುವುದೆಂದು ಅವನು ಭಾವಿಸಿದ್ದನು. ಈ ಪವಿತ್ರಕಾರ್ಯಸಾಧನೆಗಾಗಿ ತನ್ನ ಸರ್ವಸ್ವವನ್ನು ಮೀಸಲಿಡಬೇಕೆಂದು ಅವನು ಸಂಕಲ್ಪಿಸಿದನು. ಆದರೆ ಈ ನಿರ್ಧಾರವನ್ನು ಕೂಡಲೇ ತನ್ನ ಜೀವನದಲ್ಲಿ ಒರೆಹಚ್ಚಿನೋಡುವ ಪ್ರಸಂಗ ಬಂದೀತೆಂದು ಅವನು ತಿಳಿದಿರಲಿಲ್ಲ. ಅದು ಬಂದುದು ಹೀಗೆ:

ರಾಮರಾಯನು ಒಮ್ಮೆ ಒಬ್ಬಂಟಿಯಾಗಿ ಬೇಟೆಯಾಡುತ್ತಾ ಹೊರಟಿದ್ದನು. ಕಾಡಿನ ಹೊರವಲಯದಲ್ಲಿ ಅಕ್ಕಪಕ್ಕದ ಗ್ರಾಮದವರು ತಮ್ಮ ದನಕರುಗಳನ್ನು ಹಿಡಿದು ಉಪಟಳ ಕೊಡುತ್ತಿದ್ದ ಒಂದು ಹುಲಿಯನ್ನು ಹಿಡಿಯಲು

ಒಂದು ಬೋನನ್ನು ಸಿದ್ಧಪಡಿಸಿ, ಅದಕ್ಕೆ ಒಂದು ಬದುಕಿರುವ ಹೋತವನ್ನು ಕಟ್ಟಿದ್ದರು. ಮೂರು ನಾಲ್ಕುದಿನಗಳಾದರೂ ಹುಲಿ ಅತ್ತ ಸುಳಿದಿರಲಿಲ್ಲ. ಊರಿನವರು ಹುಲಿಗಾಗಿ ಹೊಂಚುಹಾಕಿ ಕಡೆಗೆ ಬೇಸತ್ತು, ಇನ್ನೊಂದು ದಿನ ನೋಡಿ ಬೋನನ್ನು ಬೇರೆ ಕಡೆಗೆ ಕಟ್ಟುವುದೆಂದು ನಿರ್ಧರಿಸಿ, ತಮ್ಮ ಮನೆಗಳಿಗೆ ತೆರಳಿದರು. ಅದು ಕಾಡುಪ್ರದೇಶವಾಗಿದ್ದು ಸಣ್ಣದೊಂದು ತೊರೆ ಹರಿಯುತ್ತಿತ್ತು. ಆ ಮಾರ್ಗವಾಗಿ ಬರುತ್ತಿದ್ದ ಪ್ರಯಾಣಿಕರು ಅಲ್ಲಿನ ಗಿಡಮರಗಳ ನೆರಳಿನಲ್ಲಿ ತಂಗಿ, ನೀರು ಕುಡಿದು ತಮ್ಮ ಬಾಯಾರಿಕೆ ಪರಿಹರಿಸಿಕೊಳ್ಳುತ್ತಿದ್ದರು. ದೂರದ ಪ್ರಯಾಣಿಕರು ಅಲ್ಲಿ ನಿಂತು ಅಡಿಗೆ ಊಟಗಳನ್ನು ತೀರಿಸಿ ತಮ್ಮ ಪ್ರಯಾಣ ಮುಂದುವರಿಸುತ್ತಿದ್ದರು. ಆ ದಾರಿಯಲ್ಲಿ ಪ್ರಯಾಣಿಕರು ಬರುತ್ತಿದ್ದುದರಿಂದಲೇ ಹುಲಿಯು ಅಲ್ಲಿ ಆಗೊಮ್ಮೆ ಈಗೊಮ್ಮೆ ದಾಳಿ ಇಟ್ಟು ಒಬ್ಬಿಬ್ಬ ಪ್ರಯಾಣಿಕರನ್ನು ಹಾರಿಸಿಕೊಂಡು ಹೋಗುತ್ತಿತ್ತು. ನೀರು ಕುಡಿಯಲು ಬರುತ್ತಿದ್ದ ದನಕರುಗಳಿಗೂ ಈ ಉಪದ್ರವ ತಪ್ಪಿರಲಿಲ್ಲ. ಅಂತಲೇ ಆ ಪ್ರದೇಶದಲ್ಲಿ ಹುಲಿಯು ಬೀಳಬಹುದೆಂದು ಬೋನನ್ನು ಒಡ್ಡಿದ್ದರು. ಆದರೆ ಹುಲಿ ಮಾತ್ರ ಬಿದ್ದಿರಲಿಲ್ಲ.

ಆ ಮಾರ್ಗದಲ್ಲಿ ಬಂದಿದ್ದ ಒಂದು ಮುಸ್ಲಿಂ ಸಂಸಾರವು ಅಂದು ಮಧ್ಯಾಹ್ನ ಅಲ್ಲಿ ತಂಗಿ, ತಮ್ಮ ಅಡಿಗೆ ಊಟಗಳ ತಯಾರಿ ನಡಸಿದ್ದರು. ಅವರಲ್ಲಿ ಇಪ್ಪತ್ತರ ತರುಣಿಯಾದ ಮೆಹರುನ್ನೀಸಳು ಒಲೆಯನ್ನು ಸಿದ್ಧಗೊಳಿಸಿ, ಬಳಿಯಲ್ಲಿದ್ದ ತೊರೆಯಿಂದ ನೀರು ತರಲು ಹೊರಟಳು. ಅವಳ ಸಹೋದರ ಉನಿಲ್ ಮುಲ್ಕನು ಕಟ್ಟಿಗೆಯನ್ನು ಆರಿಸಿ ತರಲು ಹೊರಟನು. ಮೆಹರುನ್ನೀಸಳು ಮಡಕೆಯಲ್ಲಿ ನೀರನ್ನು ತೆಗೆದುಕೊಂಡು ಹಿಂದಿರುಗಿ ಬರುತ್ತಿದ್ದಾಗ ಬಳಿಯಲ್ಲಿ ಎಲ್ಲೋ ಹೋತನು ಅರಚುತ್ತಿರುವುದು ಕೇಳಿತು. ಅದು ದೈನ್ಯದಿಂದ ಕೂಗುತ್ತಿತ್ತು. ಅವಳಿಗೆ ಕೂಡಲೇ ತನ್ನ ಮನೆಯಲ್ಲಿದ್ದ ಹೋತದ ನೆನಪಾಯಿತು. ಅವಳು ಸುತ್ತಲೂ ನೋಡಿದಳು. ಹೋತನು ಕಣ್ಣಿಗೆ ಬೀಳಲಿಲ್ಲ. ಕೆಲವು ಕಾಲ ಮೌನ ಆವರಿಸಿತು. ಮತ್ತೆ ಹೋತನು ಅರಚಿಕೊಳ್ಳಲು ಆರಂಭಿಸಿತು. ಈ ಬಾರಿ ವಿಕಾರವಾಗಿ ಕೂಗುತ್ತಿತ್ತು! ಯಾರೋ ಇಲ್ಲಿ ಹೋತವೊಂದನ್ನು ಬಚ್ಚಿಟ್ಟಿದ್ದಾರೆ, ಎಂದು ಬಗೆದು ಅದರ ಧ್ವನಿ ಬಂದತ್ತ ಮೆಹರುನ್ನೀಸಳು ನಿಧಾನವಾಗಿ ಹೆಜ್ಜೆ ಹಾಕುತ್ತಾ ಹುಲಿಯನ್ನು ಹಿಡಿಯಲು ಕಟ್ಟಿದ್ದ ಬೋನಿನ ಬಳಿಗೆ ಬಂದಳು. ಅಲ್ಲಿದ್ದ ಮಾಂಸದ ದುರ್ವಾಸನೆ ಮೂಗು ಮುಚ್ಚಿಸುವಂತೆ ಇತ್ತು. ಅವಳು ಕೆಲವು ಕಾಲ ಅವಾಕ್ಕಾಗಿ ನಿಂತಳು. ಆ ಹೋತ ಅವಳನ್ನು ದೈನ್ಯದಿಂದ ನೋಡಿ ಮತ್ತೆ ದೀನ ಸ್ವರದಲ್ಲಿ ಅರಚಿತು. ಅವಳಿಗೆ ಅದೇನೆನಿ

ಸಿತೋ! ಬಾಲೆಯ ಚಪಲದಲ್ಲಿ ಬೋನಿನ ಬಳಿಗೆ ನುಗ್ಗಿ ಆ ಮೂಕಪ್ರಾಣಿಯನ್ನು ಬಿಡಿಸಲು ಅದರ ಕತ್ತಿನ ಹುರಿಗೆ ಕೈಹಾಕಿದಳು. ಅಷ್ಟರಲ್ಲಿ ಎಲ್ಲಿಂದಲೋ ಭಯಂಕರವಾದ ಹುಲಿಯ ಗರ್ಜನೆ ಕೇಳಿಸಿತು. ಮೆಹರುನ್ನೀಸಳಿಗೆ ಗಾಬರಿಯಾಯಿತು. ಆದರೆ ಹೋತನನ್ನು ಹುಲಿಯ ಬಾಯಿಂದ ಪಾರುಮಾಡದೆ ಅವಳಿಗೆ ಬೋನಿನಿಂದ ಕೆಳಗಿಳಿಯಲು ಮನಸ್ಸಾಗಲಿಲ್ಲ. ಅವಳು ಲಗುಬಗೆಯಿಂದ ಅದರ ಕತ್ತಿನ ದಾರವನ್ನು ಬಿಚ್ಚಿ ಇನ್ನೇನು ಕೆಳಗಿಳಿಯಬೇಕು ಎನ್ನುವುದರಲ್ಲಿ ಹುಲಿಯೇ ಅವಳಿಗೆ ಎದುರಾಗಿತ್ತು. ಮೆಹರುನ್ನೀಸಳು ಹುಲಿಯನ್ನು ಕಂಡು ಚೀರಿದಳು. ಹುಲಿ ಅವಳ ಕಡೆಗೆ ಹಾರಿತು. ಮೆಹರುನ್ನೀಸಳು ತನ್ನ ಕಥೆ ಮುಗಿಯಿತೆಂದು ತಿಳಿದಳು. ಪ್ರಾಣ ಭಯದಿಂದ ಕೆಟ್ಟ ಧ್ವನಿಯಲ್ಲಿ ಚೀರಿದಳು.

ಆದರೆ ಅವಳ ಅದೃಷ್ಟ ದೊಡ್ಡದು. ಹುಲಿ ಮೆಹರುನ್ನೀಸಳ ಮೇಲೆ ಆಕ್ರಮಣ ಮಾಡುವುದಕ್ಕೂ, ಅಲ್ಲಿಗೆ ಬೇಟೆಯ ನಿಮಿತ್ತ ರಾಮರಾಯನು ಬರುವುದಕ್ಕೂ ಸರಿಹೋಗಿತ್ತು. ರಾಮರಾಯನು ಹುಲಿಯ ಗರ್ಜನೆ ಕೇಳಿ ಅತ್ತ ಬಂದಿದ್ದನು. ಆಗ ಹೆಣ್ಣಿನ ಚೀರಾಟ ಕಿವಿಗೆ ಬಿದ್ದಿತ್ತು. ಹುಲಿ ಯಾರೋ ಒಬ್ಬರ ಮೇಲೆ ಆಕ್ರಮಣ ಮಾಡಿದೆ ಎಂದು ಊಹಿಸಿ ಅವನು ಮಿಂಚಿನ ವೇಗದಲ್ಲಿ ಅಲ್ಲಿಗೆ ಬಂದಿದ್ದನು. ಅವನ ನಿರೀಕ್ಷೆ ಸುಳ್ಳಾಗಲಿಲ್ಲ. ಹೆಬ್ಬುಲಿಯು ಮೆಹರುನ್ನೀಸಳ ಮೇಲೆ ಎರಗಿತ್ತು.

ಅಲ್ಲಿಗೆ ಬಂದ ರಾಮರಾಯನು ಕೂಡಲೇ ಮೆಹರುನ್ನೀಸಳನ್ನು ದೂರ ತಳ್ಳಿ ಅವಳನ್ನು ಪಾರುಮಾಡಿ ಹುಲಿಯನ್ನು ಎದುರಿಸಲು ಸಿದ್ಧನಾದನು. ರಾಮರಾಯನು ತನ್ನ ಬೇಟೆಯ ಕಾಲದಲ್ಲಿ ಅನೇಕ ಹುಲಿಗಳನ್ನು ಸಂಹರಿಸಿದ್ದರೂ ಹುಲಿಯೊಡನೆ ಕೈಕೈ ಹೋರಾಟದ ಪ್ರಸಂಗ ಮಾತ್ರ ಒದಗಿರಲಿಲ್ಲ! ಇಂದು ಅಂತಹ ಪ್ರಸಂಗ ಒದಗಿತ್ತು. ರಾಮರಾಯನು ಹುಲಿಯೊಡನೆ ಬಹು ಕಾಲ ಸೆಣಸಿ, ಅದರ ಹೊಟ್ಟೆಯನ್ನು ತನ್ನ ಕಠಾರಿಯಿಂದ ಸೀಳಿ ಅದನ್ನು ಯಮಸದನಕ್ಕೆ ಅಟ್ಟಿದನಾದರೂ ಅದರ ಪಂಜದಿಂದ ಆದ ಗಾಯಗಳಿಂದ ಅವನ ಮೈಯೆಲ್ಲಾ ರಕ್ತಮಯವಾಗಿತ್ತು. ಅವನು ಬಳಲಿಕೆಯಿಂದ ಅಲ್ಲೇ ನೆಲಕ್ಕೆ ಕುಸಿದುಬಿದ್ದನು. ಎಚ್ಚೆತ್ತು ಕಣ್ಣು ತೆರೆದು ನೋಡಿದಾಗ, ತನ್ನನ್ನು ಸ್ವರ್ಗಲೋಕದ ಸುಂದರಿಯೊಬ್ಬಳು ಉಪಚರಿಸುತ್ತಿರುವಂತೆ ಅವನಿಗೆ ಭಾಸವಾಯಿತು. ಅವಳು ಅವನ ಗಾಯಗಳನ್ನೆಲ್ಲಾ ತೊಳೆದು ಬಟ್ಟೆ ಕಟ್ಟುತ್ತಿದ್ದಳು. ಮಲಗಲು ಮೆತ್ತನೆ ಹಾಸಿಗೆ ಹಾಸಿಕೊಟ್ಟು ಅವನಿಗೆ ಬಟ್ಟೆಯಿಂದ ಗಾಳಿ ಹಾಕುತ್ತಿದ್ದಳು. ಅವನು ಕಣ್ಣು ತೆರೆದಾಗ ಅವಳಿಗೆ ವಿನೋದ ಸಂತೋಷ ಸಮಾಧಾನಗಳು ಹೇಳಲಸದಳ! ತನ್ನ ಪ್ರಾಣವನ್ನು ರಕ್ಷಿಸಿದ ಅವನು ಬದು

ಕುವ ಬಗ್ಗೆ ಅವಳಿಗೆ ಸಂದೇಹ ಒದಗಿತ್ತು. ಅಷ್ಟರಲ್ಲಿ ಅವಳ ಸಹೋದರನು ಬಂದುದರಿಂದ ಇಬ್ಬರೂ ಸೇರಿ ಅವನ ಶುಶ್ರೂಷೆ ಮಾಡಿದ್ದರು. ಅದರಿಂದ ರಾಮರಾಯನು ಚೇತರಿಸಿಕೊಂಡಿದ್ದನು.

ಹೀಗೆ ಉಂಟಾದ ಅವರ ಪರಿಚಯ ಸ್ನೇಹವಾಗಿ ಮಾರ್ಪಟ್ಟು ಕಡೆಗೆ ಪ್ರಣಯದಲ್ಲಿ ಪರ್ಯವಸಾನವಾಗಿತ್ತು. ರಾಮರಾಯನಿಗೆ ಆ ಸ್ವರ್ಗಲೋಕದ ಸುಂದರಿ ಮುಸ್ಲಿಮ ತರುಣಿ ಎಂದು ತಿಳಿದಾಗ ವ್ಯಥೆಯಾಗಲಿಲ್ಲ. ಅವಳ ಪ್ರೀತಿ ಅವನಿಗೆ ತ್ಯಾಜ್ಯವಾಗಲಿಲ್ಲ. ಮೆಹರುನ್ನೀಸಳಂತೂ ತನ್ನನ್ನು ಹುಲಿಯ ಬಾಯಿಂದ ಪಾರುಮಾಡಿದ ರಾಮರಾಯನನ್ನು ದೇವರೆಂದು ತಿಳಿದು ಪೂಜಿಸಲು ಸಿದ್ಧಳಾದಳು. ತಾನು ಸಾಮಾನ್ಯ ಸ್ತ್ರೀ, ಅವನು ರಾಜಪುತ್ರ, ತಾನು ಮುಸ್ಲಿಮ ತರುಣಿ, ಅವನು ಹಿಂದೂ. ತನ್ನ ಪ್ರೇಮ ಸಾರ್ಥಕವಾಗಲು ಸಾಧ್ಯವಲ್ಲವೆಂಬ ನಿರಾಶೆ ಅವಳನ್ನು ಬಾಧಿಸದಿರಲಿಲ್ಲ, ತನ್ನ ಪ್ರೇಮವನ್ನು ರಾಮರಾಯನು ಪುರಸ್ಕರಿಸಲಿ, ಬಿಡಲಿ ತಾನು ಮದುವೆಯಾಗುವುದಾದರೆ ಅವನನ್ನೇ ಆಗಬೇಕು ! ಇಲ್ಲವೇ ಆಜನ್ಮ ಬ್ರಹ್ಮಚಾರಿಣಿಯಾಗಿ ಉಳಿಯಬೇಕು ಎಂಬ ನಿರ್ಧಾರವನ್ನು ಅವಳು ಮುಟ್ಟಿದ್ದಳು. ಆದರೆ ಅವಳು ನಿರಾಶಳಾಗುವ ಕಾರಣವಿರಲಿಲ್ಲ. ಅವಳ ಸ್ವರ್ಗೀಯ ಸೌಂದರ್ಯ, ಅವಳ ಪ್ರಿಯವಾದ ನಡೆನುಡಿಗಳು ರಾಮರಾಯನ ಹೃದಯವನ್ನು ಅಪಹರಿಸಿದ್ದುವು. ಅವನೂ ಅವಳಲ್ಲಿ ಪ್ರಣಯಾಕಾಂಕ್ಷಿಯೇ ಆಗಿದ್ದನು.

ರಾಮರಾಯನು ಹಿಂದೂವೆಂದೂ, ಅವನನ್ನು ವಿವಾಹವಾದರೆ ಅವಳು ಎಂದಿಗೂ ಸುಖವಾಗುವುದಿಲ್ಲವೆಂದೂ, ಇದನ್ನು ಮುಸ್ಲಿಮ್ ಸಮಾಜವು ಒಪ್ಪುವುದಿಲ್ಲವೆಂದೂ, ಉನಿಲ್ ಮುಲ್ಕನು ಮೆಹರುನ್ನೀಸಾಳಿಗೆ ಎಷ್ಟೋ ಬುದ್ಧಿ ಹೇಳಿ ನೋಡಿದನು. ಅವನಿಗೆ ತನ್ನ ತಂಗಿ ವಿಧರ್ಮಿಯನ್ನು ವಿವಾಹವಾಗುವುದು ಇಷ್ಟವಿರಲಿಲ್ಲ. ಇದರಿಂದ ತನ್ನ ತಂಗಿಯ ಬಾಳು ಹಾಳಾಗುವುದೆಂದೇ ಅವನ ಭಾವನೆ. ಅವನ ವಿರೋಧವನ್ನು ಲೆಕ್ಕಿಸದೆ ಮೆಹರುನ್ನೀಸಳು ರಾಮರಾಯನನ್ನೇ ವರಿಸಲು ನಿರ್ಧರಿಸಿದಾಗ, ತನ್ನ ಮಾತನ್ನು ತಿರಸ್ಕರಿಸಿದ ಅವಳ ಮೇಲೆ ಸಿಟ್ಟುಗೊಂಡು ಅವನು ಅಲ್ಲಿಂದ ಹೊರಟುಹೋದನು.

ರಾಮರಾಯನು ತನಗಾಗಿ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧವಾದ ಮೆಹರುನ್ನೀಸಳ ಪ್ರೇಮದ ಗಾಢತೆಯನ್ನು ಅರಿತು, ಎಂತಹ ಸಂದರ್ಭಬಂದರೂ ಅವಳ ಕೈಬಿಡಬಾರದೆಂದು ನಿರ್ಧರಿಸಿ, ಅವಳೊಡನೆ ವಿಜಯನಗರಕ್ಕೆ ಆಗಮಿಸಿ ರಾಜೋಚಿತವಾದ ಭವನದಲ್ಲಿ ಅವಳನ್ನು ಇರಿಸಿದನು. ಅವಳೊಡನೆ ಕಳೆದ ಆ ದಿನಗಳು ರಾಮರಾಯನ ಜೀವನದಲ್ಲಿ ಎಂದೆಂದಿಗೂ ಮರೆಯಲಾಗದ ದಿನ

ಗಳು. ಅವನ ಪಾಲಿಗೆ ಸ್ವರ್ಗ ತೃಣವಾಗಿತ್ತು. ಅವರ ಪ್ರಣಯದೇಗುಲದಲ್ಲಿ ಮದನೋತ್ಸವದ ಕೇಳಿಯಲ್ಲಿ, ಶೃಂಗಾರ ವಿನೋದಗಳಲ್ಲಿ ದಿನಕಳೆದುದೇ ಅವರಿಗೆ ತಿಳಿಯಲಿಲ್ಲ. ಅವರು ಎಣೆ ಇಲ್ಲದ ವಿಲಾಸ ಭೋಗಗಳನ್ನು ಅನುಭವಿಸಿದರು. ಮಿಥುನ ದಂಪತಿಗಳಂತೆ ವಿಹರಿಸಿದರು. ಹಂಸ ಪಕ್ಷಿಗಳಂತೆ ಜಲಕೇಳಿಯಾಡಿದರು. ಚಕೋರ ದಂಪತಿಗಳಂತೆ ಬೆಳುದಿಂಗಳಲ್ಲಿ ಅಧರಾಮೃತ ಪಾನದಲ್ಲಿ ತೋಳ್ತೆಕ್ಕೆಯಲ್ಲಿ ಮೈಮರೆತರು. ಅವರು ತಾವು ಏಕಜೀವ ಎಂಬಂತೆ ಮೆರೆದರು. ಅದು ಅವರ ಜೀವನದ ವಸಂತಮಾಸ! ಕಡೆತನಕ ಹೀಗೆಯೇ ನಡೆಯುವುದೆಂದು ಅವರು ಭಾವಿಸಿದ್ದರು. ಅದಕ್ಕಾಗಿ ಹಾರೈಸಿದ್ದರು ಆದರೆ ಅವರು ಒಂದು ಬಯಸಿದ್ದರೆ ದೈವ ಬೇರೊಂದು ಬಗೆದಿತ್ತು.

ಸಾಮ್ರಾಟ ಕೃಷ್ಣದೇವರಾಯನಿಗೆ ತಿರುಮಲಾದೇವಿಯಲ್ಲಿ ತಿರುಮಲಾಂಬೆ ಎಂಬ ಮಗಳಿದ್ದಳು. ಅವಳು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ಈಗ ವಿವಾಹವಯಸ್ಕಳಾಗಿದ್ದಳು. ಅವಳಿಗೆ ಈಗ ಹದಿನಾರನೇ ವರ್ಷ ನಡೆಯುತ್ತಿತ್ತು. ತಿರುಮಲಾದೇವಿಗೆ ಮಗಳು ಪ್ರಾಪ್ತ ವಯಸ್ಕಳಾದುದನ್ನು ಕಂಡು ಅವಳ ವಿವಾಹದ ಚಿಂತೆ ಕಾಡಿತು. ಈ ಬಗ್ಗೆ ಕೃಷ್ಣದೇವರಾಯನೊಂದಿಗೆ ಯೋಚಿಸಿ, ಅವಳ ಕೈಹಿಡಿಯಲು ಎಲ್ಲ ರೀತಿಯಲ್ಲೂ ಅರ್ಹನಾಗಿದ್ದ ರಾಮರಾಯನಿಗೆ ಅವಳನ್ನು ವಿವಾಹಮಾಡಿಕೊಡಲು ಅವರಿಬ್ಬರೂ ನಿಶ್ಚಯಿಸಿದರು. ಇದಕ್ಕೆ ರಾಜಕೀಯ ಕಾರಣಗಳೂ ಇದ್ದುವು. ರಾಮರಾಯನು ಸೈನ್ಯದಲ್ಲಿ ಅತ್ಯಂತ ಸಮರ್ಥನಾದ ದಂಡನಾಯಕನಾಗಿದ್ದನು. ಇವನು ತನ್ನ ಅಳಿಯನಾದರೆ ತನ್ನ ಸಾಮ್ರಾಜ್ಯಕ್ಕೆ ಅವನಿಂದ ಯಾವ ವಿಪತ್ತೂ ಇರುವುದಿಲ್ಲ ಎಂದು ಕೃಷ್ಣದೇವರಾಯನು ಭಾವಿಸಿದನು. ಸಾಮ್ರಾಜ್ಯದ ರಕ್ಷಣೆಯಲ್ಲಿ ಅವನ ಪಾತ್ರ ಮಹತ್ವದ್ದಾಗಿತ್ತು. ಇದನ್ನೆಲ್ಲಾ ಆಲೋಚಿಸಿ ಅವನಿಗೆ ತಮ್ಮ ಮಗಳನ್ನು ಧಾರೆಯೆರೆದು ಕೊಡಲು ಕೃಷ್ಣದೇವರಾಯನು ನಿಶ್ಚಯಿಸಿದ್ದನು. ಈ ನಿರ್ಧಾರವನ್ನು ರಾಮರಾಯನ ತಂದೆ ಗಂಗಕ್ಷಿತಿಪತಿಗೂ ತಿಳಿಸಿದಾಗ ಅವನೂ ಇದಕ್ಕೆ ಸಮ್ಮತಿಸಿದ್ದನು. ಇದಕ್ಕೆ ರಾಮರಾಯನ ಸಮ್ಮತಿಯನ್ನು ದೊರಕಿಸಿಕೊಳ್ಳುವುದು ಮಾತ್ರ ಉಳಿದಿತ್ತು.

ಈ ಪ್ರಸ್ತಾಪವನ್ನು ರಾಮರಾಯನೊಡನೆ ಗಂಗಕ್ಷಿತಿಪತಿ ಮಾಡಿದಾಗ ರಾಮರಾಯನಿಗೆ ವಿಸ್ಮಯವಾಗಲಿಲ್ಲ. ಇಂತಹ ಮಾತು ಅರಮನೆಯಲ್ಲಿ ನಡೆದಿರೋದು ಅವನ ಕಿವಿಗೂ ಈ ಮೊದಲೇ ಬಿದ್ದಿತ್ತು. ಇಂತಹ ಸಂಬಂಧದ ಸಾಧಕಭಾದಕಗಳನ್ನು ಕುರಿತು ಅವನು ದೀರ್ಘವಾಗಿ ಯೋಚಿಸಿ, ತನ್ನ ಏಳಿಗೆಗೆ ಮಹತ್ವಾಕಾಂಕ್ಷೆಗೆ ಇಂಥ ಸಂಬಂಧ ಆವಶ್ಯಕವೆಂದು ತಿಳಿದಿದ್ದನು. ಸ್ವಯಂ ಸಾಮ್ರಾಟರೇ ತನಗೆ ಮಗಳನ್ನು ಕೊಡಲು ಮುಂದೆ ಬಂದಿರುವಾಗ

ಅದನ್ನು ತಿರಸ್ಕರಿಸುವಷ್ಟು ರಾಮರಾಯ ಮೂರ್ಖನಾಗಿರಲಿಲ್ಲ. ಅಲ್ಲದೆ ತಿರುಮಲಾಂಬೆಯು ರೂಪಿನಲ್ಲಿ ರತಿಯಾಗಿದ್ದಳು. ಸಾಹಿತ್ಯ ಸಂಗೀತ ಕಲೆಗಳಲ್ಲಿ ಪ್ರವೀಣೆಯಾಗಿದ್ದಳು. ಮೇಲಾಗಿ ಸಾಮ್ರಾಟರ ಪುತ್ರಿ ಅವಳು. ಅವಳನ್ನು ಕೈಹಿಡಿದವನು ಅರಮನೆಗೇ ಅಳಿಯನಾಗಬಹುದಿತ್ತು ! ಆಸ್ಥಾನದಲ್ಲಿ ಅರಮನೆಯಲ್ಲಿ ಸಾಮಂತ ಮಾಂಡಳೀಕರಲ್ಲಿ ಸೈನಿಕರಲ್ಲಿ ಅವನ ಪ್ರತಿಷ್ಠೆ ಬೆಳೆಯುತ್ತಿತ್ತು. ಇಂತಹ ಸದವಕಾಶವನ್ನು ಬಿಟ್ಟುಕೊಡಲು ರಾಮರಾಯನು ಸಿದ್ಧನಿರಲಿಲ್ಲ. ಅಂತಲೇ ತಂದೆಯ ಸಲಹೆಗೆ ತನ್ನ ಅಂಗೀಕಾರ ಮುದ್ರೆ ಒತ್ತಿದನು. ರಾಮರಾಯನ ಸಮ್ಮತಿ ದೊರಕಿದುದೇ ತಡ, ವಿವಾಹ ಸಿದ್ಧತೆಗಳು ಭರದಿಂದ ನಡೆಯಲು ಆರಂಭವಾದುವು. ಇಂತಹ ಪರಿಸ್ಥಿತಿಯಲ್ಲಿ ಮೆಹರುನ್ನೀಸಳ ಪ್ರಣಯದ ಬಳ್ಳಿ ಚಿಗುರಿತ್ತು; ಹೂಬಿಟ್ಟು ಫಲವಾಗಿತ್ತು.

ಈಗ ರಾಮರಾಯನನ್ನು ಒಂದು ಸಮಸ್ಯೆ ಎದುರುಗೊಂಡಿತ್ತು. ಅವರಿಬ್ಬರ ಪ್ರಣಯದ ಫಲವಾಗಿ ಮೆಹರುನ್ನೀಸಳು ತಾಯಿಯಾಗುವ ಸೂಚನೆ ಕಂಡಿತ್ತು. ಇದುವರೆಗೆ ಅವಳು ಅವಿವಾಹಿತೆಯಾಗಿದ್ದಂತೆ ಇನ್ನು ಮುಂದೆ ಅವಿವಾಹಿತೆಯಾಗಿರಲು ಸಾಧ್ಯವಿರಲಿಲ್ಲ. ತನ್ನನ್ನು ಇಷ್ಟೆಲ್ಲಾ ಪ್ರೀತಿಸುವ ರಾಮರಾಯನನ್ನು ಅವಳು ವಿವಾಹವಾಗಲು ಇದುವರೆಗೆ ಪೀಡಿಸಿರಲಿಲ್ಲ. ಈಗ ತಮ್ಮ ಪ್ರೇಮದ ಫಲವು ಪುರಸ್ಕೃತವಾಗಲು, ಅದಕ್ಕೆ ವಿವಾಹದ ರಕ್ಷಾಕವಚ ಅನಿವಾರ್ಯವಾಗಿತ್ತು. ಅಂತಲೇ ಅವಳು ಹಿಂದೂ ಇಲ್ಲವೇ ಮುಸ್ಲಿಮ ಧರ್ಮ ಸಂಪ್ರದಾಯಗಳಿಗನುಗುಣವಾಗಿ ತಮ್ಮಿಬ್ಬರ ವಿವಾಹ ನಡೆಯಲು ಒತ್ತಾಯ ಪಡಿಸುತ್ತಿದ್ದಳು. ಆರಂಭದಲ್ಲಿ ಈ ಒತ್ತಾಯ ಬಂದಿದ್ದರೆ ಇದುವರೆಗೆ ರಾಮರಾಯನು ಅವಳನ್ನು ಯಾವುದೇ ಧರ್ಮದ ರೀತ್ಯವಾಗಿ, ವಿವಾಹವಾಗಲು ಹಿಂದುಮುಂದೆ ತುಳಿಯುತ್ತಿರಲಿಲ್ಲ. ಈಗ ಅವನ ಪ್ರಣಯದ ಆವೇಗ ಕೊಂಚ ತಗ್ಗಿತ್ತು. ಅಲ್ಲದೆ ಈಗ ಕೃಷ್ಣದೇವರಾಯನ ಪುತ್ರಿಯನ್ನು ಧರ್ಮಪತ್ನಿಯಾಗಿ ಸ್ವೀಕರಿಸಬೇಕಾಗಿತ್ತು. ತಾನು ಮೆಹರುನ್ನೀಸಳನ್ನು ಧರ್ಮಪತ್ನಿಯಾಗಿ ಪರಿಗ್ರಹಿಸಿರುವ ಸಂಗತಿ ಕೃಷ್ಣದೇವರಾಯನಿಗೆ ತಿಳಿದರೆ ಅವನಿಗೆ ತಿರುಮಲಾಂಬೆಯು ದೊರೆಯುವುದು ದೂರದ ಮಾತಾಗಿತ್ತು. ಅವಳನ್ನು ವಿವಾಹವಾದ ಮೇಲೆ, ಮೆಹರುನ್ನೀಸಳನ್ನು ಧರ್ಮಸಾಕ್ಷಿಯಾಗಿ ವಿವಾಹವಾಗುವುದು ಯೋಗ್ಯವೆಂದು ರಾಮರಾಯನು ನಿರ್ಧರಿಸಿದ್ದನು. ಇದನ್ನೇ ಮೆಹರುನ್ನೀಸಳ ಮುಂದೆ ಹೇಳಿದಾಗ ಅವಳಿಗೆ ರಾಮರಾಯನ ವಿಷಯದಲ್ಲಿ ನಂಬಿಕೆಯುಂಟಾಗದೆ, ತನ್ನನ್ನು ಕೂಡಲೇ ವಿವಾಹವಾಗಲು ಒತ್ತಾಯಪಡಿಸಿದಳು; ತಾನು ಅವಿವಾಹಿತೆಯಾಗಿದ್ದುಕೊಂಡು, ತಾಯಿಯಾಗುವುದು ಅವಳಿಗೆ ಸೇರದ ಮಾತಾಗಿತ್ತು.

ಬಹಿರಂಗದಲ್ಲಿ ಅಲ್ಲದಿದ್ದರೂ ಗುಟ್ಟಿನಲ್ಲಿ ತಮ್ಮಿಬ್ಬರ ವಿವಾಹ ಯಾವುದೋ ರೀತಿಯಲ್ಲಿ ನಡೆದರೂ ಅವಳಿಗೆ ಪ್ರಿಯವಾಗಿತ್ತು. ಇದಕ್ಕೆ ವೈಯುಕ್ತಿಕ ಕಾರಣಗಳಿಂದ ರಾಮರಾಯನು ಸಮ್ಮತಿಸುವಂತಿರಲಿಲ್ಲ. ಇದರಿಂದಾಗಿ ಮೆಹರುನ್ನೀಸಳಿಗೆ ರಾಮರಾಯನು ತನ್ನನ್ನು ವಂಚಿಸಲು ಈ ಕಪಟನಾಟಕ ಹೂಡುತ್ತಿರುವನೆಂದು ತಿಳಿದಳು. ಅವನ ವಿಷಯದಲ್ಲಿ ಅವಳ ಮನಸ್ಸು ಮುರಿಯಿತು. ಅವಳ ಪ್ರಣಯದ ಸ್ವಪ್ನಮಂದಿರ ಒಡೆಯಿತು! ಅವಳು ತಾನು ಅಣ್ಣನ ಮಾತು ಕೇಳದೆ, ರಾಮರಾಯನ ಸವಿನುಡಿಗಳನ್ನು ನಂಬಿ ಮೋಸಹೋದೆನೆಂದು ವಿಷಾದಪಟ್ಟಳು.

ಮೆಹರುನ್ನೀಸಳು ಮುಸ್ಲಿಮಳಾದರೂ ಸತ್ಕುಲ ಪ್ರಸೂತೆಯಾಗಿದ್ದಳು. ಅವಳು ಸಂಪ್ರದಾಯಸ್ಥರ ಮಗಳು. ಧರ್ಮಭೀರುವಾದ ಹೆಣ್ಣು. ಅವಳಿಗೆ ತಾನು ರಾಮರಾಯನನ್ನು ವಿವಾಹವಾಗದೆ ಅವನ ಜತೆಯಲ್ಲಿ ದೇಹ ಸಂಬಂಧ ವಿಟ್ಟುಕೊಂಡುದು ಅಪರಾಧವೆನಿಸಿತು. ಅವಳು ಮೊದಲು ಪ್ರಣಯದ ಆವೇಶದಲ್ಲಿ ಅವನು ತನ್ನನ್ನು ಈ ರೀತಿ ವಂಚಿಸುವನೆಂದು ತಿಳಿದಿರಲಿಲ್ಲ. ತಾನು ಮೆಚ್ಚಿ, ಪೂಜಿಸುವ ದೇವರಿಗೆ ಸರ್ವಸ್ವವನ್ನೂ ಧಾರೆಯೆರೆಯುವ ಭಕ್ತಳಂತೆ ಅವಳು ರಾಮರಾಯನಿಗೆ ತನ್ನನ್ನೇ ಅರ್ಪಿಸಿದ್ದಳು. ಆದರೆ ಅವನು ಕೃತಘ್ನನಾಗುವನೆಂದು ಮಾತ್ರ ಕನಸುಮನಸಿನಲ್ಲೂ ಅವಳು ತಿಳಿದಿರಲಿಲ್ಲ. ತನ್ನ ಪ್ರೇಮವನ್ನು ಹೀಗೆ ವಂಚಿಸುವನೆಂದು ಅವಳು ನಂಬಿರಲಿಲ್ಲ. ಆದರೆ ಸದ್ಯದ ಸ್ಥಿತಿಯಲ್ಲಿ ರಾಮರಾಯನು ಅವಳನ್ನು ವಿವಾಹವಾಗುವಂತೆ ಇರಲಿಲ್ಲ. ಏಕೆಂದರೆ ತಿರುಮಲಾದೇವಿಯ ವಿವಾಹಕ್ಕೆ ಕೆಲವೇ ದಿನಗಳಿತ್ತು! ಅದು ಮುಗಿದಮೇಲೆ ಅವಳನ್ನ ವಿವಾಹವಾಗಿ ಧರ್ಮಪತ್ನಿಯಾಗಿ ಸ್ವೀಕರಿಸಲು ರಾಮರಾಯನು ಸಿದ್ಧನಿದ್ದ. ಇಲ್ಲಿಯವರೆಗೆ ಕಾಯಲು ಮೆಹರುನ್ನೀಸಳು ಮಾತ್ರ ಸಿದ್ಧಳಿರಲಿಲ್ಲ. ಅವಳಿಗೆ ರಾಮರಾಯನ ಭೋಗಕಾಂತೆಯಾಗಿ, ಗಂಧರ್ವಸ್ತ್ರೀಯಾಗಿ ಇರಲು ಇಚ್ಛೆಯಿರಲಿಲ್ಲ. ಈ ಬಗ್ಗೆ ರಾಮರಾಯನು ತನ್ನ ಅಂತಿಮ ನಿರ್ಧಾರ ತಿಳಿಸಿದಾಗ ಅವಳಿಗೆ ತನ್ನ ಕನಸು ಪುಡುಪುಡಿಯಾದಂತೆ, ತನ್ನ ಬಾಳಿನ ಹೂ ನುಲುಗಿದಂತೆ ಅನಿಸಿತು. ಹತಾಶಳಾದ ಮೆಹರುನ್ನೀಸಳು ಭಾವೋನ್ಮಾದದಲ್ಲಿ ಯಾರಿಗೂ ಹೇಳದೆ, ಆತ್ಮಹತ್ಯಮಾಡಿಕೊಳ್ಳಲು ತುಂಗಭದ್ರೆಯ ತಡಿಗೆ ಹೋದಳು. ಆದರೆ ಹೊಟ್ಟೆಯಲ್ಲಿರುವ ಕೂಸು ನೆನವಾಗಿ, ತಾಯಿಯಾದ ಅವಳಿಗೆ ಈ ಕೃತ್ಯಕ್ಕೆ ಮನವಾಗಲಿಲ್ಲ. ಅವಳು ಹುಚ್ಚಿಯಂತೆ ಅಣ್ಣನ ಊರಿಗೆ ಹೋದಳು – ಮಗಳು ಹಿಂದುವನ್ನು ಮದುವೆಯಾದಳೆಂಬ ಸಂಗತಿಯನ್ನು ಕೇಳಿಯೇ ಮತಾಂಧನಾಗಿದ್ದ ತಂದೆ ಎದೆಯೊಡೆದು ಸತ್ತಿದ್ದ! ಈಗ ಅವಳ ಆಪ್ತರಾಗಿ ಉಳಿದಿದ್ದ ವ್ಯಕ್ತಿ

ಗಳೆಂದರೆ ಉನಿಲ್ ಮುಲ್ಕನು ಮಾತ್ರ. ಅವನಿಗೆ ತಂಗಿಯ ಮೇಲೆ ಕ್ರೋಧ ವಿದ್ದರೂ, ಅವಳು ಅನಾಥಳಾಗಿ, ತಾಯ್ತನದ ಭಾರಹೊತ್ತು ಮನೆಗೆ ಬಂದಾಗ ಅವಳಿಗೆ ತನ್ನ ಬಳಿ ಸ್ಥಳವಿಲ್ಲವೆಂದು ಹೇಳಲು ಮನವಾಗಲಿಲ್ಲ. ಹಾಗೆ ಹೇಳಿದ್ದರೆ ಅದರ ಪರಿಣಾಮವೆಂತಹದಾಗುವುದೆಂದು ಅವನಿಗೆ ತಿಳಿದಿತ್ತು. ಅವನಿಗೆ ತಂಗಿಯ ಬಾಳು ಹೀಗೆ ಹಾಳಾದುದಕ್ಕೆ ರಾಮರಾಯನ ಮೇಲೆ ಉಗ್ರಕೋಪ ಉಂಟಾಯಿತು. ತಾನಾಗಿ ಹೋಗಿ ಅವನಿಂದ ಇಂಥ ಭವಣೆಗೊಳಗಾದ ತಂಗಿಯ ಬಗ್ಗೆಯೂ ಅಷ್ಟೇ ಸಿಟ್ಟಾಯಿತು. ಆದರೆ ಅವಳ ಸ್ಥಿತಿಯಲ್ಲಿ ಉನಿಲ್‌ಮುಲ್ಕನು ದುಡುಕಿ ಒಂದು ಮಾತು ಹೇಳಿದ್ದರೂ ಅದರ ಪರಿಣಾಮ ಘೋರವಾಗುತ್ತಿತ್ತು. ರಾಮರಾಯನು ತನಗೆ ವಂಚನೆಮಾಡಿದ್ದರೂ – ಅವನ ಬಗ್ಗೆ ತನ್ನ ತಂಗಿ ಎಷ್ಟು ಹುಚ್ಚಳಾಗಿದ್ದಳು, ಅವನ ಪ್ರೇಮಕ್ಕೆ ಎಷ್ಟು ಹಾತೊರೆಯುತ್ತಿದ್ದಳೆಂಬುದನ್ನು ತಿಳಿದಿದ್ದ ಉನಿಲ್‌ಮುಲ್ಕನು ನಿರ್ವಾಹವಿಲ್ಲದೆ, ತಂಗಿಗೆ ತನ್ನ ಮನೆಯಲ್ಲಿ ರಕ್ಷಣೆ ನೀಡಿದ.

ನವಮಾಸ ತುಂಬಿ ಮೆಹರುನ್ನೀಸಳು ಒಂದು ಗಂಡುಮಗುವನ್ನೇ ಹಡೆದಳು. ಅಲ್ಲಿಗೆ ಅವಳು ಬದುಕಿದ್ದ ಉದ್ದಿಶ್ಯ ಈಡೇರಿದಂತೆ ಆಗಿತ್ತು. ಇನ್ನು ಬದುಕಿರುವುದು ಅವಳಿಗೆ ಇಷ್ಟವಿರಲಿಲ್ಲ. ಆ ಮಗುವನ್ನು ತನ್ನ ಸಹೋದರನ ಉಡಿಗೆಹಾಕಿ, ಅವನನ್ನು ಜೋಪಾನಪಡಿಸುವ ಭಾರ ಅವನದೆಂದು ಹೇಳಿ ಅವನು ಬೆಳೆದು ದೊಡ್ಡವನಾದಮೇಲೆ ತನಗಾಗಿರುವ ಅನ್ಯಾಯಕ್ಕೆ ರಾಮರಾಯನು ಪಶ್ಚಾತ್ತಾಪ ಪಡುವಂತೆ ಮಾಡಬೇಕೆಂದು ತನ್ನ ಅಂತಿಮ ಆಸೆಯನ್ನು ತಿಳಿಸಿ, ತೀರಿಕೊಂಡಿದ್ದಳು.

ದಿನಗಳ ಮೇಲೆ ದಿನಗಳು ಉರುಳಿದುವು. ರಾಮರಾಯನು ಮೆಹರುನ್ನೀಸಳಿಗಾಗಿ ಎಲ್ಲೆಲ್ಲೋ ಶೋಧಿಸಿದ. ಎಲ್ಲೂ ಅವಳ ಪತ್ತೆಯಾಗಲಿಲ್ಲ. ಅವಳು ತನಗಾದ ನಿರಾಶೆಯಿಂದ, ಭಗ್ನಮನೋರಥಳಾಗಿ ಆತ್ಮಹತ್ಯ ಮಾಡಿಕೊಂಡಿರಬಹುದೆಂದು ಊಹಿಸಿ, ಸಮಾಧಾನ ತಾಳಬೇಕಾಯಿತು. ಆದರೂ ಇದರಿಂದ ಮಾತ್ರ ಅವನ ಮನಸ್ಸಿಗೆ ಶಾಂತಿ ಸಮಾಧಾನಗಳು ದೊರೆಯದೆ ಹೋಗಿದ್ದುವು. ತಾನು ಮೆಹರುನ್ನೀಸಳಿಗೆ ಅನ್ಯಾಯಮಾಡಿದೆ. ಅವಳ ಕೋಮಲಬಾಳನ್ನು ತನ್ನ ಸ್ವಾರ್ಥಕ್ಕೆ ಬಲಿಕೊಟ್ಟೆನೆಂಬ ಒಂದು ಭಾವನೆ ಅವನನ್ನು ಕೊರೆಯುತ್ತಲೇ ಇತ್ತು. ದಿನಕಳೆದಂತೆ ಇದನ್ನು ಮರೆಯಲು ಅವನು ಸಮರ್ಥನಾದರೂ – ಮೆಹರುನ್ನೀಸಳ ನೆನಪನ್ನು ಪೂರ್ಣವಾಗಿ ಅಳಿಸಿಹಾಕಲು ಅವನು ಸಮರ್ಥನಾಗಲಿಲ್ಲ.

ಹೀಗಿರುವಲ್ಲಿ ಒಂದು ದಿನ ಉನಿಲ್‌ಮುಲ್ಕನು ರಾಮರಾಯನನ್ನು ಹುಡುಕಿ

ಕೊಂಡು ವಿಜಯನಗರಕ್ಕೆ ಬಂದಿದ್ದನು. ಅವನು ತನ್ನೊಡನೆ ಆರೇಳು ವರ್ಷದ ಹುಡುಗನೊಬ್ಬನನ್ನು ಕರೆತಂದಿದ್ದನು. ಅವನು ಅತ್ಯಂತ ತೇಜಸ್ವಿಯಾದ ಬಾಲಕನಾಗಿದ್ದನು. ಅವನನ್ನು ನೋಡುತ್ತಲೇ ರಾಮರಾಯನಿಗೆ ಆ ಮುಖವನ್ನು ಎಲ್ಲಿಯೋ ನೋಡಿದ ನೆನಪಾಯಿತು! ಮರುಕ್ಷಣದಲ್ಲಿ ಅದರಲ್ಲಿ ತನ್ನನ್ನು ಅಗಲಿದ ಪ್ರೇಯಸಿ ಮೆಹರುನ್ನೀಸಳ ಛಾಯೆ ಕಂಡು ಅವನಿಗೆ ಸಾವಿರ ಸಿಡಿಲು ಒಮ್ಮೆಲೇ ಬಡಿದಂತೆ ಆಯಿತು.

ಅವನು ಬೇರಾರೂ ಆಗಿರದೆ ರಾಮರಾಯನ ಮಗನೇ ಆಗಿದ್ದನು. ಮೆಹರುನ್ನೀಸಳು ಬಿಟ್ಟು ಹೋಗಿದ್ದ ಮಗುವನ್ನು ಉನಿಲ್‌ಮುಲ್ಕನು ಆರು ವರ್ಷಗಳ ಕಾಲ ಜೋಪಾನ ಮಾಡಿ, ಈಗ ತನ್ನ ಪತ್ನಿ ತೀರಿಕೊಳ್ಳಲು, ಆ ಮಗುವನ್ನೂ ತನ್ನಿತರ ಮಕ್ಕಳನ್ನೂ ನೋಡಿಕೊಳ್ಳಲು ಸಾಧ್ಯವಾಗದೆ, ಅವನನ್ನು ರಾಮರಾಯನಿಗೆ ಒಪ್ಪಿಸಲು ಕರೆತಂದಿದ್ದನು.

ಅವನಿಂದ ಮೆಹರುನ್ನೀಸಳ ಕರುಣಕಥೆ ಕೇಳಿ ರಾಮರಾಯನಿಗೆ ಬಹಳ ವ್ಯಥೆಯಾಯಿತು. ತನ್ನ ಕೃತ್ಯಕ್ಕಾಗಿ ಬಹಳ ಪಶ್ಚಾತ್ತಾಪ ಉಂಟಾಯಿತು. ಅವನು ಉನಿಲ್‌ಮುಲ್ಕನನ್ನು ಬಂಧುವಂತೆ ಅಪ್ಪಿಕೊಂಡು ತನ್ನ ಹೃದ್ಗತವನ್ನು ತೋಡಿಕೊಂಡನು. ಆ ಮಗುವನ್ನು ಮತ್ತೆ ತನಗೆ ದೊರಕಿಸಿದ ಅವನನ್ನು ಕೊಂಡಾಡಿದನು. ಅವನು ಬೇರೆಲ್ಲಿಗೂ ಹೋಗದಂತೆ ಸೈನ್ಯದಲ್ಲಿ ಅವನಿಗೆ ಒಂದು ಹಿರಿಯ ಹುದ್ದೆ ಕೊಟ್ಟನು. ಅವನನ್ನು ತನ್ನ ಆಪ್ತಮಿತ್ರನಂತೆ ನಡಸಿಕೊಂಡನು. ಇಷ್ಟೆಲ್ಲಾ ಆದರೂ ಆ ಹುಡುಗನು ಪ್ರಾಪ್ತವಯಸ್ಕನಾಗುವವರೆಗೆ ಅವನಿಗೆ ತಾನಾರೆಂದು ತಿಳಿಸುವುದು ಉಚಿತವಾಗಲಾರದೆಂದು ಈ ಸಂಗತಿಯನ್ನು ಗೋಪ್ಯವಾಗಿ ಇರಿಸಿದನು. ತನ್ನ ಅನುಮತಿ ಇಲ್ಲದೆ ಈ ಸಂಗತಿಯನ್ನು ಅವನಿಗೆ ತಿಳಿಸಲಾಗದೆಂದು ಉನಿಲ್‌ಮುಲ್ಕನಿಗೆ ಆಗ್ರಹಪಡಿಸಿ, ಅವನಿಂದ ವಚನವನ್ನು ಪಡೆದಿದ್ದನು. ಮುಂದೆ ಆ ಹುಡುಗನಿಂದ ಮಹತ್ಕಾರ್ಯ ಸಾಧಿಸಿಕೊಳ್ಳಬೇಕೆಂದಿದ್ದ ಉನಿಲ್‌ಮುಲ್ಕನಿಗೂ ಈ ಸಂಗತಿ ಗೋಪ್ಯವಾಗಿರಿಸುವುದು ಬೇಕಾಗಿತ್ತು.

ರಾಮರಾಯನ ಪೋಷಣೆಗೆ ಬಂದ ಮೇಲೆ ಮುಕದಂಖಾನನೆಂಬ ಹೆಸರು ಮುಕುಂದನಾಯಕನೆಂದು ಮಾರ್ಪಟ್ಟಿತ್ತು. ಅವನು ಬಾಲ್ಯದಲ್ಲಿ ತಂದೆ ತಾಯಿಗಳ ಪ್ರೀತಿಯನ್ನು ಅರಿಯದಿದ್ದುದರಿಂದ ರಾಮರಾಯನ ನಿಷ್ಕಲ್ಮಶ ಪ್ರೀತಿಯನ್ನು ನೋಡಿ ಅವನನ್ನೇ ತನ್ನ ತಂದೆ, ಬಂಧು, ಗೆಳೆಯ, ಒಡೆಯನಾಗಿ ತಿಳಿದನು. ಅವನು ಬೆಳೆದು ದೊಡ್ಡವನಾದಂತೆ ತಾನು ಮುಸಲ್ಮಾನನೆಂಬ ಸಂಗತಿಯನ್ನೂ, ತಂದೆ ತಾಯಿಗಳಿಲ್ಲದ ಅನಾಥನೆಂಬುದನ್ನೂ ಮರೆತಿದ್ದನು. ಈಗ ಅವನು ರಾಮ

ರಾಯನ ಪ್ರೀತಿಯ ಸೇವಕ, ಪರಮಾಪ್ತ ಮಿತ್ರನಾಗಿದ್ದನು. ಇಷ್ಟಾಗಿದ್ದರೂ ಅವನು ಯಾರು? ಅವನ ಜನ್ಮವೃತ್ತಾಂತವೇನೆಂದು ಅವನಿಗೆ ತಿಳಿಸುವ ಸಂದರ್ಭ ರಾಮರಾಯನಿಗೆ ಬಂದಿರಲಿಲ್ಲ. ಸೂಕ್ತ ಸಮಯ ಬಂಡಾಗ ಈ ಸಂಗತಿಯನ್ನು ತಿಳಿಸಬೇಕೆಂದು ಹೇಳಿಕೊಂಡು, ರಾಮರಾಯನು ಈ ಇಪ್ಪತ್ತೈದು ವರ್ಷಗಳನ್ನು ತಳ್ಳಿದ್ದನು. ಇಂದು ತನ್ನಿಂದ ಮಮ್ತಾಜಳಿಗೆ ಆಗಿದ್ದ ಅನ್ಯಾಯ ಅವನಿಗೆ ಮೆಹರುನ್ನೀಸಳಿಗಾಗಿದ್ದ ಅನ್ಯಾಯದ ನೆನಪು ಉಂಟು ಮಾಡಿತ್ತು. ಮೆಹರುನ್ನೀಸಳ ನೆನಪಾದಂತೆ ಮುಕುಂದನಾಯಕನ ನೆನಪೂ ಆಗಿತ್ತು. ಮುಕುಂದನಾಯಕನಿಗೆ ಅವನ ಜೀವನದ ರಹಸ್ಯವನ್ನು ಹೇಳಲು ಇದೀಗ ಸೂಕ್ತ ಸಂದರ್ಭವೆಂದು ಅನಿಸಿತು. ಅವನು ಮಮ್ತಾಜಳು ಹಾಗೂ ಮೆಹರುನ್ನೀಸರಿಗಾದ ಅನ್ಯಾಯವನ್ನು ಹೇಗೆ ತುಂಬಿಕೊಡಬೇಕೆಂದು ಆಲೋಚಿಸುತ್ತಿದ್ದಾಗ, ಒಂದು ಯೋಚನೆ ಹೊಳೆದಿತ್ತು! ಅದನ್ನು ಕೂಡಲೇ ಕಾರ್ಯಗತಗೊಳಿಸಲು ಅವನು ಆಶಿಸಿದನು. ಇದನ್ನು ನೆನೆದಾಗ ರಾಮರಾಯನಿಗೆ ಸಮಾಧಾನದ ನಿಟ್ಟುಸಿರೊಂದು ಹೊರಬಿತ್ತು.

## ೧೬

ಮುಕುಂದನಾಯಕನಿಗೂ ಅಂದಿನ ರಾಜಸಭೆಯಲ್ಲಿ ನಡೆದಿದ್ದ ಘಟನೆಯಿಂದ ಚಿತ್ತಶಾಂತಿ ಕದಡಿತ್ತು. ತುಂಬಿದ ಸಭೆಯಲ್ಲಿ ರಾಜಾಜ್ಞೆಯಂತೆ ಅವನು ಮುಸ್ಲಿಮ ಸ್ತ್ರೀಯೊಬ್ಬಳ ಮಾನಭಂಗಕ್ಕೆ ಹೊರಟಿದ್ದನು. ಅವನು ಮೇನೆಯನ್ನು ಶೋಧಿಸಲು ಇನ್ನೇನು ಅದರ ಮೇಲುದವನ್ನು ಹೊರತೆಗೆಯಬೇಕೆಂದಿರುವುದರಲ್ಲಿ ಮೇನೆಯಿಂದ ಮಮ್ತಾಜಳೇ ಮಿಂಚಿನಂತೆ ಹೊರಬಂದಿದ್ದಳು. ಅವಳು ತಾನೇ ತನ್ನ ಬುರುಕಿಯನ್ನು ಕಿತ್ತು ಬಿಸಾಡಿ

"ಎಲವೋ ಕಾಫರ ದೊರೆ! ನಿನಗೆ ಈಗ ತೃಪ್ತಿಯಾಯಿತೆ? ನೋಡು. ನನ್ನ ಮುಖವನ್ನು ಮನದಣಿಯ ನೋಡು!...." ಎಂದು ಹೇಳಿದ್ದಳು.

ಆಗ ಎಲ್ಲರಂತೆಯೇ ಮುಕುಂದನಾಯಕನೂ ಅವಳನ್ನು ಅವಾಕ್ಕಾಗಿ ನೋಡಿದನು. ಅವನ ಕಣ್ಣಿಗೆ ಮಮ್ತಾಜಳು ಅವಳ ಭೀಷಣ ರೂಪದಲ್ಲೂ, ರೌದ್ರಾವೇಶದಲ್ಲೂ ಅತ್ಯಂತ ಚೆಲುವಾಗಿ ಕಂಡಳು. ಅವನಿಗೆ ಆ ಒರಟು ಮೇನೆಯ ಒಳಗೆ, ಕಪ್ಪು ಬುರುಕಿಯ ಹಿಂದೆ ಇಂಥ ಸುರಸುಂದರಿ ಇರುವಳೆಂದು ತಿಳಿದಿರಲಿಲ್ಲ. ಮಮ್ತಾಜಳು ಕ್ರೋಧದಿಂದ ಕುದಿಯುತ್ತಾ, ಬೆಂಕಿಯನ್ನು ಉಗುಳುತ್ತಾ ಅಗ್ನಿಕನ್ಯೆಯಾಗಿ ನಿಂತಿದ್ದಳು. ಸಿಟ್ಟಿಗೆದ್ದ ಆ ಮುಖ, ಕೆಂಡ

ಕಾರುವ ಆ ಕಣ್ಣುಗಳು, ಗಂಟಿಕ್ಕಿದ ಆ ಹುಬ್ಬುಗಳು. ಕೋಪದಲ್ಲೂ ಅವಳು ಮೋಹಕವಾಗಿ ಕಂಡಳು.

ಮುಕುಂದನಾಯಕನು ಬೆರಗಾಗಿ ಅವಳನ್ನು ದಿಟ್ಟಿಸಿ ನೋಡಿದನು; ನೋಡಿ ಮಾರುಹೋದನು. ಅವನೆಂದೂ ಹೆಣ್ಣಿನ ಸೌಂದರ್ಯದ ಬಗ್ಗೆ ಇಷ್ಟು ಮಾರುಹೋದುದಿಲ್ಲ. ಹುಟ್ಟು ಯೋಧನಾಗಿದ್ದ ಮುಕುಂದನಾಯಕನಿಗೆ ಮಮ್ತಾಜಳು ಸಿಡಿಲಿನ ಮರಿಯಾಗಿ ಮಿಂಚಿನ ಬಳ್ಳಿಯಾಗಿ ತೋರಿದಳು; ಮರುಕ್ಷಣದಲ್ಲಿ ತಾರುಣ್ಯದ ಕಂಪಿನಿಂದ ಕಂಗೊಳಿಸುವ ಚೆಂಗುಲಾಬಿಯಂತೆ, ಯೌವನದ ದೀಪ್ತಿಯಿಂದ ಪ್ರಕಾಶಿಸುವ ಹೊನ್ನ ಪುತ್ಥಳಿಯಂತೆ, ಸುರಲೋಕದ ಸೌಂದರ್ಯ ನಿಧಿಯಂತೆ ಕಂಡಳು.

ಅವಳದು ಹೊಂಬಣ್ಣದ ಮೈ ಬಣ್ಣ. ತುಂಬಿದ ಕೆನ್ನೆ, ನಸುಬಾಗಿದ ಮೂಗು, ವಿಶಾಲವಾದ ಲಲಾಟ, ತೀಕ್ಷ್ಣವಾದ ಕಣ್ಣಿನ ಕುಡಿನೋಟ. ಅವಳ ನೀಳವಾದ ಕೇಶರಾಶಿ, ಬೈತಲೆಗೆ ಹಾಕಿದ ರತ್ನಖಚಿತವಾದ ಜಡೆಬಿಲ್ಲೆ ಮುಸ್ಲಿಂ ಸಂಪ್ರದಾಯಕ್ಕನುಸಾರವಾಗಿತ್ತು. ಅವಳ ಕತ್ತಿನಲ್ಲಿ ಒಂದೆರಡು ಸರಗಳು ಅವಳ ಉಬ್ಬಿದ ಎದೆಯ ಮೇಲೆ ಎದ್ದು ಕಾಣುತ್ತಿದ್ದುವು. ಉದ್ವೇಗದಿಂದ ಮೇಲುಸಿರು ಬಿಡುತ್ತಿದ್ದ ಅವಳ ಭಾವೋದ್ವಿಗ್ನತೆಯ ಮಾಪಕವೆಂಬಂತೆ ಅವಳ ಸ್ತನದ್ವಯಗಳು ಹಿಗ್ಗಿ ಸಂಕುಚಿತವಾಗುತ್ತಿದ್ದುವು. ಅವಳು ಉಟ್ಟಿದ್ದ ಲಂಗಕ್ಕೆ ಕಸೂತಿಯ ಕೆಲಸಮಾಡಿತ್ತು. ಅದಕ್ಕೆ ಬಣ್ಣದ ಮೇಲ್ವಾಸವನ್ನು ಜೋಡಿಸಲಾಗಿತ್ತು. ಹದಿನೆಂಟರ ತರುಣಿಯಾಗಿದ್ದರೂ, ಚೆನ್ನಾಗಿ ಬೆಳೆದಿದ್ದ ಅವಳು ಇಪ್ಪತ್ತೈದರ ರಮಣಿಯಂತೆ ಕಾಣುತ್ತಿದ್ದಳು. ಅವಳ ಅಂಗಾಂಗಗಳಲ್ಲಿ ಯೌವ್ವನದ ಸೌರಭವಿತ್ತು. ನೋಡಿದವರ ಮನಸೆಳೆಯುವ ಆಕರ್ಷಣೆ ಇತ್ತು. ಅವಳು ತನ್ನ ಕ್ರೋಧದಲ್ಲೂ ಭಾವೋದ್ವಿಗ್ನತೆಯಲ್ಲಿಯೂ ಮುಕುಂದನಾಯಕನಿಗೆ ರಮಣೀಯವಾಗಿ ಕಂಡಳು. ಸುಂದರ ಸ್ತ್ರೀ ಹೇಗಿದ್ದರೂ ಸುಂದರಳಾಗಿರುತ್ತಾಳೆ ಎಂಬ ಅಜ್ಞಾತ ಕವಿಯ ಮಾತು ಅವನಿಗೆ ನಿಜವೆಂದು ಅನಿಸಿತು. ಅವನು ಮೈಮರೆತು ಅವಳನ್ನೇ ನೋಡುತ್ತಾ ನಿಂತನು. ಅವನಿಗೆ ಎಚ್ಚರವಾದಾಗ ಅವಳು ಅಲ್ಲಿಂದ ಹೊರಟುಹೋಗಿದ್ದಳು. ರಾಮರಾಯನು ಅವಳನ್ನು ಬಂಧಿಸಿ ನಿರ್ಬಂಧದಲ್ಲಿ ಇಡಲು ಅವನಿಗೆ ಆಜ್ಞೆ ಮಾಡಿ ಒಡ್ಡೋಲಗದಿಂದ ತೆರಳಿದ್ದ. ಮುಕುಂದನಾಯಕನಿಗೆ ಮಮ್ತಾಜಳ ಸೌಂದರ್ಯವನ್ನು ಆಸ್ವಾದಿಸುತ್ತ ತಾನು ಎಚ್ಚರ ತಪ್ಪಿ ನಿಂತುದಕ್ಕೆ ಲಜ್ಜೆಯಾಯಿತು. ಅವನು ರಾಮರಾಯನ ಆಜ್ಞೆಯನ್ನು ಕಾರ್ಯಗತಗೊಳಿಸಲು ಅವಳನ್ನು ಹಿಂಬಾಲಿಸಿ ಹೊರಟ.

ತನ್ನ ಮಾನಭಂಗ ಮಾಡಲು ಮುಂದಾಗಿದ್ದ ಮುಕುಂದನಾಯಕನು ಈಗ

ತನ್ನನ್ನು ಹಿಂಬಾಲಿಸಿ ಬಂದಿರುವುದನ್ನು ನೋಡಿ ಮುಮ್ತಾಜಳು ಕೆರಳಿ ಅವನು ತನ್ನನ್ನು ಶೋಧಿಸಲು ಬರುತ್ತಿರುವನೆಂದೇ ಭಾವಿಸಿದಳು.

"ನಿಮಗೆ ನನ್ನ ಮಾತಿನಲ್ಲಿ ನಂಬಿಕೆ ಇಲ್ಲವೆ? ನನ್ನನ್ನು ಶೋಧಿಸಲು ಹಿಂದೆ ಬರುತ್ತಿದ್ದೀರಾ? ರಾಜಸಭೆಯಲ್ಲಿ ನನ್ನ ಮಾನಹರಣ ಮಾಡಿದುದಲ್ಲದೆ ಈಗ ನಡುಬೀದಿಯಲ್ಲಿ ಶೀಲ ಹರಣಮಾಡಲು ಬರುತ್ತಿದ್ದೀರಾ?" ಎಂದು ಅವಳು ಗರ್ಜಿಸಿದಳು.

"ಇಲ್ಲ ಮೇಮ್‌ಸಾಹೇಬ್, ನಾನು ಅದಕ್ಕಾಗಿ ಬರಲಿಲ್ಲ. ನೀವು ಅಪಮಾನದಿಂದ ಹತಾಶರಾಗಿ ನಿಮ್ಮ ಕೋಮಲ ಜೀವಕ್ಕೆ ಎಲ್ಲಿ ಗಂಡಾತರ ತಂದುಕೊಳ್ಳುವಿರೋ ಎಂದು ಸಾಮ್ರಾಟರು ನನ್ನನ್ನು ಕಳುಹಿಸಿದ್ದಾರೆ!"

"ಹೋಗಿ ಕಾಫರ ಸಾಮ್ರಾಟನಿಗೆ ತಿಳಿಸಿ! ನಾನು ಇಷ್ಟಕ್ಕೆಲ್ಲಾ ಆತ್ಮಹತ್ಯ ಮಾಡಿಕೊಳ್ಳುವ ಹೆಣ್ಣಲ್ಲ! ನನ್ನ ಶಪಥ ಮುಗಿಯುವ ತನಕ ನಾನು ಸಾಯುವುದಿಲ್ಲ. ನನ್ನ ಜೀವಕ್ಕೆ ಯಾವ ವಿಪತ್ತೂ ತಂದುಕೊಳ್ಳುವುದಿಲ್ಲ. ನಾನು ಸಾಯದೆ ಬದುಕಿರುತ್ತೇನೆ – ನಿಮ್ಮ ಸಾಮ್ರಾಟನ ಮೃತ್ಯು ದೇವತೆಯಾಗಿ! ನನ್ನ ಮಾನಭಂಗ ಮಾಡಲೆಳಸಿದ ಅವನು ಸಾಯದೆ ನಾನು ಸಾಯುವುದಿಲ್ಲ! ನನಗೆ ಏನಾದರೂ ಉಪಕಾರ ಮಾಡಬೇಕೆಂದು ನಿಮಗೆ ಅನಿಸಿದರೆ, ನೀವು ದಯವಿಟ್ಟು ನನ್ನ ಸುದ್ದಿಗೆ ಬರದೆ ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಿ!"

"ಕ್ಷಮಿಸಬೇಕು ಮೇಮ್‌ಸಾಹೇಬ್! ನಾವು ರಾಜಸೇವಕರು. ರಾಜಾಜ್ಞೆಯಂತೆ ನಡೆಯಬೇಕಾಗಿದೆ. ಪ್ರಭುಗಳು ತಮ್ಮನ್ನು ಚಿತ್ರಕೂಟ ಅರಮನೆಯಲ್ಲಿ ನಿರ್ಬಂಧದಲ್ಲಿ ಇರಿಸಲು ಆಜ್ಞೆ ಮಾಡಿದ್ದಾರೆ. ನಾವು ನಿಮ್ಮ ವ್ಯಕ್ತಿಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತಿದ್ದೇವೆ ನಿಜ. ಆದರೆ ನಿಮಗೆ ನಮ್ಮಿಂದ ಯಾವ ತೊಂದರೆಯೂ ಆಗುವುದಿಲ್ಲವೆಂದು ಭರವಸೆ ಕೊಡಬಲ್ಲೆ!" ಎಂದು ಹೇಳಿ ತನ್ನ ಹಿಂದೆ ತಂದಿದ್ದ ಮೇನೆಯನ್ನು ಕೆಳಗಿರಿಸಿ, ಅದರಲ್ಲಿ ಕುಳಿತುಕೊಳ್ಳಲು ಪ್ರಾರ್ಥಿಸಿದ.

"ಈ ಮೇನೆಯಲ್ಲಿ ನಾನು ಕಾಲಿರಿಸಲಾರೆ! ಅದು ನಿಮ್ಮ ಕಾಫರ ದೊರೆಯ ಶವದಾನಿ – ಅವನ ಗೋರಿ! ನನಗೆ ನಿಮ್ಮ ಯಾವ ಸಹಾಯವೂ ಬೇಡ. ನನ್ನನ್ನು ನೀವು ನಿರ್ಬಂಧಿಸಲು ಸಾಧ್ಯವಿಲ್ಲ!"

"ನಾನು ನಿಮ್ಮಂತೆಯೇ ಅಸ್ವತಂತ್ರ! ನಿಮ್ಮ ಬಗ್ಗೆ ನನಗೆ ಸಹಾನುಭೂತಿ ಇದೆ. ಆದರೆ ನಾವು ಪ್ರಭುವಾಜ್ಞೆಯನ್ನು ಪಾಲಿಸಲೇಬೇಕಾಗಿದೆ. ನಿಮ್ಮನ್ನು ನಾವು ಬಂಧಿಸುತ್ತಿಲ್ಲ, ನಿರ್ಬಂಧದಲ್ಲಿ ಇಡುತ್ತಿದ್ದೇವೆ. ಚಿತ್ರಕೂಟ ಅರಮನೆಯಲ್ಲಿ ನಿಮಗೆ ಎಲ್ಲ ಸೌಲಭ್ಯಗಳನ್ನು ಒದಗಿಸುತ್ತೇವೆ. ನನ್ನ ಮಾತನ್ನು

ನಂಬಿರಿ! ನಿಮ್ಮ ಅಲ್ಲಾನ ಆಣೆಗೂ ನಮ್ಮಿಂದ ನಿಮಗೆ ಯಾವ ತೊಂದರೆ ಯಾಗುವುದಿಲ್ಲ!" ಎಂದು ಮುಕುಂದನಾಯಕನು ಹೇಳಿದನು.

ಪ್ರಭುವಾಜ್ಞೆಯನ್ನು ಕಾರ್ಯಗತಗೊಳಿಸಲು ಹಿಂದುಮುಂದು ನೋಡದ ಮುಕುಂದನಾಯಕನ ಮುಂದೆ ತನ್ನ ಆಗ್ರಹ, ವಿರೋಧಗಳು ನಡೆಯವೆಂದು ಆವಳಿಗೆ ಗೊತ್ತಿತ್ತು. ಅವನು ತನ್ನನ್ನು ಬಲಾತ್ಕಾರದಿಂದ ಒಯ್ಯುವ ಬದಲು ತಾನೇ ಸ್ವಯಿಚ್ಛೆಯಿಂದ ಹೋಗುವುದು ಅವಳಿಗೆ ಲೇಸೆನಿಸಿತು! ಅಂತಲೇ ಅವಳು ಮರುಮಾತಾಡದೆ ಮೇನೆಯನ್ನು ಹತ್ತಿ ಮುಕುಂದನಾಯಕನ ಹಿಂದೆ ಹೊರ ಟಳು.

ಅವರು ಇನ್ನೇನು ಕೆಲವು ಮಾರು ಹೋಗುವುದರೊಳಗೆ ಅವರನ್ನು ಅರಸಿ ಉನಿಲ್‌ಮುಲ್ಕನು ಬಂದಿದ್ದನು. ಮವಾಜಳನ್ನು ಮುಕುಂದನಾಯಕನು ಹುಡುಕಿಕೊಂಡು ಹೊರಟ ಸುದ್ದಿ ಕೇಳಿ ಮತ್ತೇನು ಅನಾಹುತ ನಡೆಯು ವುದೋ ಎಂದು ಆ ಮುದುಕನು ರಾಜಸಭೆಯಿಂದ ಓಡಿಬಂದಿದ್ದನು. ಆದರೆ ನಡುದಾರಿಯಲ್ಲೇ ಅವರ ಭೇಟಿಯಾಗಿದ್ದುದರಿಂದ ಅವನಿಗೆ ಎಷ್ಟೋ ಸಮಾ ಧಾನವಾಯಿತು.

"ಮುಕುಂದನಾಯಕ, ಈ ನಿರ್ಭಾಗ್ಯ ಹೆಣ್ಣನ್ನು ನೀನೇಕೆ ಗೋಳು ಹೊಯ್ದುಕೊಳ್ಳುತ್ತಿರುವೆ? ಇದು ನಿನಗೆ ಆನಂದವೆ? ಇವಳನ್ನು ನೀನು ಎಲ್ಲಿಗೆ ಒಯ್ಯುತ್ತಿದ್ದಿ?" ಎಂದು ಕೇಳಿದ.

"ದಾದಾಜಿ, ಈಕೆಯು ತನಗಾದ ಅಪಮಾನದಿಂದ ಬೇಸತ್ತು ಎಲ್ಲಿ ತನ್ನ ಸುಕುಮಾರ ಜೀವಕ್ಕೆ ಗಂಡಾಂತರ ತಂದುಕೊಳ್ಳುವಳೋ ಎಂದು ಹೆದರಿ, ಈಕೆಯ ಭಾವೋದ್ವಿಗ್ನತೆ ಕಳೆಯುವ ವರೆಗೆ ಚಿತ್ರಕೂಟ ಅರಮನೆಯಲ್ಲಿ ನಿರ್ಬಂಧ ದಲ್ಲಿ ಇಡಲು ಪ್ರಭುಗಳು ಆಜ್ಞೆಮಾಡಿದ್ದಾರೆ. ಈಗ ಅಲ್ಲಿಗೆ ಕರೆದೊಯ್ಯು ತ್ತಿದ್ದೇನೆ!" ಎಂದು ಹೇಳಿದ.

"ಹಾಗಾದರೆ ಈ ಹತಭಾಗಿನಿಯ ಗ್ರಹಚಾರವಿನ್ನೂ ಬಗೆಹರಿದಿಲ್ಲ!" ಎಂದು ನಿಟ್ಟುಸಿರುಬಿಟ್ಟನು ಉನಿಲ್‌ಮುಲ್ಕ್.

ಇಬ್ಬರೂ ಮೇನೆಯನ್ನು ಅನುಸರಿಸಿ ಹೊರಟರು. ಬಹು ಹೊತ್ತು ಇವರಲ್ಲಿ ಯಾವ ಮಾತೂ ನಡೆಯಲಿಲ್ಲ. ಇದ್ದಕ್ಕಿದ್ದಂತೆ ಉನಿಲ್‌ಮುಲ್ಕನು

"ಇಂದಿನ ರಾಜಸಭೆಯಲ್ಲಿ ಪ್ರಭುಗಳ ನಡತೆಯನ್ನು ನಾನು ಒಪ್ಪಲಿಲ್ಲ ಬೇಟಾ! ಅವರು ದಯೆ, ದಾಕ್ಷಿಣ್ಯಗಳನ್ನು ಮರೆತು ಬಹಳ ಕೀಳಾಗಿ ನಡೆದು ಕೊಂಡರು. ಈ ಅಭಾಗಿನಿ ಅವರಿಗೆ ಯಾವ ತಪ್ಪು ಮಾಡಿದಳು? ಇವಳು ಮುಸಲ್ಮಾನ ಸ್ತ್ರೀಯಾದುದು ಇವಳ ತಪ್ಪೇ! ಘೋಷಾಪದ್ಧತಿಯನ್ನು ಪುರಸ್ಕ

ರಿಸಿದುದು ಇವಳ ಅಪರಾಧವೇ? ಏಕೋ ಪ್ರಭುಗಳ ಇಂದಿನ ವರ್ತನೆಯನ್ನು ನೆನೆದರೆ ನನಗೆ ತಲೆ ತಗ್ಗಿಸುವಂತೆ ಆಗುತ್ತದೆ. ಯಾರಿಗೂ ಇಂತಹ ಅಪಮಾನ ವಾಗಬಾರದು: ತುಂಬಿದ ಸಭೆಯಲ್ಲಿ ಸ್ತ್ರೀಯ ಮಾನಭಂಗ ಲಜ್ಜಾ· ಭಂಗ ಮಾಡುವುದೆಂದರೆ ಸಾಮ್ರಾಜ್ಯಕ್ಕೆ ಯಾವುದೋ ವಿಪತ್ತು ಕಾದಿದೆ. ಇಲ್ಲದಿದ್ದರೆ ಎಲ್ಲವನ್ನು ತಿಳಿದಿದ್ದ ಪ್ರಭುಗಳು ಈ ರೀತಿ ದುಡುಕುತ್ತಿದ್ದರೇ! ಇದನ್ನು ನೆನೆದರೆ ನನಗೆ ಯಾಕೋ ಭಯವಾಗುತ್ತದೆ. ಪ್ರಭುಗಳೇನೋ ವಿವೇಕಶೂನ್ಯ ರಾಗಿ ದುಡುಕಿದರು. ನೀನಾದರೂ ಇದನ್ನು ತಪ್ಪಿಸಬಹುದಿತ್ತು. ಈ ನಿರ್ಭಾಗ್ಯ ಸ್ತ್ರೀಯ ಮಾನಾಪಹಾರವನ್ನು ತಡೆಯಬಹುದಿತ್ತು....ನೀನೂ ಇಂತಹ ಹೇಯ ಕೃತ್ಯಕ್ಕೆಳೆಸುವೆ ಎಂದು ನಾನು ತಿಳಿದಿರಲಿಲ್ಲ. ನಿನ್ನಿಂದ ಎಂತಹ ಅಕ್ಷಮ್ಯ ಅಪರಾಧವಾಗಿದೆ ಬಲ್ಲೆಯಾ ?"

"ನನಗೂ ಈ ಕೃತ್ಯ ಪ್ರಿಯವಾಗಲಿಲ್ಲ ದಾದಾಜಿ. ಆದರೆ ನಾನೇನು ತಾನೇ ಮಾಡಬಲ್ಲೆ ? ನಾನು ಪ್ರಭುಗಳ ಆಜ್ಞಾಧಾರಕ ! ನಮಗೆ ಬೇಕಿರಲಿ ಬಿಡಲಿ, ಪ್ರಭುವಾಜ್ಞೆಯನ್ನು ನಾವು ಈಡೇರಿಸಲೇ ಬೇಕು !"

"ಇಂಥಹ ಪರಿಸ್ಥಿತಿಯಲ್ಲಿ ನಾನಿದ್ದಿದ್ದರೆ ನನ್ನ ಪ್ರಾಣ ಹೋದರೂ ಇಂತಹ ಹೇಯ ಕಾರ್ಯಕ್ಕೆ ಹಾಕುತ್ತಿರಲಿಲ್ಲ. ಪ್ರಭು ಮಾತ್ರವಲ್ಲ. – ಅಲ್ಲಾನು ಬಂದು ಹೇಳಿದ್ದರೂ ನಾನು ಇದಕ್ಕೆ ಒಡಂಬಡುತ್ತಿರಲಿಲ್ಲ !"

"ನಾವು ಪ್ರಭುಗಳ ಉಪ್ಪು ತಿಂದು ಅವರಿಗೆ ದ್ರೋಹ ಬಗೆಯುವುದೆ ?"

"ಪ್ರಭುಗಳು ನಿನಗೆ ಮಾಡಿರುವ ದ್ರೋಹಕ್ಕಿಂತಲೂ ಹೆಚ್ಚಿನ ದ್ರೋಹವೇ ಇದು ? ತುಂಬಿದ ಸಭೆಯಲ್ಲಿ ಈ ಹತಭಾಗಿನಿಯ ಮಾನಭಂಗಕ್ಕೆ ಎಲ್ಲರನ್ನೂ ಬಿಟ್ಟು ನಿನ್ನನ್ನೇಕೆ ಆರಿಸಿದರು ? ನಿನಗೆ ದ್ರೋಹ ಬಗೆಯಲೆಂದಲ್ಲವೆ ?"

"ನಿಮ್ಮ ಮಾತು ನನಗೆ ಅರ್ಥವಾಗುವುದಿಲ್ಲ ದಾದಾಜಿ. ಪ್ರಭುಗಳು ನನಗೆ ಏನು ಅನ್ಯಾಯ ಮಾಡಿದ್ದಾರೆ ? ಯಾವ ದ್ರೋಹ ಬಗೆದಿದ್ದಾರೆ ? ಅವರು ದೇವತಾಪುರುಷರು. ಅವರು ನನ್ನಲ್ಲಿಟ್ಟಿರುವ ಪ್ರೀತಿ ವಿಶ್ವಾಸಗಳಿಗೆ, ಆದರ ಅಭಿಮಾನಗಳಿಗೆ ನಾನು ಎಷ್ಟು ಜನ್ಮಗಳನ್ನು ಎತ್ತಿದರೆ ತಾನೇ ತೀರಿಸಬಲ್ಲೆ ? ನಾನು ದಿಕ್ಕಿಲ್ಲದ ಪರದೇಶಿಯಂತೆ ಅವರ ಬಳಿಗೆ ಬಂದೆ. ಅವರು ನನ್ನನ್ನು ಈ ಸ್ಥಿತಿಗೆ ಏರಿಸಿದರು. ಅವರು ಮಾಡಿರುವ ಅನುಗ್ರಹ, ಉಪಕಾರ ಅಲ್ಲವೆ ? ಇದನ್ನು ನಾನು ಹೇಗೆ ತಾನೇ ತೀರಿಸಬಲ್ಲೆ !"

"ನೀನು ಹುಚ್ಚನಂತೆ ಮಾತನಾಡಬೇಡ! ಅವರು ನಿನಗೆ ಮಾಡಿರುವ ಉಪಕಾರ, ಅಪಕಾರ ಎಷ್ಟೆಂಬುದನ್ನು ನಾನು ಬಲ್ಲೆ ! ಅವರು ಸವಿಮಾತಿನಲ್ಲಿ ನಿನ್ನನ್ನು ವಂಚಿಸಿದ್ದಾರೆ, ನಿನ್ನನ್ನು ತಮ್ಮ ವಿದ್ರೋಹದ ಸಾಧನ ಮಾಡಿಕೊಂಡಿ

ದ್ದಾರೆ. ಇಲ್ಲದಿದ್ದರೆ ತಿಳಿದೂ ತಿಳಿದೂ ನಿನ್ನನ್ನು ಈ ಹತಭಾಗಿನಿಯ ಮಾನಾಪಹಾರಕ್ಕೆ ಕಳುಹಿಸುತ್ತಿರಲಿಲ್ಲ!"

"ದಾದಾಜಿ! ನೀವು ಇಂದೇಕೋ ವಿಚಿತ್ರವಾಗಿ ಮಾತನಾಡುತ್ತಿದ್ದೀರಿ! ಪ್ರಭುಗಳು ನನಗೆ ಮಾಡಿರುವ ದ್ರೋಹವೇನೆಂದು ಸ್ಪಷ್ಟವಾಗಿ ಹೇಳಬಾರದೆ?"

"ಬೇಡ ಮುಂಕುಂದನಾಯಕ, ಇದನ್ನು ನಾನು ಯಾವ ಬಾಯಲ್ಲಿ ಹೇಳಲಿ? ನೀನು ಪ್ರಭುಗಳಿಗೆ ಅಭಿಮಾನದ ಪುತ್ರನಾಗಿರುವಂತೆ ನನ್ನ ಅಭಿಮಾನದ ಬೇಟಿ ಆಗಿದ್ದಿ. ಆದರೆ ಪ್ರಭುಗಳು ಇಂದು ನಿನ್ನನ್ನು ನಡಸಿಕೊಂಡ ರೀತಿಯನ್ನು ನೆನೆದರೆ ನನ್ನ ರಕ್ತ ಹೆಪ್ಪುಗಟ್ಟುತ್ತದೆ. ಇದಕ್ಕಾಗಿ ಅವರು ನಿನ್ನನ್ನು ದೊಡ್ಡವನಾಗಿ ಮಾಡಿ ಬಳಿಯಲ್ಲಿ ಇಟ್ಟುಕೊಂಡರೆ? ಎನಿಸುತ್ತದೆ. ಅಲ್ಲಾ ಪರವರದಗಾರ! ಇದನ್ನೆಲ್ಲಾ ನೋಡಲೆಂದು ನನ್ನನ್ನು ಪ್ರಭುಗಳ ಸೇವೆಯಲ್ಲಿ ಇರಿಸಿದೆಯಾ! ಇದನ್ನೆಲ್ಲಾ ನೋಡುವ ಬದಲು ನನ್ನ ಕಣ್ಣುಗಳೇಕೆ ಇಂಗಿ ಹೋಗಬಾರದಾಗಿತ್ತು!" ಎಂದು ವ್ಯಥೆಯಿಂದ ಹೇಳಿದನು ಉನಿಲ್‌ಮುಲ್ಕ್.

"ದಾದಾಜಿ, ಇಂದೇಕೋ ನೀವು ವಿಚಿತ್ರವಾಗಿ ಮಾತನಾಡುತ್ತಿದ್ದೀರಿ. ಅದೇನೆಂದು ಸ್ಪಷ್ಟವಾಗಿ ಹೇಳಬಾರದೆ?"

"ಮುಂದೆ ಇದು ತಾನಾಗಿ ನಿನಗೆ ತಿಳಿಯುತ್ತದೆ. ಈಗ ಆ ಮಾತು ಬೇಡ. ಈ ನೀಚಕೃತ್ಯಕ್ಕೆ ಪ್ರಭುಗಳು ನಿನ್ನನ್ನು ನಿಯೋಜಿಸಬಾರದಾಗಿತ್ತು ಎಂದು ಮಾತ್ರ ಈಗ ಹೇಳುತ್ತೇನೆ!" ಎಂದು ಹೇಳಿ ನಿಟ್ಟುಸಿರುಬಿಟ್ಟ.

"ಇಲ್ಲ ದಾದಾಜಿ! ಅದೇನು ಸಂಗತಿ ನೀವು ಈಗಲೇ ಹೇಳಬೇಕು! ನೀವು ಹೇಳುವ ರೀತಿಯನ್ನು ಕೇಳಿ ನನ್ನ ಎದೆಯಲ್ಲಿ ಒಂದು ತಳಮಳವೆದ್ದಿದೆ. ನನ್ನಿಂದ ಎಂತಹ ಭಯಂಕರ ಅಪರಾಧ ಸಂಭವಿಸಿದೆಯೋ ಎಂಬ ಸಂಶಯವಾಗುತ್ತಿದೆ. ಆದರೆ ಒಂದು ಮಾತನ್ನು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಇಂದಿನ ಘಟನೆಯಿಂದ ನಿಮ್ಮೆಲ್ಲರಿಗೆ ಉಂಟಾಗಿರುವಷ್ಟೇ ಅದಕ್ಕೂ ಹೆಚ್ಚಿನ ದುಃಖ ನನಗೆ ಉಂಟಾಗಿದೆ. ನನಗೂ ತುಂಬಿದ ಸಭೆಯಲ್ಲಿ ಈ ಹೆಣ್ಣುಮಗಳ ಮಾನಭಂಗ ನಡೆಯುವುದು ಬೇಡವಾಗಿತ್ತು. ಆದರೆ ಪ್ರಭುಗಳು ನಿಮ್ಮೆಲ್ಲರ ಸಲಹೆಗಳನ್ನು ತಿರಸ್ಕರಿಸಿದವರು ನನ್ನ ಮಾತು ಕೇಳುವರೆ? ಮೇಲಾಗಿ ನಾನು ಅವರ ಸೇವಕ! ಅವರ ಆಜ್ಞಾಧಾರಕ! ಅವರು ಕಾಲಿನಿಂದ ತೋರಿಸಿದುದನ್ನ ನಾವು ಶಿರದಲ್ಲಿ ಹೊತ್ತು ಮಾಡಬೇಕಾದುದು ನಮ್ಮ ಕರ್ತವ್ಯ. ನಾನು ಸ್ವಾಮಿನಿಷ್ಠ ಸೇವಕನಾದುದರಿಂದ ಪುಣ್ಯಗಳನ್ನು, ಮಾನಾಪಮಾನಗಳನ್ನು ನೆನೆಯದೆ ಈ ಕೃತ್ಯಕ್ಕೆ ಕೈ ಹಾಕಿದೆ. ಸಾಮ್ರಾಟರು ಒಡ್ಡಿದ ಕರ್ತವ್ಯದ ಈ ಅಗ್ನಿಪರೀಕ್ಷೆಯಲ್ಲಿ ನಾನು ಸೋಲಲಿಲ್ಲವಲ್ಲ ಎಂದಷ್ಟೇ ನನಗೆ ಸಮಾಧಾನ!"

"ನೀನು ಎಂತಹ ಸ್ವಾಮಿನಿಷ್ಠ ಸೇವಕನೆಂದು ನಾನು ಬಲ್ಲೆ ಬೇಟಾ! ಅಂತಲೇ ನನಗೆ ಇಷ್ಟು ದುಃಖವಾಗುತ್ತಿರುವುದು! ನಿನ್ನಂಥ ಸ್ವಾಮಿನಿಷ್ಠ ಸೇವಕ ನನ್ನು ಪ್ರಭುಗಳು ಎಂತಹ ಹೀನ ಕಾರ್ಯಕ್ಕೆ ದುರುಪಯೋಗಪಡಿಸಿಕೊಂಡರಲ್ಲ ಎಂದೇ ನನಗೆ ವ್ಯಥೆ! ನಿನ್ನ ವಿಷಯದಲ್ಲಿ ನಾನು ಸಾವಿರ ಕನಸು ಕಟ್ಟಿದ್ದೆ. ಇಂದಿನ ನಿನ್ನ ವರ್ತನೆಯಿಂದ ಅವುಗಳೆಲ್ಲಾ ಬುಡಮೇಲಾದುವು ಬೇಟಾ! ಎಲ್ಲವೂ ಬುಡಮೇಲಾದುವು!" ಎಂದು ಹೇಳಿಕೊಂಡು ಅವನು ಕಣ್ಣೀರು ಸುರಿಸಿದ! ಇದನ್ನು ಕಂಡು ಮುಕುಂದನಾಯಕನಿಗೆ ವಿಸ್ಮಯವಾಯಿತು. ಉನಿಲ್ ಮುಲ್ಕನ ಇಂದಿನ ವರ್ತನೆಯಿಂದ ಅವನನ್ನು ಬೆರಗುಗೊಳಿಸಿತು. ರಾಜಾಸ್ಥಾನದಲ್ಲಿ ನಡೆದ ಈ ಘಟನೆ ಇವನ ಮೇಲೆ ಇಷ್ಟು ಪರಿಣಾಮ ಮಾಡೀತೆಂದು ಅವನು ತಿಳಿದಿರಲಿಲ್ಲ. ಅವನಿಗೆ ಈಗ ಏನು ಮಾತನಾಡಬೇಕೆಂದು ತಿಳಿಯದೆ ದಂಗುಬಡಿದು ನಿಂತ.

"ದಾದಾಜಿ, ನೀವು ಕಣ್ಣೀರು ಹಾಕುತ್ತಿದ್ದೀರಿ! ನನಗಾಗಿ ನೀವು ಕಣ್ಣೀರು ಹಾಕಬಾರದು! ನನ್ನದೇನಾದರೂ ತಪ್ಪಾಗಿದ್ದರೆ ಕ್ಷಮಿಸಿ!"

"ನಾನು ನಿನಗಾಗಿ ಕಣ್ಣೀರಿಡುತ್ತಿಲ್ಲ ಬೇಟಾ! ನನಗಾಗಿ ಕಣ್ಣೀರಿಡುತ್ತಿದ್ದೇನೆ! ಈ ಹತಭಾಗಿನಿಗಾಗಿ ಕಣ್ಣೀರಿಡುತ್ತಿದ್ದೇನೆ! ಮುಸಲ್ಮಾನ ಧರ್ಮಕ್ಕಾಗಿ ಕಣ್ಣೀರಿಡುತ್ತಿದ್ದೇನೆ! ಈ ಧರ್ಮಸಾಮ್ರಾಜ್ಯದಲ್ಲಿ ಮುಸಲ್ಮಾನರಿಗೆ ಎಂತಹ ವಿಪತ್ತು ಬಂತು! ನನಗೆ ಇದನ್ನೆಲ್ಲಾ ನೋಡಿದರೆ ಏಕೋ ಭಯವಾಗುತ್ತಿದೆ!"

"ನಿಮ್ಮ ಮಾತು ಕೇಳಿ ನನಗೂ ಭಯವಾಗುತ್ತದೆ–ಸಾಮ್ರಾಜ್ಯಕ್ಕೆ ಯಾವ ವಿಪತ್ತು ಕಾದಿದೆಯೋ ಎಂದು! ಪಂಪಾಪತಿಯ ದಯದಿಂದ ಪ್ರಭುಗಳ ಇಂದಿನ ಅನುಚಿತ ವರ್ತನೆಯಿಂದ ಯಾವ ವಿಪತ್ತೂ ಬರದಿರಲಿ!"

"ಪ್ರಭುಗಳ ಇಂದಿನ ವರ್ತನೆಯನ್ನು ಅಲ್ಲಾ ಮೆಚ್ಚುವುದಿಲ್ಲ. ಅವರು ಮಾಡಿರುವ ಭಯಂಕರ ಅಪರಾಧಕ್ಕೆ ಇಂದಲ್ಲ ನಾಳೆ ಶಿಕ್ಷೆಯಾಗುತ್ತದೆ. ಮುಸ್ಲಿಮ ಸ್ತ್ರೀಯೊಬ್ಬಳನ್ನು ಮಾನಭಂಗ ಮಾಡಲು ಮುಸ್ಲಿಮನನ್ನೇ ಅಟ್ಟಿದ ಪ್ರಭುಗಳ ನೀಚತನವನ್ನು ಅಲ್ಲಾನು ಕ್ಷಮಿಸುವುದಿಲ್ಲ! ಎಂದಿಗೂ ಕ್ಷಮಿಸುವುದಿಲ್ಲ!"

"ದಾದಾಜಿ! ಇದೇನು ನೀವು ಹೇಳುತ್ತಿದ್ದೀರಿ? ನಾನು ಮುಸ್ಲಿಮನೆ!" ಗಾಬರಿಯಿಂದ ಕೇಳಿದ ಮುಕುಂದನಾಯಕ.

"ಹೌದು ಬೇಟಾ! ನೀನು ಮುಸ್ಲಿಮನೇ ಇದ್ದಿ! ನಿನ್ನ ನಿಜವಾದ ಹೆಸರು – ತಾಯಿ ಇಟ್ಟ ಹೆಸರು ಮುಕುಂದನಾಯಕನಲ್ಲ! ಮಕದಂಖಾನ! ನೀನು ಮಹಮದೀಯನಾಗಿ ಹುಟ್ಟಿ, ಹಿಂದುವಾಗಿ ಬೆಳೆದಿದ್ದಿ! ಸಾಮ್ರಾಟರು

ನಿನ್ನನ್ನು ಅನಾಥನೆಂದು ಸ್ವೀಕರಿಸಿ ಹಿಂದೂವಾಗಿ ಮಾಡಿದ್ದಾರೆ! ಆದರೆ ಜನ್ಮತಃ ನೀನು ಮುಸಲ್ಮಾನನೇ ಇದ್ದಿ! ಕೇವಲ ಹೆಸರಿನಲ್ಲಿ ನೀನು ಹಿಂದುವಾಗಿದ್ದರೂ ಕುಲದಿಂದ ಅಲ್ಲ! ಜನ್ಮದಿಂದಲ್ಲ! ಹುಟ್ಟು ಮುಸ್ಲಿಮನಾದ ನಿನ್ನನ್ನು ತಿಳಿದೂ ತಿಳಿದೂ ಪ್ರಭುಗಳು ನಿರ್ಭಾಗ್ಯ ಮುಸ್ಲಿಮಭಗಿನಿಯೋರ್ವಳ ಮಾನಭಂಗಕ್ಕೆ ಕಳುಹಿಸಿದುದನ್ನು ನೋಡಿದರೆ ನಿನ್ನ ವಿಷಯದಲ್ಲಿ ಪ್ರಭುಗಳು ಇಟ್ಟುಕೊಂಡಿರುವ ಪ್ರೀತಿ ವಿಶ್ವಾಸಗಳು ಎಷ್ಟೆಂಬುದು ತಿಳಿಯುವುದಿಲ್ಲವೆ? ಇದು ಉಪಕಾರವೋ ದ್ರೋಹವೋ ನೀನೇ ಹೇಳು?"

ಈ ಮಾತು ಕೇಳಿ ಮುಕುಂದನಾಯಕನಿಗೆ ಸಹಸ್ರ ಚೇಳುಗಳು ಒಮ್ಮೆಲೇ ಕಡಿದಷ್ಟು ಯಾತನೆಯಾಯಿತು. ಅವನಿಗೆ ಆಕಾಶವೇ ಬಂದು ತಲೆಗೆ ಬಡಿದಂತೆ, ಭೂಮಿ ಬಾಯಿ ತೆರೆದು ನುಂಗುವಂತೆ ಭಾಸವಾಯಿತು. ಅವನ ಕಣ್ಣಿಗೆ ಕತ್ತಲೆ ಕವಿಯಿತು. ತಲೆ ಸುತ್ತಿಕೊಂಡು ಬಂದಿತು. ಅವನು "ದಾದಾಜಿ!" ಎಂದು ಚೀರಿದ. ತಾನು ಹಿಂದುವೇ ಮುಸಲ್ಮಾನನೇ ಅವನಿಗೆ ಆ ಕ್ಷಣಕ್ಕೆ ಯಾವುದೂ ತಿಳಿಯಲಿಲ್ಲ. ಬುದ್ಧಿ ಮಂಕಾಯಿತು. ಚಿತ್ತ ಕ್ಷೋಭೆಗೊಂಡು ಕೇಳಿದ,

"ನನ್ನ ನಿಜವಾದ ತಾಯಿ ತಂದೆಗಳು ಯಾರು? ನಾನು ಹೇಗೆ ಸಾಮ್ರಾಟರ ಪೋಷಣೆಗೆ ಬಂದೆ?"

"ಇದೆಲ್ಲಾ ದೊಡ್ಡ ಕಥೆ ಬೇಟಾ! ನಿಧಾನವಾಗಿ ಹೇಳಬೇಕಾದ ದೊಡ್ಡ ಕಥೆ ಇದು!" ಎಂದು ಹೇಳಿ ಅವನು ಸುಮ್ಮನಾದ.

ಈ ವೇಳೆಗೆ ಚಿತ್ರಕೂಟಕ್ಕೆ ಅವರು ಸಮೀಪಿಸಿದ್ದರು. ಅಲ್ಲಿ ಮೇನೆಯನ್ನು ಇಳಿಸಿ, ಒಳಗಿದ್ದ ಮಮ್ತಾಜಳನ್ನು ಅಲ್ಲಿನ ಅಂತಃಪುರದಲ್ಲಿ ಇರಿಸಿ, ಅವಳ ರಕ್ಷಣೆಯ ವ್ಯವಸ್ಥೆಯನ್ನು ಯಾಂತ್ರಿಕವಾಗಿ ಮಾಡಿ, ತನ್ನ ಜನ್ಮವೃತ್ತಾಂತವನ್ನು ತಿಳಿಯಲು ಉನಿಲ್‌ಮುಲ್ಕನ ಬಳಿಗೆ ಓಡಿ ಬಂದ ಮುಕುಂದನಾಯಕ.

ಬಹಳ ಹೊತ್ತು ಇಬ್ಬರೂ ಮಾತನಾಡದೆ ಮೌನವಾಗಿ ಕುಳಿತರು. ಉನಿಲ್‌ಮುಲ್ಕನ ಬಾಯಿಂದ ಏನು ಬರುವುದೋ ಎಂದು ಮೈಯೆಲ್ಲಾ ಕಿವಿಯಾಗಿಸಿಕೊಂಡು ಆತುರದಲ್ಲಿ ಕುಳಿತಿದ್ದ ಮುಕುಂದನಾಯಕ! ಇದನ್ನು ಅರಿತ ಉನಿಲ್‌ಮುಲ್ಕನು ಮೆಲ್ಲನೆ ಹೇಳಿದ.

"ಬೇಟಾ, ಅದೊಂದು ದೊಡ್ಡ ಕಥೆ ಎಂದು ಹೇಳಿದೆನಲ್ಲವೆ?....ಹೌದು ಅದೊಂದು ದೊಡ್ಡ ಕಥೆ! ಇದರ ಎಲ್ಲ ವಿವರಗಳನ್ನು – ಸದ್ಯಕ್ಕೆ ವಚನವೊಂದನ್ನು ಪಾಲಿಸಬೇಕಾಗಿರುವುದರಿಂದ ಅವುಗಳನ್ನು ನಿನಗೆ ನಾನು ತಿಳಿಸುವು

ದಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ನಿನ್ನ ತಾಯಿ ಪವಿತ್ರವಾದ ಇಸ್ಲಾಂ ಧರ್ಮದವಳು. ಅವಳು ತನ್ನ ಕಾಲದಲ್ಲಿ ಅತ್ಯಂತ ರೂಪವತಿ ಎನಿಸಿದ್ದಳು. ಅಂತೆಯೇ ಅವಳು ಸದ್ಗುಣಶಾಲಿಯೂ ಆಗಿದ್ದಳು. ಅವಳನ್ನು ವಿವಾಹವಾಗಲು ಅನೇಕ ಮುಸ್ಲಿಂ ಸದ್ಗೃಹಸ್ಥರು ಮೇಲೆ ಬಿದ್ದು ಬಂದಿದ್ದರೂ ಆ ನಿರ್ಭಾಗ್ಯಳು ಒಬ್ಬ ಹಿಂದೂ ಶ್ರೀಮಂತನಲ್ಲಿ ಅನುರಕ್ತಳಾದಳು. ತನ್ನನ್ನು ಹುಲಿಯ ಬಾಯಿಂದ ಬಿಡಿಸಿದನೆಂಬ ಕಾರಣದಿಂದ ನೋಡಲು ಸುಂದರನಾಗಿದ್ದ ಆ ಹಿಂದೂ ಯುವಕನನ್ನು – ಸರದಾರನನ್ನು ಅವಳು ವರಿಸಿದಳು. ಆ ಹಿಂದೂ ಸರದಾರನಾದರೋ ನಿನ್ನ ತಾಯಿಯ ರೂಪಾತಿಶಯಗಳಿಗೆ ಮಾರು ಹೋಗಿದ್ದ. ಅವಳು ವಿಧರ್ಮಿ ಎಂಬುದನ್ನು ಮರೆತು ಅವಳನ್ನು ಮದುವೆಯಾಗಲು ಮುಂದೆ ಬಂದು, ಅವಳನ್ನು ಪ್ರೇಯಸಿಯಾಗಿ ಸ್ವೀಕರಿಸಿದ. ನಿನ್ನ ತಾಯಿಯು ಆ ಕಾಮಾಂಧನ ಮರುಳು ಮಾತಿಗೆ ಬೆರಗಾಗಿ, ಅವನ ಕೃತ್ರಿಮ ನಡವಳಿಕೆಯನ್ನು ಪ್ರೇಮವೆಂದು ಬಗೆದು ತನ್ನ ಸರ್ವಸ್ವವನ್ನು ಅವನಿಗೆ ಧಾರೆ ಎರೆದಳು – ಅದೂ ವಿವಾಹವಾಗುವ ಪೂರ್ವದಲ್ಲಿಯೇ. ಇದೇ ಅವಳು ಮಾಡಿದ ಮಹಾಪರಾಧ! ದುಡುಕು! ಕಾಮಾತುರನಾದ ಆ ಹಿಂದೂ ಸರದಾರನು ನಿನ್ನ ತಾಯಿಯ ಯೌವನ, ಸೌಂದರ್ಯಗಳನ್ನು ಹೀರಿ, ಸುಖಿಸುವಷ್ಟು ದಿನ ಸುಖಿಸಿ, ಕಡೆಗೆ ಅವಳನ್ನು ರಸಬಗೆದ ಹಣ್ಣಿನಂತೆ ಬಿಸಾಡಿದ; ಅವನ ಸೌಭಾಗ್ಯವನ್ನೂ, ಸೌಕುಮಾರ್ಯವನ್ನೂ ಅಪಹರಿಸಿ ಅವಳು ತಾಯಿಯಾದಾಗ ಅವಳನ್ನು ತಿರಸ್ಕರಿಸಿದ. ನಿನ್ನ ತಾಯಿಗೆ ತಾನು ಮಾಡಿದ ತಪ್ಪು ಏನೆಂದು ಆಗ ಅರಿವಾಯಿತು. ಅವಳಿಗೆ ಆ ಹಿಂದೂ ಸರದಾರನ ಧರ್ಮಪತ್ನಿಯಾಗುವುದು ಬೇಕಿತ್ತೇ ಹೊರತು ಭೋಗಕಾಂಕ್ಷೆಯಾಗಿರುವುದು ಬೇಕಿರಲಿಲ್ಲ. ತನ್ನನ್ನು ವಿವಾಹವಾಗಿ ತನಗೆ ಧಾರ್ಮಿಕ ರಕ್ಷೆ ಕೊಡಲು ಅವಳು ಅವನಲ್ಲಿ ಬೇಡಿಕೊಂಡರೂ ಅವಳ ಕೋರಿಕೆ ಈಡೇರಲಿಲ್ಲ. ಭಗ್ನ ಮನೋರಥಳಾದ ಆ ನಿನ್ನ ತಾಯಿ ಆತ್ಮಹತ್ಯಕ್ಕೆ ಪ್ರಯತ್ನಿಸಿ, ವಿಫಲಳಾಗಿ ಕಡೆಗೆ ನನ್ನ ಮನೆಯಲ್ಲಿ ಬಂದು ನಿನ್ನನ್ನು ಹಡೆದಳು. ನಿನ್ನನ್ನು ನನ್ನ ಉಡಿಗೆ ಹಾಕಿ,

"ಅಣ್ಣಾ, ನಾನು ನಿಮ್ಮೆಲ್ಲರ ಮಾತು ಕೇಳದೆ ಆ ಕಾಫರನನ್ನು ನನ್ನ ಪತಿ ಎಂದು ಸ್ವೀಕರಿಸಿ ತಪ್ಪು ಮಾಡಿದೆ. ಅವರ ಪ್ರೇಮವನ್ನು ನಿಜವೆಂದು ಬಗೆದು ನಿಮ್ಮನ್ನೆಲ್ಲಾ ಕಡೆಗಣಿಸಿ ಅವರ ಹಿಂದೆ ಹೋದುದಕ್ಕೆ ಅಲ್ಲಾನು ನನಗೆ ಸರಿಯಾದ ಶಿಕ್ಷೆಯನ್ನು ವಿಧಿಸಿದಾನೆ. ನಾನು ಅವರಿಗೆ ನನ್ನ ಸರ್ವಸ್ವವನ್ನು ಅರ್ಪಿಸಿದರೂ, ಅವರು ನನಗೆ ದ್ರೋಹ ಬಗೆದರು. ನನ್ನ ಸಕಲ ಸೌಭಾಗ್ಯವನ್ನು ಅಪಹರಿಸಿ, ಮಕರಂದವನ್ನು ಹೀರಿ ಹೂವನ್ನು ಕಾಲಿನಿಂದ ಹೊಸೆಯು

ವಂತೆ ನನ್ನ ಬಾಳನ್ನು ಹಾಳುಗೆಡಹಿದರು. ನಾನು ಮುಸ್ಲಿಮಳೆಂಬ ಕಾರಣ ನನ್ನನ್ನು ವಿವಾಹವಾಗದೆ ತಿರಸ್ಕರಿಸಿದರು. ಅದಕ್ಕಾಗಿ ನಾನು ಅವರ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿದ್ದೇನೆ. ನಾನು ಅವರಿಂದ ಪಡೆದ ಮಗ ನಿಂದಲೇ ಅವರು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಪಪಡುವಂತೆ ಮಾಡದಿದ್ದರೆ ನಾನು ಮುಸ್ಲಿಂ ಸ್ತ್ರೀಯಲ್ಲ! ಅಲ್ಲಾನು ನನ್ನ ಪ್ರಾರ್ಥನೆಯನ್ನು ನಡಸಿಕೊಡ ಬೇಕು. ನಾನು ಒಂದು ವೇಳೆ ಬದುಕಿರದಿದ್ದರೆ ನನ್ನ ಸೇಡನ್ನು ನನ್ನ ಮಗನಿಂದ ಸಾಧಿಸಿಕೊಳ್ಳುವ ಜವಾಬ್ದಾರಿ ನಿನ್ನದಿದೆ!" ಎಂದು ನನ್ನಿಂದ ವಚನವನ್ನು ಪಡೆದಳು. ಕೆಲಕಾಲದ ನಂತರ ಅವಳು ತನಗಾದ ಅನ್ಯಾಯದಿಂದ ಕೊರಗಿ ಕೊರಗಿ ತೀರಿಕೊಂಡಳು. ಅಂದು ನನ್ನ ಸಹೋದರಿಯು ನನಗೆ ವಹಿಸಿದ ಕೆಲಸವನ್ನು ನಿನ್ನಿಂದ ಸಾಧಿಸಿಕೊಳ್ಳಲು ನಾನು ನಿನ್ನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೂ ಹೆಚ್ಚಾಗಿ ಸಾಕಿದೆ. ನಿನ್ನ ವಿದ್ಯಾಭ್ಯಾಸ ಶಿಕ್ಷಣ ನನ್ನಿಂದ ಸಾಧ್ಯ ವಾಗದೆ ಹೋದಾಗ ನಿನ್ನನ್ನು ಪ್ರಭುಗಳಾದ ರಾಮರಾಯರ ಬಳಿಗೆ ಕರೆತಂದೆ. ಅನಾಥನಾದ ನಿನ್ನ ಮೇಲೆ ಅವರು ಕನಿಕರಿಸಿ, ನಿನ್ನನ್ನು ರಕ್ಷಿಸಲು ಒಪ್ಪಿ ಕೊಂಡರು. ಅವರ ಪೋಷಣೆಗೆ ಬಂದಮೇಲೆ ನೀನು ಹಿಂದುವಿನಂತೆ ಬೆಳೆದು ಈಗ ಪ್ರಭುಗಳ ಪರಮಾಪ್ತ ಸೇವಕರಲ್ಲಿ ಪ್ರಮುಖನಾಗಿರುವೆ. ನಾನು ನಿನ್ನನ್ನು ಅವರ ಬಳಿಗೆ ತಂದೊಪ್ಪಿಸಿದಾಗ ನಿನ್ನ ಜನ್ಮವೃತ್ತಾಂತವನ್ನು ಅವರಿಗೆ ಅರುಹಿ ಇದನ್ನು ಕೆಲವು ಕಾರಣಗಳಿಗಾಗಿ ಗೋಪ್ಯವಾಗಿರಿಸಲು ವಚನ ಪಡೆದಿದ್ದೆ. ಹೀಗಾಗಿ ನಿನ್ನ ಜೀವನ ರಹಸ್ಯ ಇದುವರೆಗೆ ಗೋಪ್ಯವಾಗಿಯೇ ಉಳಿದಿತ್ತು. ಆದರೆ ಇಂದು ನಿನ್ನ ಜನ್ಮವೃತ್ತಾಂತವನ್ನು ತಿಳಿದೂ, ನಿನ್ನಿಂದ ಮುಸ್ಲಿಂ ಭಗಿನಿ ಯೋರ್ವಳ ಅಪಮಾನಕ್ಕೆಳಸಿದ ಆ ರಾಮರಾಯನು, ನಿನಗೆ ಮಾತ್ರವಲ್ಲ ಇಸ್ಲಾಂ ಧರ್ಮಕ್ಕೆ ದ್ರೋಹಬಗೆದಿದ್ದಾನೆ. ನಿನ್ನ ತಾಯಿಗೆ ಅನ್ಯಾಯ ಬಗೆದ ಆ ಮನೋನ್ಮತ್ತ ಪರದಾರನ ಮೇಲೆ ನಿನ್ನಿಂದ ಸೇಡುತೀರಿಸಿಕೊಳ್ಳುವ ಮೊದಲೇ ನಿನ್ನನ್ನು ನಿನ್ನ ಪ್ರಭುವು ತನ್ನ ಸ್ವಾರ್ಥಕ್ಕೆ ಬಳಸಿಕೊಂಡಿದ್ದಾನೆ. ನೀನು ಈ ಹಿಂದೂ ಸಾಮ್ರಾಟನ ಮಾತು ಕೇಳಿಕೊಂಡು ನಿನ್ನ ಪವಿತ್ರಧರ್ಮದ ವಿರುದ್ಧ ಕೈ ಎತ್ತಿದೆಯಲ್ಲಾ ? ಮುಸ್ಲಿಂ ಸ್ತ್ರೀಯನ್ನು ತುಂಬಿದ ಸಭೆಯಲ್ಲಿ ಮಾನಭಂಗ ಮಾಡಲು ಬಂದೆಯಲ್ಲಾ ? ಅಯ್ಯಾ ಅಲ್ಲಾ ಈ ಪರವರದಿಗಾರ ನಾನು ನಿನ್ನಿಂದ ಸೇಡು ತೀರಿಸಿಕೊಳ್ಳಲು ಆ ಕಾಫರ ದೊರೆಯ ಆಶ್ರಯ ಪಡೆದಿದ್ದರೆ ಅವರೇ ನಮ್ಮ ಮೇಲೆ ಸೇಡುತೀರಿಸಿಕೊಳ್ಳುವಂತೆ ಆಯಿತೆ? ನೀನು ಮಹಮ ದೀಯನಾಗಿದ್ದೂ ಎಂತಹ ಕೃತ್ಯ ನಡೆಸಿದೆ! ಹಾಯ್ ಮುಕುಂದನಾಯಕ! ನಾನು ಮಾತೃದ್ರೋಹಿ! ಧರ್ಮದ್ರೋಹಿ!" ಎಂದು ಹುಚ್ಚನಂತೆ ಹಲುಬ ತೊಡಗಿದ.

ಉನಿಲ್‌ಮುಲ್ಕನ ಈ ಎಲ್ಲ ಮಾತು ಕೇಳಿ ಮುಕುಂದನಾಯಕನು ಗರಬಡಿದಂತೆ ಕುಳಿತನು. ತನ್ನ ಜನ್ಮವೃತ್ತಾಂತ ಅವನ ಚಿತ್ತಶಾಂತಿಯನ್ನು ಕದಡಿತ್ತು. ಅವನ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು. ಯಾವುದು ಸರಿ? ಯಾವುದು ತಪ್ಪು? ತಾನು ಹಿಂದುವೆ? ಮುಸ್ಲಿಮನೆ? ತಾನು ಮುಸ್ಲಿಮನಾಗಿದ್ದರೆ ತನಗೇಕೆ ರಾಮರಾಯನು ಈ ಸಂಗತಿಯನ್ನು ಇದುವರೆಗೆ ತಿಳಿಸಿರಲಿಲ್ಲ. ಉನಿಲ್‌ಮುಲ್ಕನೇಕೆ ಇದನ್ನು ಈ ಮೊದಲೇ ತಿಳಿಸಲಿಲ್ಲ. ಇದರಲ್ಲಿ ಏನೋ ಮೋಸವಿದೆ! ಇವರಿಬ್ಬರಲ್ಲಿ ಯಾವುದೋ ಸ್ವಾರ್ಥವಿದೆ! ಇದರ ಸಾಧನೆಗಾಗಿ ಅವರು ತನ್ನನ್ನು ಬಲಿಕೊಟ್ಟಿದ್ದಾರೆ. ಇಂದು ಇದನ್ನು ನನಗೆ ತಿಳಿಸುತ್ತಿದ್ದಾರೆ. ಅದೂ ಗೋಪ್ಯವಾಗಿ. ತನ್ನ ಜನ್ಮವೃತ್ತಾಂತ ನಿಜವಾಗಿದ್ದರೆ ಅವರೇಕೆ ಇದನ್ನು ಸರಿಯಾಗಿ ಹೇಳದೆ ರಹಸ್ಯಮಾಡಬೇಕು? ತನ್ನ ತಾಯಿಯ ಸುಕುಮಾರ ಬಾಳ್ವೆಯನ್ನು ಹಾಳುಮಾಡಿದ ಆ ದ್ರೋಹಿ – ಹಿಂದೂ ಸರದಾರನು ಯಾರು? ಅವನು ಎಲ್ಲಿದ್ದಾನೆ? ಅವನ ಮೇಲೆ ತಾನು ಹೇಗೆ ಸೇಡು ತೀರಿಸಿಕೊಳ್ಳಬಲ್ಲೆ? ಎಂಬಿವೇ ವಿಷಯಗಳನ್ನು ತಿಳಿಯದೆ ಅವನ ಮನಸ್ಸು ತಳಮಳಗೊಂಡಿತು. ಇವುಗಳನ್ನು ತಿಳಿಯದ ಹೊರತು ಅವನ ಜೀವದಲ್ಲಿ ಜೀವವಿರಲಿಲ್ಲ. ಎಲ್ಲವನ್ನೂ ಇಂದೇ ತಿಳಿದುಕೊಂಡು ತಾನು ಹಿಂದುವೋ ಮುಸ್ಲಿಮನೋ ಎಂಬುದನ್ನು ನಿರ್ಧರಿಸಿಬಿಡಬೇಕೆಂದು ತೀರ್ಮಾನಿಸಿದನು.

"ದಾದಾಜಿ, ನಿಮ್ಮಲ್ಲಿ ನನ್ನದೊಂದು ಕೋರಿಕೆ ಇದೆ. ಅಲ್ಲಾನ ಆಣೆ ಇಟ್ಟು ನನಗೆ ಸತ್ಯದ ಸಂಗತಿಯನ್ನು ಮರೆಮಾಚದೆ ತಿಳಿಸಬೇಕು."

"ಅದೇನ್ ಸಂಗತಿ ಕೇಳು ಬೇಟಾ?"

"ನನ್ನ ತಾಯಿಯ ಬಾಳನ್ನು ಕಿತ್ತು ಹಾಳುಮಾಡಿದ – ನನ್ನ ತಂದೆ ಎನಿಸಿಕೊಂಡ ಆ ದ್ರೋಹಿ ಯಾರು? ಎಲ್ಲಿದ್ದಾನೆ? ನಾನು ಅವನ ಮೇಲೆ ಸೇಡು ತೀರಿಸಿಕೊಳ್ಳುವುದಾದರೂ ಎಂತು?"

"ಬೇಟಾ ಮುಕುಂದನಾಯಕ, ನಿನ್ನ ತಂದೆ ಯಾರೆಂದು ನಾನು ಸದ್ಯಕ್ಕೆ ಹೇಳಲಾರೆ! ನಾನು ಈ ಬಗ್ಗೆ ವಚನಕೊಟ್ಟಿದ್ದೇನೆ. ಆದರೆ ನಿನ್ನನ್ನ ನಿರಾಶೆಗೊಳಿಸಬಾರದೆಂದು ಇಷ್ಟು ಸಂಗತಿ ಹೇಳುತ್ತೇನೆ. ನಿನ್ನ ತಾಯಿಯನ್ನು ಹಾಳುಮಾಡಿದ ಆ ದ್ರೋಹಿ ಇನ್ನೂ ಜೀವಂತವಿದ್ದಾನೆ! ತಾನು ಅವಳಿಗೆ ಮಾಡಿದ ಅನ್ಯಾಯವನ್ನು ಮರೆತು ತನ್ನ ಸಮಾನರಿಲ್ಲವೆಂದು ಮದೋನ್ಮತ್ತನಾಗಿ, ಸುಖಸಂತೋಷಗಳಲ್ಲಿ ಮೆರೆಯುತ್ತಾ ಇನ್ನೂ ಬದುಕಿದ್ದಾನೆ! ಅವನನ್ನು ಕೊಂದಲ್ಲದೆ ನಿನ್ನ ತಾಯಿಯ ಸೇಡು ಈಡೇರದು! ಅವನು ತನ್ನ ಹೀನಕೃತ್ಯಕ್ಕಾಗಿ ಪರಿತಪಿಸದೆ ಸ್ವರ್ಗದಲ್ಲಿರುವ ನಿನ್ನ ತಾಯಿಯ ಆತ್ಮಕ್ಕೆ ಶಾಂತಿ ದೊರೆ

ಯದು. ಆದರೆ ಆ ಸರದಾರನು ಈಗ ಸಾಮ್ರಾಜ್ಯದಲ್ಲಿ, ಅತ್ಯಂತ ಬಲಿಷ್ಠ ವ್ಯಕ್ತಿಯಾಗಿರುವುದರಿಂದ, ಆತನ ಮೇಲೆ ಸೇಡು ತೀರಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ನಿನ್ನ ಸೇಡಿನ ಸುದ್ದಿ ಅವನ ಕಿವಿಗೆ ಬಿದ್ದಿತೆಂದರೆ ನಿನ್ನ ಜೀವಕ್ಕೆ ಅಪಾಯ ಖಂಡಿತ. ಆದುದರಿಂದ ನಾವು ಸೂಕ್ತಸಮಯ ಒದಗದೆ ಅವನ ಮೇಲೆ ಸೇಡುತೀರಿಸಿಕೊಳ್ಳಲು ಸಾಧ್ಯವಿಲ್ಲ. ಈ ಸೇಡು ತೀರಿಸಿಕೊಳ್ಳುವುದ ಕ್ಕಾಗಿಯೇ ನಾವು ನಮ್ಮ ಜೀವನವನ್ನು ಧರಿಸಿದ್ದೇವೆ. ಎಂದ ಮೇಲೆ ಇದನ್ನು ಅಪಾಯಕ್ಕೆ ಈಡುಮಾಡುವುದು ಸರಿಯಲ್ಲ. ಅಂತಲೇ ಅವನ ಹೆಸರು ನಿನಗೆ ತಿಳಿಸುವುದಿಲ್ಲ. ಮುಂದೆ ಸೂಕ್ತ ಸಂದರ್ಭ ಬಂದಾಗ ನಿನಗೆ ತಿಳಿಸುತ್ತೇನೆ ಮಾತ್ರವಲ್ಲ, ನಿನ್ನ ಮೂಲಕ ನಿನ್ನ ತಾಯಿಗೆ ನಾನು ಕೊಟ್ಟಿರುವ ವಚನವನ್ನು ಪಾಲಿಸಿಕೊಳ್ಳುತ್ತೇನೆ. ಅಲ್ಲಿಯ ತನಕ ನೀನು ಈ ಬಗ್ಗೆ ನನ್ನನ್ನು ಒತ್ತಾಯ ಪಡಿಸಬೇಡ. ಇದರಿಂದ ಪ್ರಯೋಜನವೂ ಇಲ್ಲ. ಈಗ ನಾವು ಮಾಡಬೇಕಾ ಗಿರುವ ಕಾರ್ಯ ಇದಕ್ಕೂ ದೊಡ್ಡದಾಗಿದೆ. ಹಿಂದೂ ಮುಸ್ಲಿಮರ ಹೆಸರಿನಲ್ಲಿ ಮುಸಲ್ಮಾನ ಧರ್ಮಕ್ಕೂ, ಜನತೆಗೂ, ಅವರ ನಾಗರಿಕತೆ ಸಂಸ್ಕೃತಿಗಳಿಗೂ ಕೇಡುಬಗೆಯುತ್ತಿರುವ ಈ ಮದೋನ್ಮತ್ತ ಹಿಂದೂ ಸಾಮ್ರಾಟನ ಗೋಮುಖ ವ್ಯಾಘ್ರತೆಯನ್ನು ಬಯಲುಮಾಡಿ, ಅವನ ಹಂಚಿಕೆಗಳು ಈಡೇರದಂತೆ ನಾವು ಎಚ್ಚರದಿಂದ ಕೆಲಸಮಾಡಬೇಕಾಗಿದೆ. ಈ ಹಿಂದೂ ಸಾಮ್ರಾಟರನ್ನು, ಸಾಮ್ರಾಜ್ಯವನ್ನು ಮೂಲೋತ್ಪಾಟನೆ ಮಾಡದೆ ಮುಸ್ಲಿಮರ ಏಳಿಗೆ ಇಲ್ಲ. ಇದಕ್ಕೆ ಸಾಮ್ರಾಟರ ಇಂದಿನ ವರ್ತನೆಯೇ ಸಾಕ್ಷಿ. ನಾವು ಇದುವರೆಗೆ ಅವರ ಹಿಂದೂ ಮುಸ್ಲಿಮಸಖ್ಯದ ಮಾತಿಗೆ ಮರುಳಾದಂತೆ ಇನ್ನ ಮೇಲೆ ಮರುಳಾಗಬಾರದು! ಈಗ ನಮ್ಮ ಮೇಲೆ ಮಹತ್ತರ ಜವಾಬ್ದಾರಿ – ಇಸ್ಲಾಂ ಧರ್ಮರಕ್ಷಣೆಯ ಜವಾಬ್ದಾರಿ ಬಿದ್ದಿದೆ! ನಮ್ಮ ಅಳಿವು ಉಳಿವಿನ ಮೇಲೆ ಅದರ ಅಳಿವು ಉಳಿವು ನಿಂತಿದೆ! ಅಂತಲೇ ನಾವು ಕೂಡಲೇ ಕಾರ್ಯೋನ್ಮುಖರಾಗಬೇಕು! ಸಾಮ್ರಾಟರ ಸೇವೆಯಲ್ಲಿದ್ದುಕೊಂಡೆ, ಸಾಮ್ರಾಟರು ನಮಗೆ ದ್ರೋಹ ಬಗೆದಂತೆ, ನಾವು ಅವ ರಿಗೆ ದ್ರೋಹ ಬಗೆದು ನಮ್ಮ ಕಾರ್ಯ ಸಾಧಿಸಿಕೊಳ್ಳಬೇಕಾಗಿದೆ!" ಎಂದು ದೀರ್ಘ ಉಪನ್ಯಾಸ ಕೊಟ್ಟನು. ಇದನ್ನು ಕೇಳಿ ಮುಕುಂದನಾಯಕನ ಮನಸ್ಸಿಗೆ ಸಮಾಧಾನ ಉಂಟಾಗಲಿಲ್ಲ. ಅವನ ಸಮಸ್ಯೆಗಳೊಂದೂ ಬಗೆಹರಿಯದೆ ಅವು ಇದ್ದಂತೇ ಇದ್ದುವು. ಅವುಗಳು ಬಗೆಹರಿಯದೆ ಅವನಿಗೆ ಮೊದಲಿನ ಸಮಾಧಾನ, ಚಿತ್ತ ಶಾಂತಿಗಳು ದೊರೆಯದಾದುವು.

"ದಾದಾಜಿ, ಇನ್ನೊಂದು ಪ್ರಶ್ನೆ! ನೀವು ನನ್ನ ತಾಯಿಯ ಅಣ್ಣನಾ ಗಿದ್ದರೂ ನನಗೆ ಮಾವನಾಗಿದ್ದರೂ ಕಳೆದ ಇಪ್ಪತ್ತೈದು ವರ್ಷಗಳಿಂದ ಈ

ಸಂಗತಿಯನ್ನು ನೀವೇಕೆ ನನ್ನಿಂದ ಗೋಪ್ಯವಾಗಿ ಇರಿಸಿದ್ದಿರಿ?" ಎಂದು ಪ್ರಶ್ನಿಸಿದ.

"ಬೇಟಾ, ನನ್ನ ನಿನ್ನ ಸಂಬಂಧವನ್ನು ತಿಳಿಸದೇ ಇರಲು ಅಂದು ಸಾಮ್ರಾಟರಿಗೆ ನಿನ್ನನ್ನು ಒಪ್ಪಿಸಿಕೊಡುವಾಗ ನಾನು ಅವರಿಗೆ ಒಂದು ವಚನ ಕೊಟ್ಟಿದ್ದೆ. ನಿನ್ನ ಉತ್ಕರ್ಷಕ್ಕೆ, ಅಭ್ಯುದಯಕ್ಕೆ – ಮುಂದೆ ನಿನ್ನಿಂದ ಆಗ ಬೇಕಾಗಿದ್ದ ಮಹತ್ಕಾರ್ಯಕ್ಕೆ ನನ್ನ ನಿನ್ನ ಸಂಬಂಧ ವಿಘ್ನ ಬರಬಾರದೆಂದು ಈ ವಿಷಯವನ್ನು ನಿನಗೆ ತಿಳಿಸಿರಲಿಲ್ಲ. ನೀನು ಸಾಮ್ರಾಟರನ್ನು ಏಕೈಕ ಬಂಧುವೆಂದು ತಿಳಿದು ಅವರ ಪ್ರೀತಿ ವಿಶ್ವಾಸಗಳಿಗೆ ಪಾತ್ರವಾಗುವುದು ಆವಶ್ಯಕವಿತ್ತು. ಅಲ್ಲದೆ ನಿನ್ನ ನಿಜಸಂಗತಿಯನ್ನು ತಿಳಿದಿದ್ದರೆ ನೀನು ಈಗ ಸಾಮ್ರಾಟರ ನಂಬಿಕೆಗೆ ಪಾತ್ರ ನಾಗಿರುವಷ್ಟು ಆಗ ಪಾತ್ರನಾಗಿರುತ್ತಿದ್ದೆಯೋ ಇಲ್ಲವೋ ಹೇಳುವುದು ಕಷ್ಟ. ಒಟ್ಟಿನಲ್ಲಿ ನಿನ್ನ ವ್ಯಕ್ತಿತ್ವ ಸಂಪೂರ್ಣವಾಗಿ ಅರಳಲು ನಿನ್ನ ಹಾಗೂ ಸಾಮ್ರಾಟರ ಸಂಬಂಧ ಹೆಚ್ಚು ಆತ್ಮೀಯವಾಗಲು ನಿನ್ನ ನನ್ನ ಸಂಬಂಧ ಅಡ್ಡಬರುವು ದೆಂದು ನಂಬಿ ನಾನು ನಿನಗೆ ಪೂರ್ವವೃತ್ತಾಂತವನ್ನು ಈ ಮೊದಲೇ ಹೇಳಲಿಲ್ಲ. ಈಗ ನೀನು ಸಾಮ್ರಾಟರ ಗೆಳೆಯನಾಗಿ, ಬಂಧುವಾಗಿ, ಸೇವಕನಾಗಿರುವುದು ಮಾತ್ರವಲ್ಲ. ಸಾಮ್ರಾಜ್ಯದಲ್ಲೆಲ್ಲಾ ಅತ್ಯಂತ ವರ್ಚಸ್ವಿ ವ್ಯಕ್ತಿಯಾಗಿರುವೆ. ನಿನ್ನ ತಾಯಿಗೆ ನಾನು ಕೊಟ್ಟಿದ್ದ ವಚನವನ್ನು ಈಡೇರಿಸಿಕೊಳ್ಳಲು ನೀನು ಇಷ್ಟು ಪ್ರಬಲ ವ್ಯಕ್ತಿಯಾಗುವುದು ಅನಿವಾರ್ಯವಾಗಿತ್ತೆಂದೇ ನಿನ್ನ ಜನ್ಮ ವೃತ್ತಾಂತವನ್ನು ತಿಳಿಸಲಿಲ್ಲ. ಈಗ ನಿನ್ನ ಬುದ್ಧಿ ಮನಸ್ಸು ಕಾರ್ಯಗಳು ನಿನ್ನ ಹತೋಟಿಯಲ್ಲಿ ಇರುವುದರಿಂದ ನಿನ್ನ ನಿಜಸ್ವರೂಪ ತಿಳಿಸಲು ಅಡ್ಡಿ ಇಲ್ಲ. ಇದುವರೆಗೆ ನನ್ನ ಆಸೆಗಳನ್ನು ಈಡೇರಿಸಿದಂತೆ, ಆ ಸೇಡನ್ನೂ ಈಡೇ ರಿಸಿಕೊಟ್ಟರೆ ನಾನು ಬದುಕಿದ್ದು ಸಾರ್ಥಕ! ನಿನ್ನನ್ನು ಇದುವರೆಗೆ ನೆರಳಿನಂತೆ ರಕ್ಷಿಸಿಕೊಂಡು ಬಂದುದಕ್ಕೆ ಸಾರ್ಥಕ! ನೀನು ನನಗೊಂದು ವಚನ ಕೊಡ ಬೇಕು!"

"ಏನು?"

"ನಾನು ನಿನ್ನ ತಾಯಿಗೆ ಕೊಟ್ಟಿರುವ ವಚನವನ್ನು ಪಾಲಿಸುತ್ತೇನೆಂದು ಪ್ರತಿಜ್ಞೆ ಮಾಡಬೇಕು – ಅಲ್ಲಾನ ಆಣೆ ಇಟ್ಟು ನನಗೆ ವಚನ ಕೊಡಬೇಕು!"

"ನಾನು ನನ್ನ ತಾಯಿಗೆ ಮಗನಾಗಿರುವುದು ದಿಟವಾದರೆ, ಅವಳಿಗೆ ಆಗಿ ರುವ ಅನ್ಯಾಯಕ್ಕೆ ಆ ಮದೋನ್ಮತ್ತ ಹಿಂದೂ ಸರದಾರನ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲ. ಅಲ್ಲಾನ ಆಣೆಗೂ ನನ್ನ ಮಾತು ಸತ್ಯ! ಈ ಬಗ್ಗೆ ನೀವು ನಿಶ್ಚಿಂತೆಯಿಂದ ಇರಿ!"

"ನಿನ್ನ ಪ್ರತಿಜ್ಞೆ ಈಡೇರುವ ಕಾಲ ಬೇಗನೆ ಬರಲಿ ಬೇಟಾ!" ಎಂದು

ಹೇಳಿ ಉನಿಲ್‌ಮುಲ್ಕನು ಮುಕುಂದನಾಯಕನನ್ನು ತಬ್ಬಿಕೊಂಡು ಅವನ ತಲೆ ನೇವರಿಸಿದ.

"ದಾದಾಜಿ, ನನ್ನದೊಂದು ಪ್ರಶ್ನೆಯಿದೆ. ನನ್ನನ್ನು ಸಾಮ್ರಾಟರು ಸಂರಕ್ಷಿಸಲು ಸ್ವೀಕರಿಸಿದಾಗ, ನನ್ನ ಹೆಸರು, ಕುಲಗೋತ್ರಗಳನ್ನೆಲ್ಲಾ ಏಕೆ ಮಾರ್ಪಡಿಸಿದರು? ನನ್ನ ಜನ್ಮ ವೃತ್ತಾಂತ ಅವರಿಗೆ ತಿಳಿದಿದ್ದರೂ, ಅವರೇಕೆ ಇಂದು ನನ್ನ ಕೈಯಿಂದ ಇಂತಹ ಹೀನ ಕೃತ್ಯ ಮಾಡಲೆಳೆಸಿದರು?"

"ನಿನ್ನನ್ನು ಅವರು ತಮ್ಮ ಆಶ್ರಯಕ್ಕೆ ತೆಗೆದುಕೊಂಡಾಗ ಅವರಿಗೆ ಆಗಿನ್ನೂ ಪುತ್ರಸಂತಾನವಾಗಿರಲಿಲ್ಲ. ನಿನ್ನ ಚುರುಕು ಬುದ್ಧಿ, ರೂಪಲಾವಣ್ಯಗಳಿಂದ ಅವರು ಬೆರಗಾಗಿ ನಿನ್ನನ್ನು ತಮ್ಮ ಆಶ್ರಯಕ್ಕೆ ತೆಗೆದುಕೊಂಡರು. ನೀನು ಹಿಂದೂ ಬಾಲಕನಾಗದೆ ನಿನಗೆ ಅರಮನೆಯಲ್ಲಿ ಪ್ರವೇಶ ದೊರೆಯುವಂತೆ ಇರಲಿಲ್ಲ. ಇದರಿಂದಾಗಿ ನಿನ್ನನ್ನು ಮುಕುಂದನಾಯಕನೆಂದು ಕರೆದು, ಹಿಂದೂ ಕುಲಗೋತ್ರಗಳನ್ನು ಹಚ್ಚಿ, ಅರಮನೆಗೆ ಕರೆದುಕೊಂಡರು. ಅಂದಿನಿಂದ ನೀನು ಹಿಂದುವಾಗಿರುವೆ. ಇನ್ನು ನಿನ್ನನ್ನು ಇಂದಿನ ನೀಚ ಕೃತ್ಯಕ್ಕೆ ತೊಡಗಿಸಿದುದರ ಕಾರಣ—ಈ ಕಾಫರ ದೊರೆ ತುಂಬಾ ಕುಟಿಲ ಸ್ವಭಾವದವನು! ಅವನು ಹೊರ ನೋಟಕ್ಕೆ ಹಿಂದೂ ಮುಸ್ಲಿಮರ ಸ್ನೇಹಿತನಂತೆ ನಟಿಸುತ್ತಾ—ಹಿಂದೂ ಮುಸ್ಲಿಮ ಸಖ್ಯ ಸಾಮರಸ್ಯದ ಮಾತು ಹೇಳುತ್ತಾ, ದಕ್ಷಿಣಾಪಥದಲ್ಲೆಲ್ಲಾ ಹಿಂದೂ ಸಾಮ್ರಾಜ್ಯವನ್ನೇ ನೆಲೆಗೊಳಿಸಲು ಆಶಿಸಿದ್ದಾನೆ. ಬಹಮನಿ ಸುಲ್ತಾನರನ್ನು ವಂಚಿಸಿ, ಅವರನ್ನು ತನ್ನ ಕೈಗೊಂಬೆಗಳಾಗಿ ಮಾಡಿಕೊಂಡು ದಖನ್ನಿನಲ್ಲೆಲ್ಲಾ ತನ್ನ ಚಕ್ರಾಧಿಪತ್ಯವನ್ನು ವಿಸ್ತರಿಸಬೇಕೆಂಬುದೇ ಅವನ ಆಶಯ. ಅನಂತರ ಮುಸ್ಲಿಮ ಜನತೆಯನ್ನು ಮತಾಂತರಗೊಳಿಸಿ, ಭಾರತದಿಂದ ಇಸ್ಲಾಂ ಧರ್ಮ, ಸಂಸ್ಕೃತಿಗಳನ್ನು ಹೆಸರಿಲ್ಲದಂತೆ ಮಾಡುವುದೇ ಅವನ ಉದ್ದೇಶವಾಗಿದೆ. ಈ ಕಾರ್ಯಸಾಧನೆಗಾಗಿ ಬಹಮನಿ ಸುಲ್ತಾನರನ್ನು ಪರಸ್ಪರ ಎತ್ತಿಕಟ್ಟಿ ತನ್ನ ಪ್ರಾಬಲ್ಯ ಬೆಳೆಸಿಕೊಳ್ಳುತ್ತಿದ್ದಾನೆ. ಬಹಮನಿ ಸುಲ್ತಾನರು ಇದನ್ನು ತಿಳಿಯದಷ್ಟು ಮೂರ್ಖರಾಗಿದ್ದಾರೆ. ಆದರೆ ಆ ಅಹಮದ್‌ನಗರದ ಹುಸೇನ್ ನಿಜಾಂಷಹನು ಮಾತ್ರ ಈ ಗಂಡಾಂತರವನ್ನು ಮನಗಂಡಂತೆ ಕಾಣುತ್ತದೆ. ಈಗಲೀಗ ಗೋಲ್ಕಂಡದ ಕುತುಬ್‌ಷಹನಿಗೂ ರಾಮರಾಯನ ಗೋಮುಖವ್ಯಾಘ್ರತನ ಅರಿವಾಗಿದೆ. ಇದು ಸಂತೋಷದ ಸಂಗತಿ. ಅವರು ರಾಮರಾಯನ ಹಂಚಿಕೆ ಈಡೇರದಂತೆ, ಇಸ್ಲಾಂ ಧರ್ಮ ಸಂಸ್ಕೃತಿಗಳ ರಕ್ಷಣೆಗೆಂದು ಕಂಕಣ ಕಟ್ಟಿದ್ದಾರೆ.

ಅವರು ತನ್ನ ಆಶಯಗಳನ್ನು ಈಡೇರದಂತೆ ಪ್ರಯತ್ನಿಸುವುದನ್ನು ಕಂಡು

ರಾಮರಾಯನಿಗೆ ಅವರ ಮೇಲೆ ಭಯಂಕರ ಕೋಪವಿದೆ. ಅವರ ಮೇಲಣ ಸಿಟ್ಟಿನಿಂದ ಅಸಮಾಧಾನದಿಂದ, ಅವನು ಅಹಮದ್‌ನಗರ ಗೋಲ್ಕಂಡಗಳಲ್ಲಿ ನಿರಪರಾಧಿ ಮುಸ್ಲಿಮ ಜನತೆಯ ಮೇಲೆ ಮಾಡಿದ ಅತ್ಯಾಚಾರವೆಷ್ಟೆಂದು ನಿನಗೆ ತಿಳಿದಿದೆ. ಈಗ ಅಹಮದ್‌ನಗರದ ಪ್ರಜೆಯಾದ ಮುಮ್ತಾಜಳು ಕೈಗೆ ಸಿಕ್ಕಿರುವಾಗ ಅವಳನ್ನು ಅಪಮಾನಗೊಳಿಸದೆ ಸುಮ್ಮನೆ ಬಿಡುವನೆ? ಈ ಕಾರ್ಯಕ್ಕೆ ಬೇರೊಬ್ಬರನ್ನು ನಿಯೋಜಿಸಬಹುದಿತ್ತು. ಆದರೆ ಇದಕ್ಕೆ ನಿನ್ನನ್ನೇ, ಮುಸ್ಲಿಮನಾದ ನಿನ್ನನ್ನೇ ನಿಯೋಜಿಸುವುದರಲ್ಲಿ ಅವನ ಕೀಳು ಸ್ವಾರ್ಥವಿದೆ. ಮುಸ್ಲಿಮ ಧರ್ಮದ ಬಗ್ಗೆ ಅವನಿಗಿರುವ ತಿರಸ್ಕಾರ ದ್ವೇಷಗಳು ನಿನ್ನನ್ನು ಈ ಕಾರ್ಯಕ್ಕೆ ಯಜ್ಞಪಶು ಮಾಡಿಕೊಂಡಿದೆ. ಇದರಿಂದ ಉಂಟಾಗುವ ಕೀಳು ಆನಂದ ಅವನಿಗೆ ಬೇಕಾಗಿದೆ. ಮುಮ್ತಾಜಳ ಮೇಲೆ ಇಷ್ಟೆಲ್ಲಾ ಮಾನಭಂಗ ಮಾಡಿದ ಆ ಧೂರ್ತನು ಚಿತ್ರಕೂಟದಲ್ಲಿ ಅವಳ ಶೀಲಭಂಗ ಮಾಡಿದರೆ ಕೇಳು ವವರಾರು? ಅವಳನ್ನು ಇಲ್ಲಿ ಇಟ್ಟಿರುವುದರ ಉದ್ದಿಶ್ಯವಾದರೂ ಇದೇ ಇರು ವಂತಿದೆ! ಇಸ್ಲಾಂ ಧರ್ಮದ ಸ್ತ್ರೀಯರ ಅಪಮಾನ ಮಾಡುವುದೆಂದರೆ, ಅವ ನಿಗೆ ಸಂತೋಷವಾಗಿರುವಾಗ, ಅವನ ಕೈಯಿಂದ ಮುಮ್ತಾಜಳನ್ನು ಅಲ್ಲಾನೇ ಬಂದು ಬಿಡಿಸಬೇಕಾಗಿದೆ!

"ನೀನು ಈಗಲಾದರೂ ಎಚ್ಚತ್ತುಕೊಂಡು ಈ ನಿರ್ಭಾಗ್ಯ ಹೆಣ್ಣು ಈ ಮದೋನ್ಮತ್ತ ಕಾಫರದೊರೆಯ ಕಾಮಕ್ಕೆ ಬಲಿಯಾಗುವುದನ್ನು ತಪ್ಪಿಸು. ಅವಳು ಈಗ ನಿನ್ನ ರಕ್ಷಣೆಯಲ್ಲಿದ್ದಾಳೆ! ನೀನು ಹೇಗಾದರೂ ಮಾಡಿ ಸಾಮ್ರಾಟರ ವಕ್ರದೃಷ್ಟಿಯಿಂದ ಪಾರುಮಾಡಿದರೆ ಅವಳು ಎಂದೆಂದಿಗೂ ನಿನಗೆ ಕೃತಜ್ಞ ಳಾಗಿರುತ್ತಾಳೆ! ನೀನು ಇಸ್ಲಾಂ ಧರ್ಮದಲ್ಲಿ ಹುಟ್ಟಿದುದಕ್ಕೆ ಸಾರ್ಥಕವಾಗು ತ್ತದೆ. ಸ್ವರ್ಗದಲ್ಲಿರುವ ನಿನ್ನ ತಾಯಿಯ ಆತ್ಮಕ್ಕೆ ಸಂತೋಷ ಉಂಟಾಗು ತ್ತದೆ. ಅಲ್ಲಾನು ನಿನ್ನ ಮೆಚ್ಚಿಕೊಳ್ಳುತ್ತಾನೆ! ಇದರಿಂದ ನಿನಗೇ ಕೀರ್ತಿ ಇದೆ, ಶ್ರೇಯಸ್ಸಿದೆ" ಎಂದು ಹೇಳಿ ಮುಕುಂದನಾಯಕನ ಮೇಲೆ ತನ್ನ ಪ್ರಭಾವ ಸಾಕಷ್ಟು ಆಗಿದೆ ಎಂಬುದನ್ನು ಅರಿತು ಅಲ್ಲಿಂದ ಎದ್ದು ಹೊರಟು ಹೋದನು.

ಉನಿಲ್‌ಮುಲ್ಕನು ಅಲ್ಲಿಂದ ಹೊರಟು ಹೋದ ಎಷ್ಟೋ ಹೊತ್ತಿನವರೆಗೂ ಮುಕುಂದನಾಯಕನು ಅಲ್ಲಿಯೇ ಕುಳಿತಿದ್ದ. ಉನಿಲ್‌ಮುಲ್ಕನು ಹೇಳಿದ್ದ ಮಾತುಗಳು ಗುಂಗಿಯ ಹುಳುವಿನಂತೆ ಅವನ ತಲೆಯನ್ನು ಕೊರೆಯಲು ಆರಂಭಿ ಸಿದ್ದುವು. ಹಾಗಾದರೆ ತಾನು ಯಾರನ್ನ ತನ್ನ ಪ್ರಭು, ದಣಿ, ತಂದೆ ಎಂದು ತಿಳಿದಿದ್ದನೋ ಆ ರಾಮರಾಯನ ಹಿಂದೂ ಮುಸ್ಲಿಂ ಸಖ್ಯವು ಕೇವಲ ಕಪಟನಾಟಕವೇ? ತನ್ನನ್ನು ಮುಸ್ಲಿಂಸ್ತ್ರೀಯ ಮಾನಾಪಹಾರಮಾಡಲು

ಸಾಧನ ಮಾಡಿಕೊಳ್ಳುವುದರಲ್ಲಿ ಅವನಿಗೆ ಆಸೆಯೆ? ತನಗೆ ದ್ರೋಹ ಬಗೆಯುವುದೇ ಅವನ ಉದ್ದಿಶ್ಯವಾಗಿತ್ತೇ? ತನ್ನ ಜನ್ಮ ವೃತಾಂತವನ್ನು, ಮುಸಲ್ಮಾನ ಧರ್ಮ ವನ್ನು ಅಪಮಾನ ಮಾಡುವುದು ರಾಮರಾಯನಿಗೆ ಪ್ರಿಯವಾದ ಸಂಗತಿಗಳೆ? ಈಗ ಮುಮ್ತಾಜಳನ್ನು ಚಿತ್ರಕೂಟದಲ್ಲಿ ಇರಿಸಿರುವುದಾದರೂ ಸ್ವಾರ್ಥ ಸಾಧನೆಗೆ? ಕಾಮಪಿಪಾಸೆಯ ತೃಪ್ತಿಗೆ? ಯಾಕೋ ಅವುಗಳನೆಲ್ಲಾ ಯೋಚಿಸುತ್ತಿದ್ದಂತೆ ತಲೆಯು ಸಿಡಿಯತೊಡಗಿತು. ಅವನಿಗೆ ತನ್ನ ತಾಯಿಯ ಜೀವನವನ್ನು ಹಾಳು ಮಾಡಿದ ಆ ಮದೋನ್ಮತ್ತ ಹಿಂದೂ ಸರದಾರನ ನೆನಪಾಯಿತು. ಯಾರು ಆ ದ್ರೋಹಿ ಇರಬಹುದು? ಆ ನೀಚನಾರೆಂದು ಹೇಳಿದ್ದರೆ ಈಗಲೇ ಹೋಗಿ ಅವನ ಕತ್ತು ಹಿಸುಕಿ ಕೊಲ್ಲಬಹುದಿತ್ತು! ಅವನ ರಕ್ತ ಕುಡಿಯಬಹುದಿತ್ತು! ತನ್ನ ತಾಯಿಗೆ ಹಿಂದೂ ಮತದ ಆ ನೀಚ ಸರದಾರ ಎಂತಹ ಅಪಚಾರ ಮಾಡಿದ? ಈಗ ತನ್ನ ಕಣ್ಣೆದುರಿಗೆ ರಾಮರಾಯನು ಮುಮ್ತಾಜಳಿಗೆ ಎಂತಹ ಅಪಮಾನ ಮಾಡಿದ? ಈ ಹಿಂದೂಗಳೇ ಹೀಗೆ! ಅವರು ದಯದಾಕ್ಷಿಣ್ಯವಿಲ್ಲದ, ಪಾಪಪುಣ್ಯ ನೋಡದ ನೀಚರು! ಇವರಿಗೆ ಹೃದಯದಲ್ಲಿ ಎಳಷ್ಟೂ ಅಂತಃಕರಣವಿಲ್ಲ! ಸ್ತ್ರೀಯರ ಬಗ್ಗೆ ಪೂಜ್ಯಭಾವನೆ ಇಲ್ಲ! ಅವರಲ್ಲೂ ಮುಸಲ್ಮಾನ ಸ್ತ್ರೀಯರೆಂದರೆ ವಿಲಾಸ ಭೋಗಕ್ಕೆ ಇರುವ ತುತ್ತುಗಳೆಂದು ತಿಳಿದಿದ್ದಾರೊ ಏನೋ! ಅವನಿಗೆ ರಾಮರಾಯನ ಮೇಲೆ ಸಿಟ್ಟುಬಂತು! ತನ್ನ ತಾಯಿಯ ಜೀವನವನ್ನು ಹಾಳು ಮಾಡಿದ ಆ ಸರದಾರನ ಮೇಲೆ ಭಯಂಕರ ಕೋಪ ಬಂದಿತು! ಈಗ ಹಿಂದೂ ಮತದ ಮೇಲೆ ಅವನ ದ್ವೇಷ ಪ್ರಜ್ವಲಿಸಿತು!

ಅವನಿಗೆ ಮೇಲಿಂದ ಮೇಲೆ ತನ್ನ ವಿಚಾರದಲ್ಲಿ ಉಂಟಾಗಿದ್ದ ಕ್ರಾಂತಿ ಯಿಂದ ತಲೆ ಬಿಸಿಯಾಯಿತು. ಅದು ಸಿಡಿಯತೊಡಗಿತು. ಅವನು ತಲೆಯ ಸಿಡಿತ ವನ್ನು ತಾಳಲಾರದೆ ಅದನ್ನು ಒತ್ತಿಕೊಂಡು, ಗಾಯಗೊಂಡ ಹಿಂಸ್ರಮಿಗದಂತೆ ಅತ್ತಿಂದಿತ್ತ ಇತ್ತಿಂದತ್ತ ಸುತ್ತುತ್ತಿದ್ದ. ಗೊತ್ತು ಗುರಿಯಿಲ್ಲದೆ ತಿರುಗುತ್ತಿದ್ದ. ಇದ್ದಕ್ಕಿದ್ದಂತೆ ಅವನ ಕಿವಿಗೆ ಹೆಣ್ಣಿನ ಮಂಜುಳ ಧ್ವನಿ ಬಂದಂತೆ ಆಯಿತು! ಅವಳ ಈಗಿನ ರೂಪಕ್ಕೂ ಈ ಹಿಂದೆ ಕಂಡಿದ್ದ ರೂಪಕ್ಕೂ ಅಜಗಜಾಂತರ ವ್ಯತ್ಯಾಸವಿತ್ತು. ಆಗ ಅವಳು ಕೆರಳಿದ ಕೆಂಡವಾಗಿದ್ದಳು. ಅಸಮಾಧಾನ ದಿಂದ ಬುಸುಗುಟ್ಟುತ್ತಿದ್ದಳು. ಈಗ ಅವಳು ಸುಪ್ರಸನ್ನಳಾಗಿದ್ದಳು; ಮೋಹದ ಮೂರ್ತಿಯಾಗಿದ್ದಳು! ಅವಳ ಮುಖದಲ್ಲಿ ಒಂದು ಬಗೆಯ ಸಮಾಧಾನ, ಅನು ಕಂಪ ಎದ್ದು ಕಾಣುತ್ತಿತ್ತು. ಕಣ್ಣಿನಲ್ಲಿ ಮಿಂಚಿನ ಬದಲು ಪ್ರಸನ್ನತೆಯಿತ್ತು. ತುಟಿಯಲ್ಲಿ ಮಂದಹಾಸವಿತ್ತು, ಅವಳು ಬಂದ ಭಂಗಿಯನ್ನು ನೋಡಿದರೆ ಅವಳು ಮುಕುಂದನಾಯಕನೊಡನೆ ಮಾತಿಗೆ ಬಂದಂತಿತ್ತು. ಅವಳು ಅಲ್ಲಿದ್ದ ಆಸನದಲ್ಲಿ

ಕುಳಿತುಕೊಂಡಳು. ಅವಳ ಕಡೆ ಮುಕುಂದನಾಯಕನು ಅಷ್ಟು ಲಕ್ಷ ಹಾಕದೆ ಮೊದಲಿನಂತೆ ಅತ್ತಿಂದಿತ್ತ ಶತಪಥತಿರುಗುತ್ತಲೇ ಇದ್ದನು, ಅವಳ ಬಗ್ಗೆ ಅವನಿಗೆ ಯಾವ ಕುತೂಹಲವೂ ಇರಲಿಲ್ಲ, ಆಸಕ್ತಿಯೂ ಇರಲಿಲ್ಲ. ಅವನಿಗೆ ತನ್ನ ಚಿಂತೆಯೇ ಬೆಟ್ಟದಷ್ಟು ಇತ್ತು; ಅದರ ಭಾರದಿಂದ ಅವನ ಚೇತನ ಜರ್ಜರಿತವಾಗಿತ್ತು.

ತಾನು ಬಂದು ನಿಂತರೂ ತನ್ನನ್ನು ಮಾತಾಡಿಸುವುದು ಹಾಗಿರಲಿ, ಒಮ್ಮೆ ದೃಷ್ಟಿ ಹೊರಳಿಸದ ಮುಕುಂದನಾಯಕನ ವರ್ತನೆಯನ್ನು ನೋಡಿ ಮವಾಃಜಳಿಗೆ ಆಶ್ಚರ್ಯವಾಯಿತು. ಅವಳು ಮುಕುಂದನಾಯಕನೊಂದಿಗೆ ಯಾವುದೋ ಮಹದ್ವಿಷಯವನ್ನು ಚರ್ಚಿಸುವುದು ಬೇಕಾಗಿದ್ದುದರಿಂದ ತಾನಾಗಿ ಮಾತು ತೆಗೆದಳು.

"ನಿಮ್ಮ ಬಗ್ಗೆ ದಾದಾಜಿಯವರು ನನಗೆ ಎಲ್ಲ ಹೇಳಿದ್ದಾರೆ! ನೀವೂ ನನ್ನಂತೆಯೇ ಜೀವನದಲ್ಲಿ ನೊಂದು, ಕಾಫರರ ದೌರ್ಜನ್ಯಕ್ಕೆ ಸಿಕ್ಕಿ ಅನಾಥರಾಗಿರುವಿರಂತೆ! ನಿಮ್ಮ ಎಲ್ಲ ಕಥೆಯನ್ನೂ – ಹುಟ್ಟು ಮುಸಲ್ಮಾನರಾದ ನಿಮ್ಮ ಜನ್ಮವೃತ್ತಾಂತ, ನಿಮ್ಮ ತಾಯಿಯ ಮೇಲೆ ನಡೆದ ಅತ್ಯಾಚಾರ, ಅದರ ಸಲುವಾಗಿ ಸೇಡು ತೀರಿಸಿಕೊಳ್ಳಲು ನಿಮ್ಮನ್ನು ದಾದಾಜಿ ಕಾಪಾಡಿದುದು, ಈಗ ನಿಮ್ಮಿಂದ ಈ ಧೂರ್ತ ಸಾಮ್ರಾಟನು ತನ್ನ ಕೀಳು ಕಾಮನೆಗಳನ್ನು ತೃಪ್ತಿಗೊಳಿಸಲು ಮಾಡಿದ ವಿದ್ರೋಹ – ಎಲ್ಲವೂ ತಿಳಿದಿದ್ದೇನೆ! ನಿಮ್ಮ ವಿಷಯದಲ್ಲಿ ನನಗೆ ತುಂಬಾ ಸಹಾನುಭೂತಿಯುಂಟಾಗಿದೆ! ಜೀವನದಲ್ಲಿ ನನ್ನಷ್ಟೇ ನೊಂದಿರುವ ನಿಮಗೆ ನನ್ನಿಂದಾಗುವ ನಾಲ್ಕು ಸಹಾನುಭೂತಿಯ ನುಡಿಗಳನ್ನು ಹೇಳಿ ಹೋಗಲು ಬಂದೆ! ನನ್ನಿಂದ ನಿಮ್ಮ ಏಕಾಂತಕ್ಕೆ ಭಂಗ ಬಂದಿದ್ದರೆ ಕ್ಷಮಿಸಿ!" ಎಂದು ಹೇಳಿದಳು.

ಈ ಮಾತು ಕೇಳಿ ಮುಕುಂದನಾಯಕನು ಚಕಿತನಾದನು.

ಹಾಗಾದರೆ ತನ್ನ ವಿಷಯವನ್ನೆಲ್ಲಾ ಉನಿಲ್‌ಮುಲ್ಕನು ಮವಾಃಜಳಿಗೆ ಹೇಳಿದ್ದಾನೆ ಎಂದುಕೊಂಡ ಮುಕುಂದನಾಯಕ, 'ತನ್ನ ಬಗ್ಗೆ ಮವಾಃಜಳಿಗೆ ಕ್ರೋಧವಿರಬೇಕು! ಅಸಮಾಧಾನವಿರಬೇಕು! ಇವುಗಳನ್ನು ಎಂತು ಪರಿಹರಿಸುವುದು. ಎಂತು ಇಂದಿನ ಘಟನೆಯಲ್ಲಿ ತನ್ನ ಪಾತ್ರವಿಲ್ಲವೆಂಬ ಕಲ್ಪನೆ ಬರುವಂತೆ ಮಾಡುವುದು' ಎಂದು ತಿಳಿಯದೆ ಹೊಯ್ದಾಡುತ್ತಿದ್ದ ಮುಕುಂದನಾಯಕನಿಗೆ ಮವಾಃಜಳ ಮಾತು ಕೇಳಿ ವಿಸ್ಮಯವಾದುದು ಮಾತ್ರವಲ್ಲ; ಅವನಿಗೆ ಎದೆಯ ಮೇಲಿನ ಭಾರ ಕಡಮೆ ಆಗಿ ಉಸಿರಾಡುವಂತೆ ಆಯಿತು!

"ಮೊದಲು ನಾನು ನಿಮ್ಮಲ್ಲಿ ಕ್ಷಮೆ ಯಾಚಿಸಬೇಕಾಗಿದೆ! ನಾನು

ಯಾರೆಂಬುದನ್ನು ಅರಿಯದೆ ನಿಮಗೆ ಅಪಚಾರ ಮಾಡಿದೆ! ನನ್ನ ತಪ್ಪನ್ನು ನೀವು ಮನ್ನಿಸಬೇಕು!"

"ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ! ನನ್ನನ್ನು ಅಪಮಾನಗೊಳಿಸಿದರೆಂದು ನಿಮ್ಮ ಮೇಲೆ ನನಗೆ ಸಿಟ್ಟಿಲ್ಲ. ನೀವು ಈ ಕಾರ್ಯವನ್ನು ಪ್ರಭುವಾಜ್ಞೆಯಂತೆ, ಕರ್ತವ್ಯದೃಷ್ಟಿಯಲ್ಲಿ ಮಾಡಿದಿರೇ ಹೊರತು, ನೀವಾಗಿ ನೀವು ಸ್ವಯಿಚ್ಛೆಯಿಂದ ಮಾಡಿಲ್ಲವೆಂಬುದು ನನಗೂ ತಿಳಿದಿದೆ! ನಿಮ್ಮ ನಿಜವಾದ ಭಾವನೆ ಏನಿತ್ತೆಂದು ದಾದಾರವರಿಂದ ನನಗೆ ಎಲ್ಲವೂ ತಿಳಿದಿದೆ! ನೀವು ಇಂದು ನಡೆದ ಸಂಗತಿಯ ಬಗ್ಗೆ ಯಾವ ವಿಷಾದ ಪಡುವ ಕಾರಣವಿಲ್ಲ. ವಿಷಾದ ಪಡುವುದಾದರೆ ನಿಮ್ಮಂಥ ವೀರಪುರುಷರು, ಪುರುಷಸಿಂಹರು ಕುರಿಗಳ ಹಿಂಡಿನಲ್ಲಿ ತಾನೂ ಕುರಿ ಎಂದು ತಿಳಿದುಕೊಂಡು ಇದ್ದಿರಲ್ಲ ಎಂಬುದಕ್ಕೆ ಪಡಬೇಕು! ಈಗ ನಿಮ್ಮ ನಿಜವಾದ ಜೀವನವೃತ್ತಾಂತ ತಿಳಿದಿದೆ. ಈ ಕಾಫರದೊರೆಯ ನಿಜವಾದ ಸ್ವರೂಪ ಗೋಮುಖವ್ಯಾಘ್ರತನ ತಿಳಿದಿದೆ. ಈಗ ನೀವು ಎಚ್ಚೆತ್ತುಕೊಂಡು ಮುಸ್ಲಿಮಧರ್ಮಕ್ಕೆ ಆಗಿರುವ ಅಪಮಾನವನ್ನು, ಅಪಚಾರವನ್ನು ತೊಡೆಯಲು ಸಿದ್ಧವಾಗಿರಬೇಕು. ಇಸ್ಲಾಂ ಧರ್ಮ ಸಂಸ್ಕೃತಿಗಳ ರಕ್ಷಣೆಗೆ ದೀಕ್ಷೆ ತೆಗೆದುಕೊಳ್ಳಬೇಕು" ಎಂದು ಮುಮ್ತಾಜಳು ವೀರರಮಣಿಯಂತೆ ಮುಕುಂದನಾಯಕನನ್ನು ಹುರಿದುಂಬಿಸಿದಳು.

"ನಿಮಗೆ ನಾನು ತುಂಬಾ ಆಭಾರಿಯಾಗಿದ್ದೇನೆ. ನಾನು ಇಷ್ಟು ವರ್ಷ ಸಾಮ್ರಾಟರ ಸೇವೆಯಲ್ಲಿದ್ದೆ. ಅವರ ನಿಜವಾದ ಸ್ವರೂಪವೇನೆಂಬುದು ತಿಳಿದಿರಲಿಲ್ಲ. ನೀವು ನನ್ನ ಪಾಲಿನ ಧರ್ಮದೇವತೆ! ನೀವು ನನ್ನನ್ನು ಎಚ್ಚರಿಸದೆ ಇದ್ದಿದ್ದರೆ, ಧರ್ಮಕ್ಕೆ ರಾಮರಾಯನಿಂದ ಆಗುತ್ತಿದ್ದ ವಿದ್ರೋಹದ ಬಗ್ಗೆ ಕಣ್ಣು ಬಿಡಿಸದೆ ಇದ್ದಿದ್ದರೆ ನಾನು ಇನ್ನೂ ಕೊಚ್ಚೆಯ ಹುಳುವಿನಂತೆಯೇ ಅವರ ಹಿಂದೂ ಮುಸ್ಲಿಂ ಸಖ್ಯದ ಮೋಸದ ಬಲೆಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದೆ. ನನ್ನ ಭ್ರಮೆಯನ್ನು ನೀವು ಕಳೆದಿರಿ! ನನ್ನ ವಿವೇಕದ ಕಣ್ಣನ್ನು ತೆರೆಸಿದಿರಿ! ನಿಮಗೆ ನಾನು ಎಷ್ಟು ಆಭಾರಿಯಾಗಿದ್ದರೂ ಅಲ್ಪವೇ!"

— ಎಂದು ಹೃದಯ ತುಂಬಿ ಹೇಳಿದ ಮುಕುಂದನಾಯಕ.

"ನಿಮಗೆ ಈಗಲಾದರೂ ನಿಮ್ಮ ನೆಚ್ಚಿನ ಪ್ರಭುಗಳ ನಿಜಸ್ವರೂಪ— ಘಾತುಕತನ ತಿಳಿಯಿತಲ್ಲ. ಇದಕ್ಕೆ ನಾವು ಸಂತೋಷಪಡಬೇಕು! ಅಲ್ಲಾ ದೊಡ್ಡವನು. ನೀವು ಇನ್ನು ಹಿಂದೂವೆಂದು ತಿಳಿದು ನಿಮ್ಮಿಂದ ಇದಕ್ಕೂ ಹೆಚ್ಚಿನ ಅನ್ಯಾಯಗಳು ಘಟಿಸುವ ಮುನ್ನ ನಿಮ್ಮನ್ನು ಎಚ್ಚರಿಸಿದನು; ನಿಮಗೆ ವಿವೇಕೋದಯವಾಯಿತು. ನಮ್ಮ ಅದೃಷ್ಟ. ಈಗ ನೀವು ಕೂಡಲೇ ಕಾರ್ಯೋನ್ಮುಖರಾಗಬೇಕು!"

" ಈಗ ನನ್ನಿಂದ ಯಾವ ಕಾರ್ಯವಾಗಬೇಕು ಹೇಳಿ! ಅದನ್ನು ಮಾಡಿ ಕೊಡುತ್ತೇನೆ. ಈ ದೇಹವನ್ನು ಇಸ್ಲಾಂ ಧರ್ಮರಕ್ಷಣೆಗಾಗಿ ಮೀಸಲಿಡುತ್ತೇನೆ. ಇನ್ನು ಮೇಲೆ ಕಾಫರರು ಇಸ್ಲಾಂ ಧರ್ಮದ ಮೇಲೆ ಕೈಯೆತ್ತದಂತೆ ಹೋರಾಡುತ್ತೇನೆ! ಇಸ್ಲಾಂ ಧರ್ಮ, ಸಂಸ್ಕೃತಿಗಳಿಗೆ ಯಾರು ಅಪಚಾರ ಮಾಡುವರೋ, ದ್ರೋಹ ಬಗೆಯುವರೋ ಅವರು ಯಾರೇ ಇರಲಿ, ಅವರನ್ನು ವಿರೋಧಿಸುತ್ತೇನೆ. ಸ್ವಯಂ ಸಾಮ್ರಾಟರೇ ಅಡ್ಡಿ ಬಂದರೂ ಲೆಕ್ಕಿಸುವುದಿಲ್ಲ. ಈ ದೇಹವಿರುವ ತನಕ ಇಸ್ಲಾಂ ಧರ್ಮ ರಕ್ಷಣೆಗೆ ಇದು ಮೀಸಲು!"

" ಇದು ಕೇವಲ ನಿಮ್ಮ ಭಾವಾವೇಶದ ಮಾತುಗಳೋ, ಇಲ್ಲವೇ ನಿಮ್ಮ ಹೃದಯಾಂತರಾಳದ ಮಾತುಗಳೋ!" ಮುಮ್ತಾಜಳು ನಗೆಯಾಡಿದಳು.

" ನನ್ನ ಮಾತು ಅಲ್ಲಾನ ಆಣೆಗೂ ಸತ್ಯ!"

" ನಿಮ್ಮ ಮಾತು ಇನ್ನೊಮ್ಮೆ ಹೇಳಿ! ಇದನ್ನು ಕೇಳಿ ನನಗೆ ಹಾಲು ಕುಡಿದಂತೆ ಆಗಿದೆ! ಇದನ್ನು ಮತ್ತೊಮ್ಮೆ ಹೇಳಿ!" ಎಂದು ಅವನ ಬಳಿಗೆ ಎದ್ದು ಬಂದು ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಪ್ರೀತಿಯಿಂದ ನೇವರಿಸುತ್ತಾ ಹೇಳಿದಳು.

ಇದರಿಂದ ಮುಕುಂದನಾಯಕನ ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಆಯಿತು. ಅವನು ಭಾವಾವೇಶದಲ್ಲಿ ಪುಳಕಗೊಂಡ. ಮೆಲ್ಲನೆ ಮುಮ್ತಾಜಳ ಮೃದುವಾದ ತೋಳುಗಳನ್ನು ತನ್ನ ಬಳಿಗೆ ಎಳೆದುಕೊಂಡನು. ಮುಮ್ತಾಜಳು ಪ್ರತಿಭಟಿಸದೆ ಹತ್ತಿರ ಬಂದಳು. ಅವಳನ್ನು ತನ್ನ ಅಪ್ಪಿಗೆಯಲ್ಲಿ ಸೆರೆಹಿಡಿದು ಅವಳ ಮುಖವನ್ನು ತನ್ನ ಕೈಯಲ್ಲಿ ಎತ್ತಿ " ಮುಮ್ತಾಜ್, ನಿನಗೆ ನಾನು ತುಂಬ ಅನ್ಯಾಯ ಮಾಡಿದ್ದೇನೆ! ನನ್ನನ್ನು ನೀನು ಕ್ಷಮಿಸಿದ್ದೀಯಾ! ನಿಜವಾಗಿಯೂ ಕ್ಷಮಿಸಿದ್ದೀಯಾ?" ಎಂದು ಬಡಬಡಿಸಿದ.

" ಈ ಬಗ್ಗೆ ನೀವು ಮತ್ತೆ ಪ್ರಶ್ನಿಸಬಾರದೆಂದು ನಾನು ಹೇಳಿರಲಿಲ್ಲವೇ. ಇದರಲ್ಲಿ ನಿಮ್ಮ ಯಾವುದೂ ಅಪರಾಧವಿಲ್ಲ!

" ನನ್ನಿಂದ ನಿನಗೆ ಅಸಮಾಧಾನವಾಗಲಿಲ್ಲವೆಂಬುದಕ್ಕೆ ಏನು ಸಾಕ್ಷಿ?"

" ಇದೇ ಸಾಕ್ಷಿ!" ಎಂದು ಹೇಳಿ ಮುಕುಂದನಾಯಕನನ್ನು ಅವಳು ಭರಸೆಳೆದು ಚುಂಬಿಸಿ " ಈಗಲಾದರೂ ನಿಮಗೆ ನಂಬಿಕೆಯಾಯಿತೆ!" ಎಂದಳು.

ಮುಕುಂದನಾಯಕನು ಇದರಿಂದ ಉತ್ತೇಜಿತನಾಗಿ ಅವಳನ್ನು ಬಾರಿಬಾರಿಗೂ ಚುಂಬಿಸುತ್ತಾ "ಪ್ಯಾರೀ, ಇಂದು ಆ ಧೂರ್ತ ಸಾಮ್ರಾಟನು ನಿನ್ನನ್ನು ಅಪಮಾನಗೊಳಿಸಲೆತ್ನಿಸಿದುದನ್ನು ನೆನೆದರೆ ಮೈ ನೆತ್ತರು ಹೆಪ್ಪುಗಟ್ಟುತ್ತದೆ!" ಎಂದು ಅವಳ ಮೈದಡವಿದನು.

"ನನಗೆ ಅವನಿಂದ ಅನ್ಯಾಯವಾಗಿದೆ, ಅಪಮಾನವಾಗಿದೆ ಎಂದು ನಿಮಗೆ ನಿಜವಾಗಿ ಅನಿಸಿದ್ದರೆ ಇದಕ್ಕೆ ಅವನ ಮೇಲೆ ಸೇಡು ತೀರಿಸಿಕೊಳ್ಳಲು ನನ್ನೊಂದಿಗೆ ಪ್ರತಿಜ್ಞೆಮಾಡಿ! ನನ್ನ ಪ್ರತಿಜ್ಞೆ ಈಡೇರಲು ಈ ಗಳಿಗೆಯಿಂದ ದುಡಿಯಿರಿ! ಇದಕ್ಕಾಗಿ ನಿಮ್ಮ ಸರ್ವಸ್ವವನ್ನೂ ಮೀಸಲಿಡಿ! ಆಗ ಮಾತ್ರ ನಿಮ್ಮ ಸಿಟ್ಟು ನಿಜವಾದ ವೀರರ ಸಿಟ್ಟು! ನಿಮ್ಮ ಪ್ರತಿಜ್ಞೆ ನಿಜವಾದ ವೀರರ ಪ್ರತಿಜ್ಞೆ!" ಎಂದಳು ಮುಮ್ತಾಜ್.

"ನಾನು ಯಾವ ಪ್ರತಿಜ್ಞೆ ಮಾಡಬೇಕೋ ತಿಳಿಸು! ಅದನ್ನು ಅಲ್ಲಾನ ಮೇಲೆ ಆಣೆ ಇಟ್ಟು ನಡಸುತ್ತೇನೆ!"

"ಹಾಗಾದರೆ ಈ ಗಳಿಗೆಯಿಂದ ನಾವು ಜೀವನ ಸಂಗಾತಿಗಳು!"

"ನನ್ನನ್ನು ನೀನು ಜೀವನದ ಸಂಗಾತಿ – ಎಂದು ತಿಳಿದರೆ ನನ್ನಷ್ಟು ಭಾಗ್ಯಶಾಲಿ ಇನ್ನಿಲ್ಲ!"

"ನಾವಿಬ್ಬರೂ ಜೀವನದಲ್ಲಿ ಸಮಾನ ದುಃಖಿಗಳು! ಈ ಕಾಫರನಿಂದ ನಮ್ಮ ಸರ್ವಸ್ವವೂ ನಾಶವಾಗಿದೆ. ಈಗ ನಾವು ಸೇಡಿಗಾಗಿ ಬದುಕಿದ್ದೇವೆ. ಆದಕ್ಕಾಗಿ ಇನ್ನು ಮುಂದೆಯೂ ಜೀವನದ ಗೆಳೆಯರಾಗಿ ಬದುಕೋಣ. ಇದೇ ನಮ್ಮ ಪಾಣಿಗ್ರಹಣ. ಇದೇ ನಮ್ಮ ಜೀವಿತಾದರ್ಶ!"

"ನಾನು ಧನ್ಯೆ! ನಿನ್ನಂಥ ವೀರರಮಣಿ ನನ್ನ ಜೀವನದ ಸಂಗಾತಿಯಾದುದು ನನ್ನ ಪೂರ್ವಾರ್ಜಿತ ಪುಣ್ಯವೇ ಸರಿ!"

"ನಾವು ಒಂದಾಗಿರುವುದು ನಮ್ಮ ದೇಹ ಸುಖಕ್ಕಲ್ಲ! ಪರಸ್ಪರ ಪ್ರತಿಜ್ಞೆಗಳನ್ನು, ಸೇಡನ್ನು ತೀರಿಸಿಕೊಳ್ಳಲು!"

"ಹೌದು! ನಮ್ಮ ಪ್ರತಿಜ್ಞೆ, ಸೇಡುತೀರಿಸುವ ತನಕ ನಾವು ಸತಿಪತಿಗಳಲ್ಲ —ಕೇವಲ ಗೆಳೆಯರು!"

"ಅಷ್ಟೇ ಅಲ್ಲ, ನೀವು ನನ್ನ ಕೋಪದ ಬೆಂಕಿಗೆ ಆಜ್ಯ!"

"ನೀನು ನನ್ನ ಸೇಡಿನ ಕಿಡಿಗೆ ಗಾಳಿ!"

"ಗಾಳಿ ಆಜ್ಯಗಳೆರಡೂ ಸೇರಿದ ಸೇಡಿನ ಬೆಂಕಿಯನ್ನು ನಂದಿಸುವ ಧೈರ್ಯ, ಶಕ್ತಿ ಯಾರಿಗೆ ಇದೆ? ಇಂದು ಈ ಕಾಫರ ದೊರೆಯ ಗುರಿ ಸಿದ್ಧವಾಯಿತು!"

"ಇದು ಕಾರ್ಯ ರೂಪದಲ್ಲಿ ಬರುವ ತನಕ ನನಗೆ ತೃಪ್ತಿ ಇಲ್ಲ. ಅಲ್ಲಿಯ ತನಕ ನನಗೆ ಅನ್ನ ನಿದ್ರೆಗಳಿಲ್ಲ!"

"ನಾವು ಈ ಸಾಮ್ರಾಟನನ್ನು, ಸಾಮ್ರಾಜ್ಯವನ್ನು ಧ್ವಂಸಮಾಡಿದಾಗಲೇ ನಮ್ಮ ಮದುವೆ–ಶಾಸ್ತ್ರೋಕ್ತವಾದ ವಿವಾಹ!"

"ಅಲ್ಲಿಯತನಕ ನಾನು ಬುರುಕಿಯನ್ನು ಧರಿಸುವುದಿಲ್ಲ!"

"ನಿನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಟ್ಟು ನಾನೇ ನಿನಗೆ ಬುರುಕಿಯನ್ನು ಮತ್ತೆ ತೊಡಿಸುತ್ತೇನೆ!"

"ಅಲ್ಲಿಯತನಕ ನಾವಿಬ್ಬರೂ ಈ ಪ್ರತಿಜ್ಞೆಯನ್ನು ಈಡೇರಿಸಲು ತ್ರಿಕರಣ ಪೂರ್ವಕವಾಗಿ ದುಡಿಯಬೇಕಾಗಿದೆ!"

"ಹಾಗಾದರೆ ನಿನ್ನ ಮುಂದಿನ ಕಾರ್ಯಯೋಜನೆ?"

"ಮೊದಲು ಇಲ್ಲಿಂದ ತಪ್ಪಿಸಿಕೊಂಡು ಹೋಗಿ ನಾನು ಈ ದೂರ್ತ ದೊರೆಯ ವಿರುದ್ಧ ಎಲ್ಲ ಮುಸ್ಲಿಮಜನತೆಯನ್ನೂ, ಮುಸ್ಲಿಮ ದೊರೆಗಳನ್ನೂ ಎತ್ತಿಕಟ್ಟುತ್ತೇನೆ! ನೀವು ಇಲ್ಲಿ ಇದ್ದುಕೊಂಡು, ಮೊದಲಿನ ವಿಶ್ವಾಸ ನಟಿಸುತ್ತಲೇ ಈ ವಿಧ್ವಂಸದ ಚಳುವಳಿಗೆ ನಿಮ್ಮಿಂದಾಗುವ ಸಹಾಯ ಮಾಡುತ್ತೀರಿ! ಇಂದಲ್ಲ ನಾಳೆ ವಿಜಯನಗರ ಬಹಮನಿ ಸುಲ್ತಾನರೊಡನೆ ಯುದ್ಧ ನಡೆಯಲೇ ಬೇಕು! ನಡೆಯುತ್ತದೆ. ಆಗ ನಿಮ್ಮಿಂದ ಹೆಚ್ಚಿನ ಸಹಾಯವಾಗುತ್ತದೆ!"

ಈ ಮಾತಿಗೆ ಮುಕುಂದನಾಯಕನು ತನ್ನ ಸಮ್ಮತಿಯನ್ನು ಸೂಚಿಸಿ ಅವಳ ಮುಖವನ್ನು ನೋಡಿದ. ಅವಳು ಅಷ್ಟೇ ಉತ್ತೇಜಿತಳಾಗಿ ಅವನನ್ನು ನೋಡಿದಳು. ಇಬ್ಬರು ಪ್ರಣಯಿಗಳೂ ಪರಸ್ಪರ ತೋಳ್ತೆಕ್ಕೆಯಲ್ಲಿ ಒಂದಾದರು. ಅವರು ಅದೆಷ್ಟು ಹೊತ್ತು ಪ್ರೇಮಾಲಿಂಗನ, ಪ್ರೇಮಾಲಾಪನೆಗಳಲ್ಲಿ ಮೈಮರೆತಿದ್ದರೋ. ಅಲ್ಲಿಗೆ ಯಾರೋ ಬಂದಂತಾಗಲು ಅವರು ಎಚ್ಚತ್ತು ದೂರ ಸರಿದು ಕುಳಿತರು. ಬಂದವರು ಯಾರೂ ಅಲ್ಲ. ಅವರಿಬ್ಬರ ಸಮಾಗಮಕ್ಕೆ ಪರೋಕ್ಷವಾಗಿ ಕಾರಣವಾಗಿದ್ದ ಉನಿಲ್‌ಮುಲ್ಕನಾಗಿದ್ದ!

"ಬೇಟಾ ಮುಕುಂದನಾಯಕ! ಸಾಮ್ರಾಟರು ಇಲ್ಲಿಗೆ ಭೇಟಿ ಕೊಡುವ ಮೊದಲೇ ಪಂಜರದಿಂದ ಗಿಳಿಯನ್ನು ಪಾರುಮಾಡುವುದು ಒಳ್ಳೆಯದು. ಅವರ ವಕ್ರದೃಷ್ಟಿ ಮುಮ್ತಾಜಳಿಗೆ ಒಮ್ಮೆ ಬಿದ್ದಮೇಲೆ ಮುಂದೆ ಇಲ್ಲಿಂದ ಪಾರಾಗುವುದು ಕಷ್ಟವಾಗುತ್ತದೆ. ಈಗ ಇವಳ ರಕ್ಷಣೆಯ ಭಾರ ನಿನ್ನ ಕೈಲಿರುವಾಗಲೇ ಇವಳು ಇಲ್ಲಿಂದ ತಪ್ಪಿಸಿಕೊಂಡು ಹೋಗಲು ವ್ಯವಸ್ಥೆ ಮಾಡು!"

"ಹೌದು, ನಿಮ್ಮ ಮಾತು ನಿಜ! ಇದು ನಮ್ಮ ಕೈಲಿರುವಾಗಲೇ ನಾವು ಈ ಬಗ್ಗೆ ವ್ಯವಸ್ಥೆ ಮಾಡುವುದು ಒಳ್ಳೆಯದು! ನಾನು ಇವಳ ಪ್ರಯಾಣಕ್ಕೆ ಕುದುರೆ ಮತ್ತಿತರ ಆವಶ್ಯಕ ವಸ್ತುಗಳನ್ನು ಸಿದ್ಧಪಡಿಸುತ್ತೇನೆ. ಇವಳ ಜೊತೆಗೆ ನಂಬಿಕೆಯ ಸೇವಕರನ್ನು ಆರಿಸುವ ಜವಾಬ್ದಾರಿ ನಿಮ್ಮದು."

"ಆ ಬಗ್ಗೆ ನಾನು ವ್ಯವಸ್ಥೆ ಮಾಡುತ್ತೇನೆ. ಮೊದಲು ಪ್ರಯಾಣಕ್ಕೆ ನೀನು ಕುದುರೆ ರಹದಾರಿ ಇವುಗಳ ವ್ಯವಸ್ಥೆ ಮಾಡು!"

ಅದರಂತೆ ಮುಕುಂದನಾಯಕನು ಮುಮ್ತಾಜಳು ವಿಜಯನಗರದಿಂದ

ತಪ್ಪಿಸಿಕೊಂಡು ಹೋಗಲು ಬೇಕಾಗುವ ಎಲ್ಲ ವ್ಯವಸ್ಥೆ ಮಾಡಿಕೊಟ್ಟನು.

ಮುಮ್ತಾಜಳು ಮುಕುಂದನಾಯಕನನ್ನು ಮತ್ತೆ ಕೂಡಿಕೊಳ್ಳುವ ಆಶ್ವಾಸನದೊಂದಿಗೆ ಬೀಳ್ಕೊಂಡು ವಿಜಯನಗರದಿಂದ ಹೊರಟಳು. ಅವಳು ವಿಜಯನಗರದಿಂದ ಅಪಾಯವಿಲ್ಲದೆ ತಪ್ಪಿಸಿಕೊಂಡು ಹೋದ ಎಷ್ಟೋ ಹೊತ್ತಿನ ಮೇಲೆ ಸುದ್ದಿಯನ್ನು ರಾಮರಾಯನಿಗೆ ತಿಳಿಸಿದನು.

"ಪ್ರಭು! ಅನ್ಯಾಯವಾಯಿತು! ಚಿತ್ರಕೂಟದಲ್ಲಿ ಸೆರೆಯಾಗಿದ್ದ ಮುಮ್ತಾಜಳು ಹೇಗೆ ಅಲ್ಲಿಂದ ತಪ್ಪಿಸಿಕೊಂಡು ಹೊರಟುಹೋಗಿದ್ದಾಳೆ! ಅವಳು ಯಾವಾಗ ತಪ್ಪಿಸಿಕೊಂಡಳು! ಹೇಗೆ ತಪ್ಪಿಸಿಕೊಂಡಳು! ಎಂಬುದು ಯಾರಿಗೂ ತಿಳಿಯದು!"

"ಅಯ್ಯೋ! ಎಂತಹ ಪ್ರಮಾದವಾಯಿತು! ನಾನು ಅವಳ ಬಗ್ಗೆ ಏನೇನೋ ಹೊಂಗನಸು ಕಟ್ಟಿಕೊಂಡಿದ್ದೆನಲ್ಲಾ!" ಎಂದು ರಾಮರಾಯನು ಉದ್ಗಾರ ತೆಗೆದ. ಕೂಡಲೇ ಅವಳು ಎಲ್ಲಿದ್ದರೂ ಬಿಡದೆ ಶೋಧಿಸಲು ಮುಕುಂದನಾಯಕನಿಗೆ ಆಜ್ಞಾಪಿಸಿದನು. ಅವನು ಅತ್ತ ಕಣ್ಮರೆಯಾಗಲು, "ಅಯ್ಯೋ! ದೇವರೆ ಎಂತಹ ಕೆಲಸವಾಯಿತು. ಅವಳನ್ನು ಮುಕುಂದನಾಯಕನಿಗೆ ವಿವಾಹಮಾಡಿ ಅವಳಿಗಾಗಿರುವ ಅನ್ಯಾಯ ಸರಿಪಡಿಸಬೇಕೆಂದಿದ್ದೆ! ಈ ವಿವಾಹ ಸಂದರ್ಭದಲ್ಲಿ ಮುಕುಂದನಾಯಕನ ಜನ್ಮ ವೃತ್ತಾಂತವನ್ನು ಅವನಿಗೆ ಹೇಳಬೇಕೆಂದಿದ್ದೆ! ನಾನೊಂದು ಬಗೆದರೆ ನೀನೊಂದು ಬಗೆದೆಯಾ?" ಎಂದು ಉದ್ಗಾರ ತೆಗೆದನು.

## ೧೭

ರಾಮರಾಯನೊಂದು ಬಗೆದಿದ್ದರೆ ದೈವವೊಂದು ಬಗೆದಿತ್ತು. ಮೆಹರುನ್ನೀಸಳಿಗೆ ತನ್ನಿಂದಾಗಿದ್ದ ಅನ್ಯಾಯವನ್ನು, ಮುಮ್ತಾಜಳಿಗೆ ತನ್ನಿಂದಾಗಿದ್ದ ಅಪಮಾನವನ್ನು ಸರಿಪಡಿಸಿಕೊಳ್ಳಲು ಮುಕುಂದನಾಯಕ ಹಾಗೂ ಮುಮ್ತಾಜಳ ವಿವಾಹದ ಹೊಂಗನಸನ್ನು ರಾಮರಾಯನು ಕಟ್ಟಿದ್ದನು. ಸೇಡಿನ ಜ್ವಾಲೆಯನ್ನು ತನ್ನ ನಿರ್ಮಲಾಂತಃಕರಣದಿಂದ ನಂದಿಸಿ, ಸ್ನೇಹಾರ್ದಗಳು ಚಿಗುರೊಡೆಯುವಂತೆ ಮಾಡಬೇಕೆಂದು ಅವನು ಆಶಿಸಿದ್ದನು. ಅವನ ಆಸೆಗಳೊಂದೂ ಈಡೇರದೆ ಹೋಗಿತ್ತು. ಮುಮ್ತಾಜಳು ವಿಜಯನಗರದಿಂದ–ರಾಮರಾಯನ ಕೈಯಿಂದ ತಪ್ಪಿಸಿಕೊಂಡು ಹೋಗಿದ್ದಳು. ಮುಕುಂದನಾಯಕನಿಗೆ ಜನ್ಮ ವೃತಾಂತವನ್ನು ತಿಳಿಸಲು ರಾಮರಾಯನಿಗೆ ಒದಗಿದ್ದ ಸದಾವಕಾಶ ಹೀಗೆ ವ್ಯರ್ಥವಾಗಿತ್ತು. ಇವರಿಬ್ಬರ ವಿವಾಹದಿಂದ ತನ್ನ ಹಿಂದೂ ಮುಸ್ಲಿಂ ಹೊನ್ನ ಮಂದಿ

ರಕ್ಕೆ ರತ್ನದ ಗೋಪುರ ಇಟ್ಟಂತೆ ಆಗುವುದೆಂದು ಅವನು ಇದೇ ರಾತ್ರಿ ಕನಸು ಕಟ್ಟಿದ್ದನು. ಬೆಳಗಾಗುವುದರೊಳಗೆ ಕನಸು ಒಡೆದಿತ್ತು.

ರಾಮರಾಯನ ಮೇಲೆ ಕತ್ತಿ ಮಸೆಯುತ್ತಿದ್ದ ಅಹಮದ್‌ನಗರದ ಹುಸೇನ್ ನಿಜಾಂಷಹನಿಗೆ ತನ್ನ ಪ್ರಜೆ ಹಾಗೂ ಪ್ರೀತಿಯ ಮೌಲ್ವಿಯ ಪುತ್ರಿಯೂ ಆಗಿದ್ದ ಮಮ್ತಾಜಳಿಗೆ ಆಗಿದ್ದ ಅನ್ಯಾಯ, ಅಪಮಾನಗಳನ್ನು ಕಂಡಮೇಲಂತೂ ಅವನ ಕ್ರೋಧವು ದಾವಾನಲವಾಯಿತು. ಈ ಕಿಡಿಯಿಂದ ರಾಮರಾಯನ ಹಾಗೂ ಅವನ ಸಾಮ್ರಾಜ್ಯದ ನಾಶವನ್ನು ಸಾಧಿಸಬೇಕೆಂದು ಅವನು ನಿಶ್ಚಯಿಸಿದನು. ಅವನು ಮಮ್ತಾಜಳಿಗೆ ಆಗಿದ್ದ ಅಪಮಾನದ ಕಥೆಯನ್ನು ಬೃಹದಾಕಾರವಾಗಿ ಮಾಡಿ, ಜನಸಾಮಾನ್ಯರಲ್ಲೂ, ಇತರ ಬಹಮನಿ ಸುಲ್ತಾನರಲ್ಲೂ ಪ್ರಚಾರ ಮಾಡಿ ರಾಮರಾಯ ಹಾಗೂ ವಿಜಯನಗರದವರ ವಿರುದ್ಧ ಮುಸ್ಲಿಮ ಜನತೆಯ ತಿರಸ್ಕಾರ ದ್ವೇಷಗಳ, ಸೇಡಿನ ವಿಷಬೀಜವನ್ನು ಬಿತ್ತಿದನು. ಅಹಮದ್ ನಗರ, ಗೋಲ್ಕಂಡಗಳಲ್ಲಿ ನಡೆದಿದ್ದ ಅತ್ಯಾಚಾರ, ಕೊಲೆ ಸುಲಿಗೆಗಳಿಂದ ಕನಲಿದ್ದ ಮುಸ್ಲಿಂ ಜನತೆಗೆ ಮಮ್ತಾಜಳ ಮೇಲೆ ನಡಸಿದ್ದ ಅತ್ಯಾಚಾರವನ್ನು ಸಹಿಸದಾಯಿತು. ಅವರು ರಾಮರಾಯನಿಂದ ತಮ್ಮ ಧರ್ಮ, ಸಂಸ್ಕೃತಿ ಹಾಗೂ ತಮ್ಮ ಸ್ತ್ರೀಯರ ಸತೀತ್ವಗಳಿಗೆ ಉಳಿಗಾಲವಿಲ್ಲವೆಂದು ಸಿಡಿದೆದ್ದರು. ಯಾರ ಬಾಯಲ್ಲಿ ನೋಡಿದರೂ ಮಮ್ತಾಜಳ ಮಾತು! ಎಲ್ಲಿ ನೋಡಿದರೂ ಹಿಂದೂಗಳು ಮುಸಲ್ಮಾನರಿಗೆ ಕೊಟ್ಟ ಚಿತ್ರಹಿಂಸೆ, ಮಾಡಿದ ಅನ್ಯಾಯಗಳ ಉಲ್ಲೇಖನೆ, ವರ್ಣನೆ. ಗೂಢಚಾರರು ವಿಜಯನಗರದ ವಿರುದ್ಧ ನೂರಾರು ಕತೆಗಳನ್ನು ನೆಯ್ದು ಹಲವು ವೃತ್ತಗಳಲ್ಲಿ ಹಲವು ವೇಷಗಳಲ್ಲಿ ಜನಸಾಮಾನ್ಯರ ಉತ್ಸವ ಜಾತ್ರೆ, ಸಂತೆಗಳಲ್ಲಿ ಪ್ರಚಾರಮಾಡಿದರು. ಜ್ಯೋತಿಷ್ಯರುಗಳಾಗಿ. ಶಕುನದವರಾಗಿ, ಭಿಕ್ಷುಕರಾಗಿ, ದಾಸಯ್ಯಗಳಾಗಿ, ಫಕೀರರಾಗಿ, ಸಾಧುಗಳಾಗಿ, ಸನ್ಯಾಸಿಗಳಾಗಿ, ದೊಂಬರಾಗಿ ಗುಳೇ ಹೋಗುವವರಾಗಿ, ಹೀಗೆ ನೂರು ರೀತಿಯಲ್ಲಿ, ನೂರು ವೇಷಗಳಲ್ಲಿ ಜನರನ್ನು ವಿಜಯನಗರದವರ ವಿರುದ್ಧ ಉದ್ರೇಕಿಸಿದರು. ಎಲ್ಲ ಮಸೀದಿಗಳಲ್ಲಿಯೂ ಮೌಲ್ವಿಗಳು ವಿಜಯನಗರದರಸರ ವಿರುದ್ಧ, ಹಿಂದೂಗಳ ವಿರುದ್ಧ ನೂರಾರು ಕಟ್ಟುಕತೆಗಳನ್ನು ನೆಯ್ದು ಅವರ ಆತ್ಮ ಗೌರವವನ್ನು, ಧಾರ್ಮಿಕ ಶ್ರದ್ಧೆಯನ್ನು ಕೆರಳಿಸಿ ವಿಜಯನಗರದವರ ಮೇಲೆ ಧರ್ಮ ಯುದ್ಧ ಕೈಗೊಳ್ಳಲು ಹುರಿದುಂಬಿಸುತ್ತಿದ್ದರು. ಫಕೀರರು ಭಿಕ್ಷೆ ಬೇಡಲು ಬಂದಾಗ ತಮ್ಮ ಗೋಳಿನ ಕಥೆ ಹೇಳಿ ಹೋಗುತ್ತಿದ್ದರು. ಲಾವಣಿಕಾರರು ಮುಸ್ಲಿಮ ಜನತೆಗೆ ವಿಜಯನಗರದವರಿಂದ ಉಂಟಾದ ಉಪದ್ರವ ಅನ್ಯಾಯ ಅತ್ಯಾಚಾರಗಳನ್ನು ಕುರಿತು ಕಾವ್ಯಗಳನ್ನು

ರಚಿಸಿ ಜನರಲ್ಲಿ ಪ್ರಚಾರ ಮಾಡಿದರು! ನಾಟಕ ಸಂಗೀತಗಳಲ್ಲೂ, ಜಾತ್ರೆಗಳಲ್ಲೂ ವಿಜಯನಗರದ ವಿರುದ್ಧ ಪ್ರದರ್ಶನಗಳು ನಡೆದುವು. ಎಲ್ಲೆಲ್ಲಿ ನೋಡಿದರೂ ವಿಜಯನಗರದ ವಿರುದ್ಧ ಪ್ರತಿಭಟನೆ! ಎಲ್ಲೆಲ್ಲಿ ನೋಡಿದರೂ ರಾಮರಾಯನ ವಿರುದ್ಧ ಘೋಷಣೆ! ಎಲ್ಲರ ಬಾಯಲ್ಲೂ ಜೀಹಾದದ ಮಾತು. ಜನ ಸ್ತ್ರೀಪುರುಷ ರಾದಿಯಾಗಿ ಎಲ್ಲರೂ ಈ ಧರ್ಮಯುದ್ಧಕ್ಕೆ ಸಿದ್ಧರಾಗುತ್ತಿದ್ದರು! ಇದರಲ್ಲಿ ತಮ್ಮ ಸರ್ವಸ್ವವನ್ನೂ ಬಲಿಗೊಟ್ಟಾದರೂ ಮುಸ್ಲಿಂ ಧರ್ಮ ಸಂಸ್ಕೃತಿಗಳನ್ನು ಉಳಿಸಬೇಕೆಂದು ನಿರ್ಧರಿಸಿದ್ದರು. ಹೀಗೆ ತನಗಾದ ಅನ್ಯಾಯಗಳಿಂದ ಕೆರಳಿ ಸೇಡು ಬಗೆಯಲು ಮನ್ಮಾತ್ತಜಳೂ, ತನಗಾದ ಪರಾಭವಗಳಿಂದ ದ್ವೇಷದಿಂದ ಕುದಿದು ಪ್ರತೀಕಾರಾಕಾಂಕ್ಷೆಯಿಂದ ಅಹಮದ್‌ನಗರದ ಹುಸೇನ್ ನಿಜಾಂ ಷಹನೂ, ಸಾಮಂತನಾಗಿದ್ದ ನಾಯವಾಂಗಳ ಜಗರಾಯನೆಂಬುವನನ್ನು ಎತ್ತಿ ಕಟ್ಟಿ ತನ್ನ ಪ್ರಾಣಕ್ಕೆ ಗಂಡಾಂತರ ತರಲು ರಾಮರಾಯನು ಪಿತೂರಿ ನಡಸಿದ ನೆಂದು ಅವನ ಮೇಲೆ ಮುಯ್ಯಿ ತೀರಿಸಿಕೊಳ್ಳಲು ಗೋಲ್ಕಂಡದ ಇಬ್ರಾಹಿಂ ಕುತುಬ್‌ಷಹನೂ ತಮ್ಮ ವೈಯುಕ್ತಿಕ ಕಾರಣಗಳಿಗಾಗಿ ವಿಜಯನಗರದ ಬಗ್ಗೆ, ರಾಮರಾಯನ ಬಗ್ಗೆ ಮುಸ್ಲಿಂ ಜನತೆಯನ್ನು ಎತ್ತಿಕಟ್ಟಿದರು. ಇವರು ಮೂವರು ತ್ರಿಮೂರ್ತಿಗಳಂತೆ ನಿಂತು ಸಾಮ್ರಾಜ್ಯದ ದುರಂತದ ರುದ್ರನಾಟಕಕ್ಕೆ ಬೇಕಾದ ಭೂಮಿಕೆಯನ್ನು ಸಿದ್ಧಪಡಿಸಿದರು.

ಇಷ್ಟೆಲ್ಲಾ ನಡೆದರೂ ಬಿಜಾಪುರದ ಆಲಿ ಆದಿಲ್‌ಷಹನು ಮಾತ್ರ ರಾಮ ರಾಯನ ಮಿತ್ರನಾಗಿಯೇ ಉಳಿದಿದ್ದನು. ರಾಮರಾಯನ ಉದಾತ್ತ ವಿಚಾರ ಗಳಿಗೆ ಅವನು ಮಾರುಹೋಗಿದ್ದನು. ಎಂತಹ ಪ್ರಸಂಗದಲ್ಲೂ ಅವನಿಗೆ ದ್ರೋಹ ಬಗೆಯಬಾರದೆಂದು, ವಿಶ್ವಾಸವನ್ನು ಮುರಿಯಬಾರದೆಂದು ಅವನು ನಿರ್ಧರಿ ಸಿದ್ದನು. ತನ್ನ ಭಾಗಕ್ಕೆ ತಂದೆಯಾಗಿ, ಗೆಳೆಯನಾಗಿ, ಬಂಧುವಾಗಿ ಇದ್ದ ರಾಮರಾಯನ ಸ್ನೇಹವನ್ನು ಅವನು ಕಳೆದುಕೊಳ್ಳಲು ಸಿದ್ಧನಾಗಿರಲಿಲ್ಲ. ಅವನನ್ನು ರಾಮರಾಯನ ವಿರುದ್ಧ ಎತ್ತಿಕಟ್ಟುವುದು ಅಷ್ಟು ಸುಲಭವಾಗಿರ ಲಿಲ್ಲ. ರಾಮರಾಯನ ನಿರ್ಮಲಾಂತಃಕರಣ ಉದಾರ ಮನಸ್ಸಿನ ಬಗ್ಗೆ— ಉದಾತ್ತ ವಿಚಾರಗಳ ಬಗ್ಗೆ – ಅವನನ್ನು ತೀರ ಹತ್ತಿರದಿಂದ ಕಂಡು ಅಭಿ ಮಾನ ತಳೆದಿದ್ದ ಆಲಿ ಆದಿಲ್‌ಷಹನನ್ನು ಇತರರನ್ನು ವಂಚಿಸಿ ಉದ್ರೇಕ ಗೊಳಿಸುವಂತೆ ಉದ್ರೇಕಗೊಳಿಸಲು ಸಾಧ್ಯವಿರಲಿಲ್ಲ. ಇದಲ್ಲದೆ ಅವನು ವಿವೇ ಕಿಯೂ, ವಿಚಾರಪರನೂ ಆಗಿದ್ದನು. ಅವನದು ಮತ್ತೊಬ್ಬರ ಮಾತಿನಿಂದ ಸುಲಭವಾಗಿ ಮೋಸಗೊಳಿಸುವ ಮನೋವೃತ್ತಿಯಾಗಿರಲಿಲ್ಲ. ಅವನನ್ನು ರಾಮ ರಾಯನ ವಿರುದ್ಧ ಎತ್ತಿಕಟ್ಟುವುದು ಹೇಗೆ? ತಮ್ಮ ಕಡೆಗೆ ಒಲಿಸಿಕೊಳ್ಳುವುದು

ಹೇಗೆ? ಅವನಿಗೂ ಇಸ್ಲಾಂ ಧರ್ಮ ಸಂಸ್ಕೃತಿಗಳ ರಕ್ಷಣೆಗಾಗಿ ಮಾಡುವ ಧರ್ಮ ಯುದ್ಧಕ್ಕೆ—ಜೀಹಾದಕ್ಕೆ – ದೀಕ್ಷೆ ಕೊಡುವುದು ಹೇಗೆ ಎಂಬಿವೇ ವಿಚಾರಗಳು ಉಳಿದ ಇಬ್ಬರು ಸುಲ್ತಾನರನ್ನು ಕಾಡುತ್ತಿತ್ತು. ಇತರರನ್ನು ಅವರು ಮರುಳು ಗೊಳಿಸಿದಂತೆ ಆಲಿ ಆದಿಲ್‌ಷಹನನ್ನು ಮರುಳುಗೊಳಿಸಲು ಸಾಧ್ಯವಿರಲಿಲ್ಲ. ಏನಿದ್ದರೂ ಅವನೊಡನೆ ಚರ್ಚಿಸಿ, ಅವನನ್ನು ಒಪ್ಪಿಸಿ, ಅನಂತರ ತಮ್ಮ ಕಡೆಗೆ ಒಲಿಸಿಕೊಳ್ಳಬಹುದಿತ್ತು. ಇದು ಸಾಹಸದ ಮಾತೇ ಆಗಿತ್ತು. ಆದರೂ ಅವರು ನಿರಾಶರಾಗಿ ಸುಮ್ಮನೆ ಕೂಡಲಿಲ್ಲ. ತಮ್ಮ ಪ್ರಯತ್ನಮಾಡುತ್ತಲೇ ಇದ್ದರು. ಇದರಲ್ಲಿ ನಾಳೆ ಅವನು ತಮ್ಮ ಪಕ್ಷಕ್ಕೆ ಸೇರುವನೆಂಬ ದೃಢ ವಿಶ್ವಾಸದಿಂದ ಅವನನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಸಾಮ ದಾನ ಭೇದಗಳಿಂದ ಪ್ರಯತ್ನಿಸುತ್ತಿದ್ದರು.

ತಮ್ಮ ಆಶಯವನ್ನು ಈಡೇರಿಸಿಕೊಳ್ಳಲು ರಾಯಭಾರವನ್ನು ಕಳುಹಿಸಿದರೆ ಪ್ರಯೋಜನವಾಗುವುದಿಲ್ಲವೆಂದು ಅರಿತಮೇಲೆ ಅಹಮುದ್‌ನಗರದ ನಿಜಾಂ ಷಹನೂ, ಗೋಲ್ಕಂಡದ ಕುತುಬ್‌ಷಹನೂ ಆಲಿ ಆದಿಲ್‌ಷಹನೊಂದಿಗೆ ತಾವೇ ಮಾತನಾಡಲು ಒಂದು ದಿನ ಬಿಜಾಪುರಕ್ಕೆ ಬಂದರು.

ಆಲಿ ಆದಿಲ್‌ಷಹನು ರಹಸ್ಯವಾಗಿ ಬಿಜಾಪುರಕ್ಕೆ ಬಂದು ಈರ್ವರು ಸುಲ್ತಾನರನ್ನೂ ಆದರದಿಂದಲೇ ಬರಮಾಡಿಕೊಂಡು ಅವರನ್ನು ಗೌರವದಿಂದ ನಡಸಿಕೊಂಡನು. ಮೊದಲು ಕ್ಷೇಮಸಮಾಚಾರದ ಔಪಚಾರಿಕ ಮಾತುಗಳೆಲ್ಲ ಮುಗಿದ ಮೇಲೆ ಸುಲ್ತಾನರು ನೇರ ವಿಷಯ ಪ್ರಸ್ತಾಪಕ್ಕೆ ಬಂದರು.

“ನೀವು ನಮ್ಮ ಕ್ಷೇಮ ಸಮಾಚಾರದ ಮಾತು ಕೇಳಿದಿರಿ. ಅದನ್ನೇ ನಿಮ್ಮೊಂದಿಗೆ ಹೇಳಿಕೊಳ್ಳಲೆಂದು ನಾವಿಲ್ಲಿಗೆ ಬಂದಿದ್ದೇವೆ. ಸುಖ ದುಃಖಗಳನ್ನು ಗೆಳೆಯರೊಂದಿಗೆ, ಹಿತೈಷಿಗಳೊಂದಿಗೆ ಹೇಳಿಕೊಂಡರೆ ಮನಸ್ಸು ಹಗುರಾಗುವುದಂತೆ. ಅಲ್ಲಾನ ದಯದಿಂದ ನಮ್ಮ ರಾಜ್ಯದಲ್ಲಿ ಮಳೆಬೆಳೆಗಳಿಗೆ ಕೊರತೆ ಇಲ್ಲ. ಆದರೆ ನಮಗಾಗಲೀ, ನಮ್ಮ ಜನಕ್ಕಾಗಲೀ ಮನಶ್ಶಾಂತಿ ಎಂಬುದು ಎಳ್ಳಷ್ಟೂ ಇಲ್ಲವಾಗಿದೆ. ಯಾವ ಗಳಿಗೆಯಲ್ಲಿ ಶತ್ರುಗಳು ತಮ್ಮ ಮೇಲೆ ಬಿದ್ದು ಮನೆಮಠಗಳನ್ನೂ ಆಸ್ತಿಪಾಸ್ತಿಗಳನ್ನೂ, ಊರುಕೇರಿಗಳನ್ನೂ ಬೆಳೆಬಿತ್ತುಗಳನ್ನೂ ನಾಶ ಮಾಡುವರೊ, ಯಾವಗಳಿಗೆಯಲ್ಲಿ ನಮ್ಮ ಹೆಂಗಸರು ಮಕ್ಕಳ ಮೇಲೆ ಮಾನಭಂಗ, ಅತ್ಯಾಚಾರಗಳನ್ನು ಮಾಡುವರೋ ಯಾವ ಗಳಿಗೆಯಲ್ಲಿ ನಮ್ಮ ಪವಿತ್ರ ಸ್ಥಳಗಳನ್ನು ವಸ್ತುಗಳನ್ನು ಅಪವಿತ್ರಗೊಳಿಸುವರೋ, ನಮ್ಮ ಧರ್ಮ, ಸಂಸ್ಕೃತಿಗಳನ್ನು ನಾಶಮಾಡುವರೋ ಎಂದು ಜನತೆ ಎಡಗೈಯಲ್ಲಿ ಜೀವವನ್ನು ಇಟ್ಟುಕೊಂಡು ಕುಳಿತಿದೆ. ಶತ್ರುಭಯದಿಂದ ಸದಾ ತತ್ತರಿಸುವ ಪ್ರಜೆಗಳಿಗೆ ಯಾವ

ವಿಧವಾದ ರಕ್ಷಣೆಯಿಲ್ಲದೆ ನಾವು ಅಸಮಾಧಾನರಾಗಿದ್ದೇವೆ. ನಾವು ನೆಪ ಮಾತ್ರಕ್ಕೆ ರಾಜ್ಯವಾಳುತ್ತಿದ್ದೇವೆ. ಆದರೆ ನಮ್ಮ ಜನತೆಯನ್ನು ಶತ್ರುಗಳಿಂದ ರಕ್ಷಿಸಿ ಕಾಪಾಡುವ ಶಕ್ತಿ ನಮಗಿಲ್ಲವಾಗಿದೆ. ನಾವೂ ಜನತೆಯಂತೆಯೇ ಶತ್ರು ಭಯದಿಂದ ತತ್ತರಿಸುತ್ತಿದ್ದೇವೆ. ಪರಿಸ್ಥಿತಿ ಹೀಗಿರುವಲ್ಲಿ ನಮಗೆ ನೆಮ್ಮದಿಯಾದರೂ ಎಲ್ಲಿ ಬಂತು ?" ಎಂದು ಅಹಮದ್‌ನಗರದ ಹುಸೇನ್ ನಿಜಾಂಷಹನು ಕೇಳಿದ.

ಕೆಲಕಾಲ ಮೌನ ಆವರಿಸಿತು. ನಿಜಾಂಷಹನ ಮಾತಿನ ಎಳೆಯನ್ನೇ ಮುಂದುವರೆಸುತ್ತಾ ಕುತುಬ್‌ಷಹನು ತನ್ನ ಗೋಳಿನ ಕಥೆ ಹೇಳಿದ.

" ಏನು ಮಾಡುವುದು ? ನಮ್ಮ ಮೇಲೆ ಅಲ್ಲಾನಿಗೆ ಕರುಣೆ ಇಲ್ಲದಾಗಿದೆ. ನಮ್ಮನ್ನು ಕಾಫರರ ಕೈಯಿಂದ ಶಿಕ್ಷಿಸುತ್ತಿದ್ದಾನೆ. ಆದರೆ ನಾವು ಮಾಡಿದ ಯಾವ ತಪ್ಪಿಗೆ ಈ ಶಿಕ್ಷೆ ಎಂಬುದು ಮಾತ್ರ ತಿಳಿಯದಾಗಿದೆ. ನಾವು ನಿಮ್ಮಂತೆಯೇ ವಿಜಯನಗರದವರೊಡನೆ ಸ್ನೇಹದಿಂದಲೇ ನಡೆದುಕೊಂಡೆವು. ಆದರೆ ನಮಗೆ ದೊರೆತುದು ಸ್ನೇಹಹಸ್ತದ ಬದಲು ಕತ್ತಿಯ ಇರಿತ ! ಅದೂ ಬೆನ್ನಿನಲ್ಲಿ! ನಾವು ನಮ್ಮ ಪವಿತ್ರ ವಸ್ತುಗಳಿಗೆ ಅವರು ಗೌರವ ಕೊಡುವರೆಂದು ನಿರೀಕ್ಷಿಸಿದ್ದೆವು – ನಮಗೆ ದೊರೆತುದು ಮದ್ದುಗುಂಡುಗಳ ಪೂಜೆ. ನಾವು ಅವರಿಂದ ಸ್ನೇಹಸೌಹಾರ್ದಗಳನ್ನು ನಿರೀಕ್ಷಿಸಿದ್ದೆವು. ಆದರೆ ದೊರೆತುದು ಕೊಲೆ ಸುಲಿಗೆ ಅತ್ಯಾಚಾರಗಳ ಬಳುವಳಿ ! ನಮ್ಮ ಹಣೆಯಲ್ಲಿ ಈ ಜನ್ಮದಲ್ಲಿ ಶಾಂತಿ ನೆಮ್ಮದಿಗಳನ್ನು ಆ ಪರವರದಿಗಾರ ಅಲ್ಲಾನು ಬರೆದಿಲ್ಲವೆಂದು ಕಾಣುತ್ತದೆ.

"ನಾನು ಅವರಿಗೆ ಯಾವ ತಪ್ಪು ಮಾಡದೆ ಇದ್ದರೂ ಅವರು ನಮ್ಮ ಮೇಲೆ ನನ್ನ ಸಾಮಂತರನ್ನು ಎತ್ತಿ ಕಟ್ಟಿದರು ! ದ್ರೋಹಿ ಜಗರಾಯನಿಂದ ನನ್ನ ಕೊಲೆಗೆ ಸಂಚುಮಾಡಿಸಿದರು ! ನನ್ನನ್ನು ಸಿಂಹಾಸನದಿಂದ ಪದಚ್ಯುತನಾಗಿ ಮಾಡಲು ಅವಣಿಸಿದರು ! ಇಷ್ಟು ಏಕೆ ? ನಾನು ಮಹಮದೀಯನೆಂಬ ಕಾರಣದಿಂದ ! ನನ್ನ ಪ್ರಜೆಗಳು ವಿಧರ್ಮಿಯರೆಂಬ ಕಾರಣದಿಂದ ! ನಾವು ಮುಸಲ್ಮಾನರಾದುದು ನಮ್ಮ ತಪ್ಪೆ ? ಜನತೆ ಇಸ್ಲಾಂ ಧರ್ಮವನ್ನು ಸ್ವೀಕರಿಸಿರುವುದು ಅವರ ತಪ್ಪೆ ? ನಮ್ಮದು ಇಸ್ಲಾಂ ಧರ್ಮವಾದ ಮಾತ್ರಕ್ಕೆ ನಮ್ಮನ್ನೇಕೆ ಅವರು ತಿರಸ್ಕರಿಸಬೇಕು ! ಅವಹೇಳನ ಮಾಡಬೇಕು ! ಈ ನಿರ್ಭಾಗ್ಯ ಜನರು ಆ ಕಾಫರರಿಗೆ ಯಾವ ಅನ್ಯಾಯ ಮಾಡಿದ್ದರೆಂದು ಅವರ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದಾರೆ ? ನಮ್ಮ ಮಸೀದಿಗಳನ್ನೂ, ಪವಿತ್ರ ಕುರಾನನ್ನೂ ಅವರೇಕೆ ಅಪವಿತ್ರಗೊಳಿಸಬೇಕು ? ಹಾಳುಮಾಡಬೇಕು ? ಇದರಿಂದ ಅವರಿಗೆ ಆದ ಲಾಭವಾದರೂ ಏನು ? ನಾವು ಅಸಮರ್ಥರಾಗಿರುವುದರಿಂದ, ಹೇಡಿಗಳಾಗಿರುವುದ

ರಿಂದ ಆ ಕಾಫರರು ನಮಗೆ ಈ ತೊಂದರೆ ಕೊಡುತ್ತಿದ್ದಾರೆ. ನಾವು ಅವರಷ್ಟು ಬಲಶಾಲಿಗಳಾಗಿದ್ದರೆ ಅವರ ಮೇಲೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬಹು ದಾಗಿತ್ತು ! ಆದರೆ ನಮ್ಮ ನಮ್ಮ ಅಂತಃಕಲಹ, ವೈಮನಸ್ಯಗಳಲ್ಲಿ ನಾವು ದುರ್ಬಲರಾಗಿ 'ಶತ್ರುಗಳ ಬಾಯಿಗೆ ಸಿಕ್ಕಿ ಬಿದ್ದಿದ್ದೇವೆ. ಇಸ್ಲಾಂ ಧರ್ಮ ಸಂಸ್ಕೃತಿಗಳ ರಕ್ಷಣೆಯ ಸಲುವಾಗಿ ನಾವು ನಮ್ಮ ಪರಸ್ಪರ ದ್ವೇಷವನ್ನು ಮರೆತು ಒಂದಾಗಬೇಕಾಗಿದೆ. ಇದಾಗದ ಹೊರತು ನಮಗೆ ಗತ್ಯಂತರವಿಲ್ಲ ! ನಾವು ಬದುಕಲು ಸಾಧ್ಯವಿಲ್ಲ. ನಾವು ಹಾಗೆಯೇ ಶತ್ರುಗಳಿಗೆ ಅಂಜುತ್ತಾ, ಅವರ ಎಲ್ಲಾ ಅತ್ಯಾಚಾರಗಳನ್ನು ಸಹಿಸಿಕೊಂಡು ಕುಳಿತರೆ ನಮನ್ನು ಅವರು ತುಳಿಯುವುದು ಮಾತ್ರವಲ್ಲ – ದಕ್ಷಿಣಾ ಪಥದಲ್ಲಿ ಇಸ್ಲಾಂ ಧರ್ಮ, ಸಂಸ್ಕೃತಿಗಳ ಹೆಸರನ್ನು ನಾಮಾವಶೇಷ ಮಾಡುತ್ತಾರೆ. ಈ ಮಾತು ಖಂಡಿತ ! ಅಂತಲೇ ಈಗ ನಾವು ಎಚ್ಚೆತ್ತುಕೊಳ್ಳಬೇಕಾಗಿದೆ. ವೀರರಂತೆ ತಾಯಿನಾಡಿನ ರಕ್ಷಣೆಗಾಗಿ ಸ್ವಧರ್ಮ ರಕ್ಷಣೆಗಾಗಿ ಹೋರಾಡಬೇಕಾಗಿದೆ ! ಇದು ನಮ್ಮಿಂದ ಸಾಧ್ಯವಾಗದೆ ಇದ್ದರೆ ನಾವು ಹೇಡಿಗಳಂತೆ ಕಾಫರ ಧರ್ಮವನ್ನು ಸ್ವೀಕರಿಸಿ, ವಿಜಯನಗರ ದರಸರ ಗುಲಾಮರಾಗಿ ನಮ್ಮ ಬಾಳನ್ನು ನೂಕಬೇಕಾಗಿದೆ. ಈಗ ನಮ್ಮ ಮುಂದೆ ಉಳಿದಿರುವ ಪ್ರಶ್ನೆ ಎರಡೇ ! ನಾವು ವೀರರಂತೆ ಹೋರಾಡಿ ಮಡಿಯುವುದು, ಹೇಡಿಯಂತೆ ಬಂದುದನ್ನು ಒಪ್ಪಿ ಬಾಳುವುದು! ಇದರಲ್ಲಿ ಯಾವುದನ್ನು ಸ್ವೀಕರಿಸ ಬೇಕೆಂಬುದನ್ನು ಇಂದು ನಿರ್ಧರಿಸಬೇಕಾಗಿದೆ ! ಇದನ್ನು ತಮ್ಮೊಂದಿಗೆ ಮಾತ ನಾಡಿ ನಿರ್ಧರಿಸಲು ನಾವು ಬಂದಿದ್ದೇವೆ !" ಎಂದು ಗೋಲ್ಕಂಡದ ಇಬ್ರಾಹಿಂ ಕುತುಬ್‌ಶಹನು ವೀರಾವೇಶದಿಂದ ಹೇಳಿದನು.

ಇದನೆಲ್ಲಾ ನಿರುದ್ವೇಗದಿಂದ ಕೇಳಿ ಸುಮ್ಮನೆ ಕುಳಿತಿದ್ದ ಆಲಿ ಆದಿಲ್ ಷಹನು ಭಾವೋದ್ವೇಗದ ಅಲೆ ಪ್ರಶಾಂತವಾದ ಮೇಲೆ ಹೇಳಿದ:

" ನನ್ನ ಮಾತನ್ನು ನೀವು ತಪ್ಪು ತಿಳಿಯಬಾರದು ! ಈಗ ಇಸ್ಲಾಂ ಧರ್ಮ ಸಂಸ್ಕೃತಿಗಳಿಗೆ ವಿಜಯನಗರದರಸರಿಂದ ಯಾವ ಗಂಡಾಂತರ ಬಂದಿದೆ ಎಂದು ನೀವು ಇಷ್ಟು ಹತಾಶರಾಗಬೇಕು ? ಅವರು ನಮಗೆ ಯಾವ ಕೆಡಕು ಮಾಡಿ ದ್ದಾರೆ !"

ಇದನ್ನು ಕೇಳಿ ನಿಜಾಂಷಹನು ಕೆರಳಿ ಹೇಳಿದ :

" ಅವರಿಂದ ನಮಗೆ ಹೊಸದಾಗಿ ಇನ್ನು ಯಾವ ಗಂಡಾಂತರ ಬರಬೇ ಕಾಗಿದೆ ? ಈಗ ಬಂದಿರುವ ವಿಪತ್ತು ಸಾಲದೆ ? ವಿಜಯನಗರದರಸರಿಂದ ನಮ್ಮ ಧರ್ಮ ಸಂಸ್ಕೃತಿಗಳಿಗೆ ಎಂತಹ ಗಂಡಾಂತರ ಬಂದಿದೆ ಎಂಬುದನ್ನು, ನಮ್ಮ ಜನತೆಗೆ ಅವರಿಂದ ಯಾವ ಹಿಂಸೆ ನಡೆಯುತ್ತಿದೆ ಎಂಬುದನ್ನು ನಾವು ಬಾಯಿ

ಬಿಟ್ಟು ಹೇಳಬೇಕೆ? ನೋಡಿದರೆ ನಿಮಗೆ ತಿಳಿಯದೆ?"

"ನನ್ನ ಮಾತನ್ನು ತಾವು ಶಾಂತಚಿತ್ತದಿಂದ ಆಲಿಸಬೇಕು!

"ಹಿಂದುಗಳೇನೂ ಮುಸಲ್ಮಾನಮತದ ವಿರೋಧಿಗಳಲ್ಲ—ಅವರಿಗೆ ಇಸ್ಲಾಂ ಧರ್ಮದ ಮೇಲೆ ಕೋಪವಿಲ್ಲ, ಆದರಲ್ಲೂ ವಿಜಯನಗರದ ಸಾಮ್ರಾಟ ರಾಮರಾಯರು ಹಿಂದೂಮುಸ್ಲಿಂ ಸಖ್ಯ ಸಾಮರಸ್ಯಗಳಿಗಾಗಿ ಕಂಕಣ ತೊಟ್ಟಿರುವರು. ಧರ್ಮಗಳ ಸಾರವನ್ನೂ ಅರಿತವರು! ಇಬ್ಬರೂ ಒಬ್ಬನೇ ತಂದೆಯ ಮಕ್ಕಳೆಂದು ಎರಡು ಪರಸ್ಪರಸಹೋದರರಂತೆ ಬಾಳಬೇಕೆಂಬ ಕನಸುಕಟ್ಟಿರುವವರು. ಮನುಷ್ಯ ಮನುಷ್ಯನಿಗೆ ಆಚಾರ ವಿಚಾರ, ನಡೆನುಡಿಗಳಲ್ಲಿ ಭೇದವಿದ್ದಮಾತ್ರಕ್ಕೆ ತಾವು ಸಹೋದರರೆಂಬ ಮಾತನ್ನು ಮರೆಯಬೇಕೆ? ಎಂಬ ವಿಶಾಲ ಭಾವನೆ ಅವರದು. ಅವರೆಂದಿಗೂ ಇಸ್ಲಾಂ ಧರ್ಮಕ್ಕಾಗಲೀ, ಇಸ್ಲಾಂ ಸಂಸ್ಕೃತಿಗಾಗಲೀ, ಕೇಡು ಅಗೌರವದಿಂದ ನಡಸಿಕೊಂಡಿಲ್ಲ. ತಮ್ಮ ಉದಾರಾಂತಃಕರಣದಲ್ಲಿ ಅವರು ತಮ್ಮ ನಾಡಿನ ಹಿಂದೂ ಮುಸ್ಲಿಂ ಜನತೆಯನ್ನು ಮಕ್ಕಳಿಗಿಂತ ಅತಿಶಯವಾಗಿ ನೋಡಿಕೊಂಡಿದ್ದಾರೆ. ವಿಜಯನಗರದಲ್ಲಿ ಮುಸ್ಲಿಮರಿಗೆ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಅವರು ಹಿಂದೂಗಳಿಗಿಂತ ಭಿನ್ನವೆಂದು ಯಾವುದರಲ್ಲಿಯೂ ಪಕ್ಷಪಾತ ಮಾಡಿಲ್ಲ. ಇದನ್ನು ನಾನು ಕಣ್ಣಾರ ಕಂಡಿದ್ದೇನೆ. ಕಿವಿಯಾರ ಕೇಳಿದ್ದೇನೆ. ಹೀಗಿರುವಲ್ಲಿ ಅವರಿಂದ ನಮ್ಮ, ಸಂಸ್ಕೃತಿಗಳಿಗೆ ಧಕ್ಕೆ ಬರುವುದೆಂದು ನೀವು ತಿಳಿದಿದ್ದರೆ ಅದು ಕೇವಲ ಭ್ರಾಂತಿಯೇ ಹೊರತು ವಾಸ್ತವ ಸತ್ಯವಲ್ಲ.

"ನೀವು ಇದರ ಸಲುವಾಗಿ ಏಕಿಷ್ಟು ಪರಿತಪಿಸುತ್ತಿದ್ದೀರೋ ನನಗೆ ತಿಳಿಯದಾಗಿದೆ. ನೀವು ವಿಜಯನಗರದ ಅರಸರ ಬಗ್ಗೆ ವೃಥಾ ಶಂಕೆ ಪಡುತ್ತಿದ್ದೀರಿ. ನಮ್ಮೊಡನೆ ಸ್ನೇಹದಿಂದ ಇರಬೇಕೆನ್ನುವುದೇ ವಿಜಯನಗರದರಸರ ಆಶಯ. ಅವರು ವಿಶ್ವಾಸಕ್ಕೆ ವಿಶ್ವಾಸ ಕೊಡುತ್ತಾರೆ. ಸ್ನೇಹಕ್ಕೆ ಸ್ನೇಹ ಕೊಡುತ್ತಾರೆ. ಅವರ ಮೇಲೆ ಸಂಶಯಪಟ್ಟು ಅವರ ಸ್ನೇಹ ಹಸ್ತವನ್ನು ತಿರಸ್ಕರಿಸಿದರೆ ಇದು ನಮ್ಮ ತಪ್ಪೇ ಹೊರತು ಅವರ ತಪ್ಪಲ್ಲ. ಈಗಲೂ ನೀವು ಹಿಂದಾದುದನ್ನು ಮರೆತು ಅವರೊಡನೆ ನಿಜವಾದ ಸಖ್ಯವನ್ನು ಬಯಸುವುದಾದರೆ ಅದನ್ನು ಕೊಡಲು ಅವರೆಂದಿಗೂ ಹಿಂಜರಿಯುವುದಿಲ್ಲವೆಂಬ ನಂಬಿಕೆ ನನಗಿದೆ. ನೀವು ವಿಜಯನಗರದವರ ನಿಜವಾದ ಮಿತ್ರರಾಗುವುದಾದರೆ, ಅವರು ನಿಮ್ಮನ್ನು ವಿಶ್ವಾಸಗೌರವಗಳಿಂದ ನಡಸಿಕೊಳ್ಳುತ್ತಾರೆ. ನೀವು ಹಿಂದೂ ಮಹಮ್ಮದೀಯರ ಸಖ್ಯಸಾಮರಸ್ಯಗಳಿಗೆ ಪ್ರಯತ್ನಿಸುವುದಾದರೆ ಅವರು ನಿಮ್ಮನ್ನು ಪರಮಾಪ್ತ ಮಿತ್ರರೆಂದೇ ತಿಳಿಯುತ್ತಾರೆ. ಈ ಬಗ್ಗೆ ಯಾವ ಒಪ್ಪಂದಕ್ಕೂ ಅವರು ಸಿದ್ಧ

ರಿದ್ದಾರೆ. ಇದನ್ನು ನಾನು ಸಾಧಿಸಿಕೊಡುತ್ತೇನೆ. ನಿಜವಾದ ಸ್ನೇಹ ಸೌಹಾರ್ದಗಳು ನಿಮಗೆ ಬೇಕಾದರೆ ಅದನ್ನು ಸಾಧಿಸಿಕೊಡಲು ನನ್ನಿಂದಾಗುವ ಎಲ್ಲ ಪ್ರಯತ್ನ ಮಾಡುತ್ತೇನೆ.

"ಹಿಂದುವೇ ಆಗಲೀ, ಮುಸಲ್ಮಾನನೇ ಆಗಲಿ, ಅವರು ಪರಸ್ಪರ ಸ್ನೇಹದಿಂದ ಇರದ ಹೊರತು ಇಬ್ಬರ ಉದ್ಧಾರವಿಲ್ಲ. ಇಬ್ಬರಿಗೂ ಉಳಿಗಾಲವಿಲ್ಲ. ಪರಸ್ಪರ ಸ್ನೇಹ ಸೌಹಾರ್ದಗಳೇ ಇವರಿಬ್ಬರೂ ಬದುಕುವ ದಾರಿ. ದ್ವೇಷ ಹಗೆತನಗಳು ಎಂದಿದ್ದರೂ ವಿನಾಶದ ಹಾದಿಯೇ ಹೊರತು ಬದುಕುವ ದಾರಿಯಲ್ಲ. ನಾವು ಪರಸ್ಪರ ನಂಬಿಕೆ, ಪ್ರೀತಿ ವಿಶ್ವಾಸಗಳನ್ನು ಬೆಳೆಸಿಕೊಂಡರೆ ಸ್ನೇಹಿತರಾಗಲು ಸಾಧ್ಯವಿದೆ. ಹಿಂದೂ ಮುಸ್ಲಿಮರ ಸಖ್ಯದ ಮೇಲೆ ನಮ್ಮ ಎರಡು ರಾಷ್ಟ್ರಗಳ ಸೌಭಾಗ್ಯ ನೆಮ್ಮದಿಗಳು ನಿಂತಿವೆ, ಎಂದೇ ನನ್ನ ಭಾವನೆ."

"ಹಾಗಾದರೆ ವಿಜಯನಗರದರಸರು ನಿಮಗೆ ಚೆನ್ನಾಗಿ ಮಂಕುಬೂದಿ ಹಾಕಿದ್ದಾರೆ." ಎಂದು ಕುತುಬ್‌ಷಹನು ಉದ್ಗಾರ ತೆಗೆದ.

"ನನಗೆ ಯಾರೂ ಯಾವ ಮಂಕುಬೂದಿಯನ್ನೂ ಹಾಕಿಲ್ಲ. ನಾನು ಎಲ್ಲವನ್ನೂ ವಿಚಾರ ಮಾಡಿ ಈ ನಿರ್ಧಾರಕ್ಕೆ ಬಂದಿದ್ದೇನೆ."

"ನಿಮ್ಮ ವಿಚಾರ ತಪ್ಪುದಾರಿ ಹಿಡಿದಿದೆ ಎಂದು ನಾವು ವಿಷಾದದಿಂದ ಹೇಳಬೇಕಾಗಿದೆ. ನೀವು ಬೆಳ್ಳಗಿರುವುದನ್ನೆಲ್ಲಾ ಹಾಲೆಂದು ಭ್ರಮಿಸಿರುವಂತಿದೆ. ನಮ್ಮ ಅನುಭವ ನಿಮ್ಮದಕ್ಕಿಂತ ಭಿನ್ನವಾಗಿದೆ. ಸುಲ್ತಾನರು ನನ್ನ ಮಾತನ್ನು ಅನ್ಯಥಾ ತಿಳಿಯಬಾರದು. ನಿಮಗಿಂತಲೂ ನಾನು ಮೊದಲು ವಿಜಯನಗರದರಸರ ಮಿತ್ರನಾಗಿದ್ದವನು. ನನಗೂ ಸಾಮ್ರಾಟ್ ರಾಮರಾಯರಿಗೂ ನಿಮ್ಮಲ್ಲಿರುವಷ್ಟೇ ಪ್ರೀತಿ ವಿಶ್ವಾಸಗಳು ಆದರ, ಅಭಿಮಾನಗಳು ಇದ್ದುವು. ನಾನು ಅವರ ಅಂತರಂಗದ ಮಿತ್ರರಲ್ಲಿ ಒಬ್ಬನೆಂದು ಪರಿಗಣಿಸಲ್ಪಟ್ಟಿದ್ದೆ. ಅವರ ಸಹೋದರರು ಅವರ ವಿರುದ್ಧ ನಿಂತಾಗ ನಾನು ಅವರ ಬೆಂಬಲಿಗನಾಗಿದ್ದೆ— ನಿಜವಾದ ಮಿತ್ರನಂತೆ ಅವರ ವಿದ್ರೋಹವನ್ನು ಅಡಗಿಸಲು ನೆರವಾಗಿದ್ದೆ. ನಮ್ಮ ಸ್ನೇಹ ನಿಷ್ಠೆಗಳು ಹಾಗಿದ್ದುವು.....ಆಗ ನಾನೂ ನಿಮ್ಮಂತೆ ಅವರ ಹಿಂದೂ ಮುಸ್ಲಿಂ ಸಖ್ಯದ ಉದ್ಗಾರಗಳಿಗೆ ಮಾರುಹೋಗಿದ್ದೆ. ಅವರ ಆದರ್ಶಗಳನ್ನು ಮೆಚ್ಚಿಕೊಂಡಿದ್ದೆ. ಅವರನ್ನು ನನ್ನ ಹಿರಿಯ ಮಿತ್ರರೆಂದೂ ಹಿಂದೂ ಮುಸ್ಲಿಮರ ಸಖ್ಯ ಸಾಧಿಸಲು ಅಲ್ಲಾನ ಕೃಪೆಯಿಂದ ಅವತರಿಸಿರುವ ಪ್ರವಾದಿ ಎಂದೂ ಭಾವಿಸಿದ್ದೆ. ಆದರೆ ನಮ್ಮಿಬ್ಬರ ಸ್ನೇಹ, ಪ್ರೀತಿ ವಿಶ್ವಾಸಗಳ ಗತಿ ಏನಾಯಿತೆಂಬುದು ನಿಮಗೆ ತಿಳಿದಿದೆ. ಅವರು ನನ್ನ ವಿಶ್ವಾಸಕ್ಕೆ ದ್ರೋಹ ಬಗೆದರು. ವೃಥಾ ನನ್ನ ಮೇಲೆ ಶಂಕಿಸಿದರು; ನನ್ನ ವಿರುದ್ಧ ಕತ್ತಿ ಕಟ್ಟಿದರು. ನನ್ನ

ರಾಜ್ಯದ ಮೇಲೆ ದಂಡೆತ್ತಿ ಬಂದು ಕೊಳ್ಳೆ ಹೊಡೆದರು. ಜನತೆಯನ್ನು ಪರಿಪರಿಯಲ್ಲಿ ಹಿಂಸಿಸಿದರು. ಕೊಲೆ ಸುಲಿಗೆ ಅತ್ಯಾಚಾರಗಳಿಂದ ನನ್ನ ರಾಜ್ಯವನ್ನು ಹಾಳುಗೆಡಹಿದರು. ನಾನು ಅವರ ಮಿತ್ರನಾಗಿದ್ದುದಕ್ಕೆ ನನಗೆ ದೊರೆತ ಪ್ರತಿಫಲವಿದು. ಈಗಲೂ ಆ ಧೂರ್ತದೊರೆಯ ಸವಿಮಾತುಗಳಿಗೆ ನಾನು ಮರುಳಾಗಬೇಕೆಂದು ನೀವು ಹೇಳುವಿರಾ? ಆ ದ್ರೋಹಿಯು ಇಂತಹ ಗೋಮುಖ ವ್ಯಾಘ್ರನೆಂದು ತಿಳಿದಮೇಲೆ ಅವನೊಡನೆ ಇನ್ನೂ ಸ್ನೇಹದಿಂದ ಇರಲು ಸಾಧ್ಯವೇ ?.... ನೀವೇ ಹೇಳಿ ?....

"ಈಗ ಅವರ ನಿಜವಾದ ಸ್ವರೂಪ ನನಗೆ ತಿಳಿದಿದೆ. ಅವರು ನಿಮ್ಮನ್ನು ವಂಚಿಸಿದಂತೆ ನನ್ನನ್ನು ಸವಿಮಾತಿನಿಂದ ಮರುಳು ಮಾಡಲಾರರು. ಅವರ ನಿಜವಾದ ಯೋಗ್ಯತೆ ನನಗೆ ತಿಳಿದಿದೆ. ಅವರಿಗೆ ಬೇಕಾಗಿರುವುದು ಹಿಂದೂ ಮುಸ್ಲಿಂ ಸಖ್ಯವಲ್ಲ–ಸಾಮರಸ್ಯವೂ ಅಲ್ಲ! ದಖನ್ನಿನಲ್ಲೆಲ್ಲಾ ಏಕೈಕ ಹಿಂದೂ ಸಾಮ್ರಾಜ್ಯ ಸ್ಥಾಪಿಸುವುದು. ಈ ಕಾರ್ಯಸಾಧನೆಗೆ ಹಿಂದೂ ಮುಸ್ಲಿಂಸಖ್ಯ–ಕೇವಲ ಒಂದು ಸಾಧನ ಮಾತ್ರ. ಇದರಿಂದ ನಮ್ಮ ನಮ್ಮಲ್ಲಿರುವ ಅಂತಃಕಲಹಗಳಿಗೆ ಗಾಳಿಹಾಕಿ ತಾವು ಪ್ರಬಲರಾಗಿ, ಕಡೆಗೆ ನಮ್ಮನ್ನು ಆಶ್ರಿತ ರಾಜರ ಸ್ಥಿತಿಗೆ ಇಳಿಸಿ, ಕಡೆಗೆ ನಮ್ಮನ್ನು ನಿಶ್ಶೇಷಗೊಳಿಸಿದಂತೆ, ದಖನ್ನಿನಿಂದ ಇಸ್ಲಾಂಧರ್ಮವನ್ನು, ಸಂಸ್ಕೃತಿಯನ್ನು–ನಾಗರಿಕತೆಯನ್ನು ತೊಡೆದು ಹಾಕಬೇಕೆಂಬುವೇ ಅವರ ಜೀವಿತದ ಪರಮ ಗುರಿಯಾಗಿದೆ. ಈ ಮಹತ್ವಾಕಾಂಕ್ಷೆಯ ಸಾಧನೆಗಾಗಿ ಅವರು ನಮ್ಮನ್ನು ತಾವು ಹಾಕುವ ದಾಳಕ್ಕೆ ಸರಿಯಾಗಿ ನಡಸುತ್ತಿದ್ದಾರೆ. ಅವರ ಈ ಪಗಡೆಯಾಟದ ರಹಸ್ಯವೇನೆಂಬುದನ್ನು ನಾನು ಭೇದಿಸಿದ್ದೇನೆ. ಈಗ ನಾವು ಎಚ್ಚೆತ್ತುಕೊಂಡು, ಅವರ ವಿರುದ್ಧ ಒಂದಾಗದಿದ್ದರೆ ನಾವು ನಿಶ್ಶೇಷವಾಗುವುದರಲ್ಲಿ ಸಂಶಯವಿಲ್ಲ. ಇದನ್ನೆಲ್ಲಾ ವಿಚಾರ ಪರರಾದ ನೀವು ಕೂಲಂಕಷವಾಗಿ ವಿಚಾರಿಸಿ, ಯಾವ ನಿರ್ಧಾರವನ್ನೂ ಕೈಗೊಳ್ಳಬೇಕಾಗಿದೆ. ನಿಮ್ಮ ನಿರ್ಧಾರದಮೇಲೇ ಬಹಮನಿ ಅರಸರ ಏಳಿಗೆ ಬೀಳಿಗೆ ಇಸ್ಲಾಂಧರ್ಮದ ಅಳಿವು ಉಳಿವು ನಿಂತಿವೆ."

—ಎಂದು ಇಬ್ರಾಹಿಂ ಕುತುಬ್‌ಷಹನು ಆವೇಶದಲ್ಲಿ ನುಡಿದ.

"ಇದರಲ್ಲಿ ಹೊಸದಾಗಿ ವಿಚಾರಮಾಡಬೇಕಾದ ಯಾವ ವಿಶೇಷ ಅಂಶಗಳೂ ಕಾಣುವುದಿಲ್ಲ. ನೀವು ವಿಜಯನಗರದ ಸಾಮ್ರಾಟರ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಂಡಿದ್ದೀರಿ. ಅಂತಲೇ ಈ ಎಲ್ಲಾ ಸಂಶಯದ ಮಾತು. ಆದರೆ ರಾಮರಾಯರೆಂತಹನಿರ್ಮಲ ಹೃದಯರು. ಅವರ ಮನಸ್ಸು ಎಷ್ಟು ವಿಶಾಲವಾದುದು ಎಂಬುದನ್ನು ನಾನು ಸ್ವಾನುಭವದಿಂದ ತಿಳಿದಿದ್ದೇನೆ. ನಿಮ್ಮ ಸಾವಿರ ಮಾತುಗಳು ಅದನ್ನು ಸುಳ್ಳು ಮಾಡಲಾರವು. ಅವರು ನನ್ನನ್ನು ತಮ್ಮ ಪುತ್ರನೆಂಬಂತೆ ನಡಸಿ

ಕೊಳ್ಳುತ್ತಿದ್ದರೆ–ನಾನು ಮುಸಲ್ಮಾನ, ವಿಧರ್ಮಿ ಎಂದು ತಿಳಿದಿದ್ದರೆ ಅವರು ನನ್ನ ಆ ನಿರ್ವ್ಯಾಜಪ್ರೇಮದ ಅಮೃತವರ್ಷವನ್ನು ಕರೆಯುತ್ತಿದ್ದರೆ? ನೀವು ಅವರನ್ನು ಬಣ್ಣದ ಗಾಜಿನಿಂದ ನೋಡುತ್ತಿರುವುದರಿಂದ ಅವರ ವರ್ತನೆಯಲ್ಲಿ ವಿಪರೀತಾರ್ಥ ಕಾಣುತ್ತಿದ್ದೀರಿ. ಇದಕ್ಕೆಲ್ಲಾ ಅವರ ಬಗ್ಗೆ ನಿಮಗಿರುವ ಪೂರ್ವಾಗ್ರಹವೇ ಕಾರಣ. ನೀವು ನಿಮ್ಮ ಪೂರ್ವಾಭಿಪ್ರಾಯವನ್ನು ಮರೆತು ಅವರೊಡನೆ ಸ್ನೇಹದಿಂದ ನಡೆದುಕೊಂಡುದಾದರೆ, ನಿಮಗೆಂದಿಗೂ ಅವರು ದ್ರೋಹ ಬಗೆಯುವುದಿಲ್ಲವೆಂಬ ನಂಬಿಕೆ ನನಗೆ ಇದೆ. ನೀವು ತಿಳಿದಂತೆ ಸಾಮ್ರಾಟ್ ರಾಮರಾಯರು ಗೋಮುಖವ್ಯಾಘ್ರರಲ್ಲ. ತಾವು ತಿಳಿದುದನ್ನು ಕಾಯಾ ವಾಚಾ ಮನಸಾ ಆಚರಿಸುವವರು. ಇದರಲ್ಲಿ ಯಾವ ಮೋಸವಿಲ್ಲ, ವಂಚನೆಯಿಲ್ಲ ಎಂದು ನನ್ನ ಅಂತಃಸಾಕ್ಷಿ ಹೇಳುತ್ತಿದೆ. ಹೀಗಿರುವಲ್ಲಿ ನಾನು ನಿಮ್ಮ ಮಾತನ್ನು ಹೇಗೆ ನಂಬಲಿ?"

"ನೀವು ವಿಜಯನಗರದರಸನ ಇಬ್ಬಗೆಯ ವ್ಯಕ್ತಿತ್ವದಲ್ಲಿ ಒಂದು ಮುಖವನ್ನು ಮಾತ್ರ ಅರಿತುಕೊಂಡಿದ್ದೀರಿ. ಅವನ ನಿಜವಾದ ಸ್ವರೂಪವನ್ನು ನೀವು ತಿಳಿದಿದ್ದರೆ ನೀವೂ ನನ್ನಂತೆ ಅವನ ಬಗ್ಗೆ ಸಂಶಯಗ್ರಸ್ಥರಾಗುತ್ತಿದ್ದಿರಿ. ಅವನ ಮಹತ್ವಾಕಾಂಕ್ಷೆಯನ್ನು ತೀರಿಸಲು, ಹಿಂದೂ ಮುಸ್ಲಿಂ ಸಖ್ಯದ ಮಾತು ಕೇವಲ ಸೋಗೆಂದು ತೋರಿಸಲು, ಮುಸಲ್ಮಾನ ಧರ್ಮ ಸಂಸ್ಕೃತಿಗಳ ಬಗ್ಗೆ—ಸತೀಧರ್ಮದ ಬಗ್ಗೆ ಅವನಿಗೆ ಇರುವ ಕೀಳು ಅಭಿಪ್ರಾಯಗಳಿಗೆ ಅವನು ಅಹಮದ್‌ನಗರ ಗೋಲ್ಕಂಡಗಳಲ್ಲಿ ನಡಸಿದ ದುಷ್ಕೃತ್ಯಗಳೇ ಸಾಕ್ಷಿ! ಇದಕ್ಕೆ ಇತ್ತೀಚೆಗೆ ನಡೆದ ತುಂಬಿದ ಸಭೆಯಲ್ಲಿ ಮಮ್ತಾಜಳೆಂಬ ನಿರ್ಭಾಗ್ಯ ಸ್ತ್ರೀಯನ್ನು ಮಾನಭಂಗ, ಶೀಲಭಂಗ ಮಾಡಿದ ಪ್ರಕರಣಕ್ಕಿಂತ ಬೇರೆ ನಿದರ್ಶನ ಬೇಕೆ?" ಎಂದು ಮಮ್ತಾಜಳ ಕಥೆಯನ್ನು ಬಣ್ಣಗಟ್ಟಿ ಹೇಳಿದ.

ರಾಮರಾಯನು ಚಿತ್ರಕೂಟ ಅರಮನೆಯಲ್ಲಿ ಅವಳ ಮೇಲೆ ಅತ್ಯಾಚಾರ ನಡಸಲು ಬಂದಾಗ ಅವಳು ಅವನ ಕೈಯಿಂದ ತಪ್ಪಿಸಿಕೊಂಡು ಹುಚ್ಚಿಯಂತೆ, ಬುರುಕಿ ಇಲ್ಲದೆ ತಿರುಗುತ್ತಿರುವಳೆಂದೂ ಬಣ್ಣಿಸಿದ.

ಈ ಎಲ್ಲ ಸಂಗತಿಗಳನ್ನು ಅಹಮದ್‌ನಗರದ ಹುಸೇನ್ ನಿಜಾಮಷಹನು ಹೇಳಿದಾಗ ಆಲಿ ಆದಿಲ್‌ಷಹನಿಗೆ ಅವನ ಮಾತಿನಲ್ಲಿ ಕೊಂಚವಾದರೂ ಸತ್ಯವಿರಬೇಕೆಂದು ಅನಿಸಿತು. ಇದನ್ನು ಕೂಲಂಕಷವಾಗಿ ತಿಳಿಯದ ಹೊರತು ಅವನು ಈ ಬಗ್ಗೆ ಏನೂ ಹೇಳಲು ಸಿದ್ಧನಿರಲಿಲ್ಲ. ಅವನು ಸುಮ್ಮನೆ ಕುಳಿತುದನ್ನು ಕಂಡು ಹುಸೇನ್ ನಿಜಾಮಷಹನು ಹೇಳಿದ:

"ಮಮ್ತಾಜಳು ನನ್ನ ಪ್ರಜೆ ಮಾತ್ರವಲ್ಲ—ನನ್ನ ವಿಶ್ವಾಸಕ್ಕೆ ಪಾತ್ರ

ರಾಗಿದ್ದ ಜುಮ್ಮಾ ಮಸೀದಿಯ ಖಾಜಿಯ ಮಗಳು – ಒಂದು ರೀತಿಯಾಗಿ ನನಗೆ ಪುತ್ರಿಯಾಗಬೇಕು. ಅವಳ ಸಂಸಾರಕ್ಕೆ ಆ ಧೂರ್ತ ಸಾಮ್ರಾಟನಿಂದ ಉಂಟಾಗಿರುವ ಅತ್ಯಾಚಾರ ಒಂದೆರಡಲ್ಲ. ಇವು ಸತ್ಯವೆನ್ನಲು ಸಾವಿರ ಸಾಕ್ಷಿಗಳಿವೆ. ನಿಮಗೆ ಮುಮ್ತಾಜಳ ಬಾಯಲ್ಲೇ ಅವಳ ದುರಂತ ಕತೆ ಕೇಳುವ ಇಚ್ಛೆಯಾದರೆ ಅವಳನ್ನೇ ತಮ್ಮಲ್ಲಿಗೆ ಕಳುಹಿಸಿಕೊಡುತ್ತೇವೆ."

"ಈ ಪ್ರಸಂಗ ನೀವು ಹೇಳಿರುವಂತೆ ನಡೆದಿದೆ ಎಂದು ನಂಬಲು ನನ್ನ ಮನಸ್ಸು ಏಕೋ ಸಿದ್ಧವಿಲ್ಲ. ಎಲ್ಲವನ್ನೂ ಬಲ್ಲ ಸಾಮ್ರಾಟರು, ಹಿಂದೂ ಮುಸಲ್ಮಾನ ಧರ್ಮಕ್ಕೆ ಪೂಜ್ಯತೆಯನ್ನೂ ಗೌರವವನ್ನೂ ತೋರುವ ಆದರ್ಶ ಪ್ರಭುಗಳು — ಒಬ್ಬ ಸ್ತ್ರೀಯನ್ನು ತುಂಬಿದ ಸಭೆಯಲ್ಲಿ ಅಪಮಾನಗೊಳಿಸುವರೆಂದರೆ ನನಗೆ ಏಕೋ ನಂಬಿಕೆಯಾಗಲೊಲ್ಲದು. ಈ ಬಗ್ಗೆ ಎಲ್ಲವನ್ನೂ ರಾಮರಾಯನಿಂದಲೇ ತಿಳಿಯದ ಹೊರತು ನಿಮಗೆ ನಾನು ಏನೂ ಹೇಳಲಾರೆ. ಒಂದು ವೇಳೆ ಈ ಸಂಗತಿ ನಿಜವಾಗಿದ್ದರೆ ಇದಕ್ಕಾಗಿ ನಾನು ವಿಷಾದಿಸುತ್ತೇನೆ. ಇದು ಸತ್ಯ ಸಂಗತಿಯಾಗದಿರಲೆಂದು ನಾನು ಅಲ್ಲಾನಲ್ಲಿ ಪ್ರಾರ್ಥಿಸುತ್ತೇನೆ!" ಎಂದು ಅಲಿ ಅದಿಲ್‌ಷಹನೊಂದಿಗೆ ನುಡಿದ.

"ನೀವು ಈ ಸಂಗತಿಯನ್ನು ನಿಮಗೆ ಬೇಕಾದ ವ್ಯಕ್ತಿಗಳಿಂದ ತಿಳಿದುಕೊಳ್ಳಬಹುದು. ನಾವು ಹೇಳಿದುದು ಅಲ್ಲಾನ ಆಣೆಗೂ ಸತ್ಯ. ಇದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಒಂದು ವೇಳೆ ನಾವು ಹೇಳಿದ ಕಥೆ ನಿಜವಾಗಿದ್ದರೆ ಆಗಲಾದರೂ ನಿಮಗೆ ನಮ್ಮ ಮಾತಿನಲ್ಲಿ ನಂಬಿಕೆ ಉಂಟಾಗುವುದೆ? ಹಿಂದೂ ಮುಸ್ಲಿಮರ ಸಖ್ಯವನ್ನು ಸಾಧಿಸಲು ಹೊರಟಿರುವ ನೀವು ತಿಳಿದಿರುವ ಆದರ್ಶ ಸಾಮ್ರಾಟನು ಗೋಮುಖ ವ್ಯಾಘ್ರನೆಂದು ಆಗಲಾದರೂ ನಂಬುತ್ತೀರಾ? ಅವನ ಮಹತ್ವಾಕಾಂಕ್ಷೆಯನ್ನು ಅಪಹರಿಸಲು ನಮ್ಮೊಂದಿಗೆ ಸಹಕರಿಸುತ್ತೀರಾ? ನಾವು ನಡಸಲಿರುವ ಧರ್ಮಯುದ್ಧದಲ್ಲಿ ಸಹಾಯ ಮಾಡುತ್ತೀರಾ?"

—ಒಮ್ಮೆಲೇ ನಾಲ್ಕಾರು ಪ್ರಶ್ನೆ ಕೇಳಿದ ಹುಸೇನ್‌ನಿಜಾಂಷಹ.

"ಇದನ್ನು ಅನಂತರ ನಿರ್ಧರಿಸಿ ತಿಳಿಸುತ್ತೇನೆ. ಈಗ ಮುಮ್ತಾಜಳ ಸಂಗತಿ ನಿಜವೆಂದು ಹೊರಪಡಲಿ."

"ಈ ಬಗ್ಗೆ ನಮ್ಮ ಒತ್ತಾಯವಿಲ್ಲ. ನಾವು ಹೇಳಿದ ಸಂಗತಿಯನ್ನು ನೀವು ಕೂಲಂಕಷವಾಗಿ ವಿಚಾರ ಮಾಡಿ, ನಮಗೆ ನಿಮ್ಮ ಅಂತಿಮ ನಿರ್ಧಾರವನ್ನು ತಿಳಿಸಿ." ಎಂದು ಹೇಳಿ ಅಲಿ ಅದಿಲ್‌ಷಹನಿಂದ ಅವರು ಬೀಳ್ಕೊಂಡು ಹೊರಟು ಹೋದರು.

ತಾನು ರಾಮರಾಯನ ಬಗ್ಗೆ ಹೇಳಿದ್ದ ಎಲ್ಲ ಸಂಗತಿಯನ್ನು ನೆನೆದು ಅಲಿ

ಅದಿಲ್‌ಷಹನಿಗೆ ಗಾಬರಿಯಾಯಿತು. ಅವನು ಕೂಡಲೇ ಮುಮ್ತಾಜಳ ಸಂಗತಿಯನ್ನು ತಾನೇ ತಿಳಿದುಬರಲು ವಿಜಯನಗರಕ್ಕೆ ಹೋಗಲು ಚಡಪಡಿಸಿದ. ಆದರೆ ಇದರಿಂದ ಕೆಲಸ ಸಾಧಿಸಲಾರದೆಂದು ಅವನಿಗೆ ಅನಿಸಿ, ರಾಮರಾಯನ ಆಸ್ಥಾನದಲ್ಲಿ ನಡೆದಿದ್ದ ವಿದ್ಯಮಾನವನ್ನು – ವಾಸ್ತವಸಂಗತಿಯನ್ನು ಇದ್ದುದನ್ನು ಇದ್ದಂತೆ ತಿಳಿದು ಬರಲು ತನ್ನ ನಂಬಿಕೆಯ ಮಿತ್ರನೊಬ್ಬನನ್ನು ರಾಯಭಾರಿಯಾಗಿ ಕಳುಹಿಸಿಕೊಟ್ಟನು.

## ೧೮

ಮುಮ್ತಾಜಳ ಪ್ರಕರಣದಲ್ಲಿ ನಡೆದಿದ್ದ ಸತ್ಯಸಂಗತಿಯನ್ನು ತಿಳಿದುಬರಲು ಬಿಜಾಪುರದ ಸುಲ್ತಾನ ಆಲಿ ಅದಿಲ್‌ಷಹನು ಕಳುಹಿಸಿಕೊಟ್ಟಿದ್ದ ಮಹಲದಾರನು ವಿಜಯನಗರಕ್ಕೆ ಬಂದು ರಾಮರಾಯನಿಗೆ ಭೇಟಿಯಾದನು. ಮುಂದೇನಾಯಿತೆಂಬುದನ್ನು ಆ ಕಾಲದಲ್ಲಿ ರಾಮರಾಯನ ಆಸ್ಥಾನದಲ್ಲಿದ್ದು, ನಡೆದ ಸಂಗತಿಯನ್ನೆಲ್ಲಾ 'ರಾಮರಾಯನ ಬಖೈರು' ಎಂಬ ಹೆಸರಿನಲ್ಲಿ ಬರೆದಿಟ್ಟು ಹೋಗಿರುವ ತಿರುಮಲ ಹುರಿಕಾರನೆಂಬ ಆಸ್ಥಾನಿಕನ ವರದಿಯಿಂದ ತಿಳಿಯುವುದು ಹೆಚ್ಚು ಸಮಂಜಸವಾಗಿದೆ.

"ನಾನು ಕರ್ಣಾಟಕ ದೇಶಾಧಿಪತಿ ರಾಮರಾಜರ ಸನ್ನಿಧಿಯಲ್ಲಿ ಇರುತ್ತಾ ಇದ್ದೆನು. ಒಂದು ದಿನ ಆಲಿ ಅದಿಲ್‌ಷಹನ ಮಹಲುದಾರನು ತನ್ನ ದಣಿಯ ಪ್ರಯೋಜನದ ನಿಮಿತ್ತವಾಗಿ ಕಾಗದ ಪತ್ರಗಳನ್ನು ತೆಗೆದುಕೊಂಡು ಒಂದು ರಾಜಾದ್ವಾರದಲ್ಲಿ ನಿಂತು ತಾನು ಬಂದಿರುವ ವಿಷಯವನ್ನು ಅರಸರಿಗೆ ಹೇಳಿ ಕಳುಹಿಸಿದನು. ಈ ವರ್ತಮಾನವನ್ನು ಕೇಳುತ್ತಲೇ ಅರಸರು ತಮ್ಮ ದಳವಾಯಿಯನ್ನು ಕರೆಸಿ, ಆಲಿ ಅದಿಲ್‌ಷಹನ ಕಡೆಯವರನ್ನು ಆನಂದ ಮಹಲಿನ ಬಳಿಗೆ ಇಳಿಸಿ, ಆ ಮಹಲುದಾರರ ಯೋಗ್ಯತಾನುಸಾರ ಅವರ ಕರ್ಚಿಗೆ ಕೊಟ್ಟು ಪರಾಮರಿಕೆ ಮಾಡುವುದು' ಎಂದು ಆಜ್ಞಾಪಿಸಿದನು.

"ಅದೇ ಪ್ರಕಾರ ದಳವಾಯಿಯು ಬಂದು ಮಹಲುದಾರನನ್ನು ಆನಂದ ಮಹಲಿನಲ್ಲಿ ಇಳಿಸಿ ಅವನ ಯೋಗ್ಯತಾನುಸಾರ ಅವನ ಕರ್ಚಿಗೆ ಕೊಟ್ಟು ಗೌರವದಿಂದ ಕಂಡು, ಅನಂತರ ಈ ಆದ್ಯಂತ ವರ್ತಮಾನಗಳನ್ನು ದಳವಾಯಿಯು ಅರಸರಿಗೆ ಅರಿಕೆ ಮಾಡಿಕೊಂಡನು.

"ಮಹಲುದಾರನು ಆ ದಿನ ಆನಂದಮಹಲಿನಲ್ಲಿ ವಿಶ್ರಮಿಸಿಕೊಂಡು ಮಾರನೆಯ ದಿನ ಪ್ರಾತಃಕಾಲ ಎದ್ದು, ಕೈಕಾಲು ಮೋರೆಯನ್ನು ತೊಳೆದು

ಕೊಂಡು, ನಮಾಜು ಮಾಡಿ ತನ್ನೊಳಗೇ ಹೀಗೆ ಹೇಳಿಕೊಂಡನು.

'ಅರಸರಾದ ರಾಮರಾಯರು ನನ್ನನ್ನು ತಮ್ಮ ಸಮ್ಮುಖಕ್ಕೆ ಬರಮಾಡಿಕೊಂಡು, ನಮ್ಮ ದಣಿಗಳ ಕಾಗದ ಪತ್ರಗಳನ್ನು ಪರಾಂಬರಿಸದೆ ಉದಾಸೀನ ಮಾಡಿದರು. ನಾನು ಯಾವ ಮಾತನ್ನೂ ಆಡಿಕೊಳ್ಳಬಾರದು. ಹೆಚ್ಚು ಮಾತನಾಡಿದರೆ ಮಾನ ಉಳಿಯುವುದಿಲ್ಲ. ನಾನು ಎಷ್ಟೆಂದರೂ ದುರ್ಬಲ ಸೇವಕ, ಸರ್ವಪ್ರಕಾರದಲ್ಲಿ ಮಾನ ಉಳಿಸಿಕೊಂಡು ಹೋಗುವುದೇ ಉತ್ತಮ ದಾರಿ' ಎಂದು ಆಲೋಚಿಸಿ ದೊಡ್ಡ ಆನೆಯನ್ನು ಏರಬೇಕಾದರೂ ಹಿಂದು ಮುಂದು ನೋಡಿ ಏರಬೇಕಾದೀತು! ಅರಸರ ಬಳಿ ಹೆಚ್ಚು ಜೋರು ಮಾಡಬೇಕಾದರೆ ದೂರ ದೃಷ್ಟಿಯಿಂದ ಮಾಡಬೇಕು ಎಂದು ಸಮಾಧಾನ ಪಡಿಸಿಕೊಂಡನು.

"ಮರುದಿನ ರಾಮರಾಯನಿಗೆ, ದೊರೆಗಳು ನಾನು ಬಂದ ಕ್ಷಣವೇ ಸಮ್ಮುಖಕ್ಕೆ ಉಚಿತ ರೀತಿಯ ಲ್ಲಿ ಕರೆಸಿಕೊಂಡು ವಿಚಾರಿಸಲಿಲ್ಲ, ನಾನು ತಂದಿರುವ ಕಾಗದ ಪತ್ರಗಳು ಬಹು ನಾಜೂಕಾದವು. ಈಗಲಾದರೂ ಕರೆಸಿಕೊಂಡರೆ ಹುಜೂರಿನ ಸನ್ನಿಧಾನದಲ್ಲಿ ಕಾಗದ ಪತ್ರಗಳನ್ನು ಒಪ್ಪಿಸಿ, ಬಂದಿರುವ ಮಹತ್ಕಾರ್ಯವನ್ನು ಬಿನ್ನಹ ಮಾಡಿಕೊಂಡೇನು, ಎಂದು ಅವನು ಹೇಳಿಕಳುಹಿಸಿದನು.

"ಇದನ್ನು ಕೇಳಿ ರಾಜಾಧಿರಾಜ ರಾಮರಾಯನು ಬಹಳ ಹರ್ಷಿತರಾಗಿದ್ದರು. ಅವನಿಗೆ ಸಮೀಪಕ್ಕೆ ಬರಲು ಅಪ್ಪಣೆ ದಯಪಾಲಿಸಿದನು. ಮಹಲುದಾರನು ಅರಸರ ಸನ್ನಿಧಿಗೆ ಬಂದು ವಿನಯಪೂರ್ವಕವಾಗಿ ವಂದನೆ ಮಾಡಿ, ತಂದಿದ್ದ ಮಹತ್ವದ ಪತ್ರಗಳನ್ನು ಅವರಿಗೆ ಒಪ್ಪಿಸಿದನು. ಅನಂತರ ಕೈಜೋಡಿಸಿ,

"ಮಹಾರಾಜಾಧಿರಾಜರು, ಅಪ್ರತಿಮ ಪರಾಕ್ರಮಶಾಲಿಗಳು! ಇವರಂಥ ಸಮರ್ಥರು ಪೃಥ್ವಿಯಲ್ಲಿ ಯಾರೂ ಕಾಣುವುದಿಲ್ಲ. ನವಕೋಟಿ ನಾರಾಯಣರೆಂದು ಎನಿಸಿಕೊಂಡಿರುವ ರಾಜತೇಜೋನಿಧಿಗಳನ್ನು ನಾನೇನು ಸ್ತೋತ್ರ ಮಾಡಬಲ್ಲೆನು" ಎಂದು ರಾಮರಾಯನನ್ನು ಹೊಗಳಿ ಸ್ತೋತ್ರ ಮಾಡಿದನು.

"ಇದರಿಂದ ಪ್ರಸನ್ನನಾದ ರಾಮರಾಯನು ಆ ಪತ್ರವನ್ನು ಸ್ಥಾನಪತಿಗಳ ಕೈಗಿತ್ತು ಓದಿಸಿದನು. ಅಂದಿನ ರಾಜಸಭೆಯಲ್ಲಿ ಒಂದು ಸ್ವಾರಸ್ಯವಾದ ಘಟನೆ ನಡೆಯಿತು.

"ಅರಸರು ಹೊಸದಾಗಿ ಕಟ್ಟಿಸಿ ಸಿಂಗರಿಸಿದ್ದ ಆನಂದಮಹಲಿಗೆ

ಹೋಗಿ ಸಮಸ್ತ ಸಾಮಾಜಿಕರು, ಎಪ್ಪತ್ತೆರಡು ಬಗೆಯ ನಿಯೋಗದವರು ಓಲೈಸುತ್ತಿರಲು, ಸಿಂಹಾಸನದ ಮೇಲೆ ಕುಳಿತರು. ಇದೇ ಸಮಯಕ್ಕೆ ಕೆಲವು ತೆಲುಗು ದೇಶದ ದೊಂಬರು ಬಂದು ರಾಮರಾಯನ ಎದುರಿಗೆ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಲು ಅವಕಾಶ ಬೇಡಿದರು. ಕೂಡಲೇ ಅವರ ದೊಂಬರಾಟಕ್ಕೆ ಅನುಮತಿ ದೊರೆಯಿತು. ಅವರು ನಾಲ್ಕಾರು ತಾಸು ತಮ್ಮ ಆಟವನ್ನು ಜಾಣ್ಮೆಯಿಂದ ಪ್ರದರ್ಶಿಸಿದರು. ಅವರ ಆಟವು ಮುಗಿಯಲು ಸುಪ್ರಸನ್ನರಾದ ಪ್ರಭುಗಳು ಅವರಿಗೆ ವೀಳ್ಯ, ಉಡುಗರೆ, ಕಾಣಿಕೆಗಳನ್ನು ಇತ್ತು ಗೌರವಿಸಿದರು. ಅಷ್ಟರಲ್ಲಿ ದೊಂಬರ ನಾಯಕನು ಮುಂದೆ ಬಂದು ಮುಜುರೆ ಮಾಡಿ 'ಮಹಾಪ್ರಭು! ನಮ್ಮ ಮೇಲೆ ತಮ್ಮ ಅನುಗ್ರಹ ಅಪಾರವಾಯಿತು! ತಮ್ಮಲ್ಲಿ ಒಂದು ಪ್ರಾರ್ಥನೆಯುಂಟು; ನಡೆಸಿಕೊಡಬೇಕು' ಎಂದು ಪ್ರಾರ್ಥಿಸಿದನು.

"ಏನದು ತಿಳಿಸಿ!"

"ನಮ್ಮ ಭಕ್ಷಣೆಗೆ ಹತ್ತು ಸೂಕರ-ಹಂದಿಗಳನ್ನು ದಯಪಾಲಿಸಬೇಕು!"

ಈ ಅಲ್ಪ ಬೇಡಿಕೆಯನ್ನು ಕೇಳಿ ರಾಮರಾಯರು ತಮ್ಮಲ್ಲೇ ನಕ್ಕು "ಆಗಲಿ" ಎಂದು ಹೇಳಿ ಅವರಿಗೆ ಆಗಿಂದಾಗಲೇ ಹತ್ತು ಹಂದಿಗಳನ್ನು ತರಿಸಿ ಕೊಟ್ಟರು.

ಇದೆಲ್ಲ ನಡೆಯುವಾಗ ಅಲಿ ಅದಿಲ್‌ಷಹನ ರಾಯಭಾರಿಯಾಗಿ ಬಂದಿದ್ದ ಮಹಲದಾರನೂ ಅಲ್ಲಿಯೇ ಇದ್ದನು. ಅವನು ಕಟ್ಟು ಮುಸಲ್ಮಾನನಾಗಿದ್ದನು. ಈ ಸೂಕರಗಳು ಅವನ ಕಣ್ಣಿಗೆ ಬೀಳುತ್ತಲೇ ಅವನು ಕಣ್ಣುಗಳನ್ನು ಮುಚ್ಚಿಕೊಂಡು ಅಸಹ್ಯಪಟ್ಟು ರಾಮರಾಯನಿಗೆ

"ಹುಜೂರ್ ನಾನು ಒಳ್ಳೆಯ ಮುಸಲ್ಮಾನನು, ಈ ಕೆಟ್ಟ ಪ್ರಾಣಿಗಳು ಕಣ್ಣಿಗೆ ಬೀಳಬಾರದು! ಬಿದ್ದರೂ ನೋಡಬಾರದು. ಒಂದು ವೇಳೆ ಅಪ್ಪಿ ತಪ್ಪಿ ನೋಡಿದುದೇ ಆದರೆ ಮುಸಲ್ಮಾನರು ಹಿಂದೂಗಳೊಳಗೆ ಸೇರಿದ ಹಾಗೆ!" ಎಂದು ಹೇಳಿದನು

ಈ ಮಾತು ಕೇಳಿ ನರಪತಿ ರಾಮರಾಯನು ಚಕಿತನಾದನು. ಅವನಿಗೆ ಈ ಮಾತು ವಿನೋದವಾಗಿತೋರಿತು. ಅವನು ವಿನೋದಧ್ವನಿಯಲ್ಲಿ "ಮಹಲ್ ದಾರರೆ! ನಿಮ್ಮ ಮಾತುವಿಚಿತ್ರ ವಾಗಿದೆ. ನೀವು ಕೋಳಿಯನ್ನು ತಿನ್ನುತ್ತೀರಲ್ಲ. ಕೋಳಿಯನ್ನು ಭಕ್ಷಿಸಿದ ಮೇಲೆ ಮಲಭಕ್ಷಣೆ ಮಾಡಿದಂತೆ ಆಗುವುದಿಲ್ಲವೇ" ಎಂದು ಪ್ರಶ್ನಿಸಿದನು.

"ಈ ಮಾತು ಕೇಳಿ ಮಹಲದಾರನು ಸಿಟ್ಟಿದ್ದನು, ರಾಮರಾಯನು

ತನ್ನ ಮುಸಲ್ಮಾನಮತವನ್ನು ಹೀಯಾಳಿಸುತ್ತಿರುವನೆಂದೇ ಭಾವಿಸಿದನು.

"ಪ್ರಭು, ನೀವು ಹಿಂದೂಗಳು. ಕೆಟ್ಟ ವಸ್ತುಗಳನ್ನು ತಿನ್ನುತ್ತೀರಿ. ನಿಮ್ಮದು ಹೀನಜಾತಿ" ಎಂದು ಥಕ್ಕನೆ ಭಾವಾವೇಶದಲ್ಲಿ ಹೇಳಿಬಿಟ್ಟನು.

ಇದರ ಪರಿಣಾಮ ಎಷ್ಟು ಭಯಂಕರವಾದೀತೆಂದು ಆಸ್ಥಾನದಲ್ಲಿ ಇದ್ದವರಿಗೆ ಯಾರಿಗೂ ಆಗ ತಿಳಿಯಲಿಲ್ಲ. ಎಲ್ಲರಿಗೂ ಇದನ್ನು ತಮಾಷೆ ಎಂದೇ ಭಾವಿಸಿದ್ದರು. ರಾಮರಾಯನಿಗೆ ಇದರಿಂದ ಕೋಪ ಉಂಟಾದರೂ ಇದನ್ನು ತೋರಿಸಿಕೊಳ್ಳದೆ, ಈ ಮತಾಂಧ ಮಹಲದಾರನಿಗೆ ಬುದ್ಧಿ ಕಲಿಸಬೇಕೆಂದು ಆಲೋಚಿಸಿ,

"ಈಗ ನಿನಗೆ ತೋರಿಸುತ್ತೇನೆ; ಯಾರ ಜಾತಿ ಕೀಳು ಯಾರ ಜಾತಿ ಮೇಲು" ಎಂದು ಹೇಳಿ ಕೂಡಲೇ ಕೆಲವು ಸೂಕರಗಳನ್ನು ಅಲ್ಲಿಗೆ ತರಲು ಆಜ್ಞೆ ಮಾಡಿದನು. ಅದರಂತೆ ನಗರದಲ್ಲಿದ್ದ ಕೆಲವು ಹಂದಿಗಳನ್ನು ರಾಜಸಮ್ಮುಖಕ್ಕೆ ತರಲಾಯಿತು. ರಾಮರಾಯನು ಅವುಗಳನ್ನು ಒಂದು ದೊಡ್ಡ ಕೊಠಡಿಯೊಳಗೆ ಬಿಡಿಸಿದನು. ಅವುಗಳು ತಿನ್ನುವುದಕ್ಕೆ ಜೋಳದ ಕಾಳುಗಳನ್ನು ಹಾಕಿಸಿದನು. ಆದಕ್ಕೆ ಬೀಗ ಹಾಕಿಸಿ, ಮೊಹರು ಮಾಡಿದನು.

ಮಾರನೆಯ ದಿನ ಮಹಲದಾರನನ್ನು ಕರೆದುಕೊಂಡು ಅಲ್ಲಿಗೆ ಬಂದು ಬೀಗ ತೆಗೆಸಿನೋಡಿದನು. ಸೂಕರಗಳು ಕಾಳನ್ನು ತಿಂದು ಅಲ್ಲಲ್ಲಿ ಮಲಮೂತ್ರಗಳನ್ನು ಮಾಡಿಕೊಂಡಿದ್ದುವು. ಈ ಮನೆಯೊಳಗೇ ಕೋಳಿಗಳನ್ನು ಬಿಡಲು ಹೇಳಿದನು. ಅದರಂತೆ ಕೋಳಿಗಳನ್ನು ಬಿಡಲು, ಕೋಳಿಗಳು ಆತುರದಲ್ಲಿ ಮಲಮೂತ್ರದಲ್ಲಿ ಅಂಟಿಕೊಂಡಿದ್ದ ಜೋಳದ ಕಾಳುಗಳನ್ನು ಹೆಕ್ಕಿ ತಿನ್ನಲು ಆರಂಭಿಸಿದುವು. ಇದನ್ನು ಮಹಲುದಾರನಿಗೆ ತೋರಿಸುತ್ತಾ,

"ಈ ಸೂಕರಗಳನ್ನು ಹಿಂದೂಗಳು ತಿನ್ನುತ್ತಾರೆ, ನಿಜ. ಆದರೆ ಸೂಕರಗಳ ಮಲಮೂತ್ರಗಳಲ್ಲಿ ಇರುವ ಕಾಳನ್ನು ತಿನ್ನುವ ಕೋಳಿಗಳನ್ನು ನೀವು ತಿನ್ನುತ್ತೀರಿ! ಈಗ ಹೇಳಿ, ಯಾರ ಜಾತಿ ದೊಡ್ಡದು! ನೀವು ತಿಳಿದವರು. ಹೀಗೆಲ್ಲಾ ಇತರ ಜಾತಿಯ ಬಗ್ಗೆ ತಿರಸ್ಕಾರದಿಂದ ನೋಡಬಾರದು!" ಎಂದು ಬುದ್ಧಿಹೇಳಿ ಕಳುಹಿಸಿಕೊಟ್ಟರು.

ಮಹಲದಾರನಿಗೆ ಇದರಿಂದ ಅಪಮಾನವಾಯಿತು. ಅವನಿಗೆ ಸಿಟ್ಟು ಬಂತು. ತನ್ನನ್ನು ಅನೇಕರ ಎದುರು ರಾಮರಾಯನು ಮೂದಲಿಸಿ ಮಾತನಾಡಿದನಲ್ಲ ಎಂದು, ಅವನು ಅಲ್ಲಿಂದ ಎದ್ದು ಹೊರಟುಹೋದನು.

ಅವನು ತನ್ನ ಕೋಪವನ್ನು ಒಳಗೇ ಅದುಮಿ, ತಾನು ಬಂದ ಕಾರ್ಯದ ಕಡೆ ಗಮನಕೊಟ್ಟನು. ಅವನು ತನಗೆ ಪರಿಚಯವಾದ ಆ ಸೈನಿಕರಿಂದಲೂ, ಉನಿಲ್‌ಮುಲ್ಕನಿಂದಲೂ ಮಮ್ಮಾಜಳ ಸಂಗತಿಯು ವಾಸ್ತವ ಸಂಗತಿ ಎಂಬು

ದನ್ನು ಅರಿತನು. ಇದನ್ನು ಕೇಳಿ ಅವನಿಗೆ ರಾಮರಾಯನ ಬಗ್ಗೆ ಇನ್ನಷ್ಟು ಅಸಮಾಧಾನ ಉಂಟಾಯಿತು. ಮದೋನ್ಮತ್ತನಾದ ರಾಮರಾಯನ ಮೇಲೆ ಹೇಗಾದರೂ ಮಾಡಿ ಸೇಡುತೀರಿಸಿಕೊಳ್ಳಬೇಕೆಂದು ಅವನು ನಿಶ್ಚಯಿಸಿ ಬಿಜಾಪುರಕ್ಕೆ ಹಿಂದಿರುಗಲು ನಿಶ್ಚಯಿಸಿದನು. ಆಗ ರಾಮರಾಯನು ಆಲಿ ಆದಿಲ್ ಷಹನ ಸ್ನೇಹವನ್ನು ನೆನೆದು, ಮಹಲುದಾರನ ಉದ್ಧಟತನವನ್ನು ಮರೆತು ಅವನಿಗೆ ಅನೇಕ ಬಹುಮಾನಗಳನ್ನು, ಕಾಣಿಕೆಯಾಗಿ ಕೊಟ್ಟು ಮರ್ಯಾದೆಯಿಂದಲೇ ಬೀಳ್ಕೊಟ್ಟನು.

ಅವನು ಬಿಜಾಪುರಕ್ಕೆ ಹೋಗಿ ನಡೆದ ಎಲ್ಲ ಸಂಗತಿಯನ್ನು ಚಾಚೂ ಬಿಡದೆ ಬಣ್ಣಿಸಿದನು. ರಾಮರಾಯನು ಮಮ್ತಾಜಳ ಪ್ರಸಂಗದಲ್ಲಿ ನಡೆದುಕೊಂಡ ವರ್ತನೆಯನ್ನು ಕೇಳಿ ಅವನಿಗೇ ಆಶ್ಚರ್ಯವಾಯಿತು. ಈ ಸಮಯದಲ್ಲಿ ಅಹಮದ್ ನಗರದ ಹುಸೇನ ನಿಜಾಮುಷಹನು ಮಮ್ತಾಜಳೊಡನೆ ಅಲ್ಲಿಗೆ ಬಂದನು. ಅವಳ ಬಾಯಿಂದ ಕೇಳಿದ ಕಥೆಗೂ, ಮಹಲ್ದಾರನು ಹೇಳಿದ ಕಥೆಗೂ ಯಾವ ವ್ಯತ್ಯಾಸವಿರಲಿಲ್ಲ. ಇದರಿಂದ ಪ್ರಥಮಬಾರಿಗೆ ರಾಮರಾಯನ ಬಗ್ಗೆ ಆಲಿ ಆದಿಲ್‌ಷಹನಿಗೆ ಇದ್ದ ಪ್ರೀತಿವಿಶ್ವಾಸ, ಆದರ ಅಭಿಮಾನಗಳು ತಗ್ಗಿದುವು. ರಾಮರಾಯನ ಹಿಂದೂಮುಸ್ಲಿಮ ಸಖ್ಯದ ಮಾತಿನಲ್ಲಿ ಉಳಿದವರಂತೆ ಅವನಿಗೂ ಸಂಶಯವುಂಟಾಯಿತು. ಹಿಂದೂ ಮಹಮದೀಯರು ಸಹೋದರರೆಂದು ಹೇಳಿಕೊಳ್ಳುವ ರಾಮರಾಯನೇಕೆ ಒಬ್ಬ ನಿರ್ಭಾಗ್ಯ ಮುಸ್ಲಿಂಭಗಿನಿಯನ್ನು ತುಂಬಿದ ಸಭೆಯಲ್ಲಿ ಈ ರೀತಿ ಅಪಮಾನ ಮಾಡಿದನೆಂಬುದು ಅವನಿಗೆ ಬಗೆಹರಿಯದ ಸಮಸ್ಯೆಯಾಯಿತು. ಆಗ ಮಹಲ್‌ದಾರನು ತನಗಾದ ಸೂಕರದ ಅನುಭವವನ್ನೂ, ತನ್ನ ತೇಜೋವಧೆಯನ್ನೂ ಸವಿಸ್ತಾರವಾಗಿ ಹೇಳಿ "ಬಾದಷಾ ಸಲಾಮತ್! ಇಂದಿಗೆ ಬಾದಷಾಹಿ ಮುಳುಗಿತು! ಹೀಗಾದರೆ ಮುಸಲ್ಮಾನರ ಧರ್ಮ ಉಳಿಯುವುದಿಲ್ಲ. ಅವರ ಆಳ್ವಿಕೆಯೂ ಉಳಿಯುವುದಿಲ್ಲ. ರಾಮರಾಯನು ನನ್ನನ್ನು ಮಾತ್ರ ಅವಮಾನಮಾಡಲಿಲ್ಲ, ಇಡೀ ಇಸ್ಲಾಂ ಧರ್ಮವನ್ನೇ ಅವಮಾನಮಾಡಿದ್ದಾನೆ. ನಾವು ಹಂದಿಯ ಮಲಮೂತ್ರ ತಿನ್ನುವ ಜಾತಿಯವರಂತೆ. ಈ ಅಪಮಾನ ಸಹಿಸಲು ಸಾಧ್ಯವಿಲ್ಲ! ತಾವು ಈಗ ಅವರ ಮೇಲೆ ಯುದ್ಧ ಮಾಡಿ ಅವರ ಸೊಕ್ಕನ್ನು ಅಡಗಿಸದಿದ್ದರೆ ದಖನ್ನಿನಲ್ಲಿ ಇಸ್ಲಾಂ ಧರ್ಮ ಹೇಳ ಹೆಸರಿಲ್ಲದೆ ಹೋಗುವುದು!" ಎಂದು ಹೇಳಿದನು.

"ರಾಮರಾಯನ ಇಂದಿನ ವರ್ತನೆ ಅಕ್ಷಮ್ಯವಾದುದೆಂದು ಬಲ್ಲೆ. ಆದರೆ ಇದು ದುಡುಕುವ ವಿಷಯವಲ್ಲ. ನಾನು ನರಪತಿ ರಾಮರಾಯರ ಸ್ನೇಹಿತನಾಗಿದ್ದೇನೆ. ಅವರ ಕುಮಾರನೆನಿಸಿಕೊಂಡಿದ್ದೇನೆ. ಈ ಸಣ್ಣ ಕಾರಣ

ಕ್ಕಾಗಿ ನಮ್ಮಿಬ್ಬರ ಸ್ನೇಹ ಮುರಿಯುವುದು ಅಷ್ಟು ಹಿತವಾಗಿ ಕಾಣುವುದಿಲ್ಲ. ನಾನು ರಾಮರಾಯರನ್ನು ಈ ಬಗ್ಗೆ ಕಂಡು ಮಾತನಾಡಿ ಅವರಿಗೆ ಬುದ್ಧಿ ಹೇಳ ಬೇಕೆಂದಿದ್ದೇನೆ." —ಎಂದು ಆಲಿ ಆದಿಲ್‌ಷಹನು ಹೇಳಿದನು.

ಈ ಮಾತಿನಿಂದ ನಿಜಾಂ ಹುಸೇನ್‌ಷಹನಿಗೂ ಅಸಮಾಧಾನವಾಯಿತು. ಇಷ್ಟೆಲ್ಲಾ ಅಪಮಾನ, ಅಪಚಾರ ತೇಜೋವಧೆಗಳಾಗಿದ್ದರೂ ಇನ್ನೂ ಆಲಿ ಅದಿಲ್‌ಷಹನಿಗೆ ರಾಮರಾಯನ ಬಗ್ಗೆ ದ್ವೇಷ ಉಂಟಾಗಲಿಲ್ಲವಲ್ಲಾ ಎಂದು ಅವನಿಗೆ ಆಚ್ಚರಿಯಾಯಿತು.

"ಆಲಿ ಆದಿಲ್‌ಷಹರೇ! ನೀವು ಇಷ್ಟೆಲ್ಲ ನಡೆದ ಮೇಲೂ ಇನ್ನೂ ಆ ಕಾಫರ ರಾಜನ ಸ್ನೇಹವನ್ನು ಕಳೆದುಕೊಳ್ಳಲು ಸಿದ್ಧರಿಲ್ಲದಿರುವುದು ನಮಗೆ ಸೋಜಿಗವಾಗಿದೆ. ನಿಮಗೆ ನಿಮ್ಮ ಧರ್ಮ, ಸಂಸ್ಕೃತಿ, ನಿಮ್ಮ ಆತ್ಮಪ್ರತಿಷ್ಠೆಗಳಿಗಿಂತಲೂ ಆ ಕಾಫರ ದೊರೆಯ ಸ್ನೇಹ ಅಧಿಕವಾಯಿತು. ನಮ್ಮ ಮಾತುಗಳು ನಿಮ್ಮ ಕಿವಿಗೆ ಬೀಳಲಿಲ್ಲ – ನಮ್ಮ ಸಲಹೆ ನಿಮ್ಮ ಹೃದಯಕ್ಕೆ ನಾಟಲಿಲ್ಲ! ಇದು ನಮ್ಮ ದುರದೃಷ್ಟ ಮಾತ್ರವಲ್ಲ. ಇಸ್ಲಾಂ ಧರ್ಮದ ದುರದೃಷ್ಟ! ಏನೇ ಇರಲಿ! ಈ ಮಾತು ಮಾತ್ರ ಸತ್ಯ! ನೀವು ನಮ್ಮ ಧರ್ಮಯುದ್ಧದಲ್ಲಿ ನಿಮ್ಮ ಸಹಕಾರ ಸಹಾಯಗಳನ್ನು ಕೊಡಿ ಬಿಡಿ! ನಾವಂತೂ ವಿಜಯನಗರದ ಮೇಲೆ ಅಂತಿಮ ಹೋರಾಟ ನಡಸುತ್ತೇವೆ. ನಮ್ಮ ದೇಹ ಬಿದ್ದುಹೋದರೂ ಸರಿ! ನಮ್ಮ ಧರ್ಮರಕ್ಷಣೆಗಾಗಿ, ನಮ್ಮ ಸಂಸ್ಕೃತಿ ನಾಗರೀಕತೆ, ಸಾಹಿತ್ಯ ಕಲೆಗಳಿಗಾಗಿ, ನಮ್ಮ ಪ್ರಜೆಗಳ ಮನೆಮಠಗಳ ರಕ್ಷಣೆಗಾಗಿ ನಾವು ಹೋರಾಡುತ್ತೇವೆ! ಈ ಮಾತು ಅಲ್ಲಾನ ಆಣೆಗೂ ಸತ್ಯ! ಮುಂದಾದರೂ ನಿಮಗೆ ನಮ್ಮೊಡನೆ ಸಹಕರಿಸಬೇಕೆನಿಸಿದರೆ ನಿಮಗೆ ಸದಾ ಸುಸ್ವಾಗತವಿದೆ!" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಮೊದಲೇ ಮಮ್ತಾಜಳ ಪ್ರಕರಣದಿಂದ ರಾಮರಾಯನ ಮೇಲೆ, ವಿಜಯ ನಗರದ ಮೇಲೆ ಅಸಮಾಧಾನದಿಂದ ಕುದಿಯುತ್ತಿದ್ದ ಮುಸ್ಲಿಮ ಜನತೆ ಈಗ ಸೂಕರದ ಪ್ರಕರಣದಿಂದ ಮತ್ತಷ್ಟು ಕ್ಷುಬ್ಧಗೊಂಡಿತು. ಇನ್ನು ರಾಮರಾಯನನ್ನು ಹಾಗೆಯೇ ಬಿಟ್ಟರೆ ತಮ್ಮನ್ನು ಬಲಾತ್ಕಾರದಲ್ಲಿ ಕಾಫರ ಮತಕ್ಕೆ ಸೇರಿಸಿ, ತಮ್ಮ ಸ್ತ್ರೀಯರ ಬುರುಕಿಯನ್ನು ಕಿತ್ತೊಗೆದು, ಮಸೀದಿಗಳನ್ನು ದೇವಾಲಯಗಳಾಗಿ ಮಾರ್ಪಡಿಸಿ ಇಸ್ಲಾಂ ಧರ್ಮವನ್ನು ತೊಡೆದುಹಾಕುವನೆಂಬುದು ಅವರಿಗೆ ಖಂಡಿತವಾಯಿತು! ಅವರೆಲ್ಲರೂ ರಾಮರಾಯನ ಮೇಲೆ ಯುದ್ಧಕ್ಕೆ ಹೊರಟರು. ಜನತೆಯ ಉತ್ಸಾಹವನ್ನು ಕಂಡಮೇಲೆ ಹುಸೇನ್ ನಿಜಾಮ ಷಹನು ತನ್ನ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಿತೆಂದು ಸಂತೋಷಿಸಿದನು. ಈಗ ಅಸ

ನಿಗೆ ಇತರ ಬಹಮನಿಸುಲ್ತಾನರಾದ ಬಿದರೆ ಹಾಗೂ ಬಿರಾರಿನ ಸುಲ್ತಾನರನ್ನು ತಮ್ಮ ಧರ್ಮಯುದ್ಧವಾದ ಜೇಹಾದದ ಗುಂಪಿಗೆ ಸೇರಿಸಿಕೊಳ್ಳಲು ಕಠಿಣವಾಗ ಲಿಲ್ಲ. ಅವರು ವಿಜಯನಗರದ ಪ್ರಾಬಲ್ಯವನ್ನು ಕಂಡು ಹೆದರಿದರು. ಅದನ್ನು ತಡೆಯದಿದ್ದರೆ ತಮ್ಮನ್ನು ಅದು ಕಬಳಿಸುವುದೆಂದು ಗಾಬರಿಗೊಂಡಿದ್ದರು. ಅವರು ತಮ್ಮ ಅಳಿವು ಉಳಿವಿಗಾಗಿ ಹೋರಾಡಲು ಸಿದ್ಧರಾದರು. ಹೀಗೆ ಅಹ ಮದ್‌ನಗರ, ಗೋಲ್ಕಂಡ, ಬಿದರೆ ಬಿರಾರುಗಳ ಸುಲ್ತಾನರು ವಿಜಯನಗರದ ವಿರುದ್ಧ ಯುದ್ಧ ಹೂಡಲು ಒಂದಾದರು.

ತಮ್ಮ ಕಟ್ಟಕಡೆಯ ಪ್ರಯತ್ನವೆಂದು ಈಗ ನಾಲ್ವರು ಸುಲ್ತಾನರೂ ಕೂಡಿ ಕೊಂಡು ಬಿಜಾಪುರಕ್ಕೆ ಬಂದು, ಆಲಿ ಆದಿಲ್‌ಷಹನನ್ನು ತಮ್ಮ ಕಡೆಗೆ ಒಲಿಸಿ ಕೊಳ್ಳಲು ಪ್ರಯತ್ನಿಸಿದರು.

ತನ್ನನ್ನು ಕಾಣಲು ನಾಲ್ವರು ಸುಲ್ತಾನರು ಹಠಾತ್ತನೆ ಬಂದುದನ್ನು ಕಂಡು ಆಲಿ ಆದಿಲ್‌ಷಹನಿಗೆ ವಿಸ್ಮಯ ಉಂಟಾಯಿತು. ಅವರನ್ನು ಉಚಿತ ರೀತಿಯಲ್ಲಿ ಸ್ವಾಗತಿಸಿ ಸತ್ಕರಿಸಿ ಅವರು ಬಂದ ಕಾರ್ಯವನ್ನು ಕೇಳಿಕೊಂಡನು.

"ಈಗ ನಾವು ವಿಜಯನಗರದ ಮೇಲೆ ಧರ್ಮಯುದ್ಧ ಹೂಡಲು ನಿಶ್ಚಯಿ ಸಿದ್ದೇವೆ. ನಮ್ಮ ಯುದ್ಧದ ಗುರಿ ವಿಜಯನಗರವನ್ನು ಆಕ್ರಮಿಸಿಕೊಳ್ಳುವು ದಲ್ಲ. ಅಲ್ಲಿನ ಸಂಪತ್ತನ್ನು ಸೂರೆಮಾಡಲೆಂದಲ್ಲ. ಆದರೆ ನಮಗೆ ರಾಮ ರಾಯನಿಂದ ಬಂದಿರುವ ಗಂಡಾಂತರವನ್ನು ತಪ್ಪಿಸುವುದು. ದಖನ್ನಿನಲ್ಲಿ ಇಸ್ಲಾಂ ಧರ್ಮ ಸಂಸ್ಕೃತಿಗಳು ನಾಶವಾಗದಂತೆ ರಕ್ಷಿಸುವುದೇ ನಮ್ಮ ಈ ಯುದ್ಧದ ಗುರಿ. ಇದರಲ್ಲಿ ನಮ್ಮ ಯಾವ ಸ್ವಾರ್ಥವೂ ಇಲ್ಲ, ನಮ್ಮ ಧರ್ಮಕ್ಕಾಗಿ ನಮ್ಮ ಸ್ವಾತಂತ್ರ್ಯಕ್ಕಾಗಿ ನಾವು ಹೋರಾಡಲು ನಿಶ್ಚಯಿಸಿದ್ದೇವೆ. ಈಗ ನಾವು ರಾಮ ರಾಯನ ವಿರುದ್ಧ ಯುದ್ಧ ಮಾಡದಿದ್ದರೆ, ನಾವೂ ನಮ್ಮ ಧರ್ಮವೂ ಅವನ ಸಾಮ್ರಾಜ್ಯ ಲಾಲಸೆ, ಮಹತ್ವಾಕಾಂಕ್ಷೆಗಳಿಗೆ ಬಲಿಯಾಗಿ, ಇತಿಹಾಸದಿಂದ ಬಹಮನಿ ರಾಜ್ಯಗಳ ಹೆಸರು, ಇಸ್ಲಾಂ ಧರ್ಮದ ಹೆಸರು ನಾಮಾವಶೇಷವಾಗು ತ್ತದೆ. ಈಗಲಾದರೂ ನಿಮಗೆ ನಮ್ಮ ಸಂಘಟನೆಯ ಉದ್ದಿಶ್ಯವೇನೆಂದು ತಿಳಿ ದಿರಬಹುದು! ಇನ್ನಾದರೂ ನೀವು ನಮ್ಮೊಡನೆ ಸಹಕರಿಸಿ, ಸಹಾಯ ಮಾಡುವಿ ರೆಂದು ನಂಬಿರುತ್ತೇವೆ" ಎಂದು ಹುಸೇನ್ ನಿಜಾಮುಷಹನು ಹೇಳಿದ.

ಇದನ್ನು ಕೇಳಿ ಆಲಿ ಆದಿಲ್‌ಷಹನಿಗೆ ಏನು ಹೇಳಬೇಕೆಂದು ತಿಳಿಯದೆ ಮೌನವಾಗಿ ಕುಳಿತನು.

"ಈಗ ನಾವು ನಾಲ್ವರು ಬಹಮನಿ ಸುಲ್ತಾನರು ಸಂಘಟಿತರಾಗಿದ್ದೇವೆ. ನೀವೊಬ್ಬರು ನಮ್ಮೊಂದಿಗೆ ಸಹಕರಿಸಿದರೆ ನಮ್ಮ ಶಕ್ತಿ ಇಮ್ಮಡಿಸುವುದರಲ್ಲಿ

ಸಂದೇಹವಿಲ್ಲ. ನಾವು ಪಂಚ ಸುಲ್ತಾನರು ವಿಜಯನಗರದ ಮೇಲೆ ದಂಡೆತ್ತಿ ಹೋದರೆ ಶತ್ರುಗಳನ್ನು ಸೋಲಿಸುವುದು ಕಠಿಣವಾಗಲಾರದು! ಅವನನ್ನು ನಾವು ಗೆದ್ದರೆ ಇಸ್ಲಾಂ ಧರ್ಮ ಗೆದ್ದಂತೆ! ನಾವು ಸೋತರೆ ಇಸ್ಲಾಂ ಧರ್ಮ ಸೋತಂತೆ! ಈಗ ನಮ್ಮ ಸೋಲು ಗೆಲುವುಗಳ ಮೇಲೆ ಇಸ್ಲಾಂ ಧರ್ಮವು ನಿಂತಿದೆ. ನಾವು ಸೋಲುವುದು ಗೆಲ್ಲುವುದು ನಿಮ್ಮ ಸಹಕಾರವನ್ನು ಅವಲಂಬಿಸಿದೆ. ನೀವು ನಮ್ಮೊಡನೆ ಸೇರಿದರೆ ಇಸ್ಲಾಂ ಧರ್ಮಕ್ಕೆ ಉಳಿವು! ನೀವು ಹಿಂತೆಗೆದರೆ ಇಸ್ಲಾಂ ಧರ್ಮಕ್ಕೆ ಅಳಿವು! ಇದನ್ನು ಎಲ್ಲವನ್ನು ವಿಚಾರಿಸಿ ನಮಗೆ ನಿಮ್ಮ ಅಂತ್ಯ ನಿರ್ಧಾರ ತಿಳಿಸಬೇಕು!" ಎಂದು ಕುತುಬ್‌ಷಹನು ಹೇಳಿದ.

ಆಲಿ ಆದಿಲ್‌ಷಹನು ಇದೆಲ್ಲ ಸಂಗತಿಗಳನ್ನು ದೀರ್ಘವಾಗಿ ಆಲೋಚಿಸಿದನು. ಅವನ ಮುಂದೆ ಈಗ ಎರಡು ಪ್ರಶ್ನೆಗಳು ನಿಂತಿದ್ದುವು. ಅಹಮದ್‌ನಗರದ ನಿಜಾಮುಷಹನ ಮಾತಿನಂತೆ ಬಹಮನಿ ಸುಲ್ತಾನರ ಸಂಘಟನೆಗೆ ಸೇರಿ ಇಸ್ಲಾಂ ಧರ್ಮ ಸಂಸ್ಕೃತಿಗಳನ್ನು ರಕ್ಷಿಸಲು ತನ್ನಿಂದಾಗುವ ನೆರವು ಕೊಡಬೇಕೆ? ತನ್ನನ್ನು ಮಗನಿಗೂ ಅತಿಶಯವಾಗಿ ಪ್ರೀತಿಸಿದ, ತನ್ನ ಕಷ್ಟ ಸುಖಗಳಲ್ಲಿ ತನಗೆ ನೆರವಾದ, ಹಿಂದೂ ಮುಸ್ಲಿಂ ಸಖ್ಯದ ಹೊಂಗನಸು ಕಟ್ಟಿ ಇದರ ಸಾಧನೆಗೆ ದುಡಿಯುತ್ತಿರುವ ರಾಮರಾಯನ ಮೇಲೆ ಯುದ್ಧಕ್ಕೆ ಹೋಗಬೇಕೆ? ಇದರಲ್ಲಿ ಯಾವುದನ್ನು ನಿರ್ಧರಿಸಿದರೂ ಅವನ ಮೇಲೆ ಅಪವಾದ ಬರುತ್ತಿತ್ತು! ಬಹಮನಿ ಸುಲ್ತಾನರಿಗೆ ನೆರವಾಗದಿದ್ದರೆ ತಾನು ಇತಿಹಾಸದಲ್ಲಿ ಧರ್ಮದ್ರೋಹಿಯಾಗಿ ಉಳಿಯುತ್ತಿದ್ದ! ರಾಮರಾಯನೊಡನೆ ಯುದ್ಧಕ್ಕೆ ಹೊರಟರೆ ಉಪಕಾರವನ್ನು ನೆನೆಯದ ಕೃತಘ್ನನಾಗಿ, ವಿಶ್ವಾಸ ದ್ರೋಹಿಯಾಗಿ ಉಳಿಯುತ್ತಿದ್ದ! ಇದರಲ್ಲಿ ಯಾವ ಹೆಸರನ್ನು ಪಡೆಯುವುದೂ ಅವನಿಗೆ ಇಷ್ಟವಿರಲಿಲ್ಲ! ತಾನು ಕೆಟ್ಟ ಹೆಸರಿಗೆ ಪಾತ್ರವಾಗದಂತೆ, ವಿಶ್ವಾಸಭಂಗವೊದಗದಂತೆ ಧರ್ಮದ್ರೋಹಿಯಾಗದಂತೆ ಎಲ್ಲರಿಗೂ ನಡೆದುಕೊಳ್ಳಬೇಕೆಂಬುದೇ ಅವನ ಆಶಯವಾಗಿತ್ತು. ಅವನಿಗೆ ಈ ಸುವರ್ಣ ಮಧ್ಯಮ ಮಾರ್ಗ ಮಾತ್ರ ಕಾಣಲಿಲ್ಲ. ಈಗ ಧರ್ಮರಕ್ಷಣೆ ತನ್ನ ಪ್ರಥಮ ಕರ್ತವ್ಯವೆಂದು ಇಟ್ಟುಕೊಂಡರೂ – ಸ್ನೇಹಿತನ ಹಿತರಕ್ಷಣೆಯೂ ತನ್ನ ಕರ್ತವ್ಯವಾಗಿತ್ತು. ವಿಜಯನಗರದ ಮೇಲೆ ಈಗ ಯುದ್ಧ ನಡೆಯುತ್ತಿರುವುದು ಧರ್ಮರಕ್ಷಣೆಗಾಗಿ ರಾಮರಾಯನ ಪ್ರಾಬಲ್ಯವನ್ನು ತಗ್ಗಿಸುವುದಕ್ಕೆಂದು! ಇಷ್ಟನ್ನು ಮಾತ್ರ ಯುದ್ಧ ಸಾಧಿಸುವುದಾದರೆ ತಾನು ಇತರ ಸಾಮ್ರಾಟರೊಡನೆ ಸೇರಿಕೊಂಡು ರಾಮರಾಯನ ಹಿತಸಂರಕ್ಷಣೆ ಮಾಡಬಹುದೆಂದು ಅವನಿಗೆ ಅನಿಸಿತು!

ಅವನಿಗೆ ತಾವು ವಿಜಯನಗರವನ್ನು ಆಕ್ರಮಿಸಲು, ರಾಮರಾಯನನ್ನು ಶಿಕ್ಷಿಸಲು ಹೋಗುತ್ತಿಲ್ಲ; ವಿಜಯನಗರ ಸಾಮ್ರಾಜ್ಯವನ್ನು ಹಾಳುಮಾಡಲು, ಆದರ ಮೇಲೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲು ಯುದ್ಧಕ್ಕೆ ಹೋಗುತ್ತಿಲ್ಲ. ವೆಂಬ ಆಶ್ವಾಸನೆ ಬೇಕಾಗಿತ್ತು.

" ಈಗ ನೀವು ವಿಜಯನಗರದ ಮೇಲೆ ಇಸ್ಲಾಂ ಧರ್ಮದ ರಕ್ಷಣೆಗಾಗಿ ದಂಡೆತ್ತಿ ಹೋಗುವುದಾದರೆ ನಿಮ್ಮೊಡನೆ ಸಹಕರಿಸಲು ನನ್ನ ಅಭ್ಯಂತರವಿಲ್ಲ. ಆದರೆ ನೀವು ರಾಮರಾಯನ ಮೇಲೆ ಯುದ್ಧ ಮಾಡಿದರೂ, ಅವನನ್ನು ಸೋಲಿಸಿದರೂ ಅವನನ್ನು ಗೌರವದಿಂದ ನಡಸಿಕೊಳ್ಳಬೇಕು. ಅಂತಲೇ ಹಿಂದೂಗಳಿಗೆ ಯಾವ ತೊಂದರೆಯನ್ನೂ ಮಾಡಬಾರದು. ಸಾಮ್ರಾಜ್ಯದಲ್ಲಿ ಯಾವ ಕೊಲೆ ಸುಲಿಗೆ ಅತ್ಯಾಚಾರಗಳೂ ನಡೆಯಬಾರದು. ರಾಮರಾಯನ ಪ್ರಾಬಲ್ಯವನ್ನು ನೀವು ಅಡಗಿಸಬಹುದೇ ಹೊರತು ಅವನ ಮೇಲಾಗಲಿ, ವಿಜಯನಗರದ ಮೇಲಾಗಲೀ ಸೇಡು ತೀರಿಸಿಕೊಳ್ಳುವ ಪ್ರಯತ್ನ ಮಾಡಬಾರದು. ಈ ಷರತ್ತುಗಳಿಗೆ ನೀವು ಒಪ್ಪುವುದಾದರೆ ನಾನು ನಿಮ್ಮೊಡನೆ ಸಹಕರಿಸಲು ಸಿದ್ಧನಿದ್ದೇನೆ. ಆದರೆ ಒಂದು ಮಾತು. ರಾಮರಾಯನ ಮೇಲೆ ನಾವು ದಂಡೆತ್ತಿ ಹೊರಟರೂ, ಸಂಧಾನದಿಂದ ನಮ್ಮ ಆಶಯಗಳೆಲ್ಲ ಈಡೇರುವಂತಿದ್ದರೆ ನೀವು ಯುದ್ಧದಿಂದ ಹಿಮ್ಮೆಟ್ಟಬೇಕು. ಇದಕ್ಕೆ ನೀವು ಸಮ್ಮತಿಸುವುದಾದರೆ ನಿಮ್ಮ ಸಂಘಟನೆಗೆ ಸೇರಲು, ನನ್ನ ಆಕ್ಷೇಪವಿಲ್ಲ. "

" ನಮಗೆ ಈಗ ಬೇಕಾಗಿರುವುದು ರಾಜಕೀಯ ದುರಾಕ್ರಮಣವಲ್ಲ. ಸ್ವಧರ್ಮ, ಸ್ವದೇಶ, ಸ್ವಜನರ ರಕ್ಷಣೆ ಮಾತ್ರ. ನಾವು ವಿಜಯನಗರದ ಮೇಲೆ ದಂಡೆತ್ತಿ ಹೋಗಿ ದಾಳಿ ಇಟ್ಟರೂ ಅದನ್ನು ಹಾಳುಮಾಡುವುದು ನಮ್ಮ ಉದ್ದೇಶವಲ್ಲ. ರಾಮರಾಯನನ್ನು ಸೋಲಿಸಿ, ಅವನ ಪ್ರಾಬಲ್ಯವನ್ನು ಮುರಿದು, ಇಸ್ಲಾಂ ಧರ್ಮಕ್ಕೆ ಹಾಗೂ ನಮ್ಮ ಸ್ವಾತಂತ್ರ್ಯಕ್ಕೆ ಅವನಿಂದ ಬಂದ ಗಂಡಾಂತರವನ್ನು ತಪ್ಪಿಸುವುದೇ ನಮ್ಮ ಉದ್ದಿಶ್ಯ. ಈ ಬಗ್ಗೆ ನೀವು ಯಾವ ಚಿಂತೆ ಮಾಡುವ ಕಾರಣವಿಲ್ಲ!" ಎಂದು ಹುಸೇನ್ ನಿಜಾಂಷಹನು ಆಲಿ ಅದಿಲ್‌ಷಹನಿಗೆ ಆಶ್ವಾಸನವಿತ್ತನು.

ಆದರೂ ಆಲಿ ಅದಿಲ್‌ಷಹನನ್ನು ಮತ್ತೊಂದು ಸಂಶಯ ಕಾಡದೆ ಬಿಡಲಿಲ್ಲ. ತಾವು ಐದು ಮಂದಿ ಸುಲ್ತಾನರು ಒಟ್ಟು ಸಂಘಟಿಸಿದರೂ ವಿಜಯನಗರದ ಸುವ್ಯವಸ್ಥಿತ, ಅಗಾಧ ಸೈನ್ಯದ ಇದಿರು ನಿಲ್ಲಲೂ ಸಾಧ್ಯವೆ? ಜಯ ತಮಗೆ ದೊರೆಯುವುದೆಂದು ಏನು ನಿಶ್ಚಯ? ಒಂದು ವೇಳೆ ಜಯದ ಬದಲು ಅಪಜಯವಾದರೆ ಆಗ ತಾವು ಯಾವುದರ ರಕ್ಷಣೆಯು ಸಲುವಾಗಿ ಈ ಧರ್ಮ

ಯುದ್ಧ ಹೂಡುತ್ತಿರುವೆವೋ ಅದಕ್ಕೆ ತಮ್ಮ ಸೋಲಿನಿಂದ ಧಕ್ಕೆ ಉಂಟಾಗಿ ತಾವು ಎಂದೆಂದಿಗೂ ಹಗೆಗಳಾಗಿ ಮಾರ್ಪಟ್ಟರೆ ಇದರಿಂದ ಎಷ್ಟು ಹಾನಿ! ಪರಿಣಾಮ ಎಷ್ಟು ಘೋರ?....ಇದನ್ನು ನೆನೆದು ಅವನು ಹೇಳಿದ.

"ವಿಜಯನಗರದವರ ಮೇಲೆ ನಾವು ದಂಡೆತ್ತಿ ಹೋಗುವುದೇನೋ ನಿಶ್ಚಯಿಸಿದಂತೆ ಆಯಿತು. ಈ ಬಗ್ಗೆ ನನ್ನ ವಿರೋಧವಿಲ್ಲ. ಆದರೆ ನನ್ನದೊಂದು ಸಲಹೆ ಇದೆ. ಇದನ್ನು ಪುರಸ್ಕರಿಸುವುದೂ ತಿರಸ್ಕರಿಸುವುದೂ ನಿಮಗೆ ಸೇರಿದೆ.

ಈಗ ವಿಜಯನಗರದ ಅರಸರ ಬಳಿ ಅಸಂಖ್ಯಾತವಾದ ಸೈನ್ಯವಿದೆ. ಅಲ್ಲದೆ ಹೇರಳವಾದ ಶಸ್ತ್ರಾಸ್ತ್ರಗಳೂ ಇವೆ. ಪೋರ್ಚುಗೀಸರು ಅವರ ಮಿತ್ರರಾಗಿದ್ದಾರೆ. ಅವರಿಗೆ ಪೋರ್ಚುಗೀಸರ ಮದ್ದುಗುಂಡುಗಳು, ಹಾಗೂ ಅಶ್ವಸೈನ್ಯಗಳ ನೆರವು ಇದೆ. ವಿಜಯನಗರವು ಸಮೃದ್ಧಿ ದೇಶವಾಗಿದ್ದು ಸುಭದ್ರವಾಗಿದೆ. ಸಾಮ್ರಾಟರು ಓಳರೇವು ಪಟ್ಟಣಗಳಲ್ಲಿ ವ್ಯಾಪಾರದಿಂದ ಹಣ ಗಳಿಸುತ್ತಾರೆ. ಅಲ್ಲಿ ನಡೆಯುವ ವ್ಯಾಪಾರದಿಂದ ಹಣದ ಹೊಳೆ ಹರಿಯುತ್ತಿದೆ. ಹೀಗೆ ಜನ, ಧನ ಆಹಾರಧಾನ್ಯಗಳಿಂದ ಸಂವೃದ್ಧವಾಗಿರುವ ಸಾಮ್ರಾಜ್ಯದ ಮೇಲೆ ನಾವು ಧಾಳಿ ಇಡುತ್ತಿದ್ದೇವೆ. ಇದರಲ್ಲಿ ನಾವು ಗೆಲ್ಲುವ ಸಂಭವ ಉಂಟೇ. ಇದನ್ನು ವಿಚಾರಮಾಡಿ, ಅಂತಿಮ ನಿರ್ಧಾರವನ್ನು ಕೈಗೊಳ್ಳುವುದು ನಮ್ಮ ರಾಷ್ಟ್ರಗಳ ಹಿತದೃಷ್ಟಿಯಿಂದ ಉಚಿತವೆಂದು ನನ್ನ ಭಾವನೆ. ಇದನ್ನು ನೀವು ಹೇಗೆ ನಿರ್ಧರಿಸುತ್ತೀರೋ ಅದಕ್ಕೆ ನನ್ನ ಅಂಗೀಕಾರವಿದೆ! ಯುದ್ಧಕ್ಕೆಂದು ಹೊರಟಿರುವಾಗ ನಾವು ಸೋಲು ಗೆಲವುಗಳನ್ನು ಕುರಿತು ಚಿಂತಿಸಬಾರದು! ಆದರೂ ದುಡುಕುವ ಮುನ್ನ ವಿಚಾರ ಮಾಡುವುದು ಒಳ್ಳೆಯದೆಂದು ಈ ಮಾತು ಹೇಳಿದ್ದೇನೆ" ಎಂದನು.

"ನಿಮ್ಮ ಹೆದರಿಕೆ ಯಥಾರ್ಥವಾದುದು! ಇದನ್ನೆಲ್ಲಾ ನಾವು ಯುದ್ಧ ಹೂಡುವ ನಿರ್ಧಾರ ಕೈಗೊಳ್ಳುವ ಮೊದಲು ವಿಚಾರಮಾಡಿ ಒಂದು ನಿರ್ಣಯಕ್ಕೆ ಬಂದಿದ್ದೇವೆ. ನಮಗಿಂತಲೂ ಶತ್ರುಗಳು ಬಲಿಷ್ಠರು. ಅವರಲ್ಲಿ ಸುಸಜ್ಜಿತ ಸೈನ್ಯವಿದೆ. ಅವರದು ನಮಗಿಂತ ಸಮೃದ್ಧಿ ರಾಷ್ಟ್ರ – ಎಲ್ಲವೂ ನಿಜ. ಆದರೆ ಯುದ್ಧಕ್ಕೆಂದು ಬಂದಾಗ ಮಾತ್ರ ನಾವು ಗೆಲ್ಲುವ ಸಂಭವ ಹೆಚ್ಚು! ನಾವು ನಮ್ಮ ಸ್ವದೇಶ ಸ್ವಧರ್ಮ ರಕ್ಷಣೆಗಾಗಿ ಅಳಿವು ಉಳಿವುಗಾಗಿ ಹೋರಾಡುತ್ತೇವೆ. ಜಯನಗರದವರಿಗೆ ಇಂತಹ ಯಾವ ಭಾವನೆಗಳೂಇಲ್ಲ. ನಮ್ಮ ಶೌರ್ಯದೆದುರು ಅವರು ಹೋರಾಡಲಾರರು—ಹೋರಾಡಲು ಸಾಧ್ಯವಿಲ್ಲ. ಅಲ್ಲದೆ ನಮ್ಮದು ಧರ್ಮ ಯುದ್ಧ! ಇಸ್ಲಾಂ ಧರ್ಮಕ್ಕಾಗಿ ನಡಸುವ ಈ ಹೋರಾಟದಲ್ಲಿ ಅಲ್ಲಾನು ನಮಗೆ ಖಂಡಿತ ಜಯ ದೊರಕಿಸಿಕೊಡುವನೆಂಬ ನಂಬಿಕೆ ನನಗೆ ಇದೆ. ಈ ಬಗ್ಗೆ ನೀವು ಅಧೈರ್ಯಪಡುವ ಕಾರಣವಿಲ್ಲ. ಶ್ರೀಕರ್ಣ

ಪೂರ್ವಕವಾಗಿ ನೀವು ನೆರವಾದರೆ ನಮಗೆ ಜಯವು ಸಿದ್ಧ. ಏಕೆಂದರೆ ಈ ಹಿಂದೆ ಬಹಮನಿ ರಾಜ್ಯ ಒಂದಾಗಿದ್ದಾಗ ವಿಜಯನಗರದರಸರನ್ನು ಅನೇಕ ಬಾರಿ ಸೋಲಿಸಿದ ನಿದರ್ಶನಗಳು ಇತಿಹಾಸದಲ್ಲಿ ಇವೆ. ಈಗ ನಾವು ಒಂದಾಗಿ ಸಂಘಟಿಸಿ ಹೋರಾಡಿದರೆ ನಮಗೆ ಜಯ ಸಿಕ್ಕಬಹುದು! ಆದರೆ ನಾವು ಅಧೀರ ರಾಗದೆ, ಸ್ವಶಕ್ತಿಯಲ್ಲಿ ನಂಬಿಕೆ ಇರಿಸಿ, ಧರ್ಮಸಂರಕ್ಷಣೆಗಾಗಿ ಹೋರಾಡಬೇಕು ಅಷ್ಟೆ!"

ಈ ಮಾತು ಆಲಿ ಅದಿಲ್‌ಷಹನ ಅನೇಕ ಸಂದೇಹಗಳನ್ನು ನಿವಾರಿಸಿತು. ಅವನು ಬಹಮನಿ ಸುಲ್ತಾನರ ಸಂಘಟನೆಗೆ ಸೇರಲು ಸಮ್ಮತಿಸಿದ. ಆದರೂ ಯುದ್ಧ ಅನಿವಾರ್ಯವಾಗುವ ಮೊದಲು, ರಾಮರಾಯನನ್ನು ಕಂಡು, ಇಲ್ಲವೇ ರಾಯಭಾರಿಗಳಿಂದ ಸಂಧಾನ ನಡಸಿ ಯುದ್ಧವನ್ನು, ಮಾರಣಹೋಮವನ್ನು ನಿಲ್ಲಿಸಿ ಉಭಯಪಕ್ಷಗಳಿಗೂ ಅನುಕೂಲವಾಗುವ ಒಪ್ಪಂದ ಸಾಧಿಸುವ ದೂರದ ಆಸೆ ಅವನಿಗೆ ಮಾತ್ರ ಅಳಿಯಲಿಲ್ಲ. ಬಿಜಾಪುರದ ಅದಿಲ್‌ಷಹನು ತನ್ನ ನಿರ್ಧಾರದಿಂದ ಹಿಂದಕ್ಕೆ ಸರಿಯಬಾರದೆಂದು ಅಹಮದ್‌ನಗರದ ಹುಸೇನ ನಿಜಾಂಷಹನು ಒಂದು ಉಪಾಯ ಮಾಡಿದನು. ರಕ್ತ ಸಂಬಂಧಕ್ಕಿಂತಲೂ ಮೀರಿದ ಸ್ನೇಹ ಸಂಬಂಧವಿಲ್ಲವೆಂದು ಇಬ್ರಾಹಿಂಖಾನನ ಪ್ರಸಂಗದಲ್ಲಿ ಅರಿತಿದ್ದ ಅವನು ಆಲಿ ಆದಿಲ್‌ಷಹನನ್ನು ರಕ್ತ ಬಂಧನದಿಂದ ತನ್ನವನನ್ನಾಗಿ ಮಾಡಿ ಕೊಳ್ಳಲು ನಿಶ್ಚಯಿಸಿದನು. ಅವನು ಆಲಿ ಅದಿಲ್‌ಷಹನ ವಿಶ್ವಾಸಿಗಳ ಮೂಲಕ ಸಂಧಾನ ನಡಸಿ ತನ್ನ ಎರಡನೆಯ ಮಗಳು ಚಾಂದಬೀಬಿಯನ್ನು ಆಲಿ ಅದಿಲ್ ಷಹನು ಮದುವೆಯಾಗಲು ಒಪ್ಪಿಸಿದನು. ಇದರ ಜತೆಗೆ ಹುಸೇನ್ ನಿಜಾಂ ಷಹನ ಹಿರಿಯಮಗನಿಗೆ ತನ್ನ ತಂಗಿಯನ್ನು ಮದುವೆಮಾಡಿಕೊಡಲು ಸಮ್ಮತಿ ಸಿದನು. ಈ ವಿವಾಹಗಳು ಅದ್ಧೂರಿಯಿಂದ ನಡೆದುವು. ವಿವಾಹದ ಸಂಭ್ರಮ ಮುಗಿಯುತ್ತಿದ್ದಂತೆ ಅವರು ದಂಡಯಾತ್ರೆಯ ಸಿದ್ಧತೆಗಳನ್ನು ಬಿರುಸಿನಿಂದ ಮಾಡಿಕೊಳ್ಳಲು ಆರಂಭಿಸಿದರು.

ಬಹಮನಿ ಸುಲ್ತಾನರು—ಬಿಜಾಪುರದ ಆಲಿ ಅದಿಲ್‌ಷಹ, ಅಹಮದ್ ನಗರದ ಹುಸೇನ್‌ನಿಜಾಮುಷಹ, ಗೋಲ್ಕಂಡದ ಇಬ್ರಾಹಿಂ ಕುತುಬ್‌ಷಹ, ಬಿದರೆಯ ಇಬ್ರಾಹಿಂ ಬರಿದ್‌ಷಹ, ಬಿರಾರಿನ ಬುರಾನ್ ಇಮದ್‌ಷಹ ಇವರು ಗಳು ಸಂಘಟಿಸಿ ತಮ್ಮ ಸಕಲ ಸೈನ್ಯಗಳೊಡನೆ ವಿಜಯನಗರದ ಮೇಲೆ ದಂಡೆತ್ತಿ ಬರಲು ಯೋಚಿಸುತ್ತಿರುವರೆಂಬ ಸಂಗತಿ ಬಹುಕಾಲ ಗುಟ್ಟಾಗಿ ಉಳಿಯಲಿಲ್ಲ. ತಿಪ್ಪಾಜಿ ಮತ್ತು ಭೀಮೋಜಿ ಎಂಬ ಗೂಢಚಾರರು ಬಿಜಾಪುರ, ಅಹಮದ್ ನಗರಗಳಿಂದ ಬಂದು ಈ ವಾರ್ತೆಯನ್ನು ರಾಮರಾಯನಿಗೆ ತಿಳಿಸಿದರು. ಇದನ್ನು

ಕೇಳಿ ರಾಮರಾಯನು ತನ್ನ ಕಿವಿಯನ್ನು ತಾನು ನಂಬಲಿಲ್ಲ.

ತನ್ನ ತಂಟೆಗೆ ಬಂದರೆ ತಮಗೆ ಯಾವ ಗತಿ ಬರುವುದೆಂಬುದನ್ನು ತಿಳಿದಿದ್ದರೂ ತನ್ನ ಮೇಲೆ ದಂಡೆತ್ತಿಬರುವಷ್ಟು ಧೈರ್ಯ ಬಹಮನಿಸುಲ್ತಾನರಿಗೆ ಅದು ಹೇಗೆ ಬಂದಿತೆಂದು ಅವನಿಗೆ ಆಶ್ಚರ್ಯವಾಯಿತು! ಇದಕ್ಕೂ ಆಶ್ಚರ್ಯವನ್ನು ಉಂಟುಮಾಡಿದ ಸಂಗತಿ ಎಂದರೆ, ಈ ಒಕ್ಕೂಟದಲ್ಲಿ ತನ್ನ ಪ್ರೀತಿಯ ಅಭಿಮಾನದ ಪುತ್ರನಂತಿದ್ದ ಆಲಿ ಅದಿಲ್‌ಷಹನು ಸೇರಿರುವನೆಂಬ ಸಂಗತಿ. ಆಲಿ ಅದಿಲ್‌ಷಹನಿಗೆ ಹುಸೇನ ನಿಜಾಂಷಹನು ಮಗಳನ್ನು ಕೊಟ್ಟು ಅವನನ್ನು ತನ್ನ ವಿರುದ್ಧ ಎತ್ತಿಕಟ್ಟಿ ತಮ್ಮಿಬ್ಬರಲ್ಲಿದ್ದ ಸ್ನೇಹವೃಕ್ಷಕ್ಕೆ ಕೊಡಲಿ ಹಾಕಿದನೆಂಬ ಸಂಗತಿ ಕೇಳಿ ವ್ಯಥೆಯಾಯಿತು. ತಾನು ಯಾರನ್ನ ಮಗನಿಗಿಂತ ಅತಿಶಯವಾಗಿ ನಡೆಸಿಕೊಂಡಿದ್ದನೊ ಆ ಆಲಿ ಅದಿಲ್‌ಷಹನು, ತನಗೆ ದ್ರೋಹ ಬಗೆಯುವನೆಂದು ಅವನು ಕನಸುಮನಸ್ಸಿನಲ್ಲಿಯೂ ತಿಳಿದಿರಲಿಲ್ಲ. ಇದೊಂದು ಅವನಿಗೆ ಭಾರಿ ಪೆಟ್ಟಾಯಿತು. ತನ್ನ ಕಣ್ಣೆದುರಿಗೆ ತಾನು ತೊಟ್ಟದ್ದ ಹಿಂದೂ ಮುಸ್ಲಿಮ ಹೊನ್ನಮಂದಿರ ಕುಸಿದು, ಪುಡಿಪುಡಿಯಾದಂತೆ ಅವನಿಗೆ ಭಾಸವಾಯಿತು.

ಮೇಲಿಂದ ಮೇಲೆ ರಾಮರಾಯನು ಯಾವುದು ನಡೆಯಬಾರದೆಂದು ಆಶಿಸಿದ್ದನೋ ಅವುಗಳೇ ನಡೆದಿದ್ದುವು. ಅವನ ಹೊಂಗನಸುಗಳೆಲ್ಲವೂ ಒಂದೊಂದಾಗಿ ನೀರ್ಗುಳ್ಳೆಯಂತೆ ಅವನ ಕಣ್ಣೆದುರಿಗೆ ಒಡೆದಿದ್ದುವು. ಅವನ ನೂರು ಆಸೆಗಳು ಈಗ ಪಾಳುಬಿದ್ದ ಮಂದಿರದಂತೆ ಭಗ್ನವಾಗಿದ್ದುವು. ಅವನಿಗೆ ಎಲ್ಲಕ್ಕಿಂತಲೂ ಹೆಚ್ಚು ಮನಸ್ಸಿಗೆ ವ್ಯಾಕುಲವನ್ನು ಉಂಟುಮಾಡಿದ ಸಂಗತಿ ಎಂದರೆ —ತನ್ನಲ್ಲಿ ಕಡೆಗೂ ಆಲಿ ಅದಿಲ್‌ಷಹನು ನಂಬಿಕೆ ಇಡಲಿಲ್ಲವಲ್ಲಾ ಎಂಬುದು. ಅವನು ತನ್ನ ನಿರ್ಮಲ ನಿರ್ವ್ಯಾಜ ಪ್ರೀತಿ ವಿಶ್ವಾಸಗಳನ್ನು ಕೃತಕವೆಂದು ಭಾವಿಸಿದನಲ್ಲಾ ಎಂದು, ರಾಮರಾಯ ವ್ಯಥೆಪಟ್ಟ. ಅವನು ವಿಜಯನಗರದಿಂದ ಹೊರಡುವ ಸಮಯದಲ್ಲಿ ರಾಮರಾಯನು ಹೇಳಿದ್ದನು: " ನೀನು ಎಲ್ಲೇ ಇರು, ಹೇಗೇ ಇರು, ನೀನು ನನ್ನ ಅಭಿಮಾನದ ಪುತ್ರ! ಇಂದು ಅವನನ್ನು ವಿಧಿ ಶತ್ರುವಾಗಿ ಮಾರ್ಪಡಿಸಿತು!

ಈಗ ಶತ್ರುಗಳು ವಿಜಯನಗರದ ಮೇಲೆ ದಂಡೆತ್ತಿ ಬರಲು ಸಿದ್ಧತೆ ನಡೆಸಿರುವ ರಾಮರಾಯನು ಸುಮ್ಮನೆ ಕೂಡುವಂತೆ ಇರಲಿಲ್ಲ. ರಾಮರಾಯನು ತನಗೆ ಮೇಲಿಂದ ಮೇಲೆ ವಿಶ್ವಾಸದ್ರೋಹ ಬಗೆದ ಆ ಬಹಮನಿ ಸುಲ್ತಾನರಿಗೆ ಈ ಬಾರಿ ಸರಿಯಾಗಿ ಬುದ್ಧಿ ಕಲಿಸಲು ನಿರ್ಧರಿಸಿ, ತನ್ನ ಸೈನ್ಯವನ್ನು ಬರಲಿರುವ ದಂಡಯಾತ್ರೆಗೆ ಸಿದ್ಧಗೊಳಿಸಲು ಆರಂಭಿಸಿದನು.

ಎರಡು ಕಡೆಯಲ್ಲೂ ಯುದ್ಧದ ಸಿದ್ಧತೆಗಳು ಭರದಿಂದ ನಡೆದುವು. ಈ ವೇಳೆಗೆ ಜಹಲ್ನಾಪುರದಲ್ಲಿದ್ದ ಗೂಢಚಾರರು ಸುದ್ದಿ ತಂದರು :

ಮೊದಲೇ ಮಾಡಿಕೊಂಡಿದ್ದ ಹಂಚಿಕೆಯಂತೆ ಬಹಮನಿ ಸುಲ್ತಾನರ ಸೈನ್ಯವು ವಿಜಯನಗರದ ಕಡೆಗೆ ಹೊರಟಿದೆ ಎಂದು. ಕಟ್ಟಕಡೆಯ ಗಳಿಗೆಯಲ್ಲಿ ಯಾವುದೋ ವೈಮನಸ್ಸಿನಿಂದ ಬಿರಾರಿನ ಬುರಾನ ಇಮದಷಹನು ಈ ಒಕ್ಕೂಟದಿಂದ ಹಿಮ್ಮೆಟ್ಟಿದ್ದನು. ಉಳಿದ ಸುಲ್ತಾನರು ಇದರಿಂದ ಅಚಲಿತರಾಗದೆ ತಮ್ಮ ಸೈನ್ಯಗಳೊಡನೆ ವಿಜಯನಗರದತ್ತ ಸಾಗಿದ್ದರು.

ಅವರು ನಾಲ್ಕು ದಿಕ್ಕಿನಿಂದ ಬಂದು ಮೊದಲು ಸೋಲಾಪುರದಲ್ಲಿಯೂ ಅನಂತರ ರಕ್ಕಸತಂಗಡಿಯ ಬಳಿಯೂ ಒಂದಾಗಿ ಸೇರಬೇಕೆಂದು ಮೊದಲೇ ನಿರ್ಣಯವಾಗಿತ್ತು. ಅದರಂತೆ ಬಿಜಾಪುರದ ಸೈನ್ಯವನ್ನು ನಡಸಿಕೊಂಡು ಕ್ರಿಶ್ವರಖಾನನೂ, ಅಹಮದ್‌ನಗರದ ಸೈನ್ಯವನ್ನು ನಡಸಿಕೊಂಡು ಮೌಲನಾ ಇನಾಯಿತುಲ್ಲಾನೂ, ಗೋಲ್ಕಂಡದ ಸೈನ್ಯನ್ನು ನಡಸಿಕೊಂಡು ಮುಸ್ತಫಖಾನನೂ ಬಂದು ಸೋಲಾಪುರದ ಬಳಿ ಕಲೆತಿದ್ದರು. ಅವರ ಬಳಿ ಒಟ್ಟು ಐವತ್ತು ಸಾವಿರ ಕುದುರೆಗಳೂ, ಮೂರು ಸಾವಿರ ಕಾಲಾಳುಗಳೂ ಇದ್ದುವು. ಬಿಜಾಪುರದ ಸೈನ್ಯದಲ್ಲಿ ಆರು ಸಾವಿರ ಮರಾಠೆಯವರಿದ್ದರು.

ಈ ಸುದ್ದಿ ಮಿಂಚಿನ ವೇಗದಲ್ಲಿ ವಿಜಯನಗರವನ್ನು ಬಂದು ಮುಟ್ಟಿತು.

ಇದರಿಂದ ರಾಮರಾಯನು ಅಧೀರನಾಗಲಿಲ್ಲ. ಈ ವೇಳೆಗೆ ಅವನ ಸೈನ್ಯದ ಸಿದ್ಧತೆಗಳೂ ಭರದಿಂದ ಸಾಗಿದ್ದುವು. ನಾಡಿನ ಮೂಲೆ ಮೂಲೆಗಳಿಂದ ಸಾಮಂತರು, ಮಾಂಡಲೀಕರು, ಪಾಳೆಯಗಾರರು ಗಾವುಂಡರು ತಮ್ಮ ಸಕಲ ಸೇನಾಬಲಗಳೊಂದಿಗೆ ಸಕಾಲದಲ್ಲಿ ವಿಜಯನಗರಕ್ಕೆ ಆಗಮಿಸಿದ್ದರು. ವಿಜಯನಗರದಲ್ಲಿ ಅನೇಕ ಪರಾಕ್ರಮಿಗಳೂ, ರಣಮಿತ್ರರುಗಳೂ ಆದ ಸರದಾರರೂ, ದಂಡನಾಯಕರೂ ಸೇರಿದ್ದರು. ಪದನಿಯ ಜಕ್ಕಣ್ಣನೂ, ಪೆನಗೊಂಡೆಯ ಅಲ್ಲಪ್ಪನಾಯಕನೂ, ಮದನಸೂರಿನ ವೀರಪ್ಪನಾಯಕನೂ, ಇಕ್ಕೇರಿಯ ಕೃಷ್ಣಪ್ಪನಾಯಕನೂ, ಸಾದ್ವಿಯ ರಘುನಾಥನಾಯಕನೂ, ಕೊಲ್ಲಾಪುರದ ಕಾಶೀನಾಯಕನೂ ಚಿತ್ರಕಲ್ಲುದುರ್ಗದ ಶೇಷಪ್ಪನಾಯಕನೂ, ಚಂದಾವರದ ಭೀಮಪ್ಪನಾಯಕನೂ, ಸಕ್ಕರೆಪಟ್ಟಣದ ಜಕ್ಕನಾಯಕನೂ, ಅದವಾನಿಯ ವೆಂಕಟಪತಿನಾಯಕನೂ, ಶಿರಾದ ಪರಪ್ಪನಾಯಕನೂ, ಬಳ್ಳಾಪುರದ ಅಲ್ಲಿನಾಯಕನೂ ಶ್ರೀರಂಗಪಟ್ಟಣದ ರಾಮರಾಜನೂ, ಬಿದನೂರಿನ ಸೋಮಶೇಖರನಾಯಕನೂ, ಮುಂಡಿಕೋಟೆಯ ಅಚ್ಯುತನಾಯಕನೂ, ದಾವನಹಳ್ಳಿಯ ಹನುಮಪ್ಪನಾಯಕನೂ, ಹಂಪನಹಳ್ಳಿಯ ಪಿಡ್ಡಿನಾಯಕನೂ, ಮುಟ್ಟೆಯ ತಿಮ್ಮಪ್ಪನಾಯಕನೂ,

ಕಡಪೆಯ ವೆಂಕಟಪತಿನಾಯಕನೂ, ತಲಕಾಡಿನ ತಿಮ್ಮನಾಯಕನೂ, ಮತ್ತಿತರ ಹಿರಿಯ ಕಿರಿಯ ದಂಡನಾಯಕರೂ ತಮ್ಮ ಸೈನ್ಯಗಳೊಂದಿಗೆ ಸೇರಿದ್ದರು. ಇವರಿಗೆ ಮುಖ್ಯ ದಳಪತಿಯಾಗಿ ತಿರುಮಲ ವೆಂಕಟಾದ್ರಿ, ಮುಕುಂದನಾಯಕ, ಉನಿಲ್‌ಮುಲ್ಕರು ನಿಯೋಜಿತರಾಗಿದ್ದರು. ಮಧುರೆಯ ವಿಶ್ವನಾಥನಾಯಕನು ತೀರಿಕೊಂಡಿದ್ದು ಅವನ ಮಗ ಕೃಷ್ಣಪ್ಪನಾಯಕನು ತನ್ನ ಸೈನ್ಯವನ್ನು ಅರಿಯನಾಥ ಮೊದಲಿಯಾರನೆಂಬ ದಕ್ಷದಳಪತಿಯ ಕೈಲಿಟ್ಟು ಕಳುಹಿಸಿದ್ದನು. ಎಲ್ಲಿಲ್ಲಿ ನೋಡಿದರೂ ಸಮರೋತ್ಸಾಹ! ಯಾರ ಬಾಯಲ್ಲಿ ನೋಡಿದರೂ ಯುದ್ಧದ ಮಾತುಕತೆಗಳೇ! ಎಲ್ಲೆಲ್ಲೂ ಶಸ್ತ್ರಾಸ್ತ್ರಗಳನ್ನು ತಯಾರಿಸುವುದು, ಅವುಗಳಿಗೆ ಸಾಣೆ ಇಡುವುದು, ಶುಭ್ರಗೊಳಿಸುವುದು, ಕುದುರೆ ಒಂಟೆ ಆನೆಗಳ ತರಬೇತಿ, ಸೈನಿಕರ ಕವಾಯಿತು ಇತ್ಯಾದಿ ಕಾರ್ಯಗಳು ಬಿಡುವಿಲ್ಲದೆ ನಡೆದಿದ್ದುವು. ಸೈನಿಕರಿಗೆ ಬೇಕಾಗುವ ಆಹಾರ ಧಾನ್ಯಗಳನ್ನು ಒದಗಿಸಲು ನಗರದ ವರ್ತಕರು ಈಗಾಗಲೇ ದೇಶದ ಮೂಲೆ ಮೂಲೆಗಳಿಂದ ಆಹಾರ ವಸ್ತುಗಳನ್ನು ಸಂಗ್ರಹಿಸಿದ್ದರು. ಅವರ ಮನರಂಜನೆಗಳಿಗೆಂದು ಅನೇಕ ನಟರೂ, ವೇಶ್ಯೆಯರೂ ಡೊಂಬರಾಟದವರೂ – ಮತ್ತಿತರ ಜನರೂ ವಿಜಯನಗರಕ್ಕೆ ಬಂದು ನೆರೆದಿದ್ದರು. ಎಲ್ಲೆಲ್ಲೂ ಒದಗಿರುವ ದಂಡಯಾತ್ರೆಯ! ಮಾತು ಎಲ್ಲೆಲ್ಲೂ ಸಂತೋಷ ಸಂಭ್ರಮ! ಎಲ್ಲರೂ ಯುದ್ಧಘೋಷಣೆಯ ದಿನಕ್ಕಾಗಿ ಎದುರು ನೋಡುತ್ತಿದ್ದರು—

ಆ ದಿನವೂ ಹತ್ತಿರ ಬಂತು.

ಈ ದಿನ ರಾಮರಾಯನು ಬಹಮನಿಸುಲ್ತಾನರ ಮೇಲೆ ಯುದ್ಧವನ್ನು ಘೋಷಿಸಿ, ತನ್ನ ಸೈನ್ಯಕ್ಕೆ ದಂಡಯಾತ್ರೆಯ ಆಜ್ಞೆಕೊಡಲಿರುವನೆಂದು ಎಲ್ಲೆಲ್ಲೂ ಬಹಳ ಉತ್ಸಾಹ, ಸಂತೋಷ ಸಂಭ್ರಮಗಳು! ವೇಳೆಗೆ ಮೊದಲೇ ಭುವನವಿಜಯದ ಓಲಗಶಾಲೆಯು ಜನರಿಂದ ಕಿಕ್ಕಿರಿದಿತ್ತು. ಮಾಂಡಲೀಕರು ಸಾಮಂತರು, ದಂಡನಾಯಕರೇ ಮೊದಲಾದ ಆಹ್ವಾನಿತರು ಮೊದಲೇ ಬಂದು ತಮ್ಮ ಆಸನಗಳಲ್ಲಿ ಮಂಡಿಸಿದ್ದರು. ಎಲ್ಲರೂ ಸಾಮ್ರಾಟರ ಆಗಮನಕ್ಕಾಗಿ ಎದುರುನೋಡುತ್ತಿದ್ದರು.

ನಿಶ್ಚಿತವೇಳೆಗೆ ಸರಿಯಾಗಿ ರಾಮರಾಯನು ಆಸ್ಥಾನಕ್ಕೆ ಆಗಮಿಸಿದನು. ವಂದಿಮಾಗಧರು,ಸ್ತುತಿಪಾಠಕರುಜಯಘೋಷಮಾಡಿದರು. ಪುರೋಹಿತರು ವೇದಮಂತ್ರಗಳನ್ನು ಘೋಷಿಸಿದರು. ಪಂಚವಾದ್ಯಗಳು ಭೋರ್ಗರೆದುವು. ಆಸ್ಥಾನಿಕರು ಎದ್ದುನಿಂತು, ಜಯ ಜಯ ಮಹಾರಾಜ! "ಜಯ ಜಯ ನಗರಾಧೀಶ! ಜಯ ಶ್ರೀರಾಮಭೂಪಾಲ!" ಎಂದು ಜಯಕಾರಮಾಡಿ ಪ್ರಭುಗಳಿಗೆ ವಂದನೆ

ಮಾಡಿ, ಅವರು ಸಿಂಹಾಸನದಲ್ಲಿ ಮಂಡಿಸುತ್ತಲು ತಾವೂ ತಮ್ಮ ಸ್ಥಳಗಳಲ್ಲಿ ಕುಳಿತರು.

ರಾಮರಾಯನು ನವರತ್ನಖಚಿತವಾದ ಪೀಠದಲ್ಲಿ ಮಂಡಿಸಿದನು. ಅವನು ಇಪ್ಪತ್ತರ ವಯಸ್ಸನ್ನು ಸಮೀಪಿಸಿದ್ದರೂ ನಲವತ್ತರ ತರುಣನಂತೆ ಕಾಣುತ್ತಿದ್ದನು. ಬಲವಾದ ಮೈಕಟ್ಟು, ಯುವಕರನ್ನು ನಾಚಿಸುವ ಉತ್ಸಾಹ, ಅವನ ಮುಖದ ಕಾಂತಿ – ಅವನನ್ನು ಯುವಕನೆಂದು ಭ್ರಮಿಸುವಂತೆ ಮಾಡುತ್ತಿತ್ತು. ಈ ವಯಸ್ಸಿನಲ್ಲೂ ರಾಮರಾಯನ ಮುಖ ಸುಕ್ಕುಗಳಿಲ್ಲದೆ ಮಾಂಸಕಂಡಗಳಿಂದ ತುಂಬಿ ಸದೃಢವಾಗಿತ್ತು. ಅವನ ಮುಖದಲ್ಲಿ ದೃಢಪ್ರತಿಜ್ಞೆಯು ಎದ್ದುಕಾಣುತ್ತಿತ್ತು. ಬಗ್ಗಿದ್ದ ಆ ಹುಬ್ಬುಗಳು, ಸೆಟೆದುಕೊಂಡ ಆ ತುಟಿಗಳು, ನಿಮಿರಿದ ಮೀಸೆಗಳು ಇದಕ್ಕೆ ಸಾಕ್ಷಿಯಾಗಿದ್ದುವು. ಅವನ ವಿಶಾಲವಾದ ಲಲಾಟದಲ್ಲಿ ನೂರೆಂಟು ಕ್ಷೇತ್ರಗಳಿಂದ ಬಂದ ಗಂಧ ಶೋಭಿಸುತ್ತಿತ್ತು! ಅವನ ಕಣ್ಣುಗಳಲ್ಲಿ ಕಿಡಿಕಾರುತ್ತಿತ್ತು! ವೇಷದಲ್ಲಿ ಆಡಂಬರಕ್ಕಿಂತಲೂ ಸರಳತೆ ಎದ್ದು ಕಾಣುತ್ತಿತ್ತು. ಕತ್ತಿನಲ್ಲಿ ಬೆಲೆಬಾಳುವ ಮುತ್ತಿನ ಸರ ಶೋಭಿಸುತ್ತಿತ್ತು. ತಲೆಯ ಮೇಲಿದ್ದ ರುಮಾಲಿನಲ್ಲಿ ಉಷ್ಟ್ರಪಕ್ಷಿಯ ಗರಿ ಎದ್ದುಕಾಣುತ್ತಿತ್ತು. ರಾಮರಾಯನನ್ನು ನೋಡಿದವರಲ್ಲಿ ಒಮ್ಮೆಲೇ ಗೌರವವೂ ಭಯವೂ ಉಂಟಾಗುತ್ತಿತ್ತು.

ಅವನು ಗಂಭೀರವಾಗಿ ಎದ್ದುನಿಂತು, ತನ್ನ ಕಂಚುಕಂಠದಲ್ಲಿ ಬಹಮನಿ ಸುಲ್ತಾನರ ಮೇಲೆ ಯುದ್ಧ ಸಂಭವಿಸಿದ ಕಾರಣವನ್ನು ಪ್ರಸ್ತಾಪಿಸಿದನು. ಅನಂತರ ಸಿಂಹದಂತೆ ಗರ್ಜಿಸಿದನು.

"ಈ ಬಾರಿ ನಾಲ್ಕುಮಂದಿ ಸುಲ್ತಾನರು ಸಂಘಟಿಸಿ ತಮ್ಮ ಸಮಸ್ತ ಸೇನಾ ಬಲದೊಂದಿಗೆ ನಮ್ಮ ಮೇಲೆ ಬೀಳಲು ಬರುತ್ತಿದ್ದಾರೆ! ನಾಲ್ಕು ಮಂದಿ ಸುಲ್ತಾನರು ಮಾತ್ರವಲ್ಲ. ನಾನೂರು ಮಂದಿ ಸುಲ್ತಾನರು ನಮ್ಮ ಮೇಲೆ ದಂಡೆತ್ತಿಬಂದರೂ ನಮಗೆ ಹೆದರಿಕೆ ಇಲ್ಲ. ನಮ್ಮ ಸೈನ್ಯ ಅಸಂಖ್ಯಾತವಾಗಿದೆ! ಅಜೇಯವಾಗಿದೆ! ನಮ್ಮ ಸೈನ್ಯದ ಮುಂದೆ ಶತ್ರುಗಳ ಸೈನ್ಯ ಹೆದರಿ ಓಡಿಹೋದೀತು! ಈ ಬಗ್ಗೆ ಯಾರೂ ಯಾವ ಬಗೆಯ ಶಂಕೆಪಡುವ ಕಾರಣವಿಲ್ಲ! ಜಯ ನಮ್ಮದು! ವಿಜಯ ವಧು ನಮ್ಮನ್ನು ವರಿಸಲು ಎಂದಿನಂತೆ ಇಂದೂ ಕಾದಿದ್ದಾಳೆ! ಅವಳ ಕೈಹಿಡಿಯಲು ನಾವು ವೀರರಾಗಬೇಕಾಗಿದೆ! ಅವಳು ವೀರರಿಗಲ್ಲದೆ ಹೇಡಿಗಳಿಗೆ ಮಾಲೆ ಹಾಕುವುದಿಲ್ಲ. ಆದುದರಿಂದ ಕನ್ನಡದ ಕಲಿಗಳೇ, ರಣಕೇಳಿಗೆ ಸಿದ್ಧರಾಗಿ! ಅರಿಗಳನ್ನು ತರಿಯಿರಿ!

"ಈ ಬಾರಿ ಬಹಮನಿ ಸುಲ್ತಾನರು ಸಂಘಟಿಸಿ, ನಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ಬರುತ್ತಿದ್ದಾರೆ. ಅವರು ನಮ್ಮನ್ನೂ ಸಿಂಹಾಸನದಿಂದ ಉರುಳಿ

ಸಲು ಬರುತ್ತಿದ್ದಾರಂತೆ! ವೈಭವವಾದ ಸಾಮ್ರಾಜ್ಯವನ್ನು ನಾಶಮಾಡಲು ಬರುತ್ತಿದ್ದಾರಂತೆ! ವಿಜಯನಗರದ ಸಿರಿಸಂಪತ್ತನ್ನು ಕೊಳ್ಳೆ ಹೊಡೆಯಲು ಬರುತ್ತಿದ್ದಾರಂತೆ! ಅದೆಷ್ಟು ಸೊಕ್ಕು ಅವರಿಗೆ? ನಮ್ಮ ಮೇಲೆ ಕತ್ತಿ ಎತ್ತುವಷ್ಟು ಧೈರ್ಯ ಆ ಕುನ್ನಿಗಳಿಗೆ ಹೇಗೆ ಬಂತು? ಇಸ್ಲಾಂ ಧರ್ಮದ ರಕ್ಷಣೆಗಾಗಿ ನಮ್ಮ ಮೇಲೆ ದಂಡಯಾತ್ರೆ ಕೈಗೊಂಡಿದ್ದಾರಂತೆ! ಹಿಂದೂ ಧರ್ಮದ ನಾಶಕ್ಕೆ ಅವರು ಕಂಕಣತೊಟ್ಟಿದ್ದಾರಂತೆ! ನಮ್ಮ ಸನಾತನ ಧರ್ಮದ ಗೋಜಿಗೆ ಬಂದರೆ ಅವರನ್ನು ನಾವು ಜೀವಸಹಿತ ಬಿಡುವುದಿಲ್ಲವೆಂಬುದನ್ನು ಅವರಿಗೆ ನಾವು ತೋರಿಸಬೇಕು. ನಮ್ಮನ್ನು ಎದುರಿಸಿದರೆ ಎಂತಹ ಕಷ್ಟನಷ್ಟಗಳಿಗೆ ಒಳಗಾಗಬೇಕಾಯಿತೆಂಬುದನ್ನು ಅವರು ಮರೆತಂತೆ ಕಾಣುತ್ತದೆ. ಮತ್ತೆ ಅಹಮದ್ ನಗರ, ಗೋಲ್ಕಂಡಗಳಲ್ಲಾದ ಶಿಕ್ಷೆಯನ್ನು ಅವರಿಗೆ ನೆನಪು ಮಾಡಿಕೊಡಬೇಕಾಗಿದೆ! ಮುಂದೆ ಎಂದಿಗೂ ನಮ್ಮ ತಂಟೆಗೆ ಬರದಂತೆ ಬುದ್ಧಿ ಕಲಿಸಬೇಕಾಗಿದೆ! ನಿಮ್ಮಲ್ಲಿ ಎಲ್ಲರೂ ವಿರಾಗ್ರಣಿಗಳೆಂಬುದು ನನಗೆ ತಿಳಿದಿದೆ! ನೀವೆಲ್ಲರೂ ದೇಶಭಕ್ತರು, ಸಾಮ್ರಾಜ್ಯನಿಷ್ಠರು. ಈ ಬಗ್ಗೆ ಯಾರಿಗೂ ಸಂಶಯವಿಲ್ಲ! ವೈರಿಗಳು ಸಂಘಟಿಸಿ ಅಧಿಕ ಸಂಖ್ಯೆಯಲ್ಲಿ ನಮ್ಮ ಮೇಲೆ ಬೀಳಲು ಬರುತ್ತಿರುವರೆಂದು ಯಾರೂ ಹೆದರುವ ಕಾರಣವಿಲ್ಲ! ಕಾಲಯಮನು ಬಂದು ನಿಂತರೂ ನಾವು ಹೆದರುವವರಲ್ಲ, ಎಂಬುದನ್ನು ಇಂದು ತೋರಿಸಿಕೊಡಬೇಕು! ನಾವು ಹೇಡಿಗಳಲ್ಲ, ರಣವಿಕ್ರಮಿಗಳು - ಪುರುಷ ಸಿಂಹಗಳು ಎಂಬುದನ್ನು ಮೂರು ಲೋಕಕ್ಕೆ ತೋರಿಸಿಕೊಡುವ ಸುಸಂಧಿ ಈಗ ಒದಗಿದೆ. ನೀವೆಲ್ಲರೂ ಕನ್ನಡ ಸಾಮ್ರಾಜ್ಯದ ರಕ್ಷಣೆಗಾಗಿ, ಸ್ವಧರ್ಮ ರಕ್ಷಣೆಗಾಗಿ, ಪೂಜ್ಯವೂ ಪವಿತ್ರವೂ ಆದ ಎಲ್ಲದರ ರಕ್ಷಣೆಗಾಗಿ, ಇಂದು ಶತ್ರುಗಳೊಡನೆ ಹೊರಾಡಬೇಕಾಗಿದೆ! ಕನ್ನಡ ರಾಜರಾಜೇಶ್ವರಿಯ ಗೌರವ ರಕ್ಷಣೆಗಾಗಿ ನಮ್ಮ ಸರ್ವಸ್ವವನ್ನೂ ಮುಡುಪಿಡಬೇಕಾಗಿದೆ!" ಎಂದು ಸೈನಿಕರಿಗೆ ಸಮರದ ದೀಕ್ಷೆಯನ್ನು ವಿಧಿಪೂರ್ವಕವಾಗಿ ಕೊಟ್ಟನು.

ಆಸ್ಥಾನದಲ್ಲಿ ನೆರೆದಿದ್ದ ಜನ ಒಕ್ಕೊರಲಿನಿಂದ ಜಯಘೋಷಮಾಡಿ, ವೀರ ಪ್ರತಿಜ್ಞೆಯನ್ನು ಕೈಗೊಂಡು ಸಾಮ್ರಾಟರ ಹಸ್ತದಿಂದ ವೀಳ್ಯವನ್ನು ಪಡೆದರು. ಯುದ್ಧದಲ್ಲಿ ಜಯವಾಗಲೆಂದು ಎಲ್ಲ ದೇವಾಲಯಗಳಲ್ಲಿ ವಿಶೇಷ ಪೂಜೆಗಳು ನಡೆದುವು. ಸೈನಿಕರೆಲ್ಲರಿಗೂ ಅವರವರ ಯೋಗ್ಯತಾನುಸಾರ ಉಚಿತ ವಸ್ತ್ರಾಭರಣಗಳನ್ನು ಶಸ್ತ್ರಾಸ್ತ್ರಗಳನ್ನು ಪ್ರಭುಗಳು ದಯಪಾಲಿಸಿದರು. ಸೈನಿಕರೆಲ್ಲರಿಗೂ ಅವರವರ ಯೋಗ್ಯತಾನುಸಾರ ಮಾಸಕ್ಲಿಪ್ತವನ್ನೂ, ಸಂವತ್ಸರಕ್ಲಿಪ್ತಗಳನ್ನೂ, ಗೃಹವೆಚ್ಚಗಳನ್ನೂ ದಯಪಾಲಿಸಲಾಯಿತು. ಎಲ್ಲೆಲ್ಲೂ ಧೈರ್ಯದ ಮಾತುಗಳೇ!

ವೀರೋದ್ಗಾರಗಳೇ ಕೇಳಿಬರುತ್ತಿದ್ದುವು. ಜನ ಮದುವೆ ಮನೆಗೆ ಹೊರಡುವ ಸಂಭ್ರಮದಲ್ಲಿ ಯುದ್ಧಕ್ಕೆ ಹೊರಟಿದ್ದರು.

ರಾಮರಾಯನು ತನ್ನ ಸೈನ್ಯವನ್ನು ಹಲವು ಭಾಗಗಳಾಗಿ ವಿಂಗಡಿಸಿ ಒಂದೊಂದು ಭಾಗಕ್ಕೆ ಒಬ್ಬೊಬ್ಬ ಸಮರ್ಥನಾದ ದಂಡನಾಯಕನನ್ನು ನೇಮಿಸಿದನು. ಅವರೆಲ್ಲರೊಡನೆ ಯುದ್ಧದ ನೂರಾರು ಸಿದ್ಧತೆಗಳನ್ನು ಚರ್ಚಿಸಿದನು. ಅವನು ಬಹಮನಿ ಸುಲ್ತಾನರ ಮೇಲೆ ಯುದ್ಧ ಘೋಷಿಸಿದ್ದರೂ ಇನ್ನೊಮ್ಮೆ ತನ್ನ ಅಭಿಮಾನದ ಪುತ್ರನಾದ ಬಿಜಾಪುರದ ಸುಲ್ತಾನನನ್ನು ಕೃತಘ್ನ ಸುಲ್ತಾನರ ಒಕ್ಕೂಟದಿಂದ ಬೇರ್ಪಡಿಸಲು ಸಾಧ್ಯವಾದರೆ ಏಕೆ ಪ್ರಯತ್ನಿಸಬಾರದೆಂದು ಅನಿಸಿತು. ಅವನಿಗೆ ಆಲಿ ಆದಿಲ್‌ಷಹನಿಗೆ ಕೇಡು ಬಗೆಯುವುದು ಇಷ್ಟವಿರಲಿಲ್ಲ; ಅವನಿಗೆ ತನ್ನ ಸೈನ್ಯದಿಂದ ತೊಂದರೆಯಾಗುವುದು ಇಷ್ಟವಿರಲಿಲ್ಲ. ಇನ್ನೂ ತರುಣನೂ ಅನನುಭವಿಯೂ ಆದ ಅವನನ್ನು ಅವರು ಮೋಸದಿಂದ ತಮ್ಮ ಕಡೆಗೆ ಒಲಿಸಿಕೊಂಡಿರಬೇಕೆಂದೇ ಅವನ ಭಾವನೆ. ವಿವಾಹಬಂಧನದಿಂದ ಅವನನ್ನು ತಮ್ಮವನನ್ನಾಗಿ ಮಾಡಿಕೊಂಡಿರಬೇಕೆಂದೇ ಅವನ ಕಲ್ಪನೆ. ಆಲಿ ಆದಿಲ್‌ಷಹನು ಎಂದಿಗೂ ತನ್ನ ಮೇಲೆ ದಂಡೆತ್ತಿ ಬರುವವನಲ್ಲ! ಇಂಥವನು ತನ್ನ ಮೇಲೆ ಯುದ್ಧಕ್ಕೆ ಬಂದಿರಬೇಕಾದರೆ ಇದರಲ್ಲಿ ಏನೋ ಮೋಸ ನಡೆದಿರಬೇಕು! ಈಗಲೂ ಅವನಿಗೆ ಬುದ್ಧಿ ಹೇಳಿ, ಇತರ ಬಹಮನಿ ಸುಲ್ತಾನರ ದ್ರೋಹವನ್ನು ಅವನಿಗೆ ಮನದಟ್ಟುಮಾಡಿ, ಈ ಧರ್ಮಯುದ್ಧದಿಂದ ಅವನು ಸೈನ್ಯಸಮೇತ ಹಿಮ್ಮೆಟ್ಟುವಂತೆ ಮಾಡಲು ಯೋಚಿಸಿ ಅವನಿಗೆ ಒಂದು ಪತ್ರವನ್ನು ಬರೆದು, ಒಸಲಪ್ಪನಾಯಕನೆಂಬ ದೂತನೊಂದಿಗೆ ಕಳುಹಿಸಿಕೊಟ್ಟನು.

ಆಲಿ ಆದಿಲ್‌ಷಹನಿಗೆ ಕೊಡಲು ಅನೇಕ ಬೆಲೆಬಾಳುವ ವಸ್ತ್ರಾಭರಣಗಳನ್ನೂ ಉತ್ತಮಾಶ್ವಗಳನ್ನೂ ಸ್ನೇಹದ ಗುರುತಾಗಿ ಕಳುಹಿಸಿಕೊಟ್ಟನು.

ಒಸಲಪ್ಪನಾಯಕನು ಆಲಿ ಆದಿಲ್‌ಷಹನನ್ನು ಗೋಪ್ಯವಾಗಿ ಭೇಟಿಮಾಡಿ ರಾಮರಾಯನು ಇತ್ತಿದ್ದ ಕಾಣಿಕೆಯನ್ನು ಒಪ್ಪಿಸಿ, ಪತ್ರವನ್ನು ಕೊಟ್ಟನು.

ಆಲಿ ಆದಿಲ್‌ಷಹನು ಪತ್ರವನ್ನು ಓದಿಕೊಂಡನು. ಅದರಲ್ಲಿ ರಾಮರಾಯನು ಹೀಗೆ ಬರೆದಿದ್ದನು:

ನನ್ನ ಅಭಿಮಾನದ ಪುತ್ರನಾದ ಆಲಿ ಆದಿಲ್‌ಷಹನಿಗೆ.

ರಾಮರಾಯನು ಮಾಡುವ ಆಶೀರ್ವಾದಗಳು. ಇತ್ತೀಚೆಗೆ ನಿನ್ನಿಂದ ಕಾಗದ ಪತ್ರಗಳಿಲ್ಲ. ನಿನ್ನ ಯೋಗಕ್ಷೇಮದ ಬಗ್ಗೆ ಸಾಕುತಾಯಿ ತಿರುಮಲಾದೇವಿಯ ಆತಂಕ ಹೆಚ್ಚಾಗಿದೆ. ನೀನು ವಿವಾಹವಾದ ಸಮಾಚಾರ ಕೇಳಿ ತುಂಬಾ ಸಂತೋ

ಷವಾಯಿತು. ಇದಕ್ಕೆ ಆಹ್ವಾನ ಕೊಟ್ಟಿದ್ದರೆ ನಾವು ಇಬ್ಬರೂ ಬಂದು ವಧೂವರರನ್ನು ನೋಡಿ ಸಂತೋಷ ಪಡುತ್ತಿದ್ದೆವು. ಆದರೆ ನಮಗೆ ತಿಳಿಯದಂತೆ ವಿವಾಹಮಾಡಿಕೊಂಡಿರುವ ನೀನು ಎಲ್ಲಾದರೂ ಸುಖವಾಗಿರಬೇಕೆಂಬುದೇ ನಮ್ಮೆಲ್ಲರ ಹಾರೈಕೆ.

ಈಗ ಪತ್ರ ಬರೆಯುವುದೇನೆಂದರೆ, ನಿನ್ನ ಬಗ್ಗೆ ಮಹತ್ವದ ಸುದ್ದಿ ಕೇಳಿದ್ದೇನೆ. ನೀನು ಇತರ ಬಹಮನಿ ಸುಲ್ತಾನರ ಮಾತು ಕೇಳಿಕೊಂಡು ನನ್ನ ಮೇಲೆ ದಂಡೆತ್ತಿ ಬರುವುದಾಗಿ ತಿಳಿಯಿತು. ನೀನು ಆ ದ್ರೋಹಿಗಳ ಮಾತು ಕೇಳಬೇಡ! ಆ ನೀಚರು ನನ್ನ ನಿನ್ನ ಮಧುರ ಸ್ನೇಹದ ಅಮೃತದಲ್ಲಿ ವಿಷವನ್ನು ಹಿಂಡಲು ನೋಡುತ್ತಿದ್ದಾರೆ. ಅವರು ವಿಶ್ವಾಸ ಘಾತುಕರು! ಅವರ ಮರುಳು ಮಾತನ್ನು ನೀನು ನಂಬಬೇಡ! ಅವರು ಹೇಳಿಕೊಳ್ಳುತ್ತಿರುವ ಧರ್ಮ ಯುದ್ಧದ ಮಾತು ಕೇವಲ ಸೋಗು. ನೀನು ಎಲ್ಲವನ್ನು ತಿಳಿದವನು. ಹಿಂದೂ ಮುಸಲ್ಮಾನರ ಸಖ್ಯದ ಕನಸನ್ನು ನನ್ನಂತೆ ಕಾಣುವ ಭಾವನಾ ಜೀವಿ ನೀನು. ಅಂತೆಯೇ ಆದರ್ಶವಾದಿ. ನಿನಗೆ ನನ್ನಿಂದ ಯಾವುದೇ ಕೆಡಕು ಆದರೆ ನನಗೆ ಸಹಿಸುವುದಿಲ್ಲ. ನೀನು ಅವರ ಸಂಘಟನೆಯಿಂದ ದೂರ ಸರಿ! ಅವರನ್ನು ನಾನು ಸರಿಯಾಗಿ ವಿಚಾರಿಸಿಕೊಳ್ಳುತ್ತೇನೆ. ಮತ್ತೆ ಯಾರೂ ವಿಜಯನಗರದ ಮೇಲೆ ಶಸ್ತ್ರ ಎತ್ತದಂತೆ ಪಾಠಕಲಿಸುತ್ತೇನೆ. ಇದರಲ್ಲಿ ನೀನು ಸೇರಿರುವುದು ನನಗೆ ತುಂಬಾ ವ್ಯಥೆಯನ್ನುಂಟುಮಾಡುವ ವಿಷಯವಾಗಿದೆ. ನಿನಗೆ ನನ್ನಲ್ಲಿ ಅವಿಶ್ವಾಸವಾಗಿದ್ದರೂ ನಮಗೆ ಮಾತ್ರ ನಿನ್ನಲ್ಲಿ ಮೊದಲಿನ ಪ್ರೀತಿ ವಿಶ್ವಾಸಗಳು ಉಳಿದಿವೆ. ನಿನ್ನನ್ನು ನನ್ನ ಕೃಷ್ಣನೆಂದೇ ತಿಳಿದಿದ್ದೇನೆ. ನನ್ನ ಹಿಂದೂ ಮುಸ್ಲಿಂಹೊನ್ನು ಮಂದಿರಕ್ಕೆ ನಿನ್ನನ್ನು ಕಳಶವೆಂದು ಭಾವಿಸಿದ್ದೆ. ಇಂಥವನು ನನ್ನ ಮೇಲೆ ದಂಡೆತ್ತಿ ಬರುವ ಸಂಗತಿ ನನಗೆ ವಿಸ್ಮಯವನ್ನುಂಟುಮಾಡಿದೆ. ನನಗೆ ಇನ್ನೂ ಈ ಬಗ್ಗೆ ನಂಬಿಕೆಯೇ ಇಲ್ಲ. ನೀನು ವಿಚಾರವಂತಸಿದ್ದಿ, ಅನ್ಯಮತಸಹಿಷ್ಣುವಾಗಿರುವೆ. ಎಲ್ಲಕ್ಕಿಂತಲೂ ನಿನಗೆ ಸ್ವತಂತ್ರ ವಿಚಾರ-ಆದರ್ಶಗಳು ಇವೆ. ನೀನು ನನ್ನ ಮೇಲೆ ತಿರುಗಿ ಬೀಳಲು ಯಾವ ಕಾರಣವೂ ಇಲ್ಲ. ನಾನು ನಿನಗೆ ಎಂದೂ ಅನ್ಯಾಯಮಾಡಿಲ್ಲ. ನನ್ನಿಂದ ಯಾವ ದ್ರೋಹ ನಡೆದಿಲ್ಲ. ಹೀಗಿದ್ದು ನನ್ನನ್ನು ಸಂಶಯ ದೃಷ್ಟಿಯಿಂದ ನೋಡಿ ಆ ಕುಹಕಿಗಳ ಮಾತು ಕೇಳಿಕೊಂಡು ನನ್ನ ಮೇಲೆ ಶಸ್ತ್ರವೆತ್ತಿರುವೆ! ಇದಕ್ಕಾಗಿ ನನಗೆ ತುಂಬಾ ವಿಷಾದವಾಗುತ್ತದೆ. ದೈವಸಂಕಲ್ಪವೇನಿದೆಯೋ ತಿಳಿಯದು! ನಿನ್ನಂತಹ ಸನ್ಮಿತ್ರನೂ ನನಗೆ ಹಗೆಯಾಗಿದ್ದಾನೆ. ಏನೇ ಇರಲಿ, ನೀನು ಇತರರೊಡನೆ ಸಂಘಟಿಸಿ ನನ್ನ ಮೇಲೆ

ಕತ್ತಿ ಎತ್ತುವ ಮೊದಲು ಮತ್ತೊಮ್ಮೆ ವಿಚಾರ ಮಾಡು. ಇದಕ್ಕೆ ಉತ್ತರ ಕೊಡುವೆ ಎಂದು ನಂಬಿರುವ.

ಇಂತಿ ನಿನ್ನ ಸಾಕುತಂದೆ
ರಾಮರಾಯ

ಈ ಪತ್ರವನ್ನು ಓದಿಕೊಂಡು ಆಲಿ ಆದಿಲ್‌ಷಹನ ಮುಖ ಬಿಳಿಚಿಕೊಂಡಿತು. ಅವನು ಅಪರಾಧಿಯಂತೆ ಕೆಳಗೆ ಮೋರೆ ಮಾಡಿ ಅದನ್ನೇ ಯೋಚಿಸುತ್ತಾ ಕುಳಿತ. ಅವನು ರಾಮರಾಯನಿಂದ ಇಂತಹ ಪತ್ರ ಬರುವುದೆಂದು ನಿರೀಕ್ಷಿಸಿರಲಿಲ್ಲ. ಇದಕ್ಕೆ ಏನು ಉತ್ತರ ಕೊಡಬೇಕೆಂದು ತಿಳಿಯದೆ ಕೆಲವು ದಿನ ಒಸಲಪ್ಪನಾಯಕನನ್ನು ತನ್ನ ಬಳಿ ಉಳಿಸಿಕೊಂಡ. ರಾಮರಾಯನೊಡನೆ ಮತ್ತೊಮ್ಮೆ ಸಂಧಾನದ ಮಾತು ತೆಗೆಯಬಾರದೇಕೆ ಎಂದೆನಿಸಿತು. ಈ ಪ್ರಸ್ತಾಪವನ್ನು ಅಹಮದ್‌ನಗರದ ಸುಲ್ತಾನ ಹುಸೇನ್ ನಿಜಾಂಷಹನೊಂದಿಗೆ ಮಾಡಿದಾಗ, ಅವನು ಈ ಬಗ್ಗೆ ಮೂಗು ಮುರಿದ. ಯುದ್ಧಕ್ಕೆಂದು ಒಂದು ಸಂಧಾನದ ಮಾತು ತೆಗೆದರೆ ಶತ್ರುಗಳು ತಮ್ಮನ್ನು ಹೇಡಿಗಳೆಂದು ಕರೆಯುವರೆಂದು ಜರೆದು, ರಾಮರಾಯನ ಪತ್ರದಲ್ಲಿ ಹುರುಳಿಲ್ಲವೆಂದೂ ಅವನು ತಮಗೆ ಹೆದರಿ ತಮ್ಮನ್ನು ಬೇರ್ಪಡಿಸಲು ಈ ಸಂಚು ಮಾಡಿರುವನೆಂದೂ, ಈ ದ್ರೋಹಚಿಂತನೆಗೆ ತಾವು ಕಿವಿಗೊಡಬಾರದೆಂದೂ ಆಲಿ ಆದಿಲ್‌ಷಹನಿಗೆ ಬುದ್ಧಿ ಹೇಳಿದ. ತಾನೇ ಕುಳಿತು ಆಲಿ ಆದಿಲ್‌ಷಹನ ಹೆಸರಿನಲ್ಲಿ ರಾಮರಾಯನಿಗೆ ಸಮರದ ಆಹ್ವಾನವನ್ನೇ ಬರೆದುಕಳುಹಿಸಿದ!

ಇದರಿಂದ ಉರಿಯುತ್ತಿದ್ದ ರಾಮರಾಯನ ಕ್ರೋಧಾಗ್ನಿಗೆ ಇನಿಷ್ಟು ತುಪ್ಪ ಸುರಿದಂತೆ ಆಯಿತು. ಸಾಮ್ರಾಜ್ಯ ದುರಂತದ ಕಡೆಯ ಅಂಕಕ್ಕೆ ಭೂಮಿಕೆ ಸಿದ್ಧವಾಯಿತು. ಇನ್ನು ರಂಗಪ್ರವೇಶವಷ್ಟೆ ಉಳಿಯಿತು. ಅದಕ್ಕೆ ಇರ್ಕೆಡೆಯ ಯೋಧರು, ನಾಯಕರು ಸಿದ್ಧರಾದರು.

## ೧೯

ಸಾಮ್ರಾಜ್ಯ ದುರಂತದ ಕಡೆಯ ಅಂಕ ಆರಂಭ

ಬಹಮನಿ ಸುಲ್ತಾನರು ತಮ್ಮ ಸೈನ್ಯದೊಂದಿಗೆ ಸೊನ್ನಲಾಪುರದ ಬಳಿಗೆ ಬಂದು ಇಳಿದರು. ಈ ವಾರ್ತೆಯನ್ನು ಕೇಳಿ ಅವರನ್ನು ಕೃಷ್ಣೆಯ ದಂಡೆಯಲ್ಲೇ ಎದುರಿಸಿ ಸೋಲಿಸಿ ಸದೆಬಡಿಯಬೇಕೆಂದು ನಿಶ್ಚಯಿಸಿ ರಾಮರಾಯನು ಒಂದು ಶುಭದಿನ ಶುಭಲಗ್ನದಲ್ಲಿ ತನ್ನ ಸೈನ್ಯಕ್ಕೆ ನಗರದಿಂದ ಹೊರಡಲು ಆಜ್ಞೆ ಮಾಡಿ

ದನು. ರಾಮರಾಯನ ಸೈನ್ಯದಲ್ಲಿ ಇಪ್ಪತ್ತು ಸಾವಿರ ಕುದುರೆಗಳೂ, ತೊಂಭತ್ತು ಸಾವಿರ ಕಾಲಾಳುಗಳೂ ಇದ್ದುವು. ಅಲ್ಲದೆ, ಅನೇಕ ಸಹಸ್ರ ಆನೆಗಳೂ, ಒಂಟೆಗಳೂ ಇದ್ದುವು. ಇವುಗಳಿಗೆ ವೆಂಕಟಾದ್ರಿ ತಿರುಮಲರನ್ನ ಮಹಾದಂಡನಾಯಕರಾಗಿ ನೇಮಿಸಿದನು. ಈ ಬಾರಿ ಸ್ವಯಂ ರಾಮರಾಯನೇ ಶತ್ರುಮರ್ಧನಕ್ಕೆ ಹೊರಟಿದ್ದನು. ಎಪ್ಪತ್ತರ ಮುದುಕನಾದರೂ ಅವನಲ್ಲಿ ನಲವತ್ತರ ಯುವಕನ ಕೆಚ್ಚಿತ್ತು. ಅವನ ಸಮರೋತ್ಸಾಹ ಯುವಕರನ್ನು ನಾಚಿಸುವಂತಿತ್ತು.

ನಗರದ ಹೊರವಲಯದಲ್ಲಿ ಸಮಸ್ತ ಸೈನ್ಯವೂ ನೆರೆಯಿತು. ಸೈನ್ಯ ಹಾಗೂ ಸೈನಿಕ ಸಾಮಗ್ರಿಗಳ ಎಣಿಕೆಯ ಹಾಗೂ ವಿಭಜನೆಯ ಕಾರ್ಯಕ್ಕೆ ಆರಂಭವಾಯಿತು. ಕುದುರೆಗಳು ಒಂಟೆಗಳು ಆನೆಗಳು ಒಂದು ಕಡೆ ನಿಂತುವು. ಕಾಲಾಳುಗಳು ಮತ್ತೊಂದು ಕಡೆ ನಿಂತರು. ಯುದ್ಧದ ಶಸ್ತ್ರಾಸ್ತ್ರಗಳು ಮತ್ತೊಂದು ಗುಂಪಾಯಿತು, ಅಲ್ಲಿ ಹಿರಿಯ ತೋಫುಗಳೂ, ಕಿರಿಯ ತೋಫುಗಳೂ, ರಾಮಚಂಗಿಗಳೂ, ರಾಮಬಾಣಗಳೂ, ಮತಾಪುಗಳೂ, ತಾರಾಮಂಡಲಗಳೂ, ಭೂಚಕ್ರ ಮುಂತಾದ ವಿವಿಧ ಮದ್ದು ಗುಂಡುಗಳೂ, ಮದ್ದಿನಗಾಡಿಗಳೂ ಇದ್ದುವು. ಇವಲ್ಲದೆ ಕತ್ತಿ, ಭರ್ಜಿ, ತೋಮರ, ಕೊಂತ, ಮುಂತಾದ ಹಲವಾರು ಯುದ್ಧದ ಶಸ್ತ್ರಾಸ್ತ್ರಗಳು ರಾಸಿಯಾಗಿ ಇದ್ದುವು. ಇವುಗಳನ್ನೆಲ್ಲಾ ಎಣಿಸಿ ಅನಂತರ ಜನರ ಎಣಿಕೆಗೆ ಮೊದಲಾಯಿತು. ಕುದುರೆ ಸವಾರರು ಪದಾತಿಗಳು, ರಥಿಕರು, ಆನೆಯವರು, ಒಂದೆಡೆ ನಿಂತರು. ಕತ್ತಿಗಾರರು ಬಾಣಗಾರರು, ತೋಫಿನವರು, ಭರ್ಜಿಯವರು ಮತೊಂದು ಗುಂಪಾದರು. ಕೊಂಬು ತಮಟೆಯವರು, ನೀರು ಸರಬರಾಜಿನವರು, ಮಹಲುದಾರರು, ಚೂಪುದಾರರು, ಕಲ್ಲು ಕುಟಿಗರು, ಜೀನುಗಾರರು, ಬಡಗಿಗಳು, ಸರಾಫರು, ಕಂಚುಗಾರರು, ಇನ್ನೊಂದೆಡೆಗೆ ನಿಂತರು. ರಾಜಬಂಧುಗಳು ಶಾಸ್ತ್ರಿಗಳು, ಪುರೋಹಿತರು, ವೀಣೆಯವರು ಮತ್ತೊಂದು ಕಡೆ ಸೇರಿದರು. ಕಾಣಿಕೆಯ ಕಾರ್ಯ ಮುಗಿದ ಮೇಲೆ ಆನೆಗಳಿಗೆ ಅಂಬಾರಿಗಳನ್ನು ಜೋಡಿಸಲಾಯಿತು. ಡೋಲುಗಳನ್ನೂ ನಿಶಾನಿಗಳನ್ನೂ ಕಟ್ಟಲಾಯಿತು. ನಿಶಾನಿ ಆನೆಗಳ ಸಂಖ್ಯೆಯೇ ಎರಡು ಸಾವಿರವಿತ್ತು. ಹೀಗೆ ಸೈನ್ಯವನ್ನು ದಂಡಯಾತ್ರೆಗೆ ಸಿದ್ಧಗೊಳಿಸಿ, ಮರುದಿನ ಸೂರ್ಯೋದಯಕ್ಕಿಂತ ಮೊದಲು ಅವರು ಪ್ರಯಾಣ ಮಾಡಬೇಕೆಂದು ಆಜ್ಞೆಯನ್ನು ಸೈನಿಕ ಶಿಬಿರದಲ್ಲೆಲ್ಲಾ ಡಂಗೂರ ಹಾಕಿಸಿ, ತನ್ನವರೆಲ್ಲರಿಂದ ಬೀಳ್ಕೊಳ್ಳಲು ರಾಮರಾಯನು ತನ್ನ ರತ್ನಕೂಟಕ್ಕೆ ಬಂದನು.

ಅವನು ಹಿರಿಯ ರಾಣಿಯಾದ ತಿರುಮಲಾಂಬೆಯ ಮಹಲನ್ನು ಹೊಕ್ಕು ನವರತ್ನಖಚಿತವಾದ ಮಂಚದ ಮೇಲೆ ಕುಳಿತು ಸರ್ವಾಲಂಕಾರ ಭೂಷಿತೆ

ಯಾಗಿದ್ದ ಪ್ರಿಯ ಪತ್ನಿಯೊಡನೇ, ಸರಸಸಲ್ಲಾಪ ಮಾಡಿ, ಅಷ್ಟಭೋಗಗಳನ್ನು ಅನುಭವಿಸಿ ಇತರ ರಾಣಿಯರನ್ನು ವಿಚಾರಿಸಿಕೊಳ್ಳಲು ಅವರ ಅಂತಃಪುರ ಗಳಿಗೆ ಹೊರಟನು. ಎಲ್ಲರೊಡನೆ ರಾಮರಾಯನು ಸರಸಸಲ್ಲಾಪವಾಡಿ ಮೃದು ಸಂಭಾಷಣೆಯಿಂದ ಅವರನ್ನು ಸಂತೈಸಿ, ಅವರ ಮನದ ದುಗುಡವನ್ನು ಕಳೆದು ಧೈರ್ಯ ಹೇಳಿ, ಸಮಾಧಾನಪಡಿಸಿ, ಅವರೆಲ್ಲರಿಗೂ ಆಭರಣಗಳನ್ನೂ ಕಾಣಿಕೆ ಗಳನ್ನೂ ಇತ್ತು ಸಂತೋಷಪಡಿಸಿದನು. ಅವರನ್ನು ಬೀಳ್ಕೊಂಡಮೇಲೆ ಅವನು ತನ್ನ ತಾಯಿಯನ್ನು ಸಂದರ್ಶಿಸಲು ಆಕೆಯ ಚಂದ್ರಶಾಲೆಗೆ ಬಂದನು.

ರಾಮರಾಯನು ತಾಯಿಯ ಬಳಿಗೆ ಹೋಗಿ ಅವಳ ಪಾದಗಳಿಗೆ ನಮ ಸ್ಕರಿಸಿ ಅವಳ ಆಶೀರ್ವಾದವನ್ನು ಪಡೆದನು. ಅವರು ಮಗನನ್ನು ಹಿಡಿದೆತ್ತಿ ನೇವರಿಸಿ, ಅವನಿಗೆ ರತ್ನದಾರತಿಯನ್ನು ಬೆಳಗಿ ಹಣೆಗೆ ಕುಂಕುಮವಿಟ್ಟು ಅವನೊಡನೆ ಆಪ್ತವಾಗಿ ಮಾತನಾಡಲು ತಮ್ಮ ಅಂತರಂಗದ ಕೋಣೆಗೆ ಕರೆದು ಕೊಂಡುಹೋದರು. ಅಲ್ಲಿ ರಾಮರಾಯರನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ತಮ್ಮ ಹೃದ್ಗತವನ್ನು ಮಗನಲ್ಲಿ ತೋಡಿಕೊಂಡರು.

"ಮಗು ರಾಮರಾಯ, ನರಪತಿವಂಶದ ಏಳು ಮಂದಿ ಭಲಿಷ್ಠ ರಾಜರು ಯಾವ ಬಗೆಯ ಅಪಯಶಸ್ಸನ್ನೂ ತಮ್ಮ ಮೇಲೆ ತಂದುಕೊಳ್ಳದೆ ಇಲ್ಲಿಯವರೆಗೆ ರಾಜ್ಯವಾಳಿದ್ದಾರೆ. ಈಗ ಕಾಲಗತಿಯಿಂದ ನಾಲ್ಕು ಮಂದಿ ಬಾದಷಹರು ವಿಜಯನಗರದ ಮೇಲೆ ಸಂಘಟಿಸಿ ದಂಡೆತ್ತಿ ಬಂದಿದ್ದಾರೆ. ಅನುಕೂಲ ಪ್ರತಿ ಕೂಲಗಳು ಯಾರಿಗೆ ಹೇಗಿದೆಯೋ ಆ ಪಂಪಾಪತಿಗೆ ಗೊತ್ತು. ಆದರೆ ಯುದ್ಧ ವೆಂದರೆ ಯಾರಿಗೆ ಹಾನಿ ವೃದ್ಧಿಗಳು ನಿಶ್ಚಯ ? ನೀನು ಯುದ್ಧದಿಂದ ಅವರನ್ನು ಮುರಿಯುವ ಬದಲು, ಸಂಧಾನದಿಂದ ಅವರ ಸ್ನೇಹವನ್ನು ಸ್ಥಾಪಿಸು. ಇದರಿಂದ ಎಲ್ಲರ ಕಲ್ಯಾಣವಾಗುತ್ತದೆ" ಎಂದರು.

"ತಾಯಿ, ಈ ಮಾತು ಮಾತ್ರ ತೆಗೆಯಬೇಡಿ, ನಮ್ಮ ಸೈನ್ಯ ಸುಸಜ್ಜಿತ ವಾಗಿದೆ. ಅದರ ಮುಂದೆ ಅವರು ಕ್ಷಣಕಾಲ ನಿಲ್ಲುವರಲ್ಲವೆಂಬ ನಂಬಿಕೆ ನನಗೆ ಇದೆ. ಅವರೊಡನೆ ನಾನು ಸ್ನೇಹದಿಂದ ಇರಲು ಶಕ್ತಿ ಮೀರಿ ಪ್ರಯತ್ನಿಸಿದೆ. ಅವರು ಮೇಲಿಂದ ಮೇಲೆ ಒಪ್ಪಂದಗಳನ್ನು ಮುರಿದು ವಿಶ್ವಾಸದ್ರೋಹ ಬಗೆಯು ತ್ತಿದ್ದಾರೆ. ಆ ದ್ರೋಹಿಗಳಿಗೆ ತಕ್ಕ ಶಾಸ್ತಿಯನ್ನು ಮಾಡಿ, ಈ ಬಾರಿ ಬುದ್ಧಿ ಕಲಿಸಬೇಕೆಂದಿದ್ದೇನೆ. ನೀವು ನನಗೆ ಆಶೀರ್ವದಿಸಬೇಕು! ನಿಮ್ಮ ಆಶೀರ್ವಾ ದದ ಬಲವೊಂದಿದ್ದರೆ ಆ ಸುಲ್ತಾನರನ್ನು ನಿಮಿಷಮಾತ್ರದಲ್ಲಿ ಗೆದ್ದು ಬರು ತ್ತೇನೆ!" ಎಂದು ಹೇಳಿದನು.

ಆಗ ಅವನ ಮಾತೋಶ್ರೀಯವರು ರಾಮರಾಯನ ಶಿರವನ್ನು ನೇವರಿಸಿ,

"ಮಗನೇ ಹೋಗಿ ಬಾ! ಪಂಪಾಪತಿಯ ದಯೆ ನಿನ್ನ ಮೇಲಿರಲಿ! ಯುದ್ಧದಲ್ಲಿ ವಿಜಯಿಯಾಗಿ ಹಿಂದಿರುಗಿ ಬಾ!" ಎಂದು ಆಶೀರ್ವದಿಸಿ ಮಗನನ್ನು ರತ್ನಸಿಂಹಾಸನದಲ್ಲಿ ಕೂಡಿಸಿ, ಕನಕಾಭಿಷೇಕ ಮಾಡಿ, ಅದನ್ನು ಬ್ರಾಹ್ಮಣ ಸುವಾಸಿನಿಯರಿಗೆ ದಾನಮಾಡಿದರು.

ಆ ರಾತ್ರಿ ಮುಂದೆ ನಡೆಯಲಿದ್ದ ಸಮರದ ಬಗ್ಗೆ ಯೋಚಿಸುತ್ತಾ ರಾಮರಾಯನು ಮಲಗಿಕೊಂಡಾಗ ಬೆಳಗಿನ ಜಾವದ ವೇಳೆಗೆ ಅವನಿಗೆ ಒಂದು ವಿಚಿತ್ರ ಸ್ವಪ್ನಬಿತ್ತು. ಸ್ವಪ್ನದಲ್ಲಿ ಯಾರೋ ತನ್ನ ಕರ್ಣಕುಂಡಲಗಳನ್ನು ಕಳಚುತ್ತಿರುವಂತೆ ಭಾಸವಾಯಿತು. ಇದರಿಂದ ಅವನಿಗೆ ತಟಕ್ಕನೆ ಎಚ್ಚರವಾಯಿತು. ಬೆಳಿಗ್ಗೆ ಜ್ಯೋತಿಷಿಗಳಿಂದ ಸ್ವಪ್ನಫಲ ಕೇಳಿದಾಗ, ಜ್ಯೋತಿಷಿಗಳು ಇಂತೆಂದರು: "ಜೀಯಾ, ತಾವು ಮನಸ್ಸಿಗೆ ಚಿಂತೆ ಹಚ್ಚಿಕೊಳ್ಳುವ ಕಾರಣವಿಲ್ಲ. ದೈವ ಕೃಪೆಯಿಂದ ಎಲ್ಲವೂ ಒಳ್ಳೆಯದಾಗುವುದು." ಎಂದು ಸಮಾಧಾನ ಪಡಿಸಿದರು.

"ಜ್ಯೋತಿಷಿಗಳೇ, ನಾನು ಇದುವರೆಗೆ ಇಂತಹ ದುಃಸ್ವಪ್ನವನ್ನು ಕಂಡುದಿಲ್ಲ. ಸ್ವಪ್ನವೃತ್ತಾಂತವನ್ನು ನೆನೆದರೆ ಯಾಕೋ ಭಯವಾಗುತ್ತಿದೆ. ನನ್ನ ಐಶ್ವರ್ಯ ಹೋದರೆ ನಾನು ಹೆದರುವುದಿಲ್ಲ. ಆದರೆ ಲಕ್ಷ್ಮಿಯು ಸಾಮ್ರಾಜ್ಯದ ಮೇಲೆ ಮುನಿಸುಮಾಡಿಕೊಂಡರೆ ಏನು ಗತಿ ಎಂದು ಸಾಮ್ರಾಜ್ಯದ ಬಗ್ಗೆ ಆತಂಕಗೊಂಡಿದ್ದೇನೆ" ಎಂದನು.

"ನೀವು ಈ ಬಗ್ಗೆ ಚಿಂತಿಸಬಾರದು! ತಕ್ಕ ಶಾಂತಿಮಾಡಿದರೆ ಸ್ವಪ್ನದ ದುಷ್ಫಲಗಳು ನಿವಾರಣೆಯಾಗುವುದೆನ್ನಲು ಶಾಸ್ತ್ರಾಧಾರವಿದೆ. ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ—ಸಾಮ್ರಾಜ್ಯಕ್ಕೆ ಯಾವ ಭೀತಿಯೂ ಇಲ್ಲ."

"ಮಹಿಮರೇ, ನಿಮ್ಮ ಮಾತು ಸತ್ಯವಾಗಲಿ" ಎಂದು ಹೇಳಿ ವಯೋವೃದ್ಧರಾದ ಅವರಿಗೆ ಬಗ್ಗಿ ನಮಸ್ಕರಿಸಿದನು ಆಗ ಅವರು,

"ನಿಮಗೆ ಜಯವಾಗಲಿ' ನೀವು ಧ್ರುವ ಮಾರ್ಕಂಡೇಯರಂತೆ ಆಯುಶ್ಮಂತನಾಗಿ, ಕೀರ್ತಿವಂತನಾಗಿ ಬಾಳು!" ಎಂದು ಹರಸಿದರು.

ಅವನು ತನ್ನ ದುಃಸ್ವಪ್ನದ ಪರಿಹಾರಾರ್ಥವಾಗಿ ದೇವಾಲಯಗಳಲ್ಲಿ ವಿಶೇಷ ಪೂಜೆ ಏರ್ಪಡಿಸಿ, ರತ್ನಾಭರಣಗಳನ್ನೂ, ಬೆಲೆಬಾಳುವ ವಸ್ತ್ರಗಳನ್ನೂ, ಗೋದಾನ ಭೂದಾನಗಳನ್ನೂ ವಿಪ್ರೋತ್ತಮರಿಗೆ ಮಾಡಿ ತೃಪ್ತಿ ಪಡಿಸಿದನು. ಭೂತತೃಪ್ತಿಗಾಗಿ ಅನ್ನದಾನವೂ ಯಥೇಷ್ಟವಾಗಿ ನಡೆಯಿತು. ಇದೆಲ್ಲ ಆದ ಮೇಲೆ ನೂರೆಂಟು ಪುಣ್ಯಕ್ಷೇತ್ರಗಳ ತೀರ್ಥಪ್ರಸಾದಗಳನ್ನು ಸ್ವೀಕರಿಸಿ, ರಾಜಹಂಸವೆಂಬ ಕುದುರೆಯನ್ನೇರಿ, ಅಮೃತಸಿದ್ಧಿಯೋಗದಲ್ಲಿ ಅರಮನೆಯನ್ನು

ಬಿಟ್ಟು ಹೋದನು. ಅವನ ಹಿಂದೆ ನರಗಜ, ಜಯಭೇರಿ, ಮತ್ತಿತರ ಮಂಗಳ ವಸ್ತುಗಳೂ, ಅಷ್ಟಪ್ರಧಾನಿಗಳೂ, ಸೇನಾಧಿಪತಿಗಳೂ ಮೊದಲಾದ ಎಪ್ಪತ್ತೆರಡು ನಿಯೋಗದವರು ಹೊರಟರು. ರಾಮರಾಯನು ನಗರದ ಉತ್ತರಭಾಗದಲ್ಲಿದ್ದ ಠಾಣ್ಯಕ್ಕೆ ಹೊರಟನು.

ಅವನು ಸೈನಿಕ ಪಾಳೆಯದಲ್ಲಿ ತಿರುಮಲ, ವೆಂಕಟಾದ್ರಿ, ಸದಾಶಿವ ನಾಯಕ, ಮುಂತಾದ ದಂಡನಾಯಕರನ್ನು, ದಳವಾಯಿಗಳನ್ನು ಅಷ್ಟ ಪ್ರಧಾನ ರನ್ನು ಕರೆಸಿ, ಎಲ್ಲರಿಗೂ ಉಡುಗರೆ ವೀಳ್ಯಗಳನ್ನು ಇತ್ತನು. ಅನಂತರ ಪಂಚ ವಾದ್ಯಗಳು ಮೊಳಗಿದುವು. ರಣವಾದ್ಯಗಳು ಧ್ವನಿಗೈದುವು. ಶಿಬಿರವನ್ನು ಕಿತ್ತು ಮುಂದಡಿಯಿಡಲು ಸೈನ್ಯಕ್ಕೆ ಆಜ್ಞೆ ಮಾಡಲಾಯಿತು. ಸೈನ್ಯವು ಜಯಘೋಷ ಮಾಡುತ್ತ, ಮಹಾಪೂರದಂತೆ ಭೋರ್ಗರೆಯುತ್ತಾ ಹೆದ್ದೆರೆಗಳಂತೆ ಮುನ್ನುಗ್ಗಿತು.

ಹೀಗೆ ಕೆಲವು ದಿನಗಳು ಪ್ರಯಾಣಬೆಳೆಸಿ ರಾಮರಾಯನು ತನ್ನ ಸೈನ್ಯ ಸಮೇತ ತುಂಗಭದ್ರೆಯ ತೀರದಲ್ಲಿ ಠಾಣ್ಯಹಾಕಿ, ಕೃಷ್ಣೆಯ ಪರ್ಯಂತ ಪೇಷ ಖಾನೆ ಹಾಕಿದನು. ರಾಮರಾಯನು ತಾವರೆಕೆರೆ ಕೃಷ್ಣಗಿರಿಗಳ ನಡುವೆ ತನ್ನ ಆಪ್ತಮಿತ್ರರೊಡನೆ ವಾಸ್ತವ್ಯ ಮಾಡಿದನು.

ಇದೇ ಸಮಯದಲ್ಲಿ ಭೀಮೆ ನದಿಯ ಬಳಿ ಅಹಮದ್‌ನಗರದ ಸುಲ್ತಾನನ ದಂಡು ಬೀಡುಬಿಟ್ಟಿತ್ತು. ಗೋಲ್ಕಂಡದ ಕುತುಬ್‌ಷಹನ ಸೈನ್ಯ ಮುದ್ಗಲ್ಲು ರಾಯಚೂರುಗಳ ಮಧ್ಯೆ ಠಾಣ್ಯಹಾಕಿತ್ತು. ಬಿದರೆ ಹಾಗೂ ಅದಿಲ್‌ಷಹನ ಸೈನ್ಯಗಳು ಕೃಷ್ಣೆಯ ದಂಡೆಯಲ್ಲಿದ್ದ ಜಮಾಲಘಡದ ಬಳಿ ಇಳಿದುಕೊಂಡಿತ್ತು. ಅವರು ಅಲ್ಲಿ ಸುಮ್ಮನೆ ಕೂಡದೆ ತಮ್ಮ ಸೈನ್ಯದ ಕಾಲುಂಗಾರೆಯವರು, ಪಿಂಡಾರೆಯವರನ್ನು, ಬಾಣಗಾರರನ್ನು ಕಳುಹಿಸಿ ಕೃಷ್ಣಾ ನದಿಯ ಈಚೆಗೆ ಇರುವ ವಿಜಯನಗರದ ಸೀಮೆಯಲ್ಲಿ ಹಾವಳಿಮಾಡಿದರು.

ಇದನ್ನು ಕೇಳಿ ರಾಮರಾಯನಿಗೆ ಉಗ್ರಕೋಪ ಉಂಟಾಯಿತು. ಅವ ರನ್ನು ಶಿಕ್ಷಿಸಲು ಸೈನ್ಯ ಸಮೇತ ಹೊರಟು ರಕ್ಕಸತಂಗಡಿಯ ಬಳಿ ಬಂದು ಬೀಡುಬಿಟ್ಟನು. ಅವನ ಹಿಂದೆ ರಾಜ ಕಂಠೀರವರೂ, ಕ್ಷತ್ರಪತಿಗಳೂ, ರಾಜತೇಜೋನಿಧಿಗಳಾಗಿ ದಂಡನಾಯಕರೂ ತಮ್ಮ ಸೈನ್ಯಗಳೊಡನೆ ಬಂದರು. ಯುದ್ಧದ ಸಮಸ್ತ ಸ್ಥೂಲಯಂತ್ರಗಳೂ, ಮೂರು ಸಾವಿರ ಮಧ್ಯಸ್ಥಯಂತ್ರ ಗಳೂ, ನಾಲ್ಕು ಸಾವಿರ ಅಣು ಯಂತ್ರಗಳೂ ಶತ್ರುಗಳ ವಧೆಗೆ ಸಿದ್ಧವಾದುವು.

ರಾಮರಾಯನು ಅಲ್ಲಿ ತನ್ನ ಶಿಬಿರನ್ನು ಸ್ಥಾಪಿಸಿ, ತಿರುಮಲನ ಕೈಕೆಳಗೆ ಇಪ್ಪತ್ತು ಸಾವಿರ ರಾಹುತರನ್ನೂ, ನೂರು ಸಾವಿರ ಕಾಲುಬಲವನ್ನೂ, ಐನೂರು

ಆನೆಗಳನ್ನೂ ಕೊಟ್ಟು ಶತ್ರುಗಳನ್ನು ಮುನ್ನುಗ್ಗದಂತೆ ತಡೆಯಲು ಕಳುಹಿಸಿದನು. ವೆಂಕಟಾದ್ರಿಯೊಡನೆ ಇನ್ನಿಷ್ಟು ಸೈನ್ಯವನ್ನು ಕೊಟ್ಟು ಕೃಷ್ಣೆಯ ದಡೆಯ ರಕ್ಷಣೆಗೆ ನೇಮಿಸಿದನು. ಅನಂತರ ಅಷ್ಟು ಪ್ರಧಾನಿಗಳನ್ನೂ, ಒಸಲಪ್ಪನಾಯಕ, ತಿರುವೆಂಗಳನಾಯಕ, ದಳವಾಯಿ ಕಾರ್ತೀಕ ನಾಯಕ, ವೀರಪ್ಪನಾಯಕ ಮುಂತಾದ ಆಪ್ತ ದಳಪತಿಗಳನ್ನು ಸಮ್ಮುಖಕ್ಕೆ ಕರೆಸಿಕೊಂಡು "ಮುಸಲ್ಮಾನರು ಕೃಷ್ಣಾನದಿಯನ್ನು ಹಾದು ನಮ್ಮ ಮೇಲೆ ಬೀಳುವ ಮೊದಲು ಅವರನ್ನು ಸೋಲಿಸಿ ಸದೆಬಡಿಯುವುದು ಒಳ್ಳೆಯದು. ಅವರನ್ನು ನದಿಯನ್ನು ಹಾಯಲು ಬಿಟ್ಟರೆ ನಮಗೆ ಹೆಚ್ಚು ಅಪಾಯ! ನೀವು ಶತ್ರುಗಳನ್ನು ನದಿಯ ಅತ್ತಣದಲ್ಲಿ ಸೋಲಿಸಿ. ಸಾಧ್ಯವಾದರೆ ಆ ದ್ರೋಹಿ ಕುತುಬ್‌ಷಹನನ್ನೂ, ನಿಜಾಮುಷಹನನ್ನೂ ಬಂಧಿಸಿ ಸೆರೆಹಿಡಿದು ತನ್ನಿ!" ಎಂದು ಆಜ್ಞೆಮಾಡಿ ತನ್ನ ಸಹೋದರರ ಬೆಂಬಲಕ್ಕೆ ಕಳುಹಿಸಿಕೊಟ್ಟನು.

ಮುಸಲ್ಮಾನರ ದಂಡು ಕೃಷ್ಣೆಯನ್ನು ಹಾದು ಬರದಂತೆ ತಡೆಹಿಡಿಯಲು ತಿರುಮಲ ವೆಂಕಟಾದ್ರಿಯರು ಬಹಳ ಸಾಹಸಪಟ್ಟರು. ಆದರೆ ಅವರ ಸಾಹಸ ವ್ಯರ್ಥವಾಯಿತು. ಮೊದಲ ಕೆಲವು ದಿನ ಹುಸೇನ ನಿಜಾಮುಷಹನು ತನ್ನ ಸೈನ್ಯವನ್ನು ಬೇರೆ ಬೇರೆ ಕಡೆಯಲ್ಲಿ ನದಿಯನ್ನು ದಾಟಿಸುವಂತೆ ನಟಿಸಿ, ಕಡೆಗೆ ಹೆಚ್ಚು ರಕ್ಷಣೆ ಇಲ್ಲದ, ಹೆಚ್ಚು ಆಳವಿಲ್ಲದ ಕಡೆ ಕೃಷ್ಣೆಯನ್ನು ಹಾದು ಈಚಿನ ದಂಡೆಗೆ ಬಂದು ಸೇರಿದ. ಎರಡು ಕಡೆಯ ಸೈನ್ಯವು ರಕ್ಕಸತಂಗಡಿಯ ಬಳಿ ಬೀಡುಬಿಟ್ಟುವು.

ಈ ಸಮಯದಲ್ಲೂ ರಾಮರಾಯನಿಗೆ ಆಲಿ ಅದಿಲ್‌ಷಹನದೇ ಚಿಂತೆಯಾಗಿತ್ತು. ಶತ್ರುಗಳಿಗೆ ಚೇತರಿಸಿಕೊಳ್ಳಲು ಅವಕಾಶ ಕೊಡದೆ ಅವರ ಮೇಲೆ ಬಿದ್ದು ಯುದ್ಧ ಮಾಡಿದ್ದರೆ ಇತಿಹಾಸದ ಸ್ವರೂಪವೇ ಬೇರೆಯಾಗುತ್ತಿತ್ತು. ಆದರೆ ರಾಮರಾಯನು ಯುದ್ಧರಂಗದಲ್ಲಿ ಬಂದು ನಿಂತು, ಶತ್ರುಗಳೊಡನೆ ಹೋರಾಟಕ್ಕೆ ಪ್ರಾರಂಭಿಸಲು ಹಿಂದೆಗೆದನು. ಇದಕ್ಕೆ ಅವನ ಅಭಿಮಾನದ ಪುತ್ರನಾಗಿದ್ದ ಆಲಿ ಅದಿಲ್‌ಷಹನು ಶತ್ರುಗಳ ನಡುವೆ ಇದ್ದುದೇ ಕಾರಣವಾಗಿತ್ತು. ತಾನು ಶತ್ರುಗಳ ಮೇಲೆ ದಾಳಿ ಇಟ್ಟರೆ ಇದರಿಂದ ಆಲಿ ಅದಿಲ್‌ಷಹನಿಗೆ ತೊಂದರೆಯಾಗುವುದೆಂದೂ; ಈಗಲಾದರೂ ಅವನು ವಿವೇಕಶಾಲಿಯಾಗಿ ಶತ್ರುಗಳಿಂದ ದೂರ ಇರುವಂತೆ ಹೇಳಿ ಅನಂತರ ಶತ್ರುಗಳ ಮೇಲೆ ಬಿದ್ದು ಭಯಂಕರ ಯುದ್ಧ ಮಾಡಬೇಕೆಂದೂ ಆಲೋಚಿಸಿದನು. ಆಲಿ ಅದಿಲ್‌ಷಹನಿಗೆ ಅದರಂತೆ ಒಂದು ರಹಸ್ಯ ಪತ್ರವನ್ನು ಬರೆದು ಅವನಿಗೆ ಬುದ್ಧಿವಾದ ಹೇಳಿದನು. ಅವನಿಗೆ ಬರೆದಿದ್ದ ಪತ್ರದಲ್ಲಿ ಈ ಮಾತುಗಳು ಇದ್ದುವು.

"ನೀನು ಶತ್ರುಗಳೊಡನೆ ಬಂದಿದ್ದರೂ ಇನ್ನೂ ನನ್ನ ಮಿತ್ರನೇ ಇದ್ದಿ! ನನ್ನ ಅಭಿಮಾನದ ಪುತ್ರನೇ ಇದ್ದಿ! ನನಗೆ ನಿನ್ನದೇ ಚಿಂತೆಯಾಗಿದೆ. ನೀನು ನಮ್ಮ ತೊಡೆಯ ಮೇಲೆ ಬೆಳೆದಿದ್ದಿ! ನಮ್ಮ ಹಾಲು ಮೊಸರುಗಳನ್ನು ತಿಂದಿದ್ದಿ! ನಿನ್ನ ಹಾಲು ಬೆಣ್ಣೆಗಳ ವೆಚ್ಚಕ್ಕಾಗಿ ನಾವು ನಿನಗೆ ಕಲ್ಯಾಣಿಯನ್ನು ಸ್ನೇಹದ ಕಾಣಿಕೆಯಾಗಿ ಕೊಟ್ಟಿದ್ದೇವೆ. ಇದನ್ನೆಲ್ಲಾ ನೆನೆದು ನಿನ್ನ ಮೇಲೆ ಕೈಯೆತ್ತಲು ನಮಗೆ ಮನ ಬರುತ್ತಿಲ್ಲ. ನೀನು ಈಗಲಾದರೂ ವಿವೇಕಶಾಲಿಯಾಗಿ ಶತ್ರುಗಳನ್ನು ತೊರೆದು ಹಿಂದಿರುಗಿ ಹೋಗು. ಅಲ್ಲಾನು ಈಗಲಾದರೂ ನಿನಗೆ ಸದ್ಬುದ್ಧಿಯನ್ನು ದಯಪಾಲಿಸುವನೆಂದು ನಂಬಿರುತ್ತೇನೆ."

ಇದನ್ನು ಓದಿಕೊಂಡು ಆಲಿ ಆದಿಲ್‌ಷಹನು ಸುಮ್ಮನೆ ನಕ್ಕುಬಿಟ್ಟನು. ಎಲ್ಲಿಯ ತಂದೆ? ಎಲ್ಲಿಯ ಮಗ? ರಾಮರಾಯನಿಗೆ ಅರುಳು ಮರುಳು ಎಂದು ಅವನು ಭಾವಿಸಿರಬೇಕು! ಆದರೂ ಇದಕ್ಕೆ ನಿಶ್ಚಿತವಾಗಿ ಒಂದು ಉತ್ತರ ಕೊಡಲೇಬೇಕಾಗಿತ್ತು. ಆಲಿ ಆದಿಲ್‌ಷಹನು ಹೀಗೆ ಬರೆದುಕೊಟ್ಟನು.

"ಪ್ರೀತಿಯ ತಂದೆಯಂತೆ ಇರುವ ರಾಮರಾಯರಿಗೆ, ನಿಮ್ಮ ಪತ್ರ ಕೈ ಸೇರಿತು. ನಾನು ನಿಮ್ಮಲ್ಲಿ ಎಂದೂ ಸಂದೇಹ ತಾಳಿಲ್ಲ. ನಿಮ್ಮ ಬಗ್ಗೆ ನನಗೆ ಈಗಲೂ ಪ್ರೀತಿ ಗೌರವಗಳು ಇದೆ. ಆದರೆ ಇದನ್ನು ತೋರಿಸಲು ಸಾಧ್ಯವಾಗದ ಧರ್ಮಸಂಕಟದಲ್ಲಿ ನಾನು ಸಿಕ್ಕಿಬಿದ್ದಿದ್ದೇನೆ. ಅದು ಎಂತಹದೆಂದು ಬಹುಶಃ ನೀವು ಅರಿಯಲಾರಿರಿ! ಇದನ್ನು ವಿವರಿಸಿ ಹೇಳಿದರೂ ಪ್ರಯೋಜನವಿಲ್ಲ. ಈಗ ಇಷ್ಟು ಮಾತ್ರ ಹೇಳಬಲ್ಲೆ. ಪಿತೃಸಮಾನವಾಗಿರುವ ನಿಮಗೆ ನಾನು ದ್ರೋಹ ಬಗೆಯುವುದಿಲ್ಲ. ನಾನು ಶತ್ರುಗಳೊಡನೆ ಇದ್ದರೂ ಅಂತರಂಗದಲ್ಲಿ ನಿಮ್ಮವನೇ ಆಗಿರುತ್ತೇನೆ. ನೀವು ನನ್ನನ್ನು ಸಂದೇಹಿಸಬೇಡಿ! ನಾನು ಸೈನ್ಯದೊಂದಿಗೆ ಇಲ್ಲಿಗೆ ಬಂದಿದ್ದರೂ—ನಿಮ್ಮ ವಿಪತ್ತಿನಲ್ಲಿ ನಿಮಗೆ ನೆರವೀಯುವ ಸಲುವಾಗಿ ಎಂದು ತಿಳಿಯಿರಿ! ನಾನು ಎಲ್ಲೇ ಇರಲಿ, ಹೇಗೇ ಇರಲಿ ನಿಮ್ಮ ಅಭಿಮಾನದ ಪುತ್ರನಾಗಿಯೇ ಇರುತ್ತೇನೆ."

ಈ ಕಾಗದವನ್ನು ಓದಿಕೊಂಡು ರಾಮರಾಯನಿಗೆ ಸಂತೋಷವಾಗದಿದ್ದರೂ ಒಂದು ಬಗೆಯ ಸಮಾಧಾನ ಉಂಟಾಯಿತು. ತಾನು ತಿಳಿದಷ್ಟು ಆಲಿ ಆದಿಲ್‌ಷಹನು ನೀಚನಲ್ಲ, ಕೃತಘ್ನನಲ್ಲ, ಎಂದುಕೊಂಡು ಅವನ ಬಗ್ಗೆ ಅಭಿಮಾನ ತಾಳಿದನು.

ಈ ಸುದ್ದಿ—ರಾಮರಾಯನು ಒಳಗೊಳಗೇ ಆಲಿ ಆದಿಲ್‌ಷಹನನ್ನು ತನ್ನ ಕಡೆಗೆ ಒಲಿಸಿಕೊಳ್ಳಲೆತ್ನಿಸಿರುವನೆಂಬ ಸುದ್ದಿ ಹೇಗೋ ಅಹಮದ್‌ನಗರದ ಸುಲ್ತಾನ ಹುಸೇನ ನಿಜಾಮುಷಹನಿಗೆ ತಿಳಿಯಿತು. ಇದನ್ನು ಕೇಳಿ ಅವನು ಕಿಡಿ

ಕಿಡಿಯಾದನು. ಯುದ್ಧರಂಗದಲ್ಲಿ ಬಂದು ನಿಂತರೂ ಇನ್ನೂ ಅವನ ಚಪಲ ತನವೇ ಹುಡುಗುಬುದ್ಧಿಯೇ ಎಂದು ಅವನ ಮೇಲೆ ಸಿಟ್ಟು ಬಂದಿತು. ಅವ ನನ್ನು ಈ ಬಗ್ಗೆ ಎಚ್ಚರಿಸಿ, ಬುದ್ಧಿವಾದ ಹೇಳಲು ತಾನೇ ಹೊರಟು ಬಂದನು.

"ನಿಮ್ಮ ವಿಷಯದಲ್ಲಿ ಒಂದು ಒಡಕು ಸುದ್ದಿ ಬಂದಿದೆ. ನಾವು ಸಂಘಟಿತ ರಾಗಿ ಸೈನ್ಯಸಮೇತ ಧರ್ಮಯುದ್ಧದ ಧೀಕ್ಷಾಬದ್ಧರಾಗಿ ಇಲ್ಲಿಗೆ ಬಂದು ಯುದ್ಧ ಕ್ಕಾಗಿ ಎದುರು ನೋಡುತ್ತಿರುವಾಗ ನೀವು ಶತ್ರುಗಳೊಡನೆ ಸಂಧಾನ ನಡಸು ತ್ತಿರುವಿರೆಂದು ಸುದ್ದಿ ಬಂತು. ನೀವು ಶತ್ರುಗಳೊಂದಿಗೆ ಹೀಗೆ ನಮಗೆ ತಿಳಿಯ ದಂತೆ ಸಂಚುಮಾಡುವುದು ಸರಿಯಲ್ಲ. ಇದು ನಿಮಗೆ ತಕ್ಕ ವರ್ತನೆಯಲ್ಲ. ನಿಮಗೆ ನಾನು ಒಂದು ಎಚ್ಚರಿಕೆಯ ಮಾತನ್ನು-ಕಡೆಯ ಮಾತನ್ನು ಹೇಳಿ ಹೋಗಲು ಬಂದಿದ್ದೇನೆ. ನೀವು ನಮಗೆ ಸಹಾಯಮಾಡದಿದ್ದರೂ ಚಿಂತೆ ಇಲ್ಲ. ನಾವು ರಾಮರಾಯರೊಂದಿಗೆ ಯುದ್ಧ ಹೂಡಿದಾಗ ನೀವು ಅವರೊಂದಿಗೆ ಸೇರಿಕೊಂಡು ನಮ್ಮ ವಿರುದ್ಧ ಪಿತೂರಿ ಮಾಡಿ, ನಮ್ಮ ಬೆನ್ನಿನಲ್ಲಿ ಇರಿಯಬೇಡಿ! ನಿಮಗೆ ಇಲ್ಲಿರುವುದು ಬೇಡವಾದರೆ ನಿಮ್ಮ ಸೈನ್ಯದೊಂದಿಗೆ ಇಲ್ಲಿಂದ ಹಿಂದಿರುಗ ಬಹುದು. ಇದಕ್ಕೆ ನಮ್ಮ ಆಕ್ಷೇಪವಿಲ್ಲ! ಆದರೆ ಇತಿಹಾಸದಲ್ಲಿ ಧರ್ಮರಕ್ಷಣೆ ಗಾಗಿ ಹೋರಾಡಲು ಹಿಂದೆಗೆದ ಹೇಡಿ! ಕಾಫರರೊಡನೆ ಸಂಚುಮಾಡಿ ಸೋದ ರರ ಬೆನ್ನಿನಲ್ಲಿ ಇರಿದ ದ್ರೋಹಿ ಎಂಬ ಕೀರ್ತಿಗೆ ಪಾತ್ರರಾಗಿ ಅಜರಾಮರವಾಗಿರು ತ್ತಿರಿ!" ಎಂದು ಹೇಳಿದನು.

ಈ ವ್ಯಂಗ್ಯೋಕ್ತಿಯು ಆಲಿ ಆದಿಲ್‌ಷಹನ ಸೂಕ್ಷ್ಮ ಹೃದಯಕ್ಕೆ ಶಲ್ಯ ದಂತೆ ನಾಟಿ ಅವನನ್ನು ಗಾಸಿಪಡಿಸಿತು. ಅವನು ನೊಂದುಕೊಂಡು ಹೇಳಿದ.

"ನಾನು ನೀವು ಊಹಿಸುವಷ್ಟು ಹೇಡಿಯೂ ಅಲ್ಲ, ದ್ರೋಹಿಯೂ ಅಲ್ಲ. ನನ್ನನ್ನೇಕೆ ವೃಥಾ ನಿಂದಿಸುತ್ತೀರಿ. ನಾನು ಧರ್ಮಯುದ್ಧದಲ್ಲಿ ಬೆಂಬಲ ಕೊಡಲು ವಚನ ಕೊಟ್ಟಿದ್ದೇನೆ. ನಾನು ಸತ್ತರೂ ಸರಿ ಇದನ್ನು ಪಾಲಿಸುತ್ತೇನೆ. ಇದಕ್ಕಾಗಿ ನನ್ನ ಸರ್ವಸ್ವವನ್ನೂ ಬಲಿಕೊಡಬೇಕಾದರೂ ಸಿದ್ಧವಾಗಿದ್ದೇನೆ. ನಾನು ಶತ್ರುಗಳೊಡನೆ ಪಿತೂರಿ ಮಾಡುತ್ತಿರುವೆ, ಬೆನ್ನಿನಲ್ಲಿ ಇರಿಯುತ್ತಿರುವೆ ನೆಂಬ ಆರೋಪ ಮಾತ್ರ ನನಗೆ ಹೊರಿಸಬೇಡಿ! ನಾನು ರಾಮರಾಯರ ಋಣ ಹೊತ್ತಿದ್ದೇನೆ. ನಾನು ಅವರಿಗೆ ಸಲ್ಲಿಸಬೇಕಾಗಿರುವ ಕೆಲವೊಂದು ಕರ್ತವ್ಯ ವಿದೆ! ಅವರು ನನ್ನ ಸಲುವಾಗಿ ಚಿಂತಿಸಬಾರದೆಂದು, ಒಮ್ಮನಸ್ಸಿನಿಂದ ಯುದ್ಧ ಆರಂಭಿಸಲೆಂದು ನಾನು ಅವರ ಕಡೆ ಇರುವಂತೆ ಅವರಿಗೆ ಪತ್ರ ಬರೆದಿದ್ದೇನೆ. ದಿಟ. ಆದರೆ ನಾನು ಅವರ ಪಕ್ಷಪಾತಿಯಾದರೂ ಈ ಯುದ್ಧದಲ್ಲಿ ನಿಮಗೆ ನೆರವಾಗಲೆಂದು ಬಂದಿದ್ದೇನೆ. ನಾನು ನಿಮಗೆ ದ್ರೋಹ ಬಗೆಯಲಾರೆ! ಇತಿ ಹಾಸದಲ್ಲಿ ಧರ್ಮದ್ರೋಹಿ ಎಂಬ ಹೆಸರಿಗೆ ಪಾತ್ರನಾಗಲಾರೆ. ನನ್ನ ಮಾತನ್ನು

ನಂಬಿ. ಅಲ್ಲಾನ ಆಣೆಗೂ ನಾನು ನಿಮಗೆ ನೆರವಾಗುತ್ತೇನೆ. ಆದರೆ ರಾಮುರಾಯರನ್ನು ಮಾತ್ರ ನಾನು ಕೊಲ್ಲಲಾರೆ! ನೀವೂ ಕೊಲ್ಲಬಾರದು-ನನಗಾಗಿ ನೀವು ಕೊಲ್ಲಬಾರದು. ಅಂತಲೇ ವಿಜಯನಗರವನ್ನು ನೀವು ಹಾಳುಮಾಡಬಾರದು! ಈ ಬಗ್ಗೆ ವಚನ ಕೊಟ್ಟರೆ ನಾನು ತ್ರಿಕರಣಪೂರ್ವಕವಾಗಿ ನಿಮ್ಮೊಡನೆ ನಿಂತು, ನನ್ನ ಸರ್ವಸ್ವವನ್ನು ಬಲಿಗೊಟ್ಟು ಹೋರಾಡುತ್ತೇನೆ" ಎಂದನು.

ಈ ಮಾತು ಕೇಳಿ ಅಹಮದ್ ನಗರದ ಸುಲ್ತಾನನಿಗೆ ಸಂತೋಷ ಉಂಟಾದರೂ ಅದನ್ನು ಮುಖದಲ್ಲಿ ವ್ಯಕ್ತಪಡಿಸದೆ, ಹಾಗೇ ಆಗಲೆಂದು ಆಲಿ ಆದಿಲ್‌ಷಹನಿಗೆ ವಾಗ್ದಾನವಿತ್ತು, ತನ್ನ ಶಿಬಿರಕ್ಕೆ ಹಿಂದಿರುಗಿದನು. ಆದರೆ ತನ್ನ ಈ ವಾಗ್ದಾನ ಅರ್ಥವಿಲ್ಲದ ಮಾತೆಂಬುದನ್ನು ನೆನೆದು ಅವನು ಒಣನಗೆ ನಕ್ಕನು. ರಾಮರಾಯನ ಮೇಲೆ ಸೇಡು ಬಗೆಯುವ ಪಿಶಾಚಿಯಂತೆ ಹಾತೊರೆಯುತ್ತಿದ್ದ ಅವನು ಈ ವಾಗ್ದಾನ ಈಡೇರಿಸಲು ಸಾಧ್ಯವೇ ಇರಲಿಲ್ಲ. ಕೇವಲ ತೋರಿಕೆಗಾಗಿ ಆಲಿ ಆದಿಲ್‌ಷಹನನ್ನು ಸಮಾಧಾನ ಪಡಿಸುವ ಸಲುವಾಗಿ ಈ ವಾಗ್ದಾನ ಕೊಟ್ಟಿದ್ದನು, ಅಷ್ಟೇ.

ಆಲಿ ಆದಿಲ್‌ಷಹನ ಬಗ್ಗೆ ರಾಮರಾಯ ಹಾಗೂ ಅಹಮದ್‌ನಗರದ ಸುಲ್ತಾನನಿಗೆ ಇದ್ದ ಚಿಂತೆ ಬಗೆಹರಿದ ಮೇಲೆ ಇಬ್ಬರೂ ಯುದ್ಧಸನ್ನದ್ಧರಾಗಿ, ಒಬ್ಬರಮೇಲೊಬ್ಬರು ಬೀಳಲು ಸೂಕ್ತ ಸಮಯಕ್ಕಾಗಿ ಕಾಯುತ್ತಾ ಕುಳಿತರು.

ರಾಮರಾಯನು ರಕ್ಕಸತಂಗಡಿಯ ಬಳಿ ಯುದ್ಧ ಸನ್ನಿಹಿತವಾಗಬಹುದೆಂದು ತನ್ನ ಸೈನ್ಯವನ್ನು ಮೂರು ಭಾಗವಾಗಿ ಮಾಡಿ ಅವುಗಳಲ್ಲಿ ಒಂದು ಭಾಗವನ್ನು ತಾನು ಇಟ್ಟುಕೊಂಡು ಉಳಿದೆರಡು ಭಾಗಗಳನ್ನು ತಮ್ಮಂದಿರ ಕೈಕೆಳಗೆ ಕೊಟ್ಟನು. ರಾಮರಾಯನು ರಣರಂಗಕ್ಕೆ ಬರಲು ಸಿದ್ಧನಾಗುತ್ತಿರುವುದನ್ನು ಕಂಡು ವೆಂಕಟಾದ್ರಿ ತಿರುಮಲರು ರಾಮರಾಯನ ಬಳಿಗೆ ಬಂದು,

"ಪ್ರಭುಗಳು ಅನ್ಯಥಾ ಭಾವಿಸಬಾರದು! ನಾವೆಲ್ಲ ಇರುವಾಗ ತಾವು ರಣರಂಗಕ್ಕೆ ಇಳಿಯುವ ಕಾರಣವಿಲ್ಲ. ಯುದ್ಧವು ಇರುವುದು ತಮ್ಮಂಥವರಿಗಲ್ಲ— ತಾವು ಹಿಂದೆ ನಿಂತು ನಮಗೆ ದಿಗ್ದರ್ಶನ ನೀಡಬೇಕು. ಸೈನಿಕರನ್ನು ಹುರುದುಂಬಿಸಬೇಕು! ನೀವು ನಿಶ್ಚಿಂತೆಯಾಗಿ ಶಿಬಿರದಲ್ಲಿದ್ದರೆ ವಿಜಯವಧುವನ್ನು ತಂದು ನಾವು ನಿಮಗೆ ಒಪ್ಪಿಸುತ್ತೇವೆ. ಈ ಬಗ್ಗೆ ನೀವು ಅಧೈರ್ಯ ಪಡಬಾರದು. ನಮಗೆ ವೀಳ್ಯವನ್ನು ಕೊಟ್ಟು ಈ ಕಾರ್ಯವನ್ನು ನಮಗೆ ವಹಿಸಿ ತಾವು ನೆಮ್ಮದಿಯಿಂದ ಇರಬೇಕೆಂಬುದೇ ನಮ್ಮೆಲ್ಲರ ಇಷ್ಟ. ಇಡೀ ಸೈನಿಕರ ಇಷ್ಟ. ಇದನ್ನು ತಾವು ಈಡೇರಿಸಿಕೊಡಬೇಕು" ಎಂದು ಪ್ರಾರ್ಥಿಸಿದರು.

"ನೀವು ನನ್ನಲ್ಲಿ ಇಟ್ಟಿರುವ ಆದರಕ್ಕೆ ನಾನು ಚಿರಋಣಿಯಾಗಿದ್ದೇನೆ.

ಆದರೆ ಇದೊಂದು ಮಾತನ್ನು ನಡಸಿಕೊಡಲು ಸಾಧ್ಯವಿಲ್ಲ. ನಾನು ರಣರಂಗಕ್ಕೆ ಬಂದೂ ಹೇಡಿಯಂತೆ ಶಿಬಿರದಲ್ಲಿ ಕುಳಿತಿರಲೆ? ಸಾಧ್ಯವಿಲ್ಲ. ನನ್ನಿಂದ ಖಂಡಿತ ಸಾಧ್ಯವಿಲ್ಲ! ನೀವು ನನ್ನನ್ನು ಈ ಬಗ್ಗೆ ತಡೆಯಬಾರದು! ನೀವು ನನಗೆ ವಯಸ್ಸಾಗಿದೆ, ದೇಹದಲ್ಲಿ ಶಕ್ತಿಗುಂದಿದೆ ಎಂದು ಭಾವಿಸಿ ನನ್ನನ್ನು ರಣರಂಗಕ್ಕೆ ಬರಬೇಡವೆಂದು ಹೇಳುತ್ತಿದ್ದೀರಿ, ನಾ ಬಲ್ಲೆ. ಆದರೆ ನೀವು ತಪ್ಪಿರುವುದು ಇಲ್ಲೇ! ನಾನು ವೃದ್ಧನಾದರೇನಂತೆ ದೇಹದಲ್ಲಿ ಕಸುವಿದೆ! ಶಸ್ತ್ರಾಸ್ತ್ರಗಳನ್ನು ಲೀಲಾಜಾಲವಾಗಿ ಉಪಯೋಗಿಸಬಲ್ಲೆ — ನನ್ನ ಮುಂದೆ ಆ ಬಹಮನಿಸುಲ್ತಾನರು ಮಕ್ಕಳು! ಅವರೊಂದಿಗೆ ಯುದ್ಧ ಮಾಡಲು ನಾನು ಹೆದರಬೇಕೆ? ನೀವು ನನ್ನ ಬಗ್ಗೆ ಸಂಶಯಪಡಬಾರದು. ನಾನು ಕೈಲಿ ಕತ್ತಿ ಹಿಡಿದು ನಿಂತೆನೆಂದರೆ ನನ್ನೆದುರಿಗೆ ನಿಲ್ಲುವ ಗುಂಡಿಗೆ ಯಾರಿಗೆ ಇದೆ ನೋಡುತ್ತೇನೆ! ಹೇಡಿಗಳು ಯಾರಾದರೂ ನಮ್ಮಲ್ಲಿ ಇದ್ದರೆ ಈಗಲೂ ಅವರು ಸೈನ್ಯದಿಂದ ಹಿಮ್ಮೆಟ್ಟಬಹುದು. ಈ ರಣಕೇಳಿ ಇರುವುದು ಪುರುಷಸಿಂಹಗಳಿಗೇ ಹೊರತು ಸೃಗಾಲಗಳಿಗಲ್ಲ! ಪುರುಷವೇಷದ ಸ್ತ್ರೀಯರು ಇಲ್ಲಿ ಯಾರಾದರೂ ಇದ್ದರೆ ಅವರು ಇಲ್ಲಿಂದ ಕಾಲ್ತೆಗೆಯಬಹುದು. ನನ್ನ ಅಭ್ಯಂತರವಿಲ್ಲ. ಆದರೆ ರಣರಂಗದಲ್ಲಿ ಹಿಮ್ಮೆಟ್ಟಿದರೆ ಮಾತ್ರ ಶತ್ರುಗಳ ಕೂರ್ಗತ್ತಿಗೆ ಇಲ್ಲವೇ ನನ್ನ ಕೂರ್ಗತ್ತಿಗೆ ಬಲಿಯಾಗುತ್ತಾರೆ. ಈ ಮಾತು ಖಂಡಿತ!" ಎಂದು ವೀರಾವೇಶದಲ್ಲಿ ಭಾಷಣಮಾಡಿ, ಅಲ್ಲಿದ್ದ ದಂಡನಾಯಕರಿಗೆ ಎಚ್ಚರಿಕೆ ಕೊಟ್ಟ.

ಈ ವೀರೋದ್ಗಾರವನ್ನೇ ಕೇಳಿ ಆ ಸಹೋದರರು ಮಾತಿಲ್ಲದೆ ಅಲ್ಲಿಂದ ಕಾಲ್ತೆಗೆಯಬೇಕಾಯಿತು.

ಮಾರನೆಯ ದಿನ ಎರಡು ಕಡೆಯ ದಳಗಳಿಗೂ ರಕ್ಕಸತಂಗಡಿ ಗ್ರಾಮಗಳ ಮಧ್ಯೆ ಯುದ್ಧ ಸನ್ನಿಹಿತವಾಯಿತು. ರಾಮರಾಯನು ಅಮೃತವೆಂಬ ಪಟ್ಟದಾನೆಯ ಮೇಲೆ ಅಂಬಾರಿ ಹಾಕಿಸಿ ಅದರಲ್ಲಿ ಕುಳಿತು ತನ್ನ ಕಡೆಯ ಸೈನಿಕರಿಗೆ ಹುರಿದುಂಬಿಸುತ್ತಾ ಮಿಂಚಿನಂತೆ ಸೈನ್ಯದಲ್ಲೆಲ್ಲಾ ಸಂಚರಿಸಿದನು, ಇದನ್ನು ನೋಡಿ ತಿರುಮಲನು,

"ತಾವು ಆನೆಯ ಮೇಲೆ ಹತ್ತಿಕೊಂಡು ರಣರಂಗಕ್ಕೆ ಇಳಿಯಬಾರದು. ತಾವು ಎತ್ತರದಲ್ಲಿ ಇರುವುದರಿಂದ ಎಲ್ಲರ ಕಣ್ಣಿಗೂ ಬೀಳುತ್ತೀರಿ. ಅಲ್ಲದೆ ಅಪಾಯದ ಸಮಯದಲ್ಲಿ ಆನೆಯಿಂದ ಧುಮುಕಿ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ತಾವು ನಮ್ಮ ಮಾತು ಕೇಳಿ ಉತ್ತಮಾಶ್ವವನ್ನು ಏರಿ ಯುದ್ಧಕ್ಕೆ ಬನ್ನಿ. ನಿಮ್ಮ ಪ್ರೈಗಾವಲಿಗೆ ನಾವು ಇರುತ್ತೇವೆ. ಆಗ ನಿಮಗೆ ಯಾವ ಅಪಾಯವೂ ಇಲ್ಲ" ಎಂದು ಹೇಳಿದರೂ ರಾಮರಾಯನು ತಿರುಮಲನ

ಮಾತಿಗೆ ಕಿವಿಗೊಡಲಿಲ್ಲ. ತನ್ನ ಮೊಂಡು ಹಠವನ್ನು ಬಿಡಲಿಲ್ಲ. ರಾಮರಾಯನ ಮೊಂಡುಹಠವೇ ಅವನಿಗೆ ಮೃತ್ಯುವಾಯಿತು.

ಬಹಮನಿ ಸುಲ್ತಾನರು ತಮ್ಮ ಸೈನ್ಯವನ್ನು ದುರ್ಭೇಧ್ಯವಾಗಿ ನಿಲ್ಲಿಸಿದ್ದರು. ಬಲಪಕ್ಷದಲ್ಲಿ ಬಿಜಾಪುರದ ಸುಲ್ತಾನ ಆಲಿ ಆದಿಲ್‌ಷಹನೂ ಎಡಪಕ್ಷದಲ್ಲಿ ಬಿದರೆಯ ಬರೀದ್‌ಷಹನೂ ಮಧ್ಯಭಾಗದಲ್ಲಿ ಅಹಮದ್‌ನಗರದ ಸುಲ್ತಾನನೂ ತಮ್ಮ ಸೈನ್ಯಗಳೊಂದಿಗೆ ನಿಂತಿದ್ದರು. ಈ ಸೈನ್ಯಕ್ಕೆ ಅಭಿಮುಖವಾಗಿದ್ದ ವಿಜಯನಗರದ ಸೈನ್ಯದಲ್ಲಿ ಬಲಭಾಗದಲ್ಲಿ ವೆಂಕಟಾದ್ರಿಯೂ ಎಡಭಾಗದಲ್ಲಿ ತಿರುಮಲನೂ ನಡುವೆ ರಾಮರಾಯನೂ ಉಪಸ್ಥಿತರಾಗಿದ್ದರು. ಮುಸಲ್ಮಾನರು ತಮ್ಮ ಸೈನ್ಯದ ಮುಖಭಾಗವನ್ನು ತೋಪುಗಳಿಂದ ರಕ್ಷಿಸಿದ್ದರು. ಈ ತೋಪಿನ ಗಾಡಿಗಳು ಅತ್ತಿತ್ತ ಚದರದಿರಲೆಂದು ಅವುಗಳನ್ನು ದಾವಣಿಯಂತೆ ಹಗ್ಗದಲ್ಲಿ ಕಟ್ಟಿದ್ದರು. ಈ ತೋಪಿನ ಗಾಡಿಗಳನ್ನು ಸಾಲಿಗೆ ಇನ್ನೂರರಂತೆ ಒಂದರ ಹಿಂದೊಂದರಂತೆ ನಿಲ್ಲಿಸಲಾಗಿತ್ತು. ಈ ಫಿರಂಗಿ ದಳಕ್ಕೆ ಯೂರೋಪಿನಲ್ಲಿ ಫಿರಂಗಿ ಯುದ್ಧದಲ್ಲಿ ಪಳಗಿದ್ದ ಏಶಿಯ ಮೈನರದ ಜಾಲಬಿ ರೂಮಿಖಾನನೆಂಬುವನು ದಳಪತಿಯಾಗಿದ್ದನು. ಈ ಫಿರಂಗಿಗಳ ನಡುವೆ ಮದ್ದಾನೆಗಳನ್ನು ನಿಲ್ಲಿಸಲಾಗಿತ್ತು. ಇವುಗಳ ಕೋರೆದಾಡೆಗೆ ಕೂರ್ಗತ್ತಿಗಳನ್ನು ಬಿಗಿಸಲಾಗಿತ್ತು. ಅವುಗಳ ತೊಟ್ಟಿಗಳಲ್ಲಿ ಸೈನಿಕರು ತುಂಬಿದ್ದರು. ಇದರಂತೆ ರಾಮರಾಯನ ಸೈನ್ಯವೂ ತೋಪುಗಳಿಂದ ಸುಸಜ್ಜಿತವಾಗಿತ್ತು. ವೆಂಕಟಾದ್ರಿಯೇ ಇದಕ್ಕೆ ಮಹಾದಂಡನಾಯಕನಾಗಿದ್ದನು. ಅವನ ಕೈಕೆಳಗೆ ಇನ್ನೂರು ಸಾವಿರ ಕಾಲಾಳುಗಳೂ, ಇಪ್ಪತ್ತೈದು ಸಾವಿರ ಕುದುರೆಗಳೂ ಐನೂರು ಆನೆಗಳೂ ಇದ್ದುವು. ಮಟಮಟ ಮಧ್ಯಾಹ್ನದ ವೇಳೆಗೆ ಹೋರಾಟಕ್ಕೆ ಆರಂಭವಾಯಿತು.

ಮೊದಲು ರಾಮರಾಯನ ಸೈನ್ಯದ ಹೊಡೆತ ಬಿರುಸಿನಿಂದ ನಡೆಯಲು ಆದರ ಪೆಟ್ಟನ್ನು ಎದುರಿಸಲಾರದೆ ಆಲಿ ಆದಿಲ್‌ಷಹನು ತನ್ನ ಸೈನ್ಯದೊಂದಿಗೆ ಹಿಮ್ಮೆಟ್ಟಬೇಕಾಯಿತು. ಅವನು ನಿರ್ವಾಹವಿಲ್ಲದೆ ರಣರಂಗದಿಂದ ಓಡಿಹೋದನು. ಆಗ ಹಿಂದೂ ಸೈನಿಕರು ಹಿಮ್ಮೆಟ್ಟುತ್ತಿರುವ ಆದಿಲ್‌ಷಹನ ಸೈನ್ಯವನ್ನು ಹಿಂಬಾಲಿಸಿ ಕೈಗೆ ಸಿಕ್ಕಿದವರನ್ನು ಕತ್ತಿಗೆ ಬಲಿಕೊಟ್ಟರು. ಸಹಸ್ರಾರು ಸೈನಿಕರು ಮಡಿದರು, ಇದಕ್ಕೂ ಹೆಚ್ಚಿಗೆ ಗಾಯಗೊಂಡರು. ತನಗೆ ದೊರೆತ ಪ್ರಥಮ ಹಂತದ ಜಯದಿಂದ ಹಿಗ್ಗಿದ ತಿರುಮಲನು ತನ್ನ ಸೈನ್ಯವನ್ನು ಗೋಲ್ಕಂಡ ಬಿದರೆ ಸುಲ್ತಾನರ ಮೇಲೆ ತಿರುಗಿಸಿದನು. ಎರಡು ಪಕ್ಷಗಳಿಗೂ ಭಯಂಕರ ಯುದ್ಧವೇ ನಡೆಯಿತು. ಎರಡು ಕಡೆಯಲ್ಲೂ ಅಧಿಕ ಸಂಖ್ಯೆಯಲ್ಲಿ

ಸೈನಿಕರು ಮಡಿದರು. ಆದರೆ ಈ ಹೋರಾಟದಲ್ಲಿ ಮಹಮದೀಯರಿಗೆ ಹೆಚ್ಚು ನಷ್ಟ ಉಂಟಾಯಿತು. ಪ್ರಥಮಹಂತದ ಯುದ್ಧದಲ್ಲಿ ತನಗೆ ಜಯಸಿಕ್ಕಿತೆಂದು ಹಿಗ್ಗಿ ಈ ವಾರ್ತೆಯನ್ನು ರಾಮರಾಯನಿಗೆ ಹೇಳಬೇಕೆಂದು ಅವನ ಬಳಿಗೆ ಹೋಗಬೇಕೆಂದಿದ್ದಾಗ ಶತ್ರುಪಕ್ಷದ ಯಾರೋ ಬಿಟ್ಟ ಬಾಣದ ಕೂರಲುಗು ಬಂದು ತಿರುಮಲರಾಯನ ಎಡಗಣ್ಣಿಗೆ ಬಡಿಯಿತು. ಅವನು ಹಾಗೇ ನೆಲಕ್ಕೆ ಉರುಳಿದನು. ಅವನ ಮೇಲೆ ಶತ್ರು ಸೈನಿಕರು ಹುಲಿಯಂತೆ ಬಿದ್ದರು. ಆ ಸ್ಥಿತಿಯಲ್ಲಿ ಅವನನ್ನು ಬಿಟ್ಟರೆ ಅವನಿಗೆ ಅಪಾಯ ಖಂಡಿತವೆಂದು ಬಗೆದ ಅವನ ವೈಗಾವಲಿಗಿದ್ದ ರಘುನಾಥನೆಂಬ ವೀರನು ಒಂಟಿಯಾಗಿ ನಿಂತು ಶತ್ರುಗಳ ಮೇಲೆ ಕಾಲಯಮನಂತೆ ಬಿದ್ದು ಅವರನ್ನು ತಡೆದನು. ಇದರಿಂದ ತಿರುಮಲನು ಚೇತರಿಸಿಕೊಂಡು ಅಪಾಯದಿಂದ ಪಾರಾದರೂ, ರಘುನಾಥನು ಮಾತ್ರ ತಿರುಮಲನ ರಕ್ಷಣೆಯಲ್ಲಿ ತನ್ನ ಪ್ರಾಣವನ್ನು ಬಲಿಗೊಡಬೇಕಾಯಿತು. ಅವನು ಮಹಾಭಾರತದ ಅಭಿಮನ್ಯುವಿನಂತೆ ಏಕಾಂಗಿಯಾಗಿ ಹೋರಾಡಿ ಕಡೆಗೆ ಶತ್ರುಗಳ ಆಯುಧಕ್ಕೆ ಸಿಕ್ಕಿ ರಣರಂಗದಲ್ಲಿ ಮಡಿದು, ವೀರಸ್ವರ್ಗಸೇರಿದನು.

ಈ ಸುದ್ದಿ ಮಿಂಚಿನ ವೇಗದಲ್ಲಿ ರಾಮರಾಯನಿಗೆ ಮುಟ್ಟಿತು. ರಾಮರಾಯನಿಗೆ ತನ್ನ ಅಭಿಮಾನದ ಪುತ್ರನಾಗಿದ್ದ ರಘುನಾಥನ ಮರಣ ಭರಸಿಡಿಲಿನಂತೆ ಬಂದು ಬಡಿಯಿತು. ತಿರುಮಲನು ಕಣ್ಣು ಕಳೆದುಕೊಂಡುದನ್ನು ಕೇಳಿ ಶತ್ರುಗಳ ಮೇಲೆ ಭಯಂಕರ ಸಿಟ್ಟುಬಂತು. ಯುದ್ಧದ ಘೋಷಣೆಯಾದ "ಗರುಡಾ! ಗರುಡಾ!" ಎಂದು ಕೂಗಿಕೊಳ್ಳುತ್ತಾ, "ಜಯ ಭುವನೇಶ್ವರಿ! ಜಯವೆಂಕಟನಾಥ! ಹರಹರಮಹಾದೇವ!" ಎಂದು ರಣೋದ್ಗಾರ ಮಾಡಿಕೊಂಡು ಅವನು ಬಿರುಗಾಳಿಯಂತೆ, ಹುಚ್ಚು ಆವೇಶದಲ್ಲಿ ಶತ್ರುಗಳ ಮೇಲೆ ಬಿದ್ದನು.

ರಾಮರಾಯನ ಆವೇಶದ ಎದುರು ಶತ್ರು ಸೈನ್ಯ ನಿಲ್ಲದಾಯಿತು. ಬಹಮನಿ ಸುಲ್ತಾನರು ತತ್ತರಿಸಿದರು. ಎದುರಾದ ಅಹಮದ್‌ನಗರದ ಸೈನ್ಯದಲ್ಲಿದ್ದ ಹತ್ತುಸಾವಿರ ಅಶ್ವಾರೋಹಿಗಳಲ್ಲಿ ಎರಡು ಸಾವಿರ ರಾವುತರು ಮಡಿದರು. ರಾಮರಾಯನ ಸೈನ್ಯ ವಿಜಯೋನ್ಮತ್ತವಾಗಿ ಶತ್ರುಗಳನ್ನು ತುಂಡರಿಸುತ್ತಾ, ರಣಚಂಡಿಗೆ ಬಲಿಗೊಡುತ್ತಾ ಮಾರಣಹೋಮವನ್ನು ಸಾಂಗವಾಗಿ ನೆರವೇರಿಸಿತು. ರಾಮರಾಯನ ವೈಗಾವಲಿಗಿದ್ದ ರಾಜಿಬೇಡರ ಪಡೆ ದೈತ್ಯಾವೇಶದಲ್ಲಿ ಕಾದಿ ಬಹು ಸಂಖ್ಯೆಯಲ್ಲಿ ಮಹಮದೀಯ ಸೈನಿಕರನ್ನು ಕೊಂದಿತು. ಎಲ್ಲರೂ ರಾಮರಾಯನ ಕೊರಳಿಗೆ ಜಯಮಾಲೆ ಬೀಳುವುದೆಂದು ಭಾವಿಸಿದರು.

ಅಷ್ಟರಲ್ಲಿ ಯುದ್ಧದ ಸ್ವರೂಪವನ್ನೇ ಬದಲಿಸುವ ಸಂಗತಿ ನಡೆಯಿತು.

ವೆಂಕಟಾದ್ರಿಯು ಕೈಲಿ ಹಿಮ್ಮೆಟ್ಟಿದ್ದ ಆಲಿ ಆದಿಲ್‌ಷಹನು ಚೇತರಿಸಿಕೊಂಡು ನಿಜಾಂಷಹನನ್ನು ಕೂಡಿಕೊಂಡನು. ಅವರಿಬ್ಬರು ಹತಾಶರಾಗಿ ಕಟ್ಟಕಡೆಯ ಪ್ರಯತ್ನವೆಂದು ತೋಫಿನ ಕಾರ್ಯಾಚರಣೆಗೆ ತೊಡಗಲು ರೂಮಿಖಾನನಿಗೆ ಆಜ್ಞೆಮಾಡಿದರು. ಇವು ಕಾರ್ಯಾಚರಣೆಗೆ ಆರಂಭಿಸಿದೊಡನೆಯೇ ಯುದ್ಧದ ಸ್ವರೂಪವೇ ಬದಲಾಯಿತು. ಅವುಗಳು ಮರೆಯಲ್ಲಿ ಇದ್ದುದರಿಂದ ಅಪಾಯವನ್ನು ಅರಿಯದೆ ಅತ್ತಕಡೆಯೇ ರಾಮರಾಯನ ಸೈನ್ಯ ಕೇಂದ್ರೀಕರಿಸಿತ್ತು, ತೋಪುಗಳು ಹಾರಿದಕೂಡಲೇ ಸೈನ್ಯಕ್ಕೆ ತಾವು ಮೃತ್ಯುವಿನ ಬಾಯನ್ನು ಹೊಕ್ಕಂತಾಯಿತೆಂದು ಅನುಭವವಾಯಿತು. ಆದರೆ ಅವರು ಇದರಿಂದ ಹೆದರಿ ಹಿಮ್ಮೆಟ್ಟುವಂತಿರಲಿಲ್ಲ. ಸೈನಿಕರು ಹಿಂದಿನಿಂದ ಹೆದ್ದೆರೆಯಂತೆ ಮುಂದೊತ್ತಿ ಬರುತ್ತಿದ್ದರು. ಮುಂದಿನಿಂದ ಶತ್ರು ಸೈನ್ಯವು ಮದ್ದುಗುಂಡುಗಳ ಮಳೆಯನ್ನೇ ಕರೆಯುತ್ತಿತ್ತು. ಇದರಿಂದಾಗಿ ರಾಮರಾಯನ ಸೈನ್ಯದಲ್ಲಿ ಹಾಹಾಕಾರ ಉಂಟಾಯಿತು. ಅವರಲ್ಲಿ ಕೆಲವರು ಶಿಸ್ತುತಪ್ಪಿ ದಿಕ್ಕಾಪಾಲಾಗಿ ಚದರಿದರು! ಇದರಿಂದ ರಾಮರಾಯನು ನಿರಾಶನಾಗಲಿಲ್ಲ. ಅವನು ತನ್ನ ಸೈನಿಕರನ್ನು ಹುರಿದುಂಬಿಸಲು ತನ್ನೊಡನೆ ಇದ್ದ ಚಿನ್ನಬೆಳ್ಳಿ ಮುತ್ತು ರತ್ನಗಳ ರಾಶಿಯನ್ನು ಸೈನಿಕರಿಗೆ ಹಂಚುತ್ತಾ ಅವರನ್ನು ವೀರೋದ್ಗಾರಗಳಿಂದ ಹುರಿದುಂಬಿಸುತ್ತಾ ಮುನ್ನಡೆದನು. ಇದರಿಂದ ಗೊಂದಲಮಾತ್ರ ಕಡಿಮೆಯಾಗಲಿಲ್ಲ.

ಇದೇ ಸಮಯದಲ್ಲಿ ಅಹಮದ್‌ನಗರದ ಹುಸೇನ ನಿಜಾಂಷಹನು ತನಗೆ ಜಯ ದೊರೆಯದೆ ರಣರಂಗದಿಂದ ಹಿಮ್ಮೆಟ್ಟುವುದಿಲ್ಲವೆಂದು ವೀರ ಪ್ರತಿಜ್ಞೆ ಮಾಡಿ, ರೂಮಿಖಾನನ ತೋಫಿನದಾಳಿಯನ್ನು ನಿರ್ದೇಶಿಸುತ್ತಾ ರಣರಂಗದಲ್ಲೇ ಶಿಬಿರ ಹೂಡಿನಿಂತನು. ರೂಮಿಖಾನನು ಏಶಿಯಾ ಮೈನರಿನಲ್ಲಿ ಮದ್ದುಗುಂಡುಗಳ ಕಲೆಯಲ್ಲಿ ನಿಷ್ಣಾತನಾಗಿದ್ದುದರಿಂದ, ಅವನು ಗುಂಡುಗಳನ್ನು ವ್ಯರ್ಥಗೊಳಿಸದೆ, ಅದಕ್ಕೆ ಹೆಚ್ಚು ಸಂಖ್ಯೆಯಲ್ಲಿ ಹಿಂದೂ ಸೈನಿಕರನ್ನು ಬಲಿಗೊಡುತ್ತಾ ಮುಂದುವರೆಯುತ್ತಿದ್ದನು. ಇದರಿಂದಾಗಿ ಮಾರಕವಾದ ಈ ಅಗ್ನಿವರ್ಷದಲ್ಲಿ ಹೋರಾಡಿ ಪ್ರಯೋಜನವಿಲ್ಲವೆಂದು ರಾಮರಾಯನು ತನ್ನ ಸೈನ್ಯಕ್ಕೆ ಹಿಮ್ಮೆಟ್ಟಲು ಆಜ್ಞೆಮಾಡಬೇಕಾಯಿತು. ರೂಮಿಖಾನನ ಧೈರ್ಯ ಜಾಣ್ಮೆಗಳಿಂದ ಸೋಲು ಮುಸಲ್ಮಾನರನ್ನು ಇದಿರುಗೊಳ್ಳುವುದು ಸ್ವಲ್ಪದರಲ್ಲೇ ತಪ್ಪಿಹೋಗಿತ್ತು. ಅಂದಿನ ಕದನ ಯಾವುದೇ ಜಯಾಪಜಯಗಳಲ್ಲಿ ನಿರ್ಧಾರವಾಗದೆ ಪರ್ಯವಸಾನವಾಯಿತು. ಸಂಜೆಯ ವೇಳೆಗೆ ಎರಡು ಕಡೆಯ ಸೈನಿಕರು ತಮ್ಮ ತಮ್ಮ ಶಿಬಿರಗಳಿಗೆ ಹಿಂದಿರುಗಿದರು.

ಮೂರನೆಯ ದಿನ ರಾಮರಾಯನು ಹಿಂದಣ ದಿನ ತನಗಾದ ಸೋಲಿಗೆ

ನೂರ್ಮಡಿ ಸೇಡನ್ನು ಶತ್ರು ಸೈನ್ಯದ ಮೇಲೆ ತೀರಿಸಿಕೊಳ್ಳಲು ನಿಶ್ಚಯಿಸಿದನು. ಆ ದಿನ ತಾನೇ ಸಕಲ ಸೈನ್ಯಗಳಿಗೆ ದಂಡನಾಯಕನಾಗಿ ಹೊರಟನು. ಅವನು ಹಿಂದೆ ಇದ್ದರೆ ತಾನು ವಿಜಯವಧುವನ್ನು ದೊರಕಿಸಿಕೊಡುವುದಾಗಿ ವೆಂಕಟಾದ್ರಿ ಹೇಳಿದ ಮಾತನ್ನು ರಾಮರಾಯನು ನಿರ್ಲಕ್ಷಿಸಿ, ವಿಜಯವನಿತೆಯನ್ನು ತಾನೇ ವರಿಸಲು ಮುಂದಾದನು. ಇಂದಿನ ರಾಮರಾಯನ ದೈತ್ಯಾವೇಶದ ಮುಂದೆ ಬಹಮನಿ ಸುಲ್ತಾನರ ಸೈನ್ಯ ನಿಲ್ಲದೆ ಹೋಯಿತು. ಶತ್ರು ಸೈನ್ಯ ಮೇಲಿಂದ ಮೇಲೆ ಬೀಳುತ್ತಿರುವ ಪೆಟ್ಟನ್ನು ತಡೆಯಲಾರದೆ ತತ್ತರಿಸಿತು. ಅದರಲ್ಲಿ ಹಾಹಾಕಾರ ಉಂಟಾಯಿತು. ಈ ಸಮಯದಲ್ಲಿ ವಿಜಯನಗರದ ಸೈನ್ಯದಲ್ಲಿ ಪ್ರಮುಖ ದಳಪತಿಯಾಗಿದ್ದ ಉನಿಲ್‌ಮುಲ್ಕನು ತಾನು ಈಗ ದ್ರೋಹ ಬಗೆಯದಿದ್ದರೆ ಶತ್ರುಗಳಿಗೆ ಸೋಲಾಗುವುದು ಖಂಡಿತವೆಂದು ಬಗೆದು, ಅವನು ತನ್ನ ಸೈನ್ಯದೊಡನೆ ಶತ್ರುಸೈನ್ಯದ ಮೇಲೆ ಏರಿಹೋಗುವಂತೆ ನಟಿಸಿ, ಶತ್ರು ಸೈನ್ಯ ದಲ್ಲಿ ಸೇರಿಕೊಂಡನು. ವಿಜಯನಗರದವೇಲೆ ತಿರುಗಿಬಿದ್ದನು. ಉನಿಲ್‌ಮುಲ್ಕನ ಪ್ರಚೋದನೆಯಂತೆ ಮುಕುಂದನಾಯಕನೂ ಶತ್ರುಪಕ್ಷಕ್ಕೆ ಸೇರಿಕೊಂಡನು. ಇದರಿಂದ ವಿಜಯನಗರದ ಸೈನ್ಯದಲ್ಲಿ ಹಾಹಾಕಾರ ಉಂಟಾಯಿತು. ಅವರಿಗೆ ಶತ್ರುಗಳಾರು ಮಿತ್ರರಾರು ಎಂಬುದು ತಿಳಿಯದಾಯಿತು! ಸೈನ್ಯದಲ್ಲಿ ಗೊಂದಲ ವೆದ್ದಿತು! ಅಶಿಸ್ತು ತಲೆದೋರಿತು. ಇದಕ್ಕೇನು ಕಾರಣವೆಂದು ತಿಳಿಯಲು ರಾಮರಾಯನು ಬಂದಾಗ, ಉನಿಲ್‌ಮುಲ್ಕ್ ಹಾಗೂ ಮುಕುಂದನಾಯಕರ ದ್ರೋಹ ತಿಳಿಯಿತು. ತಾನು ಯಾರನ್ನು ತನ್ನ ಪ್ರಾಣಕ್ಕಿಂತ ಅತಿಶಯವಾಗಿ ಪ್ರೀತಿಸುತ್ತಿದ್ದನೋ, ಯಾರನ್ನು ತನ್ನ ಆತ್ಮೀಯ ಮಿತ್ರನಂತೆ ನಡಸಿಕೊಂಡಿದ್ದನೋ ಆ ಮುಕುಂದನಾಯಕನು ತನಗೆ ದ್ರೋಹ ಬಗೆದುದನ್ನು ಕೇಳಿ ಅವನಿಗೆ ವಿಸ್ಮಯವಾಯಿತು. ಈ ಸುದ್ದಿ ಭರಸಿಡಿಲಿನಂತೆ ಎರಗಿತ್ತು. ಅವನಿಗೆ ಈಗ ಏನು ಮಾಡಬೇಕೆಂದು ತಿಳಿಯಲಿಲ್ಲ. ಆದರೆ ರಣರಂಗದಲ್ಲಿ ಯೋಚಿಸುತ್ತಾ ಕುಳಿತಿರಲು ಸಮಯವಿರಲಿಲ್ಲ. ದ್ರೋಹಿಗಳು ಯಾರೇ ಇರಲಿ, ಅವರನ್ನು ಶಿಕ್ಷಿಸಬೇಕೆಂದು ಆಜ್ಞೆ ಮಾಡಿ ತಾನೇ ಆ ದ್ರೋಹಿಗಳನ್ನು ವಿಚಾರಿಸಿಕೊಳ್ಳಲು ಆನೆಯ ಮೇಲೇರಿ ಹೊರಟನು.

ಅಷ್ಟರಲ್ಲಿ ಮುಕುಂದನಾಯಕನೇ ರಾಮರಾಯನಿಗೆ ಎದುರಾಗಿದ್ದನು. ಅವನನ್ನು ನೋಡುತ್ತಲೇ ರಾಮರಾಯನಿಗೆ ಅವನು ತನ್ನ ಮಗನೆಂಬ ಸಂಗತಿ ಮರೆತುಹೋಗಿ ಭಯಂಕರ ಸಿಟ್ಟು ಬಂತು! ಅವನು ಉಂಡ ಮನೆಗೆ ದ್ರೋಹ ಬಗೆದ ನೀಚನೆಂದು ಅವನಿಗೆ ಬುದ್ಧಿ ಕಲಿಸಲು ಶಸ್ತ್ರ ಕೈಗೆ ತೆಗೆದುಕೊಂಡನು. ಅಷ್ಟರಲ್ಲಿ ಒಂದು ಅಚಾತುರ್ಯ ನಡೆಯಿತು.

ಶತ್ರುಸೈನಿಕರಲ್ಲಿ ಯಾರೋ ಬೀಸಿದ ಭಲ್ಲೆಯೊಂದು ರಾಮರಾಯನ ಹಣೆಗೆ ಬಡಿದು ಅವನನ್ನು ಗಾಯಗೊಳಿಸಿತು. ಅವನು ಆನೆಯಿಂದ ಕೆಳಗೆ ಧುಮುಕಿ ಬಳಿಯಲ್ಲಿದ್ದ ಕುದುರೆಯನ್ನೇರಲು ಪ್ರಯತ್ನಿಸಿದನು. ಅವನು ನೆಲಕ್ಕೆ ಇಳಿಯುವುದಕ್ಕೂ ಹುಸೇನ ನೈಜಾಂಷಹನ ಸೈನ್ಯದಲ್ಲಿದ್ದ ಒಂದು ಆನೆಗೆ ಹುಚ್ಚು ಹಿಡಿದು ಅದು ಕೈಗೆ ಸಿಕ್ಕಿದ ಸೈನಿಕರನ್ನು ತುಳಿದು ಹಾವಳಿ ಮಾಡುತ್ತಾ ರಾಮರಾಯನು ಇದ್ದ ಸ್ಥಳಕ್ಕೆ ಬರುವುದಕ್ಕೂ ಸರಿಹೋಯಿತು. ರಾಮರಾಯನು ಅದರ ಕೈಯಿಂದ ತಪ್ಪಿಸಿಕೊಂಡು ಹೋಗಲು ಓಡಿದನು. ಆದರೆ ತಲೆಗೆ ಗಾಯವಾಗಿದ್ದುದರಿಂದ ಅವನಿಗೆ ತಾನು ಯಾವ ದಿಕ್ಕಿಗೆ ಓಡುತ್ತಿರುವೆನೆಂಬುದು ತಿಳಿಯದಾಯಿತು. ಕಣ್ಣಿಗೆ ಮಂಕು ಕವಿದು ಬಂದಿತ್ತು. ಅವನು ಒಬ್ಬ ಸೈನಿಕನ ಹೆಣವನ್ನು ಎಡವಿಬಿದ್ದನು, ಮತ್ತೆ ಮೇಲೆದ್ದು ಓಡುವ ವೊತ್ತಲೇ ದುರ್ದೈವದಿಂದ ಹುಚ್ಚು ಹಿಡಿದ ಆನೆಯ ಸೊಂಡಿಲಿಗೆ ಸಿಕ್ಕಿ ಬಿದ್ದನು. ಆನೆಯು ರಾಮರಾಯನನ್ನು ಎತ್ತಿ ನೆಲಕ್ಕಪ್ಪಳಿಸಿ ಒಗೆದಿದ್ದರೆ ಅದರ ಕಥೆ ಬೇರೆಯಾಗುತ್ತಿತ್ತು. ಆದರೆ ಅದು ರಾಮರಾಯನನ್ನು ಕೊಲ್ಲದೆ ಜೀವ ದೂರಸೆ ಉಳಿಸಿದುದೇ ಸಾಮ್ರಾಜ್ಯದುರಂತಕ್ಕೆ ಕಾರಣವಾಯಿತು.

ರಾಮರಾಯನನ್ನು ಅರಸಿಕೊಂಡು ಅಲ್ಲಿಗೆ ಬಂದಿದ್ದ ಮುಕುಂದ ನಾಯಕನಿಗೆ ಆನೆಯ ಸೊಂಡಿಲಿಗೆ ಸಿಕ್ಕಿ ಅದರಿಂದ ಬಿಡಿಸಿಕೊಳ್ಳಲು ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದ ರಾಮರಾಯನ ರುದ್ರಭಯಂಕರ ಸಾಹಸ ಕಾಣಿಸಿತು. ಅವನು ರಾಮರಾಯನ ಮೇಲೆ ಸೇಡು ಬಗೆಯಲು ಇದೀಗ ತಕ್ಕ ಸಮಯವೆಂದರಿತು ಅವನನ್ನು ತುಂಡರಿಸಲು ತನ್ನ ಕತ್ತಿ ಎತ್ತಿದನು. ಇದನ್ನು ನೋಡುತ್ತಿರುವ ರಾಮರಾಯ ನೋವಿನ ಧ್ವನಿಯಲ್ಲಿ ಚೀರಿದನು : " ಮುಕುಂದನಾಯಕ! ಮುಕುಂದ ನಾಯಕ! ನೀನು ನನ್ನ ಮಗ! ನನಗೆ ದ್ರೋಹ ಬಗೆಯಬೇಡ!" ಸಮರದ ಗದ್ದಲದಲ್ಲಿ ಮುಕುಂದನಾಯಕನಿಗೆ ಅದು ಕೇಳಿಸಲಿಲ್ಲ. ಅವನು ರಾಮರಾಯನನ್ನು ಕೊಲ್ಲಲು ಕತ್ತಿಯನ್ನು ಬೀಸಬೇಕೆಂದು ಇರುವುದರಲ್ಲಿ ಆ ಹುಚ್ಚು ಹಿಡಿದ ಆನೆಯು ರಾಮರಾಯನನ್ನು ಸಡಿಲಗೊಳಿಸಿತು. ಅದರ ಹಿಡಿತದಿಂದ ತಪ್ಪಿಸಿಕೊಂಡ ರಾಮರಾಯನು ನೆಲಕ್ಕುರುಳಿದನು. ಮುಕುಂದನಾಯಕನು ಬೀಸಿದ ಕತ್ತಿಯ ಪೆಟ್ಟು ಆನೆಯ ಸೊಂಡಿಲಿಗೆ ಬಿತ್ತು. ಇದರಿಂದ ಅದಕ್ಕೆ ಭಯಂಕರ ಗಾಯವಾಗಿ ಅದು ನೋವಿನಿಂದ ಚೀರಿತು. ಅದಕ್ಕೆ ಮುಕುಂದನಾಯಕನ ಮೇಲೆ ಭಯಂಕರ ಸಿಟ್ಟು ಬಂತು. ಅದು ದೈತ್ಯಾವೇಶದಲ್ಲಿ ಮುಕುಂದ ನಾಯಕನ ಮೇಲೆ ಬಿದ್ದು, ಅವನನ್ನು ಸೊಂಡಿಲಿಂದ ಹಿಡಿದು ಮೇಲೆತ್ತಿ ನೆಲಕ್ಕೆ ಅಪ್ಪಳಿಸಿತು. ದ್ರೋಹ ಬಗೆಯಲು ಹೊರಟ ದ್ರೋಹಿ ಮುಕುಂದನಾಯಕನ

ಕತೆ ಅಲ್ಲಿಗೆ ಮುಗಿಯಿತು. ಅನ್ನವಿಟ್ಟ ದಣಿಗೆ ದ್ರೋಹ ಬಗೆದ ಅವನ ಜೀವನ ಹೀಗೆ ಘೋರ ರೀತಿಯಲ್ಲಿ ಮುಗಿಯಿತು!

ಬಂದಿದ್ದ ಅಪಾಯದಿಂದ ರಾಮರಾಯನು ಹೇಗೋ ಪಾರಾಗಿದ್ದನು. ಅವನು ಜೀವವನ್ನು ಉಳಿಸಿಕೊಳ್ಳಲು ಕುದುರೆಯನ್ನೇರಲು ಪ್ರಯತ್ನಿಸುತ್ತಿರುವಾಗ ಅವನ ದುರ್ದೈವದಿಂದ ಅಹಮದ್ ನಗರದ ಹುಸೇನ್ ನಿಜಾಂಷಹನ ಸೈನಿಕರಿಗೆ ಸೆರೆಸಿಕ್ಕಿದನು. ಅವನನ್ನು ಯಾರೋ ಸಾಮಾನ್ಯ ಸರದಾರನೆಂದು ಅಲ್ಲೇ ತೀರಿಸಿಬಿಡಲು ಒಬ್ಬ ಸೈನಿಕನು ಕತ್ತಿ ಎತ್ತಿದನು. ಅಷ್ಟರಲ್ಲಿ ಒಬ್ಬ ಹಿಂದೂ ಸೈನಿಕನು 'ಅವರನ್ನು ಕೊಲ್ಲಬೇಡಿ! ಅವರು ರಾಮರಾಯರು! ವಿಜಯನಗರದ ಸಾಮ್ರಾಟರು!' ಎಂದು ಕೂಗಿಕೊಂಡ. ಇದನ್ನು ಕೇಳಿ ಆ ಸೈನಿಕನು ತಮಗೆ ಸೆರೆಸಿಕ್ಕಿದ ವ್ಯಕ್ತಿ ಎಂತಹ ಅಪೂರ್ವ ವ್ಯಕ್ತಿ ಎಂದು ತಿಳಿದು ರಾಮರಾಯನನ್ನು ಕೊಲ್ಲದೆ ಅವನನ್ನು ಸೆರೆಹಿಡಿದುಕೊಂಡು ತಮ್ಮ ಸುಲ್ತಾನನ ಶಿಬಿರಕ್ಕೆ ತಂದರು.

ರಾಮರಾಯನು ಅಹಮದ್‌ನಗರದ ಸುಲ್ತಾನನ ಕಡೆಯವರಿಗೆ ಸೆರೆಸಿಕ್ಕಿದನೆಂಬ ವಾರ್ತೆ ಕರ್ಣಾಕರ್ಣಿತವಾಗಿ ಹರಡಿತು. ಈ ಸುದ್ದಿ ಮಿಂಚಿನ ವೇಗದಲ್ಲಿ ಆಲಿ ಆದಿಲ್‌ಷಹನಿಗೆ ಮುಟ್ಟಿತು. ಇದನ್ನು ಕೇಳಿ ಅವನಿಗೆ ಗಾಬರಿಯಾಯಿತು. ರಾಮರಾಯನ ಮೇಲೆ ಸೇಡುತೀರಿಸಿಕೊಳ್ಳಲು ಹಾತೊರೆಯುತ್ತಿದ್ದ ಹುಸೇನ ನಿಜಾಮುಷಹನು ತಮಗೆ ಕೊಟ್ಟಿದ್ದ ವಚನವನ್ನು ಮರೆತು ರಾಮರಾಯನನ್ನು ಕೊಲ್ಲಬಹುದೆಂದು ಹೆದರಿ ಅವನು ಹುಸೇನ ನಿಜಾಮುಷಹನ ಶಿಬಿರಕ್ಕೆ ಓಡಿಬಂದನು.

ಅಷ್ಟರಲ್ಲಿ ರಾಮರಾಯನನ್ನು ಅವನ ಶಿಬಿರದ ಒಂದು ಭಾಗದಲ್ಲಿ ಹಗ್ಗಗಳಿಂದ ಬಂಧಿಸಿ ಕೆಡಹಲಾಗಿತ್ತು. ಹುಸೇನ್ ನಿಜಾಂಷಹನು ಸೆರೆಸಿಕ್ಕಿದ ರಾಮರಾಯನನ್ನು ಕೂಡಲೇ ಕೊಲ್ಲಲಿಚ್ಛಿಸದೆ ಅವನಿಗೆ ಅಪಮಾನ ಮಾಡಿ, ಚಿತ್ರಹಿಂಸೆಕೊಟ್ಟು ಕೊಲ್ಲಲೆಂದು ಅವನನ್ನು ಇದುವರೆಗೆ ಜೀವಂತ ಇಟ್ಟಿದ್ದನು. ಇದು ರಾಮರಾಯನ ಅದೃಷ್ಟವೆಂದೇ ಹೇಳಬೇಕು!

ಆಲಿ ಆದಿಲ್‌ಷಹನಿಗೆ ವಿಜಯೋನ್ಮತ್ತನಾಗಿ ಕಾಲಭೈರವನಂತೆ ಇದ್ದ ಅವನೊಂದಿಗೆ ರಾಮರಾಯನ ಪ್ರಾಣಭಿಕ್ಷೆ ಬೇಡುವುದು ಅಪಾಯಕರವೆನಿಸಿತು. ಸೇಡಿನಿಂದ ಹುಚ್ಚನಂತಿದ್ದ ಅವನು ತನಗಿತ್ತಿದ್ದ ವಾಗ್ದಾನವನ್ನು ಉಳಿಸಿಕೊಳ್ಳುವುದಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದರೂ ತನ್ನ ಪ್ರಯತ್ನ – ರಾಮರಾಯನ ಪ್ರಾಣವನ್ನು ಉಳಿಸಲು ಕಡೆಯ ಪ್ರಯತ್ನವೆಂದು ಅವನು ನಿಜಾಂಷಹನಲ್ಲಿ ರಾಮರಾಯನ ಪ್ರಾಣಭಿಕ್ಷೆ ಬೇಡಿದನು. ಇದಕ್ಕೆ ಅವನು ಸಮ್ಮತಿ

ಸದಿರಲು ಕಡೆಗೆ ಸೆರೆಸಿಕ್ಕಿರುವ ರಾಮರಾಯನನ್ನು ನೋಡಲು ಅವಕಾಶ ಕೊಡಬೇಕೆಂದು ಬೇಡಿದ. ಇದಕ್ಕೆ ಸಮ್ಮತಿ ಕೊಟ್ಟುದೇ ದೊಡ್ಡ ಉಪಕಾರವಾಯಿತು.

ಆಲಿ ಆದಿಲ್‌ಷಹನಿಗೆ ಸೆರೆಯಲ್ಲಿದ್ದ ರಾಮರಾಯನ ಸ್ಥಿತಿಯನ್ನು ಕಂಡು ಏಕೋ ಕಣ್ಣೀರು ಬಂತು ! ಎಂತಹ ಸಾಮ್ರಾಟನಿಗೆ ಎಂತಹ ದುರವಸ್ಥೆ ಬಂದಿತೆಂದು ಅವನು ಶೋಕಿಸಿದ! ರಾಮರಾಯನನ್ನು ಈ ಸ್ಥಿತಿಗೆ ತರಲು ತಾನು ಕಾರಣನಾದುದಕ್ಕೆ ಅವನಿಗೆ ಬಹಳ ವ್ಯಥೆಯಾಯಿತು. ಅವನಿಗೆ ತನ್ನ ಕೃತ್ಯಕ್ಕಾಗಿ ತುಂಬಾ ಪಶ್ಚಾತ್ತಾಪವಾಗಿತ್ತು. ಅವನು ಪಶ್ಚಾತ್ತಾಪದಿಂದಲೆಂಬಂತೆ, ಮೂಕನಾಗಿ ರಾಮರಾಯನನ್ನು ನೋಡುತ್ತಾ ನಿಂತ! ಅವನ ಕಣ್ಣುಗಳು, ಅವನ ದೈನ್ಯಮುಖ, ನಿಂತ ನಿಲುವು ಎಲ್ಲವೂ ಆಗಿದ್ದ ಅಚಾತುರ್ಯಕ್ಕೆ ರಾಮರಾಯನ ಕ್ಷಮೆ ಬೇಡುವಂತೆ ಇದ್ದುವು.

ರಾಮರಾಯನು ತನ್ನ ಗಾಯದಿಂದ ಉಂಟಾದ ರಕ್ತಸ್ರಾವದಿಂದ ತುಂಬಾ ಬಳಲಿದ್ದನು. ಅವನು ಒಂದು ಬಗೆಯ ಮೂರ್ಛೆಯ ಸ್ಥಿತಿಯಲ್ಲಿದ್ದನು. ತನ್ನ ಮಂಪರದ ಸ್ಥಿತಿಯಿಂದ ಎಚ್ಚೆತ್ತು ಕಣ್ಣುಬಿಟ್ಟು ನೋಡಿದಾಗ ಎದುರಿಗೆ ಆಲಿ ಆದಿಲ್‌ಷಹನು ನಿಂತಿದ್ದನು ! ಅವನನ್ನು ನೋಡಿ ರಾಮರಾಯನಿಗೆ ಆಶ್ಚರ್ಯವಾಯಿತು. ಹುಸೇನ್ ನಿಜಾಮುಷಹನ ಶಿಬಿರದಲ್ಲಿ ತನ್ನ ಅಭಿಮಾನದ ಪುತ್ರ ಆಲಿ ಆದಿಲ್‌ಷಹನನ್ನು ನೋಡುವೆನೆಂದು ಅವನಿಗೆ ಅನಿಸಿರಲಿಲ್ಲ. ಅವನನ್ನು ಕಾಣುತ್ತಲೇ ತನ್ನ ಮಗ ಕೃಷ್ಣನನ್ನು ನೋಡಿದಂತೆ ನೆನಪಾಯಿತು. ಅವನು ಭಾವೋನ್ಮಾದದಲ್ಲಿ " ಕೃಷ್ಣಾ ! ಬಂದೆಯಾ ನನ್ನ ಕಂದಾ !" ಎಂದು ಚೀರಿದನು.

ಇದನ್ನು ಕೇಳಿ ಆಲಿ ಆದಿಲ್‌ಷಹನಿಗೆ ಕಣ್ಣೀರು ಪುಟಿಸಿತು.

" ಪಿತಾಜಿ, ನಾನು ದ್ರೋಹಿ ! ನಿಮ್ಮ ಕೃಷ್ಣನಲ್ಲ. ನಿಮಗೆ ದ್ರೋಹಬಗೆದ ಪಾಪಿ ನಾನು ! ನಿರ್ಭಾಗ್ಯ ಆಲಿ ಆದಿಲ್‌ಷಹ ! ಕೃಷ್ಣನೆಂದು ಸಂಭೋಧಿಸಿ ನನ್ನನ್ನು ಕೊಲ್ಲಬೇಡಿ! ಆ ಪವಿತ್ರ ಹೆಸರಿಗೆ ಅಪಮಾನ ಮಾಡಬೇಡಿ. ನಾನು ನಿಮ್ಮ ಪ್ರೀತಿ ವಿಶ್ವಾಸಗಳಿಗೆ ಅರ್ಹನಲ್ಲ! ನಾನು ಪಾಪಿ ! ಕಡುಪಾಪಿ ! ಹಾಲೆರದ ದಣಿಯನ್ನು ಶತ್ರುಗಳ ಪಾಲುಮಾಡಿದ ನೀಚ ! ಉಂಡಮನೆಗೆ ದ್ರೋಹಬಗೆದ ಕೃತಘ್ನ !" ಎಂದು ದುಃಖದ ಭರದಲ್ಲಿ ಬಡಬಡಿಸಿದ.

ಇದನ್ನು ಕೇಳಿ ರಾಮರಾಯನಿಗೆ ಸಖೇದಾಶ್ಚರ್ಯಗಳು ಏಕಕಾಲದಲ್ಲಿ ಉಂಟಾದುವು. ಅವನಿಗೆ ಆಲಿ ಆದಿಲ್‌ಷಹನು ಇಷ್ಟೆಲ್ಲ ನಡೆದಮೇಲೂ ತನ್ನ ಬಗ್ಗೆ ಗೌರವ ವಿಶ್ವಾಸ ತಳೆದಿರುವನೆಂಬ ನಂಬಿಕೆ ಇರಲಿಲ್ಲ. ಅವನು ತಾನು ಅನ್ಯಾಯವಾಗಿ ಅಹಮದ್‌ನಗರದ ಹುಸೇನ್ ನಿಜಾಂಷಹನ ಕೈಗೆ ಸೆರೆಸಿಕ್ಕಿ,

ಅವನ ನೀಚಕೈಯಿಂದ ಅಪಮಾನಿತನಾಗಿ, ಚಿತ್ರಹಿಂಸೆಗೆ ಒಳಗಾಗಿ ಸಾಯ ಬೇಕಾಯಿತಲ್ಲ ಎಂದು ಪರಿತಪಿಸುತ್ತಿದ್ದನು. ಇಂತಹ ಸಮಯದಲ್ಲಿ ಆಲಿ ಅದಿಲ್‌ಷಹನು ಎದುರಿಗೆ ಬಂದು ನಿಂತಿದ್ದನು. ಅವನಿಗೆ ತನ್ನ ಆ ಸ್ಥಿತಿಯಲ್ಲೂ ಒಂದು ಸಂತೋಷವಾಯಿತು.

"ಮಗು ಆಲಿ ಅದಿಲ್‌ಷಹ! ನೀನು ಆಗಿ ಹೋದ ಸಂಗತಿಯನ್ನು ನೆನೆದು ಪ್ರಯೋಜನವಿಲ್ಲ. ಈಗ ನಿನಗೆ ನನ್ನ ಮೇಲೆ ಗೌರವವಿದ್ದರೆ, ನಿಜವಾದ ಪ್ರೀತಿ ವಿಶ್ವಾಸಗಳಿದ್ದರೆ ನನ್ನದೊಂದು ಪ್ರಾರ್ಥನೆ ಇದೆ. ಅದನ್ನು ಈಡೇರಿಸಿ ಕೊಡು. ನೀನು ನನ್ನ ಅಭಿಮಾನದ ಮಗನಾದುದಕ್ಕೆ ಇಷ್ಟು ಉಪಕಾರಮಾಡು! ನಾನು ನೀಚನಾದ ಈ ಅಹಮದ್‌ನಗರದ ಸುಲ್ತಾನನ ಕೈಯಿಂದ ಮರಣವನ್ನು ಅನು ಭವಿಸಬೇಕಾಗಿ ಬರುವುದೋ ಎಂದು ಹೆದರಿದ್ದೆ! ನೀನು ನನ್ನ ಹತಾಶಭಾವ ದಲ್ಲಿ ಬೆಳಕಿನಂತೆ ಬಂದಿದ್ದೀಯೆ. ನಾನು ನಿನಗೆ ಏನಾದರೂ ಉಪಕಾರಮಾಡಿ ದ್ದರೆ, ಅದಕ್ಕೆ ಪ್ರತ್ಯುಪಕಾರಮಾಡಲು ನಿನಗೆ ಇಚ್ಛೆ ಇದ್ದರೆ ನನ್ನ ಈ ಕೋರಿಕೆ ಯನ್ನು ಈಡೇರಿಸು. ನಿನಗೆ ನಾನು ಚಿರಋಣಿಯಾಗಿರುತ್ತೇನೆ."

"ಪಿತಾಜಿ! ನನ್ನಿಂದ ತಮಗೆ ಏನು ಕೆಲಸವಾಗಬೇಕು ತಿಳಿಸಿ—ಈ ನಿರ್ಭಾಗ್ಯನ ಕೈಯಿಂದ ಆಗುವುದಾದರೆ ಖಂಡಿತ ಮಾಡಿಕೊಡುತ್ತಾನೆ!"

"ನನ್ನನ್ನು ಸೆರೆಯಿಂದ ಬಿಡಿಸು ಎಂದು ನಾನು ನಿನ್ನನ್ನು ಕೇಳುವುದರಲ್ಲಿ ಅರ್ಥವಿಲ್ಲ. ನನ್ನ ಪ್ರಾಣವನ್ನು ಉಳಿಸು ಎಂದು ಬೇಡುವುದರಲ್ಲಿ ಅರ್ಥವಿಲ್ಲ. ನಾನು ಹುಸೇನ್ ನಿಜಾಂಷಹನ ಕೈಗೆ ಸಿಕ್ಕಿದಮೇಲೆ ಜೀವದೊರಸೆ ಪಾರಾಗ ಲಾರೆ! ಈ ನೀಚನು ನನ್ನನ್ನು ಕೊಂದು ಸೇಡುತೀರಿಸಿಕೊಳ್ಳದೇ ಬಿಡುವುದಿಲ್ಲ! ನೀನು ನನ್ನ ಅಭಿಮಾನದ ಪುತ್ರನಾಗಿರುವುದರಿಂದ ನಿನ್ನಲ್ಲಿ ನನ್ನ ಪ್ರಾರ್ಥನೆ ಏನೆಂದರೆ, ಆ ನೀಚ ಹುಸೇನ್ ನಿಜಾಂಷಹನು ಕೈಯಿಂದ ನನ್ನ ದೇಹವು ಅಪವಿತ್ರವಾಗುವುದು ನನಗೆ ಇಷ್ಟವಿಲ್ಲ. ನೀನು ನನ್ನನ್ನು ಕೊಂದು, ಆ ದ್ರೋಹಿಯ ಕೈಯಲ್ಲಿ ಒದಗಬಹುದಾದ ಅಪಮಾನ ಚಿತ್ರಹಿಂಸೆಗಳನ್ನು ತಪ್ಪಿಸು. ಇದೇ ನಾನು ನಿನ್ನಲ್ಲಿ ಮಾಡಿಕೊಳ್ಳುವ ನನ್ನ ಅಂತಿಮ ಪ್ರಾರ್ಥನೆ!"

ಎಂದು ಹೇಳಿ ಅವನು ತನ್ನ ತಲೆಯಲ್ಲಿದ್ದ ರುಮಾಲನ್ನು ಕೆಳಗೆ ಹಾಕಿ, ಹಸಿರು ಶಾಲು ಹೊದೆದುಕೊಂಡು ಪದ್ಮಾಸನಹಾಕಿಕೊಂಡು ಧ್ಯಾನಮಗ್ನನಾದ. ಆಗ ಒಂದೊಂದು ಕ್ಷಣವೂ ಅಮೂಲ್ಯವಾಗಿತ್ತು! ರಾಮರಾಯನ ಬೇಡಿಕೆ ಯನ್ನು ಸಲ್ಲಿಸದ ಹೊರತು ಅವನಿಗೆ ಗತ್ಯಂತರವಿರಲಿಲ್ಲ! ತಾನು ಅವನ ಪ್ರೀತಿಯ ಮಗನಾಗಿದ್ದುದಕ್ಕೆ ತಂದೆಗೆ ಈ ರೀತಿಯಲ್ಲಾದರೂ ಪಿತೃ ಋಣ ತೀರಿಸಬೇಕೆಂದು ಅವನು ಕೈಗೆ ಕತ್ತಿ ತೆಗೆದುಕೊಂಡನು. ದೇವರನ್ನು ನೆನೆದು

ಕಣ್ಮುಚ್ಚಿ ಒಂದೇ ಏಟಿಗೆ ರಾಮರಾಯನ ತಲೆಯನ್ನು ಕತ್ತರಿಸಿದನು! ರಾಮರಾಯನ ಆತ್ಮಪಕ್ಷಿಯು ವಿಶ್ವಾತ್ಮನಲ್ಲಿ ಸೇರಿ ಅಮರವಾಯಿತು!

ಅಷ್ಟರಲ್ಲಿ ಅಲ್ಲಿಗೆ ಆಗಮಿಸಿದ್ದ ಹುಸೇನ್ ನಿಜಾಂಷಹನು, ತಾನು ಕೈಯಾರ ಚಿತ್ರಹಿಂಸೆ ಕೊಟ್ಟು ಕೊಲ್ಲಬೇಕೆಂದಿದ್ದ ರಾಮರಾಯನನ್ನು ಆಲಿ ಆದಿಲ್‌ಷಹನು ಸದ್ದಿಲ್ಲದೆ ಮುಗಿಸಿದುದನ್ನು ಕಂಡು, "ಅಯ್ಯೋ! ಎಂತಹ ಕೆಲಸ ಮಾಡಿದೆ! ಈ ನೀಚನನ್ನು ನಾನು ಕೊಲ್ಲಬೇಕೆಂದಿದ್ದೆನಲ್ಲಾ!" ಎಂದು ಚೀರಿದ. ಅವನಿಗೆ ಉತ್ತರವೆಂಬಂತೆ ಆಲಿ ಆದಿಲ್‌ಷಹನು ರಕ್ತದಿಂದ ಕೆಂಪಾಗಿದ್ದ ಕತ್ತಿಯನ್ನು ಅವನ ಕೈಗೆ ಕೊಟ್ಟು, ಅರ್ಥ ಶೂನ್ಯ ಒಣನಗೆ ನಕ್ಕು ಅಲ್ಲಿಂದ ಹೊರಟುಹೋದ.

ಅವನು ಅಲ್ಲಿಂದ ಹೊರಟುಹೋದ ಮೇಲೆ ಹುಸೇನ್ ನಿಜಾಂಷಹನು ರಾಮರಾಯನ ತಲೆಯನ್ನು ಭರ್ಜಿಯೊಂದಕ್ಕೆ ಚುಚ್ಚಿಕೊಳ್ಳುತ್ತಾ "ಇಂದು ನನ್ನ ಸೇಡು ತೀರಿತು! ಇನ್ನು ದೇವರು ನನಗೆ ಯಾವ ಶಿಕ್ಷೆಯನ್ನು ಬೇಕಾದರೂ ವಿಧಿಸಲಿ!" ಎಂದು ಹೇಳಿ ರಾಮರಾಯನ ತಲೆಯನ್ನು ಸೈನ್ಯದಲ್ಲಿ ಮೆರವಣಿಗೆ ಮಾಡಲು ಆಜ್ಞೆ ಮಾಡಿದ.

ರಾಮರಾಯನ ಶಿರಚ್ಛೇದನವಾದುದನ್ನು ಕಂಡು ವಿಜಯನಗರದ ಸೈನಿಕರು ಭಯಭ್ರಾಂತರಾಗಿ ರಾಮರಾಯನು ಮಡಿದನೆಂದು ಕೂಗಿಕೊಳ್ಳುತ್ತ ದಿಕ್ಕಾಪಾಲಾಗಿ ಓಡಲು ತೊಡಗಿದರು. ಅವರ ಸ್ಥಿತಿ ನಾಯಕನಿಲ್ಲದ ಕುರಿ ಹಿಂಡಿನಂತೆ ಆಗಿತ್ತು. ಅವರನ್ನು ಹುರಿದುಂಬಿಸಿ, ಯುದ್ಧಕ್ಕೆ ಪ್ರೇರೇಪಿಸಲು ತಿರುಮಲ, ವೆಂಕಟಾದ್ರಿಗಳು ಮಾಡಿದ ಎಲ್ಲ ಸಾಹಸ ನಿಷ್ಫಲವಾಯಿತು. ಅವರು ಎಷ್ಟು ಪ್ರಯತ್ನಿಸಿದರೂ ರಾಮರಾಯನ ಮರಣವಾರ್ತೆಯನ್ನು ಕೇಳಿ ರಣರಂಗವನ್ನು ತೊರೆದು ಪಲಾಯನ ಮಾಡುತ್ತಿದ್ದ ಸೈನಿಕರನ್ನು ಸಂಘಟಿಸಿ, ಯುದ್ಧ ಕೊಡಲು ಸಮರ್ಥರಾಗಲಿಲ್ಲ. ಕಡೆಗೆ ಅವರೂ ತಮ್ಮ ಸೈನಿಕರ ದಾರಿ ಹಿಡಿಯಬೇಕಾಯಿತು.

ಮದೋನ್ಮತ್ತ, ವಿಜಯೋನ್ಮತ್ತ ಮುಸ್ಲಿಂ ಸೈನಿಕರು ಹೆದರಿ ಓಡುತ್ತಿದ್ದ ಹಿಂದೂ ಸೈನಿಕರನ್ನು ಬೆನ್ನಟ್ಟಿಕೊಂಡು ಹೊರಟರು. ಕೈಗೆ ಸಿಕ್ಕವರನ್ನೆಲ್ಲಾ ಕತ್ತಿಯ ಬಾಯಿಗೆ ಕೊಡುತ್ತಾ ಮುನ್ನಡೆದರು. ಅವರು ಕೊಂದ ಹಿಂದೂ ಸೈನಿಕರ ರಕ್ತದಿಂದ ಕೃಷ್ಣೆಯ ನೀರು ಕೆಂಪಾಯಿತು. ಅಂದಿನ ಸಂಜೆಯ ವೇಳೆಗೆ ಯುದ್ಧವು ಮುಕ್ತಾಯವಾಗಿ ಸಾಮ್ರಾಜ್ಯ ದುರಂತದ ಕಡೆಯ ಅಂಕದ ಪರದೆ ಕೆಳಗೆ ಇಳಿಯಿತು. ಅಂದಿನ ಯುದ್ಧದ ಭಯಂಕರ ದೃಶ್ಯವನ್ನು ನೋಡಲಾರೆನೆಂಬಂತೆ, ರವಿಯು ಅಸ್ತಮಯನಾದನು. ಅವನೊಂದಿಗೆ ಕನ್ನಡಿಗರ

ಭಾಗ್ಯರವಿಯೂ ಅಸ್ತಮಿಸಿತು! ವಿದ್ಯಾರಣ್ಯರ ಭವಿಷ್ಯವಾಣಿ ಕಡೆಗೂ ನಿಜವಾಗಿತ್ತು! ಕ್ರಿ.ಶ. ೧೫೬೫ನೇ ಜನವರಿ ೨೩ನೇ ದಿನಾಂಕ ಕನ್ನಡ ಸಾಮ್ರಾಜ್ಯದ ಭಾಗ್ಯಶ್ರೀಗೆ ಇತಿಶ್ರೀಯಾಯಿತು!

## ೨೦

ಈಗ ಯುದ್ಧದಲ್ಲಿ ಉಳಿದಿದ್ದ ವೆಂಕಟಾದ್ರಿಯ ಮುಂದೆ ಮುಂದೇನು ಎಂಬ ಸಮಸ್ಯೆ ನಿಂತಿತ್ತು. ತಾನು ಚೆದರಿದ ಸೈನ್ಯವನ್ನು ಸಂಘಟಿಸಿ ಶತ್ರುಗಳಿಗೆ ಮತ್ತೆ ಯುದ್ಧ ಕೊಡಬೇಕೆ? ಶತ್ರುಗಳ ಧಾಳಿಯಿಂದ ವಿಜಯನಗರವನ್ನು ರಕ್ಷಿಸಬೇಕೆ? ವಿಜಯನಗರವನ್ನು ಶತ್ರುಗಳ ಪಾಲುಮಾಡಿ ತಾವು ತಲೆ ತಪ್ಪಿಸಿಕೊಳ್ಳಬೇಕೆ? ಈ ಪ್ರಶ್ನೆಗಳಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂದು ತಿಳಿಯದಾಯಿತು. ಕಡೆಗೆ ವಿಜಯೋನ್ಮತ್ತ ಶತ್ರು ಸೈನ್ಯದೊಡನೆ ಯುದ್ಧಮಾಡಿ ವಿಜಯನಗರವನ್ನು ಉಳಿಸಿಕೊಳ್ಳುವುದು ಸದ್ಯದ ಪರಿಸ್ಥಿತಿಯಲ್ಲಿ ಅಸಾಧ್ಯ! ತಾವು ಬದುಕಿ ಉಳಿದರೆ ಮುಂದೆ ವಿಜಯನಗರವನ್ನು ಹೇಗಾದರೂ ಶತ್ರುಗಳಿಂದ ಪಾರುಮಾಡಬಹುದು ಎಂದು ಆಲೋಚಿಸಿ, ಅವನು ವಿಜಯನಗರವನ್ನು ಯುದ್ಧವಿಲ್ಲದೆ ಶತ್ರುಗಳ ಪಾಲುಮಾಡಿ ಸದ್ಯಕ್ಕೆ ಜೀವ ಉಳಿಸಿಕೊಳ್ಳುವುದೇ ಉತ್ತಮ ಎಂದು ನಿರ್ಧರಿಸಿದ. ಅದರಂತೆ ವಿಜಯನಗರಕ್ಕೆ ಧಾವಿಸಿ ಬಂದು, ಶತ್ರುಗಳಿಗೆ ಜಯವಾದ ವಾರ್ತೆಯನ್ನೂ, ರಾಮರಾಯನ ಮರಣವನ್ನೂ ನಗರದಲ್ಲಿ ಡಂಗೂರ ಹಾಕಿಸಿ, ಶತ್ರುಗಳ ಕೈಯಿಂದ ಪಾರಾಗಲು ಜನ ತಮ್ಮ ಸಂರಕ್ಷಣೆಯ ಕ್ರಮವನ್ನು ತಾವೇ ಕೈಗೊಳ್ಳಬೇಕೆಂದು ತಿಳಿಸಿದ. ಅನಂತರ ವಿಜಯನಗರದ ಸಮಸ್ತ ಸಿರಿಸಂಪತ್ತನ್ನೂ, ರಾಜಭಂಡಾರವನ್ನೂ, ರಾಜಕುಟುಂಬದವರನ್ನೂ ಸಾವಿರದೈನೂರು ಆನೆಗಳ ಮೇಲೆ ಹೇರಿಕೊಂಡು ದುರ್ಗಮದುರ್ಗವಾಗಿದ್ದ ಚಂದ್ರಗಿರಿಗೆ ಸಾಗಿಸಿದ. ಜತೆಯಲ್ಲಿ ರಾಜಲಾಂಛನವನ್ನೂ, ಸಿಂಹಾಸನವನ್ನೂ, ತೆಗೆದುಕೊಂಡು ನಿರ್ಬಂಧದಲ್ಲಿದ್ದ ಸದಾಶಿವರಾಯನನ್ನೂ ತನ್ನ ಜತೆಯಲ್ಲಿ ತೆಗೆದುಕೊಂಡು ಹೋದನು. ಅಲ್ಲಿಗೆ ಹೋಗಲಿಚ್ಛಿಸದ ರಾಜಕುಟುಂಬದವರು ಅಗ್ನಿಪ್ರವೇಶ ಮಾಡಿ ದೇಹವನ್ನು ತೊರೆದರು.

ವೆಂಕಟಾದ್ರಿಯು ಹಾಕಿಸಿದ್ದ ಡಂಗೂರದಿಂದ ವಿಜಯನಗರದ ನಾಗರಿಕರು ಶತ್ರುಗಳಿಂದ ತಮ್ಮ ಧನಕನಕವಸ್ತುಗಳನ್ನು ರಕ್ಷಿಸಿಕೊಳ್ಳಲು ತಮ್ಮ ತಮ್ಮ ವ್ಯವಸ್ಥೆಯನ್ನು ಮಾಡಿಕೊಂಡರು. ಕೆಲವರು ನಗರವನ್ನು ತೊರೆದರು. ಮತ್ತೆ ಕೆಲವರು ಭಾವಿಯಲ್ಲಿ ತಮ್ಮ ಅಮೂಲ್ಯ ವಸ್ತುಗಳನ್ನು ಅಡಗಿಸಿದರು.

ಶತ್ರುಸೈನ್ಯ ರಣರಂಗದಲ್ಲಿ ಸುಮಾರು ಹತ್ತು ದಿನಗಳ ಕಾಲ ವಿಜಯೋತ್ಸವ ವನ್ನು ಆಚರಿಸಿತು.

ರಣರಂಗದಲ್ಲಿ ಶತ್ರು ಸೈನಿಕರಿಗೆ ದೊರೆತ ಸೂರೆ ಅಪಾರವಾಗಿತ್ತು. ಸೋತುಹೋದ ವಿಜಯನಗರದ ಸೈನಿಕರು ತಮ್ಮ ಪ್ರಾಣವನ್ನು ಉಳಿಸಿಕೊಳ್ಳುವ ಗಡಿಬಿಡಿಯಲ್ಲಿ ತಮ್ಮ ಸಮಸ್ತವನ್ನೂ ಹಿಂದುಳಿಸಿ ಓಡಿಹೋಗಿದ್ದರು. ಯುದ್ಧ ಭೂಮಿಯಲ್ಲಿ ಅಸಂಖ್ಯಾತವಾಗಿ ಆನೆ ಕುದುರೆಗಳೂ, ಶಸ್ತ್ರಾಸ್ತ್ರಗಳೂ, ಇನ್ನಿತರ ಯುದ್ಧೋಪಕರಣಗಳೂ, ಆಹಾರ ವಸ್ತುಗಳೂ, ಮುತ್ತು ರತ್ನಗಳೂ ಗುಡಾರಗಳೂ, ರಣವಾದ್ಯಗಳೂ ದೊರೆತುವು. ಅವರಿಗೆ ದೊರೆತ ವಸ್ತುಗಳ ಬೆಲೆ ಸುಮಾರು ೧,೨೩,೫೭,೪೧೧ ಪಗೋಡ ಬೆಲೆಯಾಗಿತ್ತೆಂದು ಅಂದಾಜು ಮಾಡಲಾಗಿದೆ. ಇಲ್ಲಿ ದೊರೆತ ಸೂರೆಯಿಂದ ಪ್ರತಿಯೊಬ್ಬನೂ ಶ್ರೀಮಂತನಾದನಂತೆ, ವಿಜಯೋನ್ಮತ್ತ, ಸುಲ್ತಾನರು ಆನೆ ಕುದುರೆಗಳು, ಅನರ್ಘ್ಯ ಮುತ್ತು ರತ್ನಗಳನ್ನು ತಾವು ಉಳಿಸಿಕೊಂಡು ಉಳಿದ ಎಲ್ಲ ಸೂರೆಯನ್ನು ಸೈನಿಕರಲ್ಲಿ ಹಂಚಿದ್ದರು.

ಈ ಸೂರೆಯಿಂದ ಹಿಗ್ಗಿ, ಶತ್ರು ಸೈನಿಕರು ವಿಜಯನಗರದ ಮೇಲೆ ದಾಳಿ ಇಟ್ಟರು. ಮೊದಲೇ ರಕ್ಷಕರಿಲ್ಲದ ಆ ನಗರದ ಮೇಲೆ ಲಂಬಾಣಿಗರೂ, ಪಿಂಡಾರಿಯವರೂ, ಕೊರಚರೂ—ಹಲವು ಬಾರಿ ದಾಳಿಯಿಟ್ಟು, ಕೈಗೆ ದೊರೆತುದನ್ನು ಲೂಟಿ ಮಾಡಿದರು. ಜನರು ಸಿಕ್ಕಿದುದನ್ನು ಕೈಗೆ ತೆಗೆದುಕೊಂಡು ಪ್ರಾಣ ಉಳಿಸಿಕೊಳ್ಳಲು ನಗರದಿಂದ ಓಡಿಹೋಗುತ್ತಿದ್ದರು. ನಗರದಲ್ಲಿ ಅನಾಯಕತೆಯುಂಟಾಗಿತ್ತು. ಎಲ್ಲೆಲ್ಲಿ ನೋಡಿದರೂ ಹಾಹಾಕಾರ, ಆಕ್ರಂದನಗಳು! ಜನರಿಗೆ ಮುಂದೇನು ಮಾಡಬೇಕೆಂದು ತಿಳಿಯದಾಗಿತ್ತು. ಯುದ್ಧರಂಗದಿಂದ ಹಿಂದಿರುಗಿದ್ದ ಸೈನಿಕರು ನಗರದ ರಕ್ಷಣೆಗೆ ನಿಂತು ಹೋರಾಡುವ ಬದಲು, ತಮ್ಮ ಆಸ್ತಿಪಾಸ್ತಿಗಳನ್ನು ತೆಗೆದುಕೊಂಡು, ಸಂಸಾರ ಸಮೇತ ನಗರತ್ಯಾಗ ಮಾಡುತ್ತಿದ್ದರು. ಜನತೆಯನ್ನು ರಕ್ಷಿಸಬೇಕಾಗಿದ್ದ ಅವರೇ ಹೀಗೆ ಮಾಡಿದ ಮೇಲೆ ಕೇಳುವುದೇನಿದೆ? ಎಲ್ಲರೂ ಶತ್ರುಗಳು ನಗರದ ಮೇಲೆ ದಾಳಿ ಇಡುವ ಮೊದಲೇ ತಮ್ಮ ಮಾನಪ್ರಾಣಗಳನ್ನು ಉಳಿಸಿಕೊಳ್ಳಲು, ಆಸ್ತಿಪಾಸ್ತಿಗಳನ್ನು ಹಿಂದುಳಿಸಿ, ನಗರವನ್ನು ತೊರೆದು ಓಡಿಹೋಗುತ್ತಿದ್ದರು. ಸಂಪದ್ಯುಕ್ತವಾಗಿದ್ದ ವಿಜಯನಗರ ರಕ್ಷಕರಿಲ್ಲದೆ ಹಾಳುಗೆಡವಲ್ಪಟ್ಟಿತು. ಶತ್ರುಸೈನಿಕರು ಅಲ್ಲಿಗೆ ಬರುವ ವೇಳೆಗೆ ವಿಜಯನಗರವು, ಶ್ಮಶಾನಸದೃಶವಾಗಿ ಕಾಣುತ್ತಿತ್ತು.

ಕೇವಲ ನೂರೈವತ್ತು ವರ್ಷಗಳ ಹಿಂದೆ ಕ್ರಿ. ಶ. ೧೮೨೧ ರ ಸುಮಾರಿಗೆ

ವಿಜಯನಗರವನ್ನು ಸಂದರ್ಶಿಸಿದ್ದ ಇಟಲಿ ದೇಶದ ಪ್ರವಾಸಿ ನಿಕೊಲೋ ಕೊಂಟಿ ಎಂಬಾತನು ವಿಜಯನಗರದ ವೈಭವವನ್ನು ಹೀಗೆ ಹೊಗಳಿದ್ದನು:

"ವಿಜಯನಗರವು ಕಡಿದಾದ ಪರ್ವತಶ್ರೇಣಿಯ ತಪ್ಪಲಿನಲ್ಲಿ ಹರಡಿದೆ. ಇದರ ಒಟ್ಟು ವಿಸ್ತೀರ್ಣವು ಸುಮಾರು ಅರುವತ್ತು ಚದರ ಮೈಲಿಗಳು. ಈ ನಗರವನ್ನು ಬಳಸಿರುವ ದುರ್ಗಮವಾದ ದುರ್ಗವು ಸುತ್ತಲಿನ ಬೆಟ್ಟ ಗುಡ್ಡಗಳನ್ನು ಆವರಿಸಿದೆ.... ಈ ನಗರದಲ್ಲಿ ನೂರತೊಂಭತ್ತು ಸಾವಿರ ಮಂದಿ ಸೈನಿಕರು, ಯುದ್ಧಕ್ಕೆ ಸಿದ್ಧರಾಗಿದ್ದಾರೆ. ಇಲ್ಲಿರುವ ಅರಸನು ಭಾರತದಲ್ಲೆಲ್ಲಾ ಅತ್ಯಂತ ಪ್ರಬಲನಾದ ಸಾಮ್ರಾಟ್! ಇವನ ಅಂತಃಪುರದಲ್ಲಿ ಸುಮಾರು ಹನ್ನೆರಡು ಸಾವಿರ ಸ್ತ್ರೀಯರು ಇದ್ದಾರೆ...."

ಕ್ರಿ. ಶ. ೧೪೪೩ ರ ಸುಮಾರಿನಲ್ಲಿ ಈ ನಗರವನ್ನು ಸಂದರ್ಶಿಸಿದ ಇರಾನಿನ ರಾಯಭಾರಿ ಅಬ್ದುಲ್ ರಜಾಕನು ವಿಜಯನಗರವನ್ನು ಹೀಗೆ ವರ್ಣಿಸಿದ್ದನು:

"ವಿಜಯನಗರದ ಸಾಮ್ರಾಟನಿಗೆ ತನ್ನ ಸಾಮ್ರಾಜ್ಯದಲ್ಲಿ ಸುಮಾರು ಮುನ್ನೂರು ಬಂದರುಗಳು ಇವೆ. ಒಂದೊಂದೂ ಕಲ್ಲಿಕೋಟೆಯ ಬಂದರಿನಷ್ಟೇ ಪ್ರಶಸ್ತವಾಗಿದೆ.... ರಾಜಧಾನಿಯಲ್ಲಿ ನೋಡಲು ದೈತ್ಯದಂತೆ ಕಾಣುವ, ಪರ್ವತಾಕಾರದ ಸಾವಿರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಆನೆಗಳು ಇವೆ. ಸೈನ್ಯದ ಸಂಖ್ಯೆ ಸುಮಾರು ಹನ್ನೊಂದು ಲಕ್ಷ ಎಂದು ಹೇಳಲಾಗಿದೆ. ಇಲ್ಲಿನ ಅರಸನಿಗಿಂತ ಪ್ರಬಲನಾದ ಸಾಮ್ರಾಟನನ್ನು ಭಾರತದಲ್ಲಿ ನೋಡಲು ಶಕ್ಯವಿಲ್ಲ. ಇಂಥವನೂ ಬ್ರಾಹ್ಮಣರನ್ನು ಗೌರವದಿಂದ ಕಾಣುತ್ತಾನೆ!....

"ವಿಜಯನಗರದ ವೈಭವ ಜಗತ್ತಿನಲ್ಲಿ ಬೇರೆಲ್ಲೂ ಕಾಣಲು ಸಾಧ್ಯವಿಲ್ಲ; ಕೇಳಲೂ ಸಾಧ್ಯವಿಲ್ಲ....

"ಏಳನೆಯ ಹಾಗೂ ಕೊನೆಯ ಕೋಟೆಯಲ್ಲಿ ಸಾಮ್ರಾಟನ ಅರಮನೆ ಇದೆ.... ಮೊದಲನೆಯ ಹಾಗೂ ಎರಡು ಮೂರನೆಯ ಕೋಟೆಗಳ ನಡುವಣ ಪ್ರದೇಶದಲ್ಲಿ ಫಲವತ್ತಾದ ಬಯಲುಗಳೂ, ಉದ್ಯಾನವನಗಳೂ, ಜನಸಾಮಾನ್ಯರ ಮನೆಗಳೂ ಇವೆ. ಮೂರನೆಯ ಕೋಟೆಯಿಂದ ಏಳನೆಯ ಕೋಟೆ ವರೆಗೆ ಇರುವ ಪ್ರದೇಶದಲ್ಲಿ ಜನಜಂಗುಳಿಯಿಂದ ತುಂಬಿರುವ ಅಂಗಡಿಗಳೂ, ಜನನಿಬಿಡವಾದ ಬೀದಿಗಳೂ ಇವೆ. ಸಾಮ್ರಾಟರ ಅರಮನೆಯ ಬಳಿ ನಾಲ್ಕು ದಿಕ್ಕಿನಲ್ಲಿ ನಾಲ್ಕು ವಿಶಾಲವಾದ ರಾಜಮಾರ್ಗಗಳು. ಉತ್ತರದ ರಾಜ ಬೀದಿಯ ಬಳಿ ಇರುವುದೇ ಸಾಮ್ರಾಟರ ಭವ್ಯನಿವಾಸ. ಪ್ರತಿಯೊಂದು ಬೀದಿಗಳ ಇತರ ಕಡೆಗಳಲ್ಲೂ ಅನೇಕ ಉಪ್ಪರಿಗೆ ಮನೆಗಳು ನಿಂತಿವೆ. ಆದರೆ ಸಾಮ್ರಾಟರ

ಅರಮನೆ ಎಲ್ಲ ಶ್ರೀಮಂತ ಸೌಧಗಳಿಗಿಂತ ಮಹೋನ್ನತವಾಗಿದೆ....

"ರಾಜಬೀದಿಗಳು ವಿಶಾಲವಾಗಿದ್ದು, ಉದ್ದವಾಗಿವೆ. ಇಕ್ಕಡೆಗಳಲ್ಲಿ ಪುಷ್ಪವ್ಯಾಪಾರಿಗಳು ತಮ್ಮ ಅಂಗಡಿಗಳಲ್ಲಿ ಬಗೆಬಗೆಯ ಹೂಗಳನ್ನು ಮಾರಲು ಅನುಕೂಲವಾಗಿದೆ. ಈ ನಗರದಲ್ಲಿ ಸುವಾಸನೆಯುಳ್ಳ ಹೊಸ ಪರಿಮಳ ಪುಷ್ಪಗಳು ಯಾವಾಗಲೂ ದೊರೆಯುತ್ತವೆ. ಇವುಗಳು ರಾಜಧಾನಿಯ ರಸಿಕ ಜೀವನದಲ್ಲಿ ತೀರಾ ಆವಶ್ಯಕ ವಸ್ತುಗಳಲ್ಲಿ ಒಂದಾಗಿದೆ. ಇವುಗಳನ್ನು ನೋಡದೆ, ಇವುಗಳನ್ನು ಕೊಳ್ಳದೆ ಜೀವನವೇ ಇಲ್ಲವೆಂಬಂತೆ ಜನ ಭಾವಿಸುತ್ತಾರೆ. ಪ್ರತಿಯೊಂದು ಉದ್ಯೋಗ, ವ್ಯಾಪಾರಗಳ, ವಣಿಕ ಸಂಘ ಸಂಸ್ಥೆಗಳ ಅಂಗಡಿಗಳು ಸಾಲಾಗಿವೆ. ಇಲ್ಲಿನ ಪೇಟೆಗಳಲ್ಲಿ ರತ್ನಪಡಿ ವ್ಯಾಪಾರಿಗಳು ತಮ್ಮ ಅನರ್ಘ್ಯವಾದ ಮುತ್ತು, ರತ್ನ, ವಜ್ರ, ವೈಢೂರ್ಯಗಳನ್ನು ಬಹಿರಂಗವಾಗಿ, ರಾಸಿರಾಸಿಯಾಗಿ ಮಾರುತ್ತಾರೆ. ಎಲ್ಲೆಲ್ಲೂ ಕೆತ್ತಿ ನಯಗೊಳಿಸಿ ಹೊಳೆಯುವಂತೆ ಮಾಡಿರುವ ಕಲ್ಲಿನ ನೀರ್ಗಾಲುವೆಗಳು ಇವೆ....

"ಈ ಸಾಮ್ರಾಜ್ಯದ ಜನಸಂಖ್ಯೆಯ ವಿವರಗಳನ್ನು ತಿಳಿಯದೆ ಇಷ್ಟೆಂದು ಹೇಳುವುದು ಕಷ್ಟ....ಸಾಮ್ರಾಟನ ರಾಜಭಂಡಾರದಲ್ಲಿ ಅನೇಕ ಒಳಕೋಣೆಗಳು ಇವೆ. ಅವುಗಳ ತುಂಬಾ ಚಿನ್ನದ ಗಟ್ಟಿಗಳನ್ನು ಇಡಲಾಗಿದೆ. ಸಾಮ್ರಾಜ್ಯದ ಪ್ರತಿಯೊಬ್ಬ ಪ್ರಜೆಯೂ, ಅವನು ಶ್ರೀಮಂತನೇ ಇರಲಿ, ಬಡವನೇ ಇರಲಿ, ಕಡೆಗೆ ಪೇಟೆಯ ಕೂಲಿಯಾಗಲಿ, ತಮಗೆ ತಕ್ಕ ಆಭರಣಗಳನ್ನು ಕಿವಿಗಳಲ್ಲಿ, ಎದೆಯ ಮೇಲೆ, ಬೆರಳುಗಳಲ್ಲಿ, ತೋಳುಗಳಲ್ಲಿ ತೊಡುತ್ತಾರೆ.

"ದಂಡನಾಯಕನ ನಿವಾಸದ ಎದುರಿಗೆ ಗಜಶಾಲೆ ಇದೆ. ಇಲ್ಲಿ ಪ್ರತಿಯೊಂದು ಆನೆಗೆ ಒಂದೊಂದು ಬಿಡಾರವನ್ನು ಕಲ್ಪಿಸಿಕೊಡಲಾಗಿದೆ. ಇವುಗಳ ಗೋಡೆಗಳು ಅತ್ಯಂತ ಭದ್ರವಾಗಿದ್ದು, ಮೇಲ್ಹಾವಣಿಯನ್ನು ಮರದ ತೊಲೆಗಳಿಂದ ರಚಿಸಲಾಗಿದೆ....

"ಟಂಕಸಾಲೆಯ ಎದುರಿಗೆ ಇರುವುದೇ ರಕ್ಷಣಾಧಿಕಾರಿಯ ಮನೆ. ಅಲ್ಲಿ ಸದಾ ಹನ್ನೆರಡು ಸಾವಿರ ಸೈನಿಕರು ಇದ್ದಾರೆ.....ಅರಮನೆಯಲ್ಲಿರುವ ರಾಜಪುತ್ರಿಯರು ಮತ್ತು ಬಂಗಾರದವರು ಸುಮಾರು ಏಳುನೂರಕ್ಕೂ ಹೆಚ್ಚಾಗಿದ್ದಾರೆ...."

ಅಬ್ದುಲ್ ರಜಾಕನು ತಾನು ಕಂಡ ಒಂದು ಉತ್ಸವವನ್ನು ಹೀಗೆ ವರ್ಣಿಸಿದ್ದನು :

"ವಿಜಯನಗರದ ಸಾಮ್ರಾಟನ ಆಜ್ಞೆಯ ಮೇರೆಗೆ ಸಾಮ್ರಾಜ್ಯದ ಎಲ್ಲ ಭಾಗಗಳಿಂದ ಪ್ರಮುಖ ವ್ಯಕ್ತಿಗಳು ಅರಮನೆಗೆ ಬಂದು ನೆರೆದಿದ್ದಾರೆ. ಅವರು ತಮ್ಮೊಡನೆ ಸುಂದರವಾದ ಅಂಬಾರಿ, ಮೇಲ್ಹಾಸುಗಳಿಂದ ಅಲಂಕೃತವಾದ ಸಾವಿರಾರು ಆನೆಗಳನ್ನು ತಂದಿದ್ದಾರೆ....

“ಈ ವಿಶಾಲಪ್ರದೇಶದಲ್ಲಿ ಅಸಂಖ್ಯಾತವಾದ ಮೂರರಿಂದ ಐದರವರೆಗೆ ಅಂತಸ್ತುಗಳುಳ್ಳ ಉಪ್ಪರಿಗೆ ಮನೆಗಳು ಇವೆ. ಇವುಗಳನ್ನು ಕೆಳಗಿನಿಂದ ಮೇಲಿನ ತನಕ ಅನೇಕ ಚಿತ್ರವಿಚಿತ್ರವಾದ ಶಿಲ್ಪಕೃತಿಗಳಿಂದ ಶೃಂಗರಿಸಿದ್ದಾರೆ. ಅನೇಕ ಸೌಧಗಳು ಚತುರರಾದ ಶಿಲ್ಪಿಗಳಿಂದ ರಚಿಸಲ್ಪಟ್ಟು, ಅಲ್ಲಿನ ಶಿಲ್ಪಕೃತಿಗಳು ತಿರುಗಿದಂತೆ ಹೊಸ ಹೊಸ ದೃಶ್ಯಗಳು ಕಂಗೊಳಿಸುತ್ತವೆ. ಇವುಗಳ ಮುಂದೆ ಒಂಭತ್ತು ಅಂತಸ್ತುಗಳುಳ್ಳ ವಿಶಾಲವಾದ ಅತ್ಯಂತ ಕಲಾಪೂರ್ಣವಾಗಿ ಶೃಂಗರಿಸಲ್ಪಟ್ಟ ಭವ್ಯಪ್ರಸಾದವಿದೆ. ಇದರ ಒಂಭತ್ತನೆಯ ಅಂತಸ್ತಿನಲ್ಲಿ ಸಾಮ್ರಾಟರ ಸಿಂಹಾಸನವಿದೆ. ಈ ಸಿಂಹಾಸನವು ಭಾರಿಪ್ರಮಾಣದಲ್ಲಿದ್ದು, ಚಿನ್ನದಿಂದ ಮಾಡಲ್ಪಟ್ಟಿದೆ. ಇದನ್ನು ಮುತ್ತು, ರತ್ನ ವೈಢೂರ್ಯ ಮುಂತಾದ ಅನರ್ಘ್ಯ ರತ್ನಗಳಿಂದ ಅಲಂಕರಿಸಲಾಗಿದೆ. ಗೋಡೆಗಳನ್ನೂ, ಮೇಲ್ಛಾವಣಿಗಳನ್ನೂ, ಬೆಲೆಬಾಳುವ ಮುತ್ತುರತ್ನಗಳಿಂದ ಅಲಂಕರಿಸಿದ ಚಿನ್ನದ ತಗಡಿನಿಂದ ಮುಚ್ಚಿದೆ. ಈ ತಗಡುಗಳು ಕತ್ತಿಯ ಅಲುಗಿನಷ್ಟು ದಪ್ಪಗಿದ್ದು, ಅವುಗಳನ್ನು ಚಿನ್ನದ ಮೊಳೆಗಳಿಂದ ಬಿಗಿಸಲಾಗಿದೆ”

ವಿಜಯನಗರವನ್ನು ಕ್ರಿ. ಶ. ೧೪೬೮-೭೪ರ ಸುಮಾರಿಗೆ ಸಂದರ್ಶಿಸಿದ್ದ ರಷ್ಯಾದೇಶದ ಪ್ರವಾಸಿ ನಿಕಿಟಿನನು ವಿಜಯನಗರದ ಸಾಮ್ರಾಟರ ವೈಭವವನ್ನು ಹೀಗೆ ವರ್ಣಿಸಿದ್ದನು:

“ವಿಜಯನಗರದ ಸಾಮ್ರಾಟನ ಬಳಿ ೨೦೦ ಆನೆಗಳೂ, ಒಂದು ಲಕ್ಷ ಪದಾತಿ ಸೈನ್ಯವೂ ಐವತ್ತು ಸಾವಿರ ಅಶ್ವಸೈನ್ಯವೂ ಇದೆ. “ಹಿಂದೂ ಸುಲ್ತಾನರ ಕದಂ [ಕರ್ಣಾಟಕ ಹಿಂದೂ ಸುಗತ್ರಾಣ(?)ವಿಜಯನಗರದ ಸಾಮ್ರಾಟರ ಒಂದು ಬಿರುದು] ಅತ್ಯಂತ ಪ್ರಬಲನಾದ ಸಾಮ್ರಾಟನು. ಇವನ ಬಳಿ ಅಸಂಖ್ಯಾಂತ ಸೈನ್ಯವಿದೆ. ಇವನು ವಿಜಯನಗರದಲ್ಲಿ ಬೆಟ್ಟದ ಮೇಲೆ (ಹೇಮಕೂಟ?) ವಾಸಿಸುತ್ತಾನೆ. ಈ ವಿಶಾಲನಗರ ಮೂರು ಕೋಟೆಗಳಿಂದ ಬಳಸಲ್ಪಟ್ಟಿದೆ. ಮಧ್ಯಭಾಗದಲ್ಲಿ ಒಂದು ನದಿ ಹರಿಯುತ್ತದೆ. ಇದರ ಒಂದು ಬದಿಗೆ ದುರ್ಗಮವಾದ ಅರಣ್ಯವಿದೆ....ಈ ನಗರವು ಅತ್ಯದ್ಭುತವಾದ ಪಟ್ಟಣವಾಗಿದೆ. ಇಲ್ಲಿ ಪ್ರತಿಯೊಂದು ಕಾರ್ಯಕ್ಕೂ ಅನುಕೂಲವಿದೆ.... ಈ ನಗರವು ಶತ್ರುಗಳಿಗೆ ದುರ್ಭೇದ್ಯವಾಗಿದೆ.”

ಕ್ರಿ. ಶ. ಸುಮಾರು ೧೫೦೫ರಲ್ಲಿ ವಿಜಯನಗರವನ್ನು ಸಂದರ್ಶಿಸಿದ್ದ ವರ್ಥೆಮ್ ಎಂಬ ಪೋರ್ಚುಗೀಸ್ ಪ್ರವಾಸಿಯು ಹೀಗೆ ಬರೆದಿದ್ದನು:

“ವಿಜಯನಗರವು ತುಂಬಾ ಸಂಪದ್ಯುಕ್ತವಾಗಿದೆ. ಇಲ್ಲಿ ಸುಖಜೀವನಕ್ಕೆ ಬೇಕಾಗುವ ಪ್ರತಿಯೊಂದು ವಸ್ತುಗಳೂ ಹೇರಳವಾಗಿ ದೊರೆಯುತ್ತವೆ.

ಈ ನಗರವು ನಿಸರ್ಗ ರಮಣೀಯವಾದ ಪ್ರದೇಶದಲ್ಲಿದೆ. ಇಲ್ಲಿನ ಹವಾ ತುಂಬಾ ಹಿತಕರವಾಗಿದೆ.... ಇಲ್ಲಿನ ಸಾಮ್ರಾಟನು ತನ್ನ ಬಳಿ ನಲವತ್ತು ಸಾವಿರ ಅಶ್ವ ಬಲವನ್ನೂ, ನಾನೂರು ಆನೆಗಳನ್ನೂ ಇಟ್ಟುಕೊಂಡಿದ್ದಾನೆ. ಪ್ರತಿಯೊಂದು ಆನೆ ಆರುಮಂದಿಯನ್ನು ಕರೆದೊಯ್ಯಬಲ್ಲದಾಗಿರುತ್ತದೆ. ಯುದ್ಧಕಾಲದಲ್ಲಿ ಇವುಗಳ ಕೋರೆದಾಡೆಗಳಿಗೆ ಹರಿತವಾದ ಖಡ್ಗಗಳನ್ನು ಕಟ್ಟುತ್ತಾರೆ....

"ಸಾಮಾನ್ಯ ಜನರು ಅರೆಬೆತ್ತಲೆಯೆ ಇರುತ್ತಾರೆ... ಸಾಮ್ರಾಟನು ಚಿನ್ನದ ಕಿರೀಟವನ್ನು ಧರಿಸುತ್ತಾನೆ. ಅವನು ಏರುವ ಕುದುರೆಯ ಬೆಲೆಯೇ ನಮ್ಮ ಅನೇಕ ನಗರಗಳ ಬೆಲೆಯಷ್ಟಾಗುತ್ತದೆ. ಏಕೆಂದರೆ ಕುದುರೆಯ ಮೇಲೆ ಅಷ್ಟೊಂದು ಬೆಲೆಬಾಳುವ ಒಡವೆಗಳು ಇರುತ್ತವೆ!"

ಡುರಾಟ್ ಬಾರ್ಬೋಸ ಎಂಬ ಪೋರ್ಚುಗೀಸ್ ವ್ಯಾಪಾರಿಯು ಕ್ರಿ. ಶ. ೧೫೧೦ರಲ್ಲಿ ವಿಜಯನಗರಕ್ಕೆ ಬಂದಿದ್ದನು. ಅವನು ರಾಜಧಾನಿಯ ವೈಭವ ವನ್ನು ಹೀಗೆ ವರ್ಣಿಸಿದ್ದನು.

"ವಿಜಯನಗರವು ಅತ್ಯಂತ ಸಂವೃದ್ಧವಾದ ಪಟ್ಟಣ. ಇಲ್ಲಿನ ಸಾಮ್ರಾ ಟನು ವಿಶಾಲವಾದ ಅನೇಕ ಸುಂದರ ಪ್ರಸಾದಗಳನ್ನು ಹೊಂದಿದ ಭವ್ಯವಾದ ಅರಮನೆಯಲ್ಲಿ ವಾಸಿಸುತ್ತಾನೆ. ಇಲ್ಲಿನ ಶ್ರೀಮಂತರೂ ಭವ್ಯವಾದ ಸೌಧಗಳಲ್ಲಿ ವಾಸಿಸುತ್ತಾರೆ. ರಾಜಮಾರ್ಗಗಳೂ, ಚೌಕಗಳೂ ತುಂಬಾ ವಿಶಾಲವಾಗಿವೆ. ಇವುಗಳು ಸದಾ ಅನೇಕ ಜನಾಂಗಗಳ, ಅನೇಕ ಜಾತಿಮತಗಳ ಜನರಿಂದ ತುಂಬಿರುತ್ತವೆ. ಈ ನಗರದಲ್ಲಿ ಸಂವೃದ್ಧಿಯಾದ ವ್ಯಾಪಾರ ನಡೆಯುತ್ತದೆ. ಸಾಮ್ರಾಟನು ತನ್ನ ಬಳಿ ಯಾವಾಗಲೂ ಒಂಭೈನೂರು ಆನೆಗಳನ್ನೂ, ಇಪ್ಪತ್ತು ಸಾವಿರಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಅಶ್ವಬಲವನ್ನೂ ಹೊಂದಿರುತ್ತಾನೆ. ಇದಲ್ಲದೆ ಸಾಮ್ರಾಟನ ಬಳಿ ಒಂದು ಲಕ್ಷ ಅಶ್ವಗಳ ಹಾಗೂ ಪದಾತಿ ಸೈನ್ಯವಿದ್ದು, ಅವರಿಗೆ ಸಂಬಳ ಸಾರಿಗೆ ಸಲ್ಲುತ್ತವೆ...

"ಈ ನಗರಕ್ಕೆ ಮುತ್ತು ರತ್ನಗಳು ಸಿಂಹಳದಿಂದಲೂ, ಪೆಗುವಿನಿಂದಲೂ ಒದಗಿಸಲಾಗುತ್ತಿವೆ. ಅಲ್ಲದೆ ಈ ದೇಶದಲ್ಲಿ ಅನೇಕ ವಜ್ರದ ಗಣಿಗಳು ಇವೆ. ದಖ್ಖನ್ನಿನ ಈ ವಜ್ರದ ಗಣಿಗಳು ತುಂಬಾ ಪ್ರಸಿದ್ಧವಾದುವು. ಇಲ್ಲಿ ಅನೇಕ ಮುತ್ತು ಮಾಣಿಕ್ಯಗಳೂ ದೊರೆಯುತ್ತವೆ. ಇವುಗಳನ್ನು ಓರ್ಮುಜ್, ಮತ್ತು ಕೇಲ್‌ಗಳಿಂದಲೂ ತರುತ್ತಾರೆ. ರೇಶ್ಮೆ ವಸ್ತ್ರಗಳೂ, ಪೀತಾಂಬರಗಳೂ, ಹವಳ ಗಳೂ ಪರದೇಶಗಳಿಂದ ಬರುತ್ತವೆ.... ಸಾಮ್ರಾಟನು ಸಾಮಾನ್ಯವಾಗಿ ತನ್ನ ಅರ ಮನೆಯಲ್ಲಿ ಇರುತ್ತಾನೆ. ಹೊರಗೆ ಸಂಚಾರ ಹೊರಡುವುದು ಅಪರೂಪ.... ಸಾಮ್ರಾಟನ ಸೇವೆಯ ಭಾರ ಸ್ತ್ರೀಯರಿಗೆ ಸೇರಿದೆ. ಅವರು ದ್ವಾರ ರಕ್ಷ

ಣೆಯ ಕಾರ್ಯವನ್ನೂ ನೋಡಿಕೊಳ್ಳುತ್ತಾರೆ. ಈ ಎಲ್ಲ ಸ್ತ್ರೀಯರು ಅಂತಃಪುರದ ಒಳಕೋಣೆಯಲ್ಲಿ ವಾಸಿಸುತ್ತಾರೆ ...ಸಾಮ್ರಾಟನು ಸಾಮ್ರಾಜ್ಯದ ಆಗುಹೋಗುಗಳನ್ನು ತನ್ನ ಸಚಿವರೊಂದಿಗೆ ಸಮಾಲೋಚಿಸಲು ಬೇರೊಂದು ಅರಮನೆ ಇದೆ.... ಈ ಪ್ರಧಾನಿಗಳು ಸುಂದರವಾದ ಮೇನೆಗಳಲ್ಲಿ ಬಂದು ಹೋಗುತ್ತಾರೆ. ಅವರು ಅರಮನೆಗೆ ಬಂದಾಗ ಆಳುಗಳು ಹೊರಗೆ ಕಾದಿರುತ್ತಾರೆ......"

ಸಾಮ್ರಾಜ್ಯದ ಬಂದರುಗಳಲ್ಲಿ ನಡೆಯುವ ವ್ಯಾಪಾರದ ಬಗ್ಗೆ ಬರೆಯುತ್ತಾ ಭಟ್ಕಳದ ಉಲ್ಲೇಖನ ಮಾಡಿ ಹೀಗೆ ಹೇಳಿದ್ದನು.

"ಭಟ್ಕಳದಲ್ಲಿ ಸಾಗರ ವ್ಯಾಪಾರವು ತುಂಬಾ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಅಲ್ಲಿಂದ ಕಬ್ಬಿಣ, ತಾಜಾ ಮಸಾಲೆ ದಿನಸು, ಅಳಲೆಕಾಯಿ, ಔಷಧಿ ಇವುಗಳು ಪರದೇಶಕ್ಕೆ ಹೋಗುತ್ತವೆ. ಕುದುರೆ, ಮುತ್ತುರತ್ನಗಳು ಪರದೇಶದಿಂದ ಇಲ್ಲಿಗೆ ಬರುತ್ತವೆ...."

ಕ್ರಿ.ಶ. ೧೫೨೦ರ ಸುಮಾರಿಗೆ ರಾಜಧಾನಿಯನ್ನು ಸಂದರ್ಶಿಸಿದ್ದ ಡಾ. ಮಿಂಗೋ ಪೀಸ್ ಎಂಬ ಪೋರ್ಚುಗೀಸ್ ಪ್ರವಾಸಿಯು ಹೀಗೆ ಬರೆದಿದ್ದನು :

"ನಗರವನ್ನೆಲ್ಲಾ ಸುತ್ತುವರೆದ ಕೋಟೆಯ ಬಳಿಗೆ ಬಂದರೆ ಒಂದು ಹುಲಿಮುಖದ ಬಾಗಿಲು ಸಿಕ್ಕುತ್ತದೆ. ಕೋಟೆಯ ಗೋಡೆ ತುಂಬಾ ಗಟ್ಟಿಯಾಗಿದ್ದು ಕಲ್ಲುಬಂಡೆಗಳಿಂದ ರಚಿತವಾಗಿದೆ. ಕೋಟೆಯ ಬಾಗಿಲ ಬಳಿ ಇರುವ ಎರಡು ಗೋಪುರಗಳಿಂದ ಕೋಟೆಯ ಭದ್ರತೆ ಹೆಚ್ಚಿದೆ. ಇವುಗಳು ದೊಡ್ಡದಾಗಿದ್ದು ನೋಡಲು ಸುಂದರವಾಗಿವೆ. ಇವುಗಳನ್ನು ಹಾದು ಒಳಗೆ ಹೋದರೆ ಎರಡು ದೇವಸ್ಥಾನಗಳು ಕಾಣಿಸುತ್ತವೆ. ಈ ಕೋಟೆಕೊತ್ತಲಗಳ ಒಳಗೇ ಸಾಮ್ರಾಟನ ಅರಮನೆಯೂ, ದಂಡನಾಯಕನ ನಿವಾಸವೂ, ಇನ್ನಿತರ ಶ್ರೀಮಂತರ ಬಿಡಾರಗಳೂ ಇವೆ. ಮನೆಗಳ ಮೇಲೆ ಸುಂದರ ಕೆತ್ತನೆಯ ಕೆಲಸಗಳನ್ನು ಮಾಡಿದ್ದಾರೆ. ಇವುಗಳನ್ನು ನೋಡಿದರೆ ಸಂತೋಷವಾಗುತ್ತದೆ. ರಾಜಮಾರ್ಗದ ಬೀದಿಯಲ್ಲಿ ಮುಂದುವರೆದರೆ ಅರಮನೆಯ ಮುಂದೆ ಇರುವ ವಿಶಾಲವಾದ ಬಯಲು ಕಾಣುತ್ತದೆ. ಈ ಬಯಲಿನ ಎದುರಿಗೇ ಇಂತಹುದೇ ಇನ್ನೊಂದು ಬಯಲು ಇದೆ. ಈ ಪ್ರದೇಶದಲ್ಲಿ ಎತ್ತಿನಗಾಡಿ ಮುಂತಾದ ವಾಹನಗಳು ನಿತ್ಯಜೀವನಕ್ಕೆ ಬೇಕಾಗುವ ಬಗೆಬಗೆಯ ಹೇರನ್ನು ಹೊತ್ತು ಓಡಾಡುತ್ತಿರುತ್ತವೆ...."

"ಇನ್ನೂ ಮುಂದುವರೆದರೆ ವಿಶಾಲವಾದ, ಸುಂದರವಾದ ರಾಜಮಾರ್ಗ ಸಿಕ್ಕುತ್ತದೆ. ರಸ್ತೆಯ ಎರಡು ಬದಿಗೂ ದೊಡ್ಡ ದೊಡ್ಡ ಸೌಧಗಳು ನಿಂತಿವೆ. ಇವು ಶ್ರೀಮಂತರ ಮನೆಗಳು. ಇಲ್ಲಿ ಅನೇಕ ಶ್ರೀಮಂತರು ವಾಸಿಸುತ್ತಾರೆ.

ಈ ಬೀದಿಯಲ್ಲಿ ಎಲ್ಲಾ ತರಹದ ಮುತ್ತುರತ್ನಗಳನ್ನು ಮಾರುತ್ತಿರುತ್ತಾರೆ. ಇಲ್ಲಿ ಪ್ರಪಂಚದ ಯಾವ ವಸ್ತು ಬೇಕಾದರೂ ದೊರೆಯುತ್ತದೆ....

"ಪ್ರತಿ ಸಂಜೆ ನಗರದಲ್ಲಿ ಸಂತೆಯಾಗುತ್ತದೆ. ಅಲ್ಲಿ ಅನೇಕ ಕುದುರೆಗಳನ್ನೂ, ಅನೇಕ ಜಂಬೀರದ ಹಣ್ಣುಗಳನ್ನೂ – ನಿಂಬೆ, ಕಿತ್ತಳೆ, ದ್ರಾಕ್ಷಿ ಮುಂತಾದ ಹಣ್ಣುಗಳನ್ನೂ – ಯಥೇಚ್ಛವಾಗಿ ಮಾರುತ್ತಾರೆ....

"ಈ ಕೋಟೆಯನ್ನು ಹಾದಮೇಲೆ ಇನ್ನೊಂದು ರಾಜಮಾರ್ಗ ಸಿಕ್ಕುತ್ತದೆ. ಇಲ್ಲಿ ಅನೇಕ ಬಗೆಯ ಉದ್ಯೋಗಸ್ಥರು ತಮ್ಮ ತಮ್ಮ ವಸ್ತುಗಳನ್ನು ಮಾರುತ್ತಾರೆ....ಪ್ರತಿ ಶುಕ್ರವಾರ ಇಲ್ಲಿ ದೊಡ್ಡ ಸಂತೆಯು ನಡೆಯುತ್ತದೆ. ಆಗ ಇಲ್ಲಿ ಸೂಕರಗಳು, ಕೋಳಿ, ಒಣಗಿದ ಮೀನು, ಇವೇ ಮುಂತಾದ ದೇಶದ ಉತ್ಪನ್ನ ವಸ್ತುಗಳನ್ನು ಮಾರುತ್ತಾರೆ....ಇದೇ ರೀತಿಯಲ್ಲಿ ನಗರದ ಒಂದೊಂದು ಭಾಗದಲ್ಲಿ ಪ್ರತಿದಿನವೂ ಒಂದೊಂದು ಬಗೆಯ ವಸ್ತುಗಳ ಸಂತೆ ನಡೆಯುತ್ತಿರುತ್ತದೆ...."

ನಗರದ ಕೊನೆಯ ಭಾಗದಲ್ಲಿ ಮಹಮದೀಯರ ನಿವಾಸ ಇದೆ. ಸಾಮ್ರಾಟನು ಮಹಮದೀಯ ಸೈನಿಕರನ್ನು ಹಣಕೊಟ್ಟು ತನ್ನ ಅಂಗರಕ್ಷಣೆಗೆ ಇಟ್ಟುಕೊಂಡಿದ್ದಾನೆ. ಈ ನಗರದಲ್ಲಿ ಜಗತ್ತಿನ ಪ್ರತಿಯೊಂದು ಜನಾಂಗಕ್ಕೆ, ರಾಷ್ಟ್ರಕ್ಕೆ ಸೇರಿದ ಜನರು ಕಾಣಲು ಸಿಗುತ್ತಾರೆ. ಇಲ್ಲಿ ನಡೆಯುವ ಅನರ್ಘ್ಯವಾದ ವಸ್ತುಗಳ ವ್ಯಾಪಾರ, ಮುಖ್ಯವಾಗಿ ಮುತ್ತು ರತ್ನಗಳ ವ್ಯಾಪಾರ ಜಗತ್ತಿನ ವ್ಯಾಪಾರಿಗಳನ್ನೆಲ್ಲಾ ಆಕರ್ಷಿಸಿದೆ.

ಈ ನಗರದ ವಿಸ್ತೀರ್ಣ....ಸಮುಷ್ಟಿನೋಟಕ್ಕೆ ಸಿಗದಾದರೂ ಕಣ್ಣಿಗೆ ಕಾಣುವಷ್ಟು ಪ್ರದೇಶವೇ ರೋಮಿನಷ್ಟು ವಿಸ್ತಾರವಾಗಿದೆ ಎನ್ನಬಹುದು. ಈ ನಗರವು ಅತ್ಯಂತ ರಮಣೀಯವಾಗಿದ್ದು, ನೇತ್ರಾನಂದಕರವಾಗಿದೆ. ಪ್ರಸಾದಗಳ ಬಳಿ ಇರುವ ಉದ್ಯಾನವನಗಳಲ್ಲಿ ಅನೇಕ ಫಲಪುಷ್ಪಗಳ ಮರಗಳಿವೆ. ಅವುಗಳ ನಡುವೆ ತಿಳಿನೀರಿನ ನೀರ್ಗಾಲುವೆಗಳು ಹರಿಯುತ್ತವೆ. ಅಲ್ಲದೆ ಅನೇಕ ತಟಾಕಗಳೂ ಇವೆ. ಅರಮನೆಯ ಬಳಿ ಇರುವ ವಿಶಾಲವಾದ ತೋಟದಲ್ಲಿ ಎಲ್ಲ ಬಗೆಯ ಹಣ್ಣುಹಂಪಲುಗಳು ವರ್ಷದ ಎಲ್ಲಾ ಕಾಲದಲ್ಲಿ ಬೆಳೆಯುತ್ತವೆ. ಮಹಮದೀಯರ ನಿವಾಸದ ಕೆಳಭಾಗದಲ್ಲಿ ಒಂದು ನದಿಯು ಹರಿಯುತ್ತದೆ. ಈ ಪ್ರದೇಶದಲ್ಲಿ ಮಾವು, ಅಡಕೆ, ಖರ್ಜೂರ, ನಿಂಬೆ, ಕಿತ್ತಳೆ ಮುಂತಾದ ಮರಗಳು ಕಾಡಿನಂತೆ ಬೆಳೆದಿದೆ. ಇಲ್ಲಿ ಬಿಳಿ ದ್ರಾಕ್ಷಿಯನ್ನೂ ಬೆಳೆಯುತ್ತಾರೆ. ನಗರಕ್ಕೆ ಬೇಕಾಗುವ ನೀರೆಲ್ಲವೂ ನಗರದಾಚೆಯ ತಟಾಕಗಳಿಂದ ಬರುತ್ತದೆ....

ಇಲ್ಲಿನ ಜನಸಂಖ್ಯೆ ಅಸಂಖ್ಯಾತವೆಂದು ಹೇಳದೆ ಹೆಚ್ಚು ವರ್ಣಿಸಲು

ಸಾಧ್ಯವಿಲ್ಲ. ಇಲ್ಲಿನ ರಾಜ ಬೀದಿಗಳಲ್ಲಿ ಇರುವ ಜನಸಂದಣಿಯ ಮೂಲಕ ಭೇದಿಸಲು ಯಾವ ಅಶ್ವ ಪದಾತಿ ಸೈನಿಕ ಪಡೆಗೂ ಸಾಧ್ಯವಿಲ್ಲವೆಂದ ಮೇಲೆ ಅದೆಷ್ಟು ಜನನಿಬಿಡವೆಂದು ಊಹಿಸಿಕೊಳ್ಳಬಹುದು....

ಗೋಧಿಯನ್ನು ಮಹಮದೀಯರು ವಿನಾ ಉಳಿದವರು ಹೆಚ್ಚು ಬಳಸುವುದಿಲ್ಲ. ಈ ಕಾರಣದಿಂದ ಇದು ಹೆಚ್ಚು ಪ್ರಚಾರದಲ್ಲಿಲ್ಲ....

ಬೀದಿಗಳು ಮತ್ತು ಮಾರುಕಟ್ಟೆಗಳು ಅಸಂಖ್ಯಾತವಾದ ಹೇರೆತ್ತುಗಳಿಂದಲೂ ವಾಹನಗಳಿಂದಲೂ ತುಂಬಿರುತ್ತವೆ. ಇಲ್ಲಿ ಸಂಚರಿಸುವುದೇ ಕಷ್ಟ. ಸಂಚರಿಸಬೇಕಾದರೆ ನಿಂತು ನಿಂತು ಸಾಗಬೇಕು....ಇಲ್ಲಿ ಕೋಳಿಯ ಸಾಗಾಣಿಕೆ ಅಧಿಕವಾಗಿದೆ. ಅಂತೆಯೇ ಪಾರಿವಾಳಗಳು. ಇವು ಭಿನ್ನಜಾತಿಯವು....ಈ ಹಕ್ಕಿಗಳನ್ನು ಜೀವಂತ ಮಾರುತ್ತಾರೆ. ಇವುಗಳ ಬೆಲೆ ಅತ್ಯಲ್ಪ....ಮಾರಾಟಕ್ಕಿರುವ ಹಕ್ಕಿಗಳನ್ನು ಎಣಿಸಲು ಸಾಧ್ಯವೇ ಇಲ್ಲ....ಪ್ರತಿದಿನ ಅನೇಕ ಬಂಡಿಗಳಲ್ಲಿ ನಿಂಬೆಹಣ್ಣುಗಳು ಮಾರಾಟಕ್ಕೆ ಬರುತ್ತವೆ. ಇವುಗಳ ಮುಂದೆ ಪೂರ್ವೊಸ್ ನಗರದ ನಿಂಬೇ ಹಣ್ಣು ಸುಳ್ಳು! ಇದಲ್ಲದೆ ಸಿಹಿ ಮತ್ತು ಹುಳಿ ಕಿತ್ತಳೆಗಳು, ಮತ್ತಿತರ ತರಕಾರಿಗಳು ನೋಡಿದರೆ ಆಶ್ಚರ್ಯವಾಗುವಷ್ಟು ವಿಪುಲವಾಗಿವೆ.... ವಿಜಯನಗರ ಇತರ ನಗರಗಳಂತೆ ಅಲ್ಲ. ಇಲ್ಲಿ ಜಗತ್ತಿನ ಪ್ರತಿಯೊಂದು ವಸ್ತುಗಳೂ ಯಥೇಚ್ಛವಾಗಿ ದೊರೆಯುತ್ತವೆ. ಇಲ್ಲಿ ಹಾಲು ಬೆಣ್ಣೆಗಳು ಹೇರಳವಾಗಿ ದೊರೆಯುತ್ತದೆ! ಇಲ್ಲಿ ಸಂವೃದ್ಧವಾಗಿ ಕಾಣುವಷ್ಟು ಕರೆಯುವ ಹಸು, ಎಮ್ಮೆಗಳು ಬೇರೆಡೆಯಲ್ಲಿ ಕಾಣಲು ಬಹುದೂರ ಹೋಗಬೇಕು! ಇಲ್ಲಿ ಕಲ್ಲಂಗಡಿಹಣ್ಣು ಸಿಕ್ಕುತ್ತದೆ. ಒಂದು ದಮ್ಮಡಿಗೆ ಮೂರುಗುತ್ತಿ ದ್ರಾಕ್ಷಿಹಣ್ಣು ಸಿಕ್ಕುತ್ತದೆ. ಒಂದು ದಮ್ಮಡಿಗೆ ಹತ್ತು ಕಲ್ಲಂಗಡಿಹಣ್ಣು ದೊರೆಯುತ್ತದೆಂದ ಮೇಲೆ ಹೇಳುವುದೇನು?...."

ಸಾಮ್ರಾಜ್ಯದ ಅರಣ್ಯಸಂಪತ್ತಿನ ಬಗ್ಗೆ ಬರೆಯುತ್ತಾ ಹೀಗೆ ಹೇಳಿದ್ದನು:

"ಅಲ್ಲಲ್ಲಿ ದಾರಿಯ ಬದಿಯಲ್ಲಿ ಹರದಾರಿಯುದ್ದಕ್ಕೂ ಸಾಲುಮರಗಳೂ, ತೋಪುಗಳೂ ಇರುವುವು. ಸಣ್ಣದೊಡ್ಡಗ್ರಾಮಗಳ ನೆರೆಹೊರೆಯಲ್ಲಿ ಹಲಸು, ಮಾವು, ಹುಣಸೆ, ಬಸರಿ, ಹಿಪ್ಪೆ ಮುಂತಾದ ಮರಗಳು ಗುಂಪಾಗಿ ಇವೆ...."

ಜನತೆಯ ನಿತ್ಯಜೀವನದ ವಸ್ತುಗಳ ಬಗ್ಗೆ ಬರೆಯುತ್ತಾ ಅವನು ಹೀಗೆ ಬರೆದಿದ್ದನು :

"ಬೇರೆ ಬೇರೆ ವಸ್ತುಗಳಿಂದಲೂ, ಧನಧಾನ್ಯಗಳಿಂದಲೂ, ಸಂವೃದ್ಧವಾಗಿರುವ ಇಂತಹ ನಗರ ಜಗತ್ತಿನಲ್ಲಿ ಬೇರೆಯಿಲ್ಲ, ಅಕ್ಕಿ, ಗೋಧಿ, ಕಡಲೆ ಇವುಗಳ ಸಂಗ್ರಹವು ವಿಪರೀತವಾಗಿರುವುದು. ಆದರಂತೆಯೇ ಇಲ್ಲಿಯ ಜನರು

ಯಾವಾಗಲೂ ಬಳಸುವ ಅವರೆ, ಹೆಸರು, ತೊಗರಿ, ಹುರುಳಿ, ಮುಂತಾದವು ಗಳ ಸಂಗ್ರಹವೂ ಸಾಕಷ್ಟು ಇವೆ. ಇವುಗಳ ದರವು ಸುಲಭವಾಗಿದೆ...."

ಅರಮನೆಯ ವೈಭವದ ಬಗ್ಗೆ ಅವನು ಹೀಗೆ ಬರೆದಿದ್ದನು :

" ಈ ಅರಮನೆಯಲ್ಲಿ ಒಂದು ದಿವಾನ ಖಾನೆ ಇದೆ. ಇದರಲ್ಲಿ ಕಂಬ ಗಳು ಮಾತ್ರ ಕಡೆದ ಕಲ್ಲಿನವು. ಮಿಕ್ಕೆಲ್ಲ ಕೆಲಸವನ್ನು ಜಂತದಿಂದ ಮಾಡಲಾ ಗಿದೆ. ಕೆಳಗಿನಿಂದ ಮೇಲಿನ ವರೆಗೆ, ಗೋಡೆ, ಕಂಬ, ಜಂತಿ, ಹಲಗೆ ಮುಂತಾದ ಎಲ್ಲವೂ ದಂತದಿಂದಲೇ ರಚಿಸಲಾಗಿದೆ, ತೊಲೆ, ನಾಗಂದಿಗೆಗಳ ಮೇಲೆ ಗುಲಾಬಿಯ ಹೂವುಗಳನ್ನೂ, ಕಮಲದ ಹೂವುಗಳನ್ನೂ ಬಿಡಿಸಿದ್ದಾರೆ. ಇವೂ ಜಂತದಲ್ಲಿ ನಿರ್ಮಿತವಾಗಿ, ನೋಡಲು ಸುಂದರವಾಗಿವೆ. ಇದೆಲ್ಲವೂ ತುಂಬಾ ಅಂದವಾಗಿಯೂ, ಬೆಲೆಬಾಳುವಂತದೂ ಆಗಿದೆ. ಇಂತಹ ಚಿತ್ರ ವಿಚಿತ್ರಗಳ ಕೆಲಸ ಇನ್ನೆಲ್ಲೂ ನೋಡಲು ದೊರೆಯಲಾರದು, ದೊರೆತರೂ ತೀರಾ ಅಪರೂಪ !"

ನಿತ್ಯ ರಸಿಕರೂ, ಸುಮಂಗಲಿಯರೂ ಆದ ವೇಶ್ಯೆಯರ ವೈಭವ ಕಡಿಮೆ ಯಿರಲಿಲ್ಲ. " ಸೂಳೆಗೇರಿಯ ಮನೆಗಳು ಮೇಲ್ತರಗತಿಯಾಗಿರುವುವು. ಅದ ರಲ್ಲಿಯೂ ಮಾಂಡಲೀಕ ಮನ್ನೆಯರ, ಸಿರಿವಂತರ ಸೋಗಿನಲ್ಲಿ ಇರುವ ಜನರಿಗೆ ತುಂಬಾ ಮರ್ಯಾದೆ ಇದೆ. ಸಭ್ಯರೂ, ಸಂಭಾವಿತರೂ ಆದವರೂ ಮುಚ್ಚು ಮರೆಯಿಲ್ಲದೆ ವೇಶ್ಯಾವಾಟಕ್ಕೆ ಬರುತ್ತಾರೆ. ಇದು ಮರ್ಯಾದೆಗೆ ಕುಂದೆಂದು ಯಾರೂ ಭಾವಿಸುವುದಿಲ್ಲ ..."

ವೇಶ್ಯೆಯರ ಮನೆಗೆ ಹೋಗುವುದು ತಮ್ಮ ರಸಿಕತೆಗೆ, ಶ್ರೀಮಂತಿಕೆಗೆ ಸಾಕ್ಷಿ ಎಂದು ಜನತೆ ತಿಳಿದಿತ್ತು. ಅವರು ಈ ಬಗ್ಗೆ ಹೆಮ್ಮೆ ತಾಳುತ್ತಿದ್ದರು. ಅಲ್ಲಿ ನಡೆಯುವ ಸಾಹಿತ್ಯ ಸಂಗೀತ ಕೇಳಿಗಳ ಸಲುವಾಗಿ, ಆಚಾರವಂತನಿಷ್ಠರೂ ಬರುತ್ತಿದ್ದರಂತೆ. ಸಾಮ್ರಾಟ್ ಕೃಷ್ಣದೇವರಾಯನ ಕೊನೆಯ ದಿನಗಳಲ್ಲಿ ಅಂದರೆ ಕ್ರಿ. ಶ. ೧೫೨೯ ರ ಸುಮಾರಿಗೆ ವಿಜಯನಗರಕ್ಕೆ ಬಂದಿದ್ದ ಕ್ಯಾಪ್ಟನ್ ಹೆಡ ಎಂಬಾತ " ವಿಜಯನಗರದ ಪದಾತಿ ಸೈನ್ಯ ಅಸಂಖ್ಯಾತವಾದುದು. ಸಾಮ್ರಾ ಜ್ಯವು ಜನಭರಿತವಾಗಿದೆ. ಸಾಮ್ರಾಟನು ತನ್ನ ಸಲುವಾಗಿ ಒಂದು ಲಕ್ಷ ಕುದುರೆಗಳನ್ನೂ, ನಾಲ್ಕು ಸಾವಿರ ಆನೆಗಳನ್ನೂ ಇಟ್ಟುಕೊಂಡಿದ್ದಾನೆ " ಎಂದು ಬರೆದಿದ್ದನು.

ಕೆಲವು ವರ್ಷಗಳ ಹಿಂದೆ ವಿಜಯನಗರವನ್ನು ಸಂದರ್ಶಿಸಿದ್ದ—ಫೋರೋ ನೋವೊ ನನ್ನಿಜನೆಂಬ ಪೋರ್ಚುಗೀಸ್ ಅಶ್ವವ್ಯಾಪಾರಿ ಹೀಗೆ ಬರೆದಿದ್ದನು. " ರಾಜಧಾನಿಯಲ್ಲಿ ಸದಾ ಐವತ್ತು ಸಾವಿರ ಸೈನ್ಯವಿದೆ. ಇದರಲ್ಲಿ ಆರು ಸಾವಿರ ಅಶ್ವದಳ, ಅರಮನೆಯ ರಕ್ಷಣೆಗೆ ಇಡಲ್ಪಟ್ಟಿದೆ. ಇದಲ್ಲದೆ ಇಪ್ಪತ್ತು ಸಾವಿರ

ಬರ್ಜಿಯವರೂ, ಮೂರು ಸಾವಿರ ಮಾವಟಿಗರೂ ಇದ್ದಾರೆ. ಸಾಮ್ರಾಟನ ಬಳಿ ಸಾವಿರದ ಆರುನೂರು ಕುದುರೆ ಚಾಕರರೂ, ಮುನ್ನೂರು ಅಶ್ವಶಿಕ್ಷಕರೂ, ಎರಡು ಸಾವಿರ ಸೇವಕರೂ ಇದ್ದಾರೆ. ರಾಯನ ಊಳಿಗದಲ್ಲಿ ಮೇನೆ ಹೊರಲು ಇಪ್ಪತ್ತು ಸಾವಿರ ಆಳುಗಳು ಇದ್ದಾರೆ...."

ಅವನು ಹೀಗೆ ವಿಜಯನಗರದ ವೈಭವ ವರ್ಣಿಸುತ್ತಾ. "ಅಂತಃಪುರದ ಸಲುವಾಗಿ ಹನ್ನೆರಡು ಸಾವಿರ ದಾಸಿಯರು ನೇಮಕವಾಗಿದ್ದಾರೆ. ಸುಮಾರು ಇನ್ನೂರು ಅಡಿಗೆಯವರು ಸ್ವಯಂಸಾಮ್ರಾಟರ ಪಾಕಶಾಲೆಯಲ್ಲಿ ಇದ್ದಾರೆ. ಕೃಷ್ಣದೇವರಾಯನು ರಾಯಚೂರಿನ ಮೇಲೆ ದಂಡೆತ್ತಿ ಹೋದಾಗ ಅವನ ಸಂಗಡ, ಸೈನಿಕರ ಮನರಂಜನೆಗೆಂದು ಇಪ್ಪತ್ತುಸಾವಿರ ನರ್ತಕಿಯರು ಹೋಗಿದ್ದರಂತೆ. ಸಾಮ್ರಾಟನ ಮುಂದೆ ದೀವಟಿಕೆಯನ್ನು ಹಿಡಿಯುವವರ ಸಂಖ್ಯೆಯೇ ನೂರೈವತ್ತು....ನಗರದಲ್ಲಿ ಸೈನಿಕರೇ ಒಂದೂವರೆ ಲಕ್ಷ ಜನರಿದ್ದಾರೆ. ಇದರ ಮೂರು ಪಟ್ಟು ಸೇವಕರು ಊಳಿಗದವರು, ಹುಲ್ಲುಕುಯ್ಯುವವರು ಮುಂತಾದ ಪರಿಚಾರಕವರ್ಗದವರು ಇದ್ದಾರೆ. ವಿದ್ಯಾಭ್ಯಾಸಂಗದ ಸಲುವಾಗಿ, ಕಲಾಭ್ಯಾಸದ ಸಲುವಾಗಿ ಹೊರಗಿನಿಂದ ಬಂದ ಅಭ್ಯಾಸಿಗಳೂ, ವ್ಯಾಪಾರಕ್ಕೆ ಬಂದ ವಿದೇಶೀ ವರ್ತಕರೂ ನಗರದಲ್ಲಿ ಅಸಾಂಖ್ಯಾತವಾಗಿದ್ದಾರೆ..... ರಾಜಧಾನಿಯಲ್ಲಿ ಸುಮಾರು ನಾಲ್ಕು ಸಾವಿರ ಸಣ್ಣ ದೊಡ್ಡ ದೇವಾಲಯಗಳು ಇವೆ. ಇಪ್ಪತ್ತು ಸಾವಿರಕ್ಕೂ ಹೆಚ್ಚಿಗೆ ಪಲ್ಲಕ್ಕಿ, ಮೇನೆಗಳೂ—ಅವುಗಳ ಸಲುವಾಗಿ ಎರಡು ಲಕ್ಷ ಬೋಯಿಗಳೂ ಇದ್ದಾರೆ. ಹೀಗೆ ವಿಜಯನಗರದ ಒಟ್ಟು ಜನ ಸಂಖ್ಯೆ ಮೂವತ್ತು ಲಕ್ಷಕ್ಕೆ ಮೇಲೆ ಇದೆ" ಎಂದು ಬರೆದಿದ್ದನು.

ಇಂತಹ ನಗರದ ಮೇಲೆ ಶತ್ರು ಸೈನಿಕರು ನಡಸಿದ ಹಾವಳಿ, ಕೊಲೆ ಸುಲಿಗೆ, ಅತ್ಯಾಚಾರಗಳ ಕಥೆಯನ್ನು 'ಮರೆತುಹೋದ ಸಾಮ್ರಾಜ್ಯ'ದ ಲೇಖಕರಾದ ರಾಬರ್ಟ್ ಸಿವೆಲ್ ಅವರ ಮಾತಿನಲ್ಲಿ ಕೇಳಿ:

"....ಮೂರನೆಯ ದಿನದ ವೇಳೆಗೆ ಸಾಮ್ರಾಜ್ಯದುರಂತದ ಕಡೆಯ ಅಂಕ ಆರಂಭವಾಗಿತ್ತು. ವಿಜಯೋನ್ಮತ್ತ ಮುಸಲ್ಮಾನರು ರಾಜಧಾನಿಯಲ್ಲಿದ್ದ ಸುಮಾರು ಐದು ತಿಂಗಳು ವಿಜಯನಗರಕ್ಕೆ ಶಾಂತಿಯೆಂಬುದು ಇಲ್ಲವಾಯಿತು. ಶತ್ರುಗಳು ನಾಶಮಾಡಲೆಂದೇ ಬಂದವರು. ಅವರು ತಮ್ಮ ಕಾರ್ಯವನ್ನು ಸಾಂಗವಾಗಿ ನೆರವೇರಿಸಿದರು ...

"ಅವರು ಜನರನ್ನು ನಿಷ್ಕರುಣೆಯಿಂದ ಕೊಂದರು, ಅರಮನೆಗಳನ್ನೂ ದೇವಾಲಯಗಳನ್ನೂ ಕರುಣೆ ಇಲ್ಲದೆ ಹಾಳುಮಾಡಿದರು. ಅವರು ವಿಜಯನಗರದಮೇಲೆ ಅಹಮದ್‌ನಗರಕ್ಕಾದ ನೂರ್ಮಡಿ ಸೇಡನ್ನು ತೀರಿಸಿಕೊಂಡರು.

ನಗರದಲ್ಲಿದ್ದ ಕಲ್ಲಿನ ಮಂಟಪಗಳನ್ನೂ. ದೇವಾಲಯಗಳನ್ನೂ ಬಿಡದೆ ನೆಲಸಮ ಮಾಡಿದರು. ಒಂದು ಕಾಲದಲ್ಲಿ ವೈಭವದಿಂದ ಮೆರೆದು, ಕಲೆ, ನಾಗರಿಕತೆಗಳ ತವರಾಗಿದ್ದ ನಗರವನ್ನು ಅವರು ಭಗ್ನಗೊಳಿಸಿ ಮಣ್ಣಿನ ರಾಶಿ ಮಾಡಿದರು. ಅವರು ವಿಗ್ರಹಗಳನ್ನೂ ಬಿಡಲಿಲ್ಲ. ಏಕಶಿಲೆಯ ಮೂರ್ತಿಯಾಗಿದ್ದ ಉಗ್ರ ನರಸಿಂಹನ ಕೈಕಾಲುಗಳನ್ನು ತುಂಡರಿಸಿದರು. ಗಣೇಶನ ಹೊಟ್ಟೆಯನ್ನು ಭಗ್ನಗೊಳಿಸಿದರು. ವಿಜಯದಶಮಿಯ ದಿಬ್ಬವನ್ನೂ ನೆಲಸಮ ಮಾಡಿದರು. ಅವರ ದೃಷ್ಟಿಯಿಂದ ಯಾವ ಕಲಾತ್ಮಕ ವಸ್ತುವೂ ತಪ್ಪಿಸಿಕೊಳ್ಳಲಿಲ್ಲ. ವಿಜಯವಿಠಲನ ಸುಂದರ ದೇವಾಲಯವನ್ನು ಅವರು ಭಗ್ನಗೊಳಿಸಿ ಅದಕ್ಕೆ ಬೆಂಕಿ ಇಟ್ಟರು. ಬೆಂಕಿ ಎಂದರೆ ಬೆಂಕಿ! ಕತ್ತಿಯಾದರೆ ಕತ್ತಿ, ಹಾರೆ, ಗುದ್ದಲಿ ಯಾವುದು ದೊರೆತರೂ ಬಿಡದೆ ಅವುಗಳಿಂದ ಅಲ್ಲಿನ ಅಪೂರ್ವ ಶಿಲ್ಪಕಲೆಯನ್ನು ಹಾಳುಮಾಡಿದರು.

"ಹೀಗೆ ಅವರು ಐದು ತಿಂಗಳ ಕಾಲ ಪ್ರತಿದಿನವೂ ತಮ್ಮ ವಿನಾಶದ ಕಾರ್ಯವನ್ನು ಸಾಂಗವಾಗಿ ನೆರವೇರಿಸಿದರು.

"ಜಗತ್ತಿನ ಬೇರೆಲ್ಲೂ ಇಂತಹ ನಾಶಮಾಡುವ ಕಾರ್ಯ ಇಷ್ಟು ವ್ಯವಸ್ಥೆಯಿಂದ ನಡೆದಿರಲಾರದು!

"ಎಂತಹ ವೈಭವವಾದ ನಗರ ಎಷ್ಟು ಬೇಗನೆ ಹಾಳಾಯಿತು! ನಿನ್ನೆ ಶ್ರೀಮಂತಿಕೆಯಿಂದ ಮೆರೆದಿತ್ತು. ವೈಭವದಿಂದ ಕೂಡಿತ್ತು. ಸುಖಸಂವೃದ್ಧಿಗಳ ಆಗರವಾಗಿತ್ತು, ಚೆಲುವಿನ ಬೀಡಾಗಿತ್ತು, ಜನರಿಂದ ಕಿಕ್ಕಿರಿಯುತ್ತಿತ್ತು! ಇಂದು ಹೊಗೆಯಿಂದ ಕರೆಗಟ್ಟಿ, ದೂಳಿನಿಂದ ಮುಚ್ಚಿ, ಕೊಲೆ ಸುಲಿಗೆಗಳಿಂದ ಹಾಳಾಗಿತ್ತು. ಇಂತಹ ನಾಶ ಜಗತ್ತಿನ ಇತಿಹಾಸದಲ್ಲಿ ಮತ್ತೊಂದು ಇರಲಾರದು!...."

ಇಷ್ಟಾದರೂ ವಿಜಯನಗರವು ಸಂಪೂರ್ಣವಾಗಿ ನಾಶವಾಗಲಿಲ್ಲ. ಶತ್ರುಗಳು ನಗರವನ್ನು ಹಾಳುಮಾಡಿ ಹೋದರೂ, ನಗರವು ಪೂರ್ತಿ ಹಾಳಾಗಲಿಲ್ಲ. ಕ್ರಿ.ಶ. ೧೫೬೭ರಲ್ಲಿ ವಿಜಯನಗರವನ್ನು ಸಂದರ್ಶಿಸಿದಾಗ ಅವನು ಕಂಡ ದೃಶ್ಯವಿದು: "ವಿಜಯನಗರವು ಸಂಪೂರ್ಣವಾಗಿ ನಾಶವಾಗಿಲ್ಲ. ಮನೆಗಳು ಇನ್ನೂ ನಿಂತಿವೆ—ತೆರೆದ ಬಾಯಿಬಿಟ್ಟುಕೊಂಡು. ಅವುಗಳಲ್ಲಿ ಯಾರೂ ವಾಸಿಸುವುದಿಲ್ಲ. ಅಲ್ಲಿ ವಾಸಿಸುವ ಪ್ರಾಣಿಗಳೆಂದರೆ ಹುಲಿ ಚಿರತೆ ಮುಂತಾದ ಕಾಡು ಮೃಗಗಳು!"

---